## ಹೈದರಾಬಾದ್ ಕರ್ನಾಟಕದ

# ಸಾಂಪ್ರದಾಯಿಕ ಶಿಲ್ಪಕಲಾವಿದರು

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
**ಜಿ. ಬಿ. ವೀರಾಚಾರ್**

ಮಾರ್ಗದರ್ಶಕರು
**ಡಾ. ಲಕ್ಷ್ಮಣಸಿಂಗ್ ಆರ್. ರಾಥೋಡ್**

ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
**ಜಿ.ಬಿ. ವೀರಾಚಾರ್**

ಮಾರ್ಗದರ್ಶಕರು
**ಡಾ. ಲಕ್ಷ್ಮಣಸಿಂಗ್ ಆರ್. ರಾಥೋಡ್**
ಉಪನ್ಯಾಸಕರು
ಚಾಮರಾಜೇಂದ್ರ ಸರ್ಕಾರಿ ದೃಶ್ಯಕಲಾ ಕಾಲೇಜು
ಮೈಸೂರು



**ದೃಶ್ಯಕಲಾ ವಿಭಾಗ**
ಲಲಿತಕಲಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ, ೫೮೩ ೨೭೬
೨೦೧೮

# ಪ್ರಮಾಣ ಪತ್ರ

**ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಲಕ್ಷ್ಮಣಸಿಂಗ್ ಆರ್. ರಾಥೋಡ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 2-11-2018
ಸ್ಥಳ : ವಿದ್ಯಾರಣ್ಯ

(ಜಿ. ಬಿ. ವೀರಾಚಾರ್)
ಸಂಶೋಧನ ವಿದ್ಯಾರ್ಥಿ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದೃಢೀಕರಣ ಪತ್ರ

**ಜಿ. ಬಿ. ವೀರಾಚಾರ್** ಇವರು ಸಾದರಪಡಿಸಿದ **ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು** ಎಂಬ ಶೀರ್ಷಿಕೆಯ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 2-11-2018
ಸ್ಥಳ : ವಿದ್ಯಾರಣ್ಯ

**(ಡಾ. ಲಕ್ಷ್ಮಣಸಿಂಗ್ ಆರ್. ರಾಥೋಡ್)**
ಮಾರ್ಗದರ್ಶಕರು/ಉಪನ್ಯಾಸಕರು
ಚಾಮರಾಜೇಂದ್ರ ಸರ್ಕಾರಿ ದೃಶ್ಯಕಲಾ ಕಾಲೇಜು
ಮೈಸೂರು

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

ಮಾನವನ ಸೃಜನಶೀಲ ಅಭಿವ್ಯಕ್ತಿಗಳಲ್ಲಿ ಪ್ರಮುಖವಾದ ಕಲೆಗಳು ಆತನ ಆಂತರಿಕ ಮತ್ತು ಬಾಹ್ಯ ಬದುಕನ್ನು ಸುಂದರಗೊಳಿಸುವುದರ ಜೊತೆಗೆ ಸಾಂಸ್ಕೃತಿಕ ಬದುಕನ್ನು ಪ್ರತಿನಿಧಿಸುವ ಬಹುಮುಖ್ಯ ಸಾಧನಗಳಾಗಿಯೂ ಮಹತ್ವ ಪಡೆದುಕೊಂಡಿವೆ. ಮಾನವನ ಹುಟ್ಟಿನೊಂದಿಗೆ ವಿಕಸಿಸುತ್ತಿರುವ ಆತನ ಬೌದ್ಧಿಕ ಪರಿಧಿಯ ಅಂಗಗಳಾದ ಕಲೆಗಳು ಆತನನ್ನು ಸಂಸ್ಕಾರಯುತವಾಗಿ ಮಾಡುತ್ತ ಬಂದಿವೆ. ಆದಿಮಾನವ ಹಂತದಲ್ಲಿ ನಿರ್ದಿಷ್ಟ ಸ್ವರೂಪಗಳನ್ನು ಪಡೆದುಕೊಂಡ ಕಲಾಪ್ರಕಾರಗಳು ವಿವಿಧ ಹಂತಗಳಲ್ಲಿ ಬೆಳೆಯುತ್ತ ಬಂದಿರುವುದನ್ನು ಗುರುತಿಸಬಹುದಾಗಿದೆ.

ಭಾಷೆ ಇಲ್ಲದ ಕಾಲಘಟ್ಟದಲ್ಲಿ ಕಲಾಪ್ರಕಾರಗಳು ಮಾನವನ ಸಂಪರ್ಕ ಸಾಧನಗಳಾಗಿದ್ದು ಮಾತ್ರವಲ್ಲದೆ, ಆತನ ಬಿಡುವಿನ ವೇಳೆಯ ಮನರಂಜನೆಯ ಸಾಧನಗಳಾಗಿಯೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದವು. ಮಾನವನ ವಿಕಾಸದೊಂದಿಗೆ ಆತ ಅನುಸರಿಸಿಕೊಂಡು ಬರುತ್ತಿದ್ದ ಕಲೆಗಳು ಸಹಿತ ವಿಕಾಸ ಹೊಂದಿದವು. ಸಂಪರ್ಕ ಸಾಧನ ಮತ್ತು ಮನರಂಜನೆಯ ಜೊತೆಗೆ ದೈವಿಕತೆಗೆ, ಆಚಾರ, ವಿಚಾರ, ವಿಧಿಕ್ರಿಯೆಗಳು, ಮಾಂತ್ರಿಕ ಕಟ್ಟಳೆಗಳು, ನಂಬಿಕೆ, ಆಚರಣೆಗಳು, ವಿಶೇಷ ಸಮಾರಂಭಗಳು, ದೈನಂದಿನ ಬದುಕು, ಭೌತಿಕ ಶೃಂಗಾರಗಳಂತಹ ಉದ್ದೇಶಗಳಿಗೆ ಕಲೆಗಳು ಬಳಕೆಗೊಳ್ಳತೊಡಗಿದವು. ದೇವರು, ಧರ್ಮ, ಆರಾಧನೆಗಳು ಬಲಗೊಂಡ ನಂತರ ಕಲೆಗಳ ಮಹತ್ವ ಮತ್ತಷ್ಟು ಮೌಲಿಕವಾಯಿತು. ಬಿಸಿಲು, ಗಾಳಿ, ಮಳೆ, ಮಿಂಚು, ಗುಡುಗು, ಸಿಡಿಲು, ಭೂಕಂಪಗಳಂತಹ ಪ್ರಾಕೃತಿಕ ಕ್ರಿಯೆಗಳು, ರೋಗ-ರುಜಿನಗಳು, ಸಾವು-ನೋವುಗಳಂತಹ ಸಂಗತಿಗಳು ಮನುಷ್ಯನಲ್ಲಿ ವಿಸ್ಮಯ ಉಂಟುಮಾಡಿದವು. ಜೊತೆಗೆ ಹುಟ್ಟು ಮತ್ತು ಸಾವುಗಳ ನಿಗೂಢತೆಯು ಮತ್ತಷ್ಟು ಕೌತುಕಗಳನ್ನು ತಂದಿರಬಹುದು. ಇಂತಹ ಸಂಗತಿಗಳ ಹಿನ್ನೆಲೆಯಲ್ಲಿ ಅಗೋಚರವಾದ ಶಕ್ತಿ ಇವುಗಳನ್ನು ನಿಯಂತ್ರಿಸುತ್ತದೆ ಎಂಬುದನ್ನು ಚಿಂತಿಸತೊಡಗಿದನು. ಜೊತೆಗೆ ಇವುಗಳ ಬಗ್ಗೆ ಒಂದು ರೀತಿಯ ದೈವಿಕ ಭಾವನೆಯನ್ನು ಬೆಳೆಸಿಕೊಂಡು ಪ್ರಾಕೃತಿಕ ಶಕ್ತಿಗಳನ್ನು ಆರಾಧಿಸತೊಡಗಿರಬಹುದು.

ಬೆಳಕನ್ನು ಕೊಡುವ ಸೂರ್ಯ, ಚಂದ್ರ, ಮಳೆ, ಗಾಳಿ, ಬೆಂಕಿ ಮುಂತಾದವುಗಳನ್ನು ಸಂಪ್ರೀತಗೊಳಿಸುವ ಹಿನ್ನೆಲೆಯಲ್ಲಿ ಅವುಗಳನ್ನು ದೈವಿಕ ಸ್ವರೂಪಗಳೆಂದು ನಂಬಿಕೊಂಡು ಆರಾಧಿಸತೊಡಗಿದ ನಂತರ ಮುಂದಿನ ದಿನಗಳಲ್ಲಿ ಹುಟ್ಟು, ಸಾವು, ರಕ್ಷಣೆ, ಆಹಾರ, ಇಂತಹ ಸಹಜ ಸಂಗತಿಗಳಿಗೂ ಪ್ರತ್ಯೇಕ ದೈವಿಕ ನಂಬಿಕೆಗಳನ್ನು ಹೊಂದಿರಬಹುದು. ಅಗೋಚರವಾದ ಕೆಲವು ಶಕ್ತಿಗಳು ಮತ್ತು ದೃಶ್ಯಗೋಚರವಾದ ಕೆಲವು ಪ್ರಾಕೃತಿಕ ಶಕ್ತಿಗಳನ್ನು ಆರಾಧಿಸುತ್ತ ಅವುಗಳಿಗೆ ಮೂರ್ತ ಸ್ವರೂಪ ಕೊಡಲು ಆರಂಭಿಸಿದನು. ಇದು ಬಹುಮಟ್ಟಿಗೆ ಸಾಂಪ್ರದಾಯಿಕ ಶಿಲ್ಪಕಲೆಯ ಮೂಲಬೇರುಗಳ ಕಡೆಗೆ ಬೆರಳು ತೋರುವ ದಿಕ್ಸೂಚಿಯಾಗಿರಬಹುದು.

ಪ್ರಾಕೃತಿಕ ಶಿಲಾಗುಹೆಗಳು, ಶಿಲಾಶ್ರಯಗಳಂತಹ ನೆಲೆಗಳಲ್ಲಿ ವಾಸಿಸುತ್ತಿದ್ದ ಮಾನವ ಬಿಸಿಲು, ಗಾಳಿ, ಮಳೆ, ಪ್ರಕೃತಿ ವಿಕೋಪಗಳಂತಹ ಘಟನೆಗಳಿಂದ ತಾನು ರಕ್ಷಣೆ ಪಡೆಯುವಂತೆ ತಾನು ನಂಬಿಕೊಂಡ ದೈವ ಮತ್ತು ದೈವಸಂಬಂಧಿ ಮೂರ್ತ ರೂಪಗಳಿಗೂ ರಕ್ಷಣೆ ದೊರೆಯಬೇಕೆಂದು ಬಯಸಿದ ಹಿನ್ನೆಲೆಯಲ್ಲಿ ದೇವಾಲಯಗಳ ನಿರ್ಮಾಣ ಆರಂಭವಾಗಿರಬಹುದು. ದೇವಾಲಯಗಳು ವಿಕಾಸಗೊಳ್ಳುತ್ತ ಬಂದಂತೆ ಅದರ ಭಾಗವಾಗಿ ಮೂರ್ತಿಶಿಲ್ಪ ರಚನೆಯೂ ಜೊತೆಯಾಗಿ ಬೆಳೆಯುತ್ತ ಬಂದಿತು. ದೈವಿಕ ಭಾವನೆ, ಧಾರ್ಮಿಕ ಪದ್ಧತಿಗಳು ಬಲಗೊಳ್ಳುತ್ತ ನಡೆದಂತೆ ಮೂರ್ತಿಶಿಲ್ಪ ರಚನೆಯು ವೈವಿಧ್ಯತೆಯನ್ನು ಪಡೆದುಕೊಂಡಿರುವಂತೆ ಕಂಡುಬರುತ್ತದೆ. ಧಾರ್ಮಿಕ ಹಿನ್ನೆಲೆಯು ಪಾರಂಪರಿಕ ಶಿಲ್ಪಕಲೆಯ ಬಗ್ಗೆ ಕುತೂಹಲಕರವಾದ ಸಂಗತಿಗಳನ್ನು ತಿಳಿಸಿಕೊಡುತ್ತದೆ.

ಬ್ರಹ್ಮಾಂಡ ಸೃಷ್ಟಿ ಆರಂಭವಾದಾಗಲೇ ವಿಶ್ವಶಿಲ್ಪವೂ ಅಂಕುರಿಸಿತು. ಚಿತ್ರವಿಚಿತ್ರವೂ, ಮಹದುಪಯೋಗಕರವೂ, ಆನಂದ ಪ್ರದಾಯಕವೂ ಆದ ಪರಮೇಶ್ವರನ ಸೃಷ್ಟಿಶಿಲ್ಪವನ್ನು ಗಮನಿಸಿ ಮಾನವನು ಲೌಕಿಕ ಶಿಲ್ಪವನ್ನು ರೂಪಿಸತೊಡಗಿದನು ಎಂದು ಯಜುರ್ವೇದ ಬ್ರಾಹ್ಮಣದಲ್ಲಿ ಹೇಳಿದ ಬಗ್ಗೆ ತಿಳಿದುಬರುತ್ತದೆ.

ಶಿಲ್ಪವೆಂಬ ಮಾತಿಗೆ ಬೆರಗನ್ನುಂಟುಮಾಡುವ ಕೈಕೆಲಸವೆಂಬ ಅರ್ಥವಿದೆ. ಮನಸ್ಸಿನ ಏಕಾಗ್ರತೆ, ಏಕತಾನತೆಗಳಿಂದ ಹೊರಬಂದುದೆಲ್ಲ ಶಿಲ್ಪ ಎಂಬುದಾಗಿಯೂ ಹೇಳಲಾಗುತ್ತದೆ. ಜಗತ್ತನ್ನೆಲ್ಲ ಸೃಷ್ಟಿ ಮಾಡಿದ ಬ್ರಹ್ಮನು ತನ್ನ ಮನಸ್ಸಿನಿಂದ ಮಾಡಿದ್ದೆಲ್ಲ ಶಿಲ್ಪವೇ ಆಗಿದೆ ಎಂದು ಶಿಲ್ಪೋಪನಿಷತ್ತು ಹೇಳುತ್ತದೆ.[೧]

ಭಾರತದಲ್ಲಿ ಅತ್ಯಂತ ಪ್ರಾಚೀನ ಕಾಲದಲ್ಲಿಯೇ ಮೂರ್ತಿಪೂಜೆ ನಡೆಯುತ್ತಿತ್ತೆಂಬ ಬಗ್ಗೆ ತಿಳಿದುಬರುತ್ತದೆ. ಅಮೂರ್ತವಾದ ಭಗವಂತನ ಸಾಕ್ಷಾತ್ಕಾರಕ್ಕೆ ಮೂರ್ತಿ ಒಂದು ಸಾಧನ. ಜಗತ್ತು ಹೇಗೆ ಮಿಥ್ಯೆಯಾದರೂ, ಸತ್ಯವಾಗಿದೆಯೋ ಹಾಗೆ ನಿರಾಕಾರ, ನಿರಂಜನವಾದ ಜಗನ್ನಿಯಾಮಕನಾದ ದೇವನನ್ನು ಬ್ರಹ್ಮಋಷಿಗಳು ಮಂತ್ರಸ್ಥ ಮಾಡಿದರು. ಶಿಲ್ಪ ಬ್ರಾಹ್ಮಣರು ಅಂತಹ ಮಂತ್ರಸ್ಥ ವಿವರಗಳನ್ನು ಮೂರ್ತರೂಪಗೊಳಿಸಿದರು. ನಂತರ ಭೌವನ ಮಹಾಋಷಿಯು ಪ್ರಥಮವಾಗಿ ಶಿಲ್ಪಗಳಿಗೆ ಶಾಸ್ತ್ರೀಯ ರೂಪಕೊಟ್ಟರು. ಅವರ ಶಿಷ್ಯ ಪ್ರಮುಖರಾದ ಕಾಶ್ಯಪ ಬ್ರಾಹ್ಮಣರು ಆದ್ಯ ಪ್ರವರ್ತಕರಾಗಿ ಅದನ್ನು ಬೆಳೆಸಿದರು ಎಂದು ಕೆಲವು ಕಡೆಗೆ ಹೇಳಲಾಗಿದೆ.

---

೧. ಪಿ. ಆರ್. ತಿಪ್ಪೇಸ್ವಾಮಿ (ಪ್ರ.ಸಂ.) : ಶಿಲ್ಪಕಲಾ ಪ್ರಪಂಚ, (ಎನ್. ಮರಿಶಾಮಾಚಾರ್ ಅವರ ಲೇಖನ), ಪು-೩೫

ಜಗತ್ಕಾರಣನಾದವನಿಗೆ ವಿಶ್ವಕರ್ಮನೆಂಬ ನಾಮವು ಸಾರ್ಥಕವಾಗಿದೆ. ಹಾಗಾಗಿ ಅವನು ಪ್ರಥಮ ಶಿಲ್ಪಿ ಎಂಬುದನ್ನು ಹೇಳುವ ವಿವರಗಳೂ ಇವೆ. ವೇದವಾಙ್ಮಯಗಳಲ್ಲಿ ವಿಶ್ವಕರ್ಮನ ನಂತರ ಹೇಳಲಾಗಿರುವ ಶಿಲ್ಪಿ ಪ್ರಜಾಪತಿತ್ವಷ್ಟ, ವಿಶ್ವಕರ್ಮನಿಗೆ ತ್ವಷ್ಟ, ಮನು, ಮಯ, ಶಿಲ್ಪಿ, ವಿಶ್ವಜ್ಞರೆಂಬ ಮಕ್ಕಳಿದ್ದರು. ಇವರು ಜಗದಲ್ಲಿ ಶಿಲೆ, ಮರ, ಕಬ್ಬಿಣ, ತಾಮ್ರ, ಚಿನ್ನ ಈ ಬಗೆಯ ಪಂಚಶಿಲ್ಪಗಳನ್ನು ನಿರ್ಮಿಸುವುದರಲ್ಲಿ ನಿಪುಣರಾಗಿದ್ದರು ಎಂಬ ವಿವರ ಸ್ಕಂದ ಪುರಾಣ, ಬ್ರಹ್ಮಾಂಡ ಪುರಾಣಗಳಲ್ಲಿ ಕಂಡುಬರುತ್ತದೆ. ಆದರೆ ಯಜುರ್ವೇದವು ವಿಶ್ವಕರ್ಮನಿಗೆ ಸಾನಗ, ಸನಾತನ, ಅಹಭೂನ, ಪ್ರತ್ನ ಮತ್ತು ಸುಪರ್ಣರೆಂಬ ಪಂಚಋಷಿಗಳು ಪುತ್ರರಾಗಿದ್ದರು. ಇವರಿಂದ ಪಂಚಶಿಲ್ಪಗಳನ್ನು ಆಚರಿಸುವ ವಿಶ್ವಬ್ರಾಹ್ಮಣರು ಜನ್ಮಿಸಿದರೆಂದು ಆಗಮಶಾಸ್ತ್ರಗಳು ಹೇಳುತ್ತವೆ.[೧]

ವಿಶ್ವಕರ್ಮನ ಮಗ ತ್ವಷ್ಟೃವಿಗೆ 'ವಿಶ್ವರೂಪ' ಎಂಬ ಮಗನಿದ್ದು ಅವನು ಪ್ರಖ್ಯಾತ ಶಿಲ್ಪಿಯಾಗಿದ್ದ. ವಿಶ್ವಕರ್ಮ, ತ್ವಷ್ಟೃ ವಿಶ್ವರೂಪ ಈ ಮೂವರನ್ನು ದೈವಶಿಲ್ಪಾಚಾರ್ಯರರು ಎಂದು ಹೇಳಲಾಗಿದೆ. ಇವರ ನಂತರ ದೈವಿಕ ಶಿಲ್ಪಿಗಳಲ್ಲಿ ಋಭು, ವಿಭ್ವ, ವಾಜ, ಅಂಗಿರೋ ಮಹರ್ಷಿಯ ಎಂಟನೆಯ ಮಗನಾದ ಸುಧನ್ವ ಇವರನ್ನು ಹೆಸರಿಸಲಾಗಿದೆ. ಋಭುಗಳ ನಂತರದ ಪ್ರಖ್ಯಾತ ದೇವಶಿಲ್ಪಿ ಕಶ್ಯಪ ಪ್ರಜಾಪತಿ. ಇವನನ್ನು ವಿಶ್ವಕರ್ಮನ ಅವತಾರವೆಂದು ಮಂತ್ರಗಳು ವಿವರಿಸುತ್ತವೆ. ಇಂದು ಲಭ್ಯವಿರುವ ಕಾಶ್ಯಪ ಶಿಲ್ಪಶಾಸ್ತ್ರವು ಈತನ ಕೃತಿ ಎಂದು ಹೇಳಲಾಗುತ್ತದೆ.

ಮತ್ಸ್ಯ ಪುರಾಣದಲ್ಲಿ ಪ್ರಾಚೀನ ಶಿಲ್ಪಕಲಾವಿದರ ಬಗ್ಗೆ ಮತ್ತೊಂದು ರೀತಿಯ ವಿವರವಿದೆ. ಭೃಗು, ಅತ್ರಿ, ವಸಿಷ್ಠ, ವಿಶ್ವಕರ್ಮ, ಮಯ, ನಾರದ, ನಗ್ನಜಿತ್, ವಿಶಾಲಾಕ್ಷ, ಪುರಂದರ, ಬ್ರಹ್ಮ, ಕುಮಾರ, ನಂದೀಶ, ಶಾನಕ, ಗರ್ಗ, ವಾಸುದೇವ, ಅನಿರುದ್ಧ, ಶುಕ್ರ ಮತ್ತು ಬೃಹಸ್ಪತಿ ಎಂಬ ಹದಿನೆಂಟು ಶಿಲ್ಪಕಾರರ ಬಗ್ಗೆ ಹೇಳಲಾಗಿದೆ.[೨]

ಮಾನಸಾರ ಗ್ರಂಥದ ಪ್ರಕಾರ ಬ್ರಹ್ಮನ ನಾಲ್ಕು ಮುಖಗಳಿಂದ ವಿಶ್ವಕರ್ಮ, ಮಯ, ತ್ವಷ್ಟೃ, ಮನು ಎಂಬುವರು ಹುಟ್ಟಿದರು. ಇವರಲ್ಲಿ ವಿಶ್ವಕರ್ಮನು ಇಂದ್ರನ ಪುತ್ರಿಯನ್ನು ವಿವಾಹವಾದನು. ಇವರಿಬ್ಬರಿಗೆ ಹುಟ್ಟಿದ ಸಂತತಿಯೇ 'ಸ್ಥಪತಿ' ಎಂದು ಹೇಳಲಾಗಿದೆ. ಸ್ಥಪತಿ ಸಂತತಿಯವರು ಶಿಲ್ಪ ರಚನೆಯಲ್ಲಿ ಅದ್ವಿತೀಯರಾಗಿದ್ದರು. ಇದೇ ಪ್ರಕಾರ ಮಯನು ಸುರೇಂದ್ರತ ಪ್ರಭೆಯನ್ನು ವರಿಸಿದನು. ಇವರಿಗೆ ವರ್ಧಕಿ ಸಂತತಿ ಹುಟ್ಟಿತು. ವರ್ಧಕಿ ಸಂತತಿಯವರು ಚಿತ್ರ ಬರೆಯುವುದರಲ್ಲಿ ಪ್ರಾವೀಣ್ಯತೆ ಹೊಂದಿದವರು. ಅದರಂತೆ ಮನು ಎಂಬುವನು ನಳಕನ್ಯೆಯನ್ನು ವರಿಸಿದನು. ಇವರಿಗೆ ತಕ್ಷಕ ಸಂತತಿ ಜನಿಸಿತು. ಈ ತಕ್ಷಕ ಸಂತತಿಯ ಕೆಲಸ ನಕ್ಷೆ ಹಾಕುವುದು ಮತ್ತು ಕತ್ತರಿಸುವುದಾಗಿತ್ತು.

ಬ್ರಹ್ಮವೈವರ್ತ ಪುರಾಣದಲ್ಲಿ ವಿಶ್ವಕರ್ಮನಿಗೆ ಒಂಬತ್ತು ಜನ ಮಕ್ಕಳಿದ್ದರೆಂದು ಹೇಳಿದೆ. ಅವರನ್ನು ಶಿಲ್ಪಕಾರರು ಎಂದು ಕರೆಯಲಾಗಿದೆ. ಅವರ ಹೆಸರುಗಳು ಅವರು ಮಾಡುತ್ತಿದ್ದ ಕೆಲಸವನ್ನು ಆಧರಿಸಿವೆ. ಅವುಗಳೆಂದರೆ, ಮಾಲಕಾರ(ತೋಟಿಗ), ಕರ್ಮಕಾರ(ಕಮ್ಮಾರ),

---

೧. ಪಿ. ಆರ್. ತಿಪ್ಪೇಸ್ವಾಮಿ (ಪ್ರಸಂ.) : ಶಿಲ್ಪಕಲಾ ಪ್ರಪಂಚ (ಕೊಂಡೂರು ವೀರರಾಘವಚಾರ್ಯ ಅವರ ಲೇಖನ), ಪು–೪

೨. ಪಿ. ಆರ್. ತಿಪ್ಪೇಸ್ವಾಮಿ (ಪ್ರಸಂ.) : ಶಿಲ್ಪಕಲಾ ಪ್ರಪಂಚ (ನಾ. ಸೂ. ವೆಂಕಟಾಚಾರ್ಯ ಅವರ ಲೇಖನ), ಪು–೨೪

ಶಂಬಕಾರ(ಶಂಖದ ಮೇಲೆ ಬರೆಯುವವ), ಕುವಿಂದಕ(ನೇಕಾರ), ಕುಂಭಕಾರ(ಕುಂಬಾರ), ಕಾಂಸಕಾರ(ಕಂಚುಗಾರ), ಸೂತ್ರಧಾರ(ಬಡಗಿ), ಚಿತ್ರಕಾರ(ಚಿತ್ರ ಬರೆಯುವವ), ಸ್ವರ್ಣಕಾರ (ಅಕ್ಕಸಾಲಿಗ) ಎಂಬುದಾಗಿವೆ.[೪]

ಕ್ರಿಪೂ. ೪೦೦ ಸುಮಾರಿನ ಕೌಟಿಲ್ಯನ ಅರ್ಥಶಾಸ್ತ್ರ ಗ್ರಂಥದಲ್ಲಿ ಶಿಲ್ಪಿಯನ್ನು 'ಕಾರುಕ' ಎಂಬ ಹೆಸರಿನಿಂದ ಗುರುತಿಸಲಾಗಿದೆ. ವರಾಹಮಿಹಿರನ ಗ್ರಂಥವಾದ 'ಬೃಹತ್ ಸಂಹಿತೆ'ಯಲ್ಲಿ ಪ್ರಾಚೀನ ಕಾಲದ ಏಳು ಜನ ಶಿಲ್ಪಕಾರರಾದ ಗರ್ಗ, ಮನು, ವಸಿಷ್ಠ, ಪರಾಶರ, ವಿಶ್ವಕರ್ಮ, ನಗ್ನಜಿತ್, ಮಯ ಇವರನ್ನು ಹೆಸರಿಸಲಾಗಿದೆ. ಹೀಗೆ ಅನೇಕ ವಿವರಗಳು ಪ್ರಾಚೀನ ಶಿಲ್ಪಿಗಳ ಬಗ್ಗೆ ತಿಳಿದುಬರುತ್ತವೆ.

ವೇದಕಾಲೀನ ಶಿಲ್ಪಕಾರರ ಬಗ್ಗೆ ಇಂತಹ ಸಂಗತಿಗಳು ತಿಳಿದುಬಂದರೂ ಅಂದಿನ ಕಾಲದ ಶಿಲ್ಪ ನಿರ್ಮಾಣದ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಾಗುವುದಿಲ್ಲ. ರಥ ನಿರ್ಮಾಣ, ಯಜ್ಞಕಟ್ಟೆ, ಯಾಗಶಾಲೆಗಳನ್ನು ನಿರ್ಮಿಸುವುದು, ಇಂತಹ ಕ್ರಮಗಳ ಕುರಿತು ತಿಳಿದುಬರುತ್ತದೆ. ಮುಂದಿನ ದಿನಗಳಲ್ಲಿ ಶಿಲ್ಪಿಗಳು ದೇವತಾಮೂರ್ತಿ ನಿರ್ಮಾಣ, ದೇವಾಲಯ ನಿರ್ಮಾಣಗಳನ್ನು ಕೈಗೊಂಡ ನಂತರ ಮೂರ್ತಿ ನಿರ್ಮಾಣ ಶಾಸ್ತ್ರಗಳು ವಿಪುಲವಾಗಿ ಬೆಳೆದುಬಂದವು. ಶೈವ, ವೈಷ್ಣವ, ಶಾಕ್ತ ಮತಗಳು ಪ್ರಬಲವಾಗಿ ಬೆಳೆದವು. ಇಂದ್ರ, ತ್ವಷ್ಟೃ, ಸೋಮ, ವರುಣ, ಪರ್ಜನ್ಯ, ಅಗ್ನಿ ಮೊದಲಾದ ದೇವತೆಗಳು ನಗಣ್ಯವಾಗಿ ಶಿವ, ವಿಷ್ಣು, ಬ್ರಹ್ಮ, ಕಾಳಿ ದೇವತೆಗಳು ಪ್ರಧಾನರಾದರು. ಭಾರತದ ಬೇರೆ ಬೇರೆ ಭಾಗಗಳಲ್ಲಿ ಪ್ರಾದೇಶಿಕವಾದ ಶಿಲ್ಪಕಲಾ ಶೈಲಿಗಳು ರೂಪುಗೊಳ್ಳತೊಡಗಿದವು.[೫]

ಹಿಮಾಲಯ ಪರ್ವತದಿಂದ ವಿಂಧ್ಯ ಪ್ರದೇಶದವರೆಗೆ ನಾಗರ ದೇಶವೆಂತಲೂ, ವಿಂಧ್ಯದಿಂದ ಕೃಷ್ಣಾ ತುಂಗಭದ್ರಾವರೆಗೆ ವೇಸರದೇಶವೆಂದು, ಅಲ್ಲಿಂದ ಕನ್ಯಾಕುಮಾರಿವರೆಗೆ ದ್ರಾವಿಡ ದೇಶವೆಂತಲೂ ಹೆಸರಾಯಿತು. ಆಯಾ ದೇಶದ ಶಿಲ್ಪರಚನೆಯು ಆಯಾ ದೇಶದ ಹೆಸರಿನಿಂದ ಪ್ರತ್ಯೇಕ ಶೈಲಿಯಾಗಿ ನಾಗರ, ವೇಸರ ಮತ್ತು ದ್ರಾವಿಡ ಶೈಲಿಯ ಶಿಲ್ಪ ಎಂಬುದಾಗಿ ಮೂರು ಮುಖ್ಯ ಭೇದಗಳಿಂದ ಗುರುತಿಸಲ್ಪಡತೊಡಗಿತು. ಇದು ದೇವಾಲಯ ರಚನೆಯಲ್ಲಿಯೂ ಕಂಡುಬರತೊಡಗಿತು. ಕ್ರಮೇಣ ಜೈನರು, ಬೌದ್ಧರು ಪ್ರಬಲರಾದಾಗ ಶಿಲ್ಪರಚನೆಯ ವಿಧಾನವು ಮತ್ತೊಂದು ರೀತಿಯಲ್ಲಿ ಬೆಳೆಯಿತು. ಮುಂದಿನ ದಿನಗಳಲ್ಲಿ ಹಲವಾರು ಶೈಲಿಗಳು ಶಿಲ್ಪರಚನೆಯಲ್ಲಿ ಹುಟ್ಟಿಕೊಂಡವು. ಆಯಾಕಾಲದ ಶಾಸ್ತ್ರ ಗ್ರಂಥಗಳು ಸಾಂದರ್ಭಿಕವಾಗಿ ಶಿಲ್ಪಕಲೆಯ ವಿವರಗಳನ್ನು ತಿಳಿಸುತ್ತಿದ್ದರೂ, ಶಿಲ್ಪರಚನೆ, ಅವುಗಳ ತಾಳಮಾನ ಮುಂತಾದ ವಿಧಿ-ವಿಧಾನಗಳನ್ನೊಳಗೊಂಡ ಪ್ರತ್ಯೇಕ ಶಿಲ್ಪಶಾಸ್ತ್ರಗಳು ರಚನೆಯಾದವು. ಪ್ರಸ್ತುತ ಸುಮಾರು ೩೦೦ ಶಿಲ್ಪಶಾಸ್ತ್ರಗಳು ಇವೆ ಎಂಬುದಾಗಿ ಹೇಳುತ್ತಾರೆ.

ಪ್ರಾಚೀನವಾದ ವೇದಗಳು, ಆಗಮಗಳು, ಉಪನಿಷತ್ತು, ಗೃಹ್ಯಸೂತ್ರ, ಧರ್ಮಶಾಸ್ತ್ರ, ಪಂಚರಾತ್ರ ಮುಂತಾದ ಗ್ರಂಥಗಳಲ್ಲಿ ಸಾಂದರ್ಭಿಕವಾಗಿ ಶಿಲ್ಪಕಲೆಯ ವಿವರಗಳಿವೆ. ಪಂಡಿತ ಗಣಪತಿಶಾಸ್ತ್ರಿ

---

೪. ಪಿ. ಆರ್. ತಿಪ್ಪೇಸ್ವಾಮಿ (ಪ್ರಸಂ.) : ಶಿಲ್ಪಕಲಾ ಪ್ರಪಂಚ (ಮ. ಗಂಗಾಧರಮೂರ್ತಿ ಅವರ ಲೇಖನ), ಪು-೧೯, ೨೦
೫. ಅದೇ., ಪು-೧೧, ೧೨

ಅವರು ವಾಸ್ತುವಿದ್ಯಾ, ಮಯಮತಂ, ಮನುಷ್ಯಾಲಯ ಚಂದ್ರಿಕ, ಶಿಲ್ಪರತ್ನಂ, ಸಮರಾಂಗಣ ಸೂತ್ರಧಾರಂ ಎಂಬ ಐದು ಪ್ರಾಚೀನ ಶಿಲ್ಪ ಶಾಸ್ತ್ರಗಳನ್ನು ಸಂಪಾದಿಸಿದ್ದಾರೆ. ಇದಲ್ಲದೆ ಪಂಡಿತ್ ಗೌರಿಶಂಕರ್, ಹರಿಚಂದ್ ಓಜಾ ಅವರು ತಮ್ಮ "ಮಧ್ಯಕಾಲೀನ ಸಂಸ್ಕೃತಿ" ಎಂಬ ಗ್ರಂಥದಲ್ಲಿ ಸುಮಾರು ಇಪ್ಪತ್ತಕ್ಕಿಂತ ಹೆಚ್ಚಿನ ಶಿಲ್ಪಶಾಸ್ತ್ರಗಳನ್ನು ಹೆಸರಿಸಿದ್ದಾರೆ. ಅವುಗಳಲ್ಲಿ ವಾಸ್ತುಸೌಖ್ಯ, ಅಪರಾಜಿತ ಪೃಚ್ಛ, ಪ್ರಾಸಾದಾನುಕೀರ್ತನ, ಚಕ್ರಶಾಸ್ತ್ರ, ಚಿತ್ರಪತಿ, ಜಲಾರ್ಗಲ, ಪಕ್ಷಿ ಮನುಷ್ಯಾಲಯ ಲಕ್ಷಣ, ರಥ ಲಕ್ಷಣ, ವಿಮಾನ ವಿದ್ಯಾ, ವಿಮಾನ ಲಕ್ಷಣ, ವಿಶ್ವಕರ್ಮೀಯ, ಕೌತುಕ ಲಕ್ಷಣ, ಮೂರ್ತಿಲಕ್ಷಣ, ಪ್ರತಿಮಾ ದ್ರವ್ಯಾದಿವಚನ, ಸಕಲಾಧಿಕಾರ, ಸಮರಾಂಗಣ ಸೂತ್ರಧಾರ, ಸರಸ್ವತೀಯಶಿಲ್ಪ, ವಿಶ್ವವಿದ್ಯಾಭರಣ, ವಿಶ್ವಕರ್ಮ ಪ್ರಕಾಶ, ಮಯಶಿಲ್ಪಿ ಎಂಬ ಶಿಲ್ಪಶಾಸ್ತ್ರಗಳು ಮುಖ್ಯವಾಗಿವೆ.

ಈ ಶಾಸ್ತ್ರಗಳಲ್ಲದೆ 'ಅಂಶುಮದ್ ಭೇದ, ಅಗಸ್ತ್ಯ ಸಕಲಾಧಿಕಾರ, ಸನತ್ಕುಮಾರ ವಾಸ್ತುಶಾಸ್ತ್ರ', ಪ್ರಸಾದ ಮಂಡನ ವಾಸ್ತುಶಾಸ್ತ್ರ, ನಾರದಶಿಲ್ಪ, ಶೇಷಭಾಷ್ಯ, ಚಿತ್ರಸಾರ, ವಿಶ್ವಸಾರ, ಚಿತ್ರಜ್ಞಾನ, ಕಪಿಂಜಲ ಸಂಹಿತಾ, ಕೌಮುದೀಶಾಸ್ತ್ರ, ಸರಸ್ವತಿಶಿಲ್ಪ, ಬ್ರಹ್ಮಶಿಲ್ಪ, ಬ್ರಹ್ಮಮಾಯಲಶಾಸ್ತ್ರ, ದೀಪ್ತಿತಂತ್ರ, ದೀಪ್ತಿಸಾರ ಮುಂತಾದ ಗ್ರಂಥಗಳಲ್ಲಿ ಶಿಲ್ಪಕಲೆಗೆ ಸಂಬಂಧಪಟ್ಟ ವಿವರಗಳಿವೆ.

ಈ ಗ್ರಂಥಗಳಲ್ಲದೆ ಕೆಲವು ವಿಶ್ವಕೋಶ ಮಾದರಿಯ ಗ್ರಂಥಗಳಲ್ಲಿಯೂ ಶಿಲ್ಪಕಲೆಯ ವಿವರಗಳು ಕಂಡುಬರುತ್ತವೆ. ಕ್ರಿ.ಶ. ೮ನೇ ಶತಮಾನದ ವಿಷ್ಣುಧರ್ಮೋತ್ತರ ಇವುಗಳಲ್ಲಿ ಪ್ರಾಚೀನವಾದುದು. ನಂತರದಲ್ಲಿ ಕ್ರಿ.ಶ. ೧೧ನೇ ಶತಮಾನದಲ್ಲಿ ಪರಮಾರ ದೊರೆ ಭೋಜದೇವನಿಂದ ರಚಿತವಾದ "ಸಮರಾಂಗಣ ಸೂತ್ರಧಾರ", ಕ್ರಿ.ಶ. ೧೨ನೇ ಶತಮಾನದಲ್ಲಿ ರಚನೆಯಾದ ಭುವನದೇವನ "ಅಪರಾಜಿತಪೃಚ್ಛ", ಚಾಳುಕ್ಯ ಸೋಮೇಶ್ವರ ವಿರಚಿತ "ಮಾನಸೋಲ್ಲಾಸ" ಕ್ರಿ.ಶ. ೧೬ನೇ ಶತಮಾನದಲ್ಲಿ ರಚನೆಯಾದ ಶ್ರೀಕುಮಾರನ 'ಶಿಲ್ಪರತ್ನ', ಕೆಳದಿ ಬಸವಭೂಪಾಲನ ಕ್ರಿ.ಶ. ೧೭ನೇ ಶತಮಾನದಲ್ಲಿ ರಚಿಸಲ್ಪಟ್ಟ "ಶಿವತತ್ವರತ್ನಾಕರ" ಮುಂತಾದ ಕೃತಿಗಳಲ್ಲಿ ಶಿಲ್ಪಕಲೆಯ ಬಗ್ಗೆ ವಿವರಗಳಿವೆ.

ಇಂತಹ ಅನೇಕ ಗ್ರಂಥಗಳಲ್ಲದೆ ವೈಖಾಸನಾಗಮ, ಪಂಚರಾತ್ರ, ಕಾಮಿಕ, ಅಶುಮದ್ಭೇದ, ಶೈವಾಗಮ, ವೈಷ್ಣವಾಗಮ, ಶಾಕ್ತಾಗಮಗಳು ಮುಂತಾದ ಗ್ರಂಥಗಳಲ್ಲಿ ಪ್ರತಿಮಾಲಕ್ಷಣ, ಮೂರ್ತಿನಿರ್ಮಾಣ ವಿಧಾನ, ಪ್ರತಿಷ್ಠಾಪನಾ ವಿಧಿ, ಪೂಜಾಕಾರ್ಯಗಳ ಬಗ್ಗೆ ವಿವರಗಳಿವೆ. ಈ ರೀತಿಯ ಪ್ರಾಚೀನಶಾಸ್ತ್ರ ಗ್ರಂಥಗಳ ಹಿನ್ನೆಲೆಯಲ್ಲಿ ಬೆಳೆದುಬಂದಿರುವುದೇ ಪಾರಂಪರಿಕ ಶಿಲ್ಪಕಲೆಯಾಗಿದೆ ಎಂದು ಹೇಳಬಹುದು.

ಶಿಲ್ಪರಚನೆ ಯಾವಾಗಿನಿಂದ ಆರಂಭವಾಯಿತು ಎಂಬುದಕ್ಕೆ ಐತಿಹಾಸಿಕವಾಗಿ ಖಚಿತವಾದ ಆಧಾರಗಳನ್ನು ಹೇಳಲು ಬಹುಮಟ್ಟಿಗೆ ಇನ್ನೂ ಸಾಧ್ಯವಾಗಿಲ್ಲ. ಆದಿಮಾನವರು ತಾವು ವಾಸಿಸುತ್ತಿದ್ದ ಶಿಲಾ ಗುಹೆಗಳು ಮತ್ತು ಬಂಡೆಗಳ ಮೇಲೆ ರಚಿಸಿದ ಆಕಾರಗಳು ಚಿತ್ರಕಲೆಗೆ ಮೂಲವಾದಂತೆ ಇದೆ. ಆದಿಮಾನವರು ಬೇಟೆಯಾಡಲು ಕೆತ್ತಿ ರೂಪಿಸಿಕೊಂಡ ಶಿಲಾಯುಧಗಳು ಹಾಗೂ ಇನ್ನಿತರ ಉಪಕರಣಗಳು ಶಿಲ್ಪರಚನೆಯ ಉಗಮದ ಕಡೆಗೆ ನಮ್ಮ ವಿಚಾರಗಳು ಹೊರಳುವಂತೆ

ಮಾಡಬಹುದು. ಶಿಲೆಯಲ್ಲಿ ಆಯುಧ ಹಾಗೂ ಇನ್ನಿತರ ಉಪಕರಣಗಳನ್ನು ರೂಪಿಸಿಕೊಳ್ಳುತ್ತಿದ್ದ ಮಾನವ ಅದಕ್ಕಾಗಿ ಮರ ಮತ್ತು ಲೋಹಗಳನ್ನು ನಂತರದಲ್ಲಿ ಬಳಸತೊಡಗಿದನು. ಈ ಕ್ರಿಯೆ ಮುಂದೆ ಪ್ರತ್ಯೇಕ ಶಿಲ್ಪಗಳ ತಯಾರಿಕೆಗೆ ಬುನಾದಿಯಾಗಿರುವಂತೆ ಕಂಡುಬರುತ್ತದೆ.

ಮನುಷ್ಯನು ನಾಗರಿಕತೆಯ ಹಂತಕ್ಕೆ ಬಂದಾಗ ವಿಕಾಸಗೊಂಡಂತಹ ಆತನ ಬದುಕು ವಿವಿಧ ಬಗೆಯ ಕಲಾತ್ಮಕ ಅಂಶಗಳನ್ನು ಅಳವಡಿಸಿಕೊಂಡಿತ್ತು. ತಾನು ವಾಸ ಮಾಡುವ ನೆಲೆ, ಪರಿಸರ ಸುಂದರವಾಗಿರಬೇಕೆಂದು ಅಪೇಕ್ಷಿಸಿದನು. ಜೊತೆಗೆ ವೈಯಕ್ತಿಕ ಸೌಂದರ್ಯ, ಅಲಂಕಾರ ಮತ್ತು ರೀತಿ, ನೀತಿ, ನಿಯಮಗಳನ್ನು ರೂಢಿಸಿಕೊಂಡನು. ಈ ಹೊತ್ತಿಗಾಗಲೇ ಮಾನವನ ಬದುಕಿನಲ್ಲಿ ವಿವಿಧ ಬಗೆಯ ಧಾರ್ಮಿಕ ವಿಚಾರಗಳು, ಆರಾಧನೆಗಳು, ನಂಬಿಕೆ ಹಾಗೂ ಆಚರಣೆಗಳು ಹುಟ್ಟಿಕೊಂಡಿದ್ದವು. ಇವುಗಳಿಗೆ ಪೂರಕವಾಗಿ ಇಲ್ಲವೇ ಅವುಗಳ ಭಾಗವಾಗಿ ಕಲಾತ್ಮಕ ಅಂಶಗಳು ಬೆರೆತುಕೊಂಡಿದ್ದವು. ಈ ಹಿನ್ನೆಲೆಯಲ್ಲಿ ತಾವು ನಂಬಿದ ದೈವಿಕ ಅಂಶಗಳಿಗೆ ಭೌತಿಕ ಆಕಾರಗಳನ್ನು ಕೊಡುವ ಮತ್ತು ಪೂಜಿಸುವ ಪರಂಪರೆ ಆರಂಭಗೊಂಡಿತು. ಬೆಳಕು ಕೊಡುವ ಸೂರ್ಯ ಮತ್ತು ಚಂದ್ರ, ಅಗ್ನಿ, ವರುಣ ಹೀಗೆ ಅನೇಕ ಪ್ರಕೃತಿ ಶಕ್ತಿಗಳಿಗೆ ಪ್ರಾಚೀನರು ತಮ್ಮದೇ ಆದ, ತಾವು ನಂಬಿಕೊಂಡ, ಕಲ್ಪಿಸಿಕೊಂಡ ಆಕಾರಗಳನ್ನು ಕೊಡತೊಡಗಿದರು. ಜಗತ್ತಿನ ಎಲ್ಲ ಪ್ರಾಚೀನ ನಾಗರಿಕತೆಗಳಲ್ಲಿ ಸೂರ್ಯನ ಶಿಲ್ಪವು ಕಂಡು ಬಂದಿರುವುದು ಗಮನಾರ್ಹವಾಗಿದೆ. ಇದು ಪಾರಂಪರಿಕ ಶಿಲ್ಪಕಲೆಯ ಆರಂಭಿಕ ಹಂತಗಳನ್ನು ಪ್ರತಿನಿಧಿಸುತ್ತಿರಬಹುದು.

ಜಗತ್ತಿನ ಪ್ರಮುಖ ಪ್ರಾಚೀನ ನಾಗರಿಕತೆಗಳಾದ ಈಜಿಪ್ಟ್, ಮೆಸಪೊಟೋಮಿಯಾ, ಬ್ಯಾಬಿಲೋನ್, ಮಾಯನ್, ಗ್ರೀಕ್, ರೋಮ್ ಮುಂತಾದ ನಾಗರಿಕತೆಗಳಲ್ಲಿ ವಿವಿಧ ಬಗೆಯ ಶಿಲ್ಪಗಳು ಕಂಡುಬಂದಿರುವುದು ಶಿಲ್ಪಕಲೆಯ ಪ್ರಾಚೀನತೆ ಮತ್ತು ವ್ಯಾಪಕತೆಯನ್ನು ಬಿಂಬಿಸುತ್ತದೆ ಎಂದು ಹೇಳಬಹುದಾಗಿದೆ.

ವಿವಿಧ ಬಗೆಯ ವಸ್ತುಗಳನ್ನು ಹೊರತುಪಡಿಸಿದರೆ ಸಿಂಧೂನಾಗರಿಕತೆಯ ಕಾಲಘಟ್ಟದಿಂದ ಶಿಲ್ಪಕಲೆಯ ಪ್ರಾಚೀನ ಕುರುಹುಗಳು ಕಂಡುಬರುತ್ತವೆ. ಪಶುಪತಿ, ಹೋರಿ, ಗಡ್ಡಧಾರಿವ್ಯಕ್ತಿ ಮುಂತಾದ ವಿವಿಧ ಮಾದರಿಯ ಮೂರ್ತಿಗಳು ಅಂದಿನ ಶಿಲ್ಪಕಲೆಯ ಸಂಗತಿಗಳನ್ನು ತಿಳಿಸಿಕೊಡುತ್ತವೆ. ಶಿಲೆ, ದಂತ, ಲೋಹ, ಜೇಡಿಮಣ್ಣಿನಿಂದ ಮಾಡಿದ ಶಿಲ್ಪಗಳು ಲಭ್ಯವಾಗಿದ್ದು, ಆ ಕಾಲದ ಶಬ್ದರಚನೆಯ ಮಾಧ್ಯಮಗಳು ಮತ್ತು ರಚನಾವಿಧಾನಗಳ ಬಗ್ಗೆ ತಿಳಿಸಿಕೊಡುತ್ತವೆ. ನರ್ತಕಿಯ ಕಂಚಿನ ಪ್ರತಿಮೆ ಎರಕ ಹೊಯ್ಯುವ ವಿಧಾನದಿಂದ ತಯಾರಿಸಲ್ಪಟ್ಟಿದೆ. ಜೇಡಿಮಣ್ಣಿನ ಕೆಲವು ಗೊಂಬೆಗಳು, ಆಟಿಕೆಗಳು, ಮುದ್ರೆಯ(ಅಚ್ಚು) ವಿನ್ಯಾಸಗಳನ್ನು ಜೇಡಿಮಣ್ಣಿನಿಂದ ಮಾಡಿ, ನಂತರ ಬೆಂಕಿಯಲ್ಲಿ ಸುಟ್ಟು ಗಟ್ಟಿಗೊಳಿಸಿದ್ದಾರೆ. ಕಲ್ಲು ಮಾಧ್ಯಮದಲ್ಲಿ ಸುಣ್ಣದ ಕಲ್ಲು, ಉಸುಕುಶಿಲೆಗಳನ್ನು ಮೂರ್ತಿ ಕೆತ್ತನೆಗೆ ಬಳಸಿದ್ದಾರೆ. ಇಂತಹ ಸಂಗತಿಗಳಿಂದ ಸಿಂಧೂನಾಗರಿಕತೆಯ ಕಾಲಕ್ಕೆ ಭಾರತೀಯ ಶಿಲ್ಪಕಾರರು ರಚನಾವಿಧಾನಗಳಲ್ಲಿ ಒಂದು ಚೌಕಟ್ಟನ್ನು ಅದಾಗಲೇ ರೂಢಿಸಿಕೊಳ್ಳಲು ತೊಡಗಿದ್ದರು ಎಂದು ಹೇಳಬಹುದಾಗಿದೆ.

ಸಿಂಧೂ ನಾಗರಿಕತೆಯ ನಂತರ ವೇದಗಳ ಕಾಲದ ಶಿಲ್ಪಕಲಾ ಕೃತಿಗಳ ಕುರಿತಾದ ಹೆಚ್ಚಿನ ಸಂಗತಿ ತಿಳಿದುಬರುವುದಿಲ್ಲ. ಆದರೆ ಶಿಲ್ಪಕಲೆಯ ವಿಚಾರವಾಗಿ ವೇದಗಳಲ್ಲಿ ಉಲ್ಲೇಖಗಳು ದೊರಕುತ್ತವೆ ಎಂಬುದನ್ನು ಈಗಾಗಲೇ ಗಮನಿಸಲಾಗಿದೆ. ಆದರೆ ಇತ್ತೀಚೆಗೆ ಹಸ್ತಿನಾಪುರ ಮತ್ತು ಅತ್ರಂಜಿಕೆರೆ, ಕೌಶಂಬಿ ಎಂಬಲ್ಲಿ ನಡೆದ ಉತ್ಖನನದಲ್ಲಿ ಋಗ್ವೇದ ಕಾಲದ ಮಣ್ಣಿನಿಂದ ಮಾಡಿದ ಬಣ್ಣದ ಪಾತ್ರೆಗಳು, ತಾಮ್ರದ ವಿವಿಧ ಆಕಾರದ ವಸ್ತುಗಳು ಲಭ್ಯವಾಗಿವೆ.[೬] ಇವು ಅಂದಿನ ತಯಾರಿಕೆಯ ಬಗ್ಗೆ ಸೂಕ್ಷ್ಮವಾದ ಮಾಹಿತಿ ನೀಡುತ್ತವೆ.

ಮಹಾಕಾವ್ಯಗಳ ಕಾಲದಲ್ಲಿನ ಶಿಲ್ಪಕಲೆಯ ವಿವರಗಳು ಸಹಿತ ಹೆಚ್ಚಾಗಿ ಸಾಹಿತ್ಯಿಕ ಉಲ್ಲೇಖಗಳಿಂದ ತಿಳಿದುಬರುತ್ತವೆ. ರಾಮಾಯಣದಲ್ಲಿ ಹಲವು ಸಂದರ್ಭಗಳಲ್ಲಿ ಶಿಲ್ಪಕಲೆ ಮತ್ತು ಮೂರ್ತಿಗಳ ಸಾಂದರ್ಭಿಕ ಉಲ್ಲೇಖಗಳಿವೆ. ದಶರಥನ ಅರಮನೆಯಲ್ಲಿ ಪ್ರತ್ಯೇಕವಾದ ಪ್ರದರ್ಶನಾಲಯ(ಕಲಾಗ್ಯಾಲರಿ)ವಿತ್ತು. ಅಲ್ಲಿ ದಶರಥನ ವಂಶಜರು ಮತ್ತು ಇಕ್ಷ್ವಾಕುವಂಶದ ಪ್ರಸಿದ್ಧ ಅರಸರ ಪ್ರತಿಮೆಗಳನ್ನು ತಯಾರಿಸಿ ಇಡಲಾಗಿತ್ತು. ಸೀತೆಯ ಸ್ವಯಂವರ ಸಂದರ್ಭದಲ್ಲಿ ಜನಕರಾಜನು ತನ್ನ ರಾಜ್ಯ, ಅರಮನೆ ಮತ್ತು ಸ್ವಯಂವರ ಮಂಟಪಗಳನ್ನು ಹೇಗೆ ಅಲಂಕರಿಸಿದ್ದನು ಎಂಬುದನ್ನು ವಿವರಿಸುವಾಗ ಶಿಲ್ಪಕಲೆಯ ವಿವರಗಳಿವೆ. ಸುಂದರಕಾಂಡ ಭಾಗದಲ್ಲಿ ಹನುಮಂತನು ಲಂಕಾಪಟ್ಟಣದಲ್ಲಿ ಸೀತೆಯನ್ನು ಹುಡುಕುವಾಗ ಅದರ ವರ್ಣನೆ ಮಾಡಲಾಗಿದೆ. ಅಲ್ಲಿನ ಅರಮನೆಗಳು, ಉದ್ಯಾನಗಳು, ವಿಹಾರಧಾಮಗಳು ಯಾವ ರೀತಿಯಲ್ಲಿ ಸೌಂದರ್ಯಭರಿತವಾಗಿದ್ದವು ಎಂಬುದನ್ನು ವಿವರಿಸುವಾಗ ಮೂರ್ತಿಶಿಲ್ಪದ ಸಂಗತಿಗಳು ಉಲ್ಲೇಖಿಸಲ್ಪಟ್ಟಿವೆ. ರಾಮನು ರಾವಣನನ್ನು ಸಂಹರಿಸಿ ಯುದ್ಧದಲ್ಲಿ ಜಯ ಗಳಿಸುತ್ತಾನೆ. ಆಗ ಬ್ರಹ್ಮಹತ್ಯಾದೋಷ ನಿವಾರಣೆಗಾಗಿ ಶಿವನನ್ನು ಪೂಜಿಸುತ್ತಾನೆ. ಶಿವಪೂಜೆಗಾಗಿ ರಾಮನು ಸಮುದ್ರ ದಂಡೆಯಲ್ಲಿರುವ ಮರಳಿನಿಂದ ಈಶ್ವರಲಿಂಗವನ್ನು ನಿರ್ಮಿಸುತ್ತಾನೆ. ಇದಲ್ಲದೆ ರಾಮನು ಅಯೋಧ್ಯೆಗೆ ಮರಳಿ ಪಟ್ಟಾಭಿಷಿಕ್ತನಾಗಿ ರಾಜ್ಯಭಾರ ಮಾಡುವಾಗ ಕೆಲವು ಕಾಲದ ನಂತರ ಅಶ್ವಮೇಧಯಾಗ ನೆರವೇರಿಸುತ್ತಾನೆ. ಈ ಯಾಗಕ್ಕೆ ರಾಮನು ಪತ್ನಿ ಸೀತೆಯೊಂದಿಗೆ ಪೂಜೆಯಲ್ಲಿ ಪಾಲ್ಗೊಳ್ಳಬೇಕಾಗಿರುತ್ತದೆ. ಆದರೆ ಸೀತೆಯನ್ನು ಕಾಡಿಗೆ ಅಟ್ಟಿದ್ದ ರಾಮನು ಸೀತೆಯ ಬಂಗಾರದ ಪ್ರತಿಮೆ(ಲೋಹಶಿಲ್ಪ)ಯನ್ನು ಮಾಡಿಸಿ ಪಕ್ಕದಲ್ಲಿಟ್ಟುಕೊಂಡು ಯಾಗ ಪೂರೈಸುತ್ತಾನೆ. ಹೀಗೆ ಅನೇಕ ಸಂಗತಿಗಳನ್ನು ಉದಾಹರಿಸ ಬಹುದು.

ಮಹಾಭಾರತದಲ್ಲಿಯೂ ಅನೇಕ ಕಡೆಗಳಲ್ಲಿ ಸಾಂದರ್ಭಿಕವಾಗಿ ಶಿಲ್ಪಕಲೆಯ ಸಂಗತಿಗಳು ಉಲ್ಲೇಖಗೊಂಡಿವೆ. ಏಕಲವ್ಯನು ದ್ರೋಣಾಚಾರ್ಯರ ಮೂರ್ತಿಯನ್ನು ನಿರ್ಮಿಸಿಕೊಂಡು ಗುರುವೆಂದು ಭಾವಿಸಿ ಬಿಲ್ಲುವಿದ್ಯೆಯನ್ನು ಕಲಿಯುತ್ತಿರುವ ಸಂದರ್ಭವಿದೆ. ಪಾಂಡವರು ಇಂದ್ರಪ್ರಸ್ಥದಲ್ಲಿ ಸುಂದರವಾದ ಅರಮನೆಯನ್ನು ದೇವಶಿಲ್ಪಿ ಮಯನಿಂದ ನಿರ್ಮಿಸುತ್ತಾರೆ. ಇದರ ವಿವರಣೆಯ ಸಂದರ್ಭದಲ್ಲಿ ಮೂರ್ತಿಶಿಲ್ಪಗಳ ಸಂಗತಿ ಹೇಳಲ್ಪಟ್ಟಿದೆ. ಇಂತಹ ಹಲವು ವಿವರಗಳು ಮಹಾಭಾರತ ದಲ್ಲಿವೆ. ರಾಮಾಯಣ ಮತ್ತು ಮಹಾಭಾರತಗಳಲ್ಲಿರುವ ಈ ರೀತಿಯ ವಿವರಗಳು ಅಂದಿನ ಕಾಲದ ಶಿಲ್ಪಕಲೆಯ ಬಗ್ಗೆ ತಿಳಿಸಿಕೊಡುತ್ತವೆ.

---

೬. ಡಾ. ವಿಜಯ್ ಪೂಣಚ್ಚ ತಂಬಂಡ: ಸಮಾಜ ವಿಜ್ಞಾನ(ಆರನೇ ತರಗತಿಯ ಪಠ್ಯಪುಸ್ತಕ), ಪು-೧೭

ಮಹಾಕಾವ್ಯಗಳ ಕಾಲಘಟ್ಟದ ನಂತರ ಭಾರತದಲ್ಲಿ ಜೈನ ಮತ್ತು ಬೌದ್ಧಧರ್ಮಗಳ ಪ್ರಭಾವ ಹೆಚ್ಚಾಗತೊಡಗಿತು. ಅದಕ್ಕನುಸಾರವಾಗಿ ಆಯಾ ಧರ್ಮಗಳ ಹಿನ್ನೆಲೆಯ ಶಿಲ್ಪಗಳು ನಿರ್ಮಾಣಗೊಳ್ಳತೊಡಗಿದವು. ಇದರಲ್ಲಿ ವಿಶೇಷವಾಗಿ ಬೌದ್ಧ ಕಲೆಯು ಭಾರತದಲ್ಲಿ ತನ್ನ ಪಾರಮ್ಯವನ್ನು ಮೆರೆಯಿತು. ಬುದ್ಧನು ಜೀವಂತ ಇರುವಾಗಲೇ ಬೌದ್ಧಸ್ತೂಪಗಳ ನಿರ್ಮಾಣಕಾರ್ಯ ಆರಂಭವಾಯಿತೆಂಬ ಉಲ್ಲೇಖಗಳು ದೊರಕುತ್ತವೆ. ಪ್ರಾರಂಭಿಕ ಹಂತದಲ್ಲಿ ಸರಳವಾಗಿದ್ದ ಸ್ತೂಪಗಳು ನಂತರದಲ್ಲಿ ಶಿಲ್ಪಕಲಾಕೃತಿಗಳಿಂದ ಅಲಂಕರಿಸಲ್ಪಟ್ಟವು. ಅದರಂತೆ ಚೈತ್ಯ ವಿಹಾರಗಳು ಬೌದ್ಧಧರ್ಮದ ಅನೇಕ ಶಿಲ್ಪಗಳಿಂದ ಮಹೋನ್ನತವಾಗಿ ಕಂಗೊಳಿಸತೊಡಗಿದವು.

ಬುದ್ಧನು ಜೀವಂತವಿದ್ದಾಗ ಮತ್ತು ಆತನ ಪರಿನಿರ್ವಾಣದ ನಂತರ ಗಾಂಧಾರ ಪ್ರದೇಶವು ಬೌದ್ಧಕಲೆಯ ಕೇಂದ್ರವಾಗಿತ್ತು. ಗಾಂಧಾರ ದೇಶದ ರಾಜಧಾನಿಯಾಗಿದ್ದ 'ತಕ್ಷಶಿಲಾ' ನಗರ ಮುಖ್ಯ ಶಿಲ್ಪಕಲಾ ಕೇಂದ್ರವೆನಿಸಿತ್ತು. ಇಲ್ಲಿ ಅನೇಕ ಗುರುಕುಲಗಳಲ್ಲಿ ಶಿಲ್ಪಕಲೆಯನ್ನು ಕಲಿಸಲಾಗುತ್ತಿತ್ತು. ಶಿಲೆ, ಮರ, ಲೋಹ ಮಾಧ್ಯಮಗಳಿಂದ ಶಿಲ್ಪಕಲಾಕೃತಿ ತಯಾರಿಸುವ ವಿಧಾನವನ್ನು ಇಲ್ಲಿ ಹೇಳಿ ಕೊಡಲಾಗುತ್ತಿತ್ತು.

**ಮೌರ್ಯರು**

ಕ್ರಿಪೂ. ೧ನೇ ಶತಮಾನದಿಂದ ಭಾರತದಲ್ಲಿ ಕುಶಾನರ ಕಲಾಕೊಡುಗೆಗಳು ಗಮನಾರ್ಹವಾಗಿ ನಿರ್ಮಾಣವಾಗತೊಡಗಿದವು. ಉತ್ತರ ಭಾರತ ಮತ್ತು ಗಾಂಧಾರ ಪ್ರದೇಶಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದವು. ಇವರ ಆಳ್ವಿಕೆಯ ಕಾಲದಲ್ಲಿ 'ತಕ್ಷಶಿಲಾ' ನಗರದ ಜೊತೆಗೆ 'ಮಥುರಾ' ನಗರವು ಶಿಲ್ಪಕಲಾ ಕೇಂದ್ರವಾಗಿ ಬೆಳವಣಿಗೆ ಹೊಂದಿತು. ಈ ಎರಡೂ ಕೇಂದ್ರಗಳಲ್ಲಿ ಬೌದ್ಧಶಿಲ್ಪಕಲೆ ರಚನೆಯಾಗುತ್ತಿದ್ದರೂ ಎರಡೂ ಕೇಂದ್ರಗಳು ಪ್ರತ್ಯೇಕ ಕಲಾಶೈಲಿಗಳನ್ನು ಅಳವಡಿಸಿಕೊಂಡಿದ್ದವು. ತಕ್ಷಶಿಲಾ ಕೇಂದ್ರದಲ್ಲಿ ಬೃಹದಾಕಾರದ ಶಿಲ್ಪಗಳು ರಾಜಮಹಾರಾಜರ ಕೋರಿಕೆಯ ಮೇರೆಗೆ ನಿರ್ಮಾಣವಾಗುತ್ತಿದ್ದರೆ, ಮಥುರಾದಲ್ಲಿ ಜನಸಾಮಾನ್ಯರ ಅಭಿರುಚಿ, ಅಭಿಲಾಷೆ ಮತ್ತು ಕೋರಿಕೆಗಳಿಗೆ ಅನುಸಾರವಾಗಿ ಚಿಕ್ಕ ಹಾಗೂ ಮಧ್ಯಮ ಗಾತ್ರದ ಶಿಲ್ಪಗಳನ್ನು ತಯಾರಿಸಲಾಗುತ್ತಿತ್ತು. ಅಜಂತಾ ಗುಹಾಲಯಗಳ ರಚನೆ ಕುಶಾನರ ಕಾಲದಲ್ಲಿಯೇ ಆರಂಭಗೊಂಡಿರುವುದು ಗಮನಾರ್ಹ.

**ಶಾತವಾಹನರು**

ಗುಪ್ತರ ಕಾಲದಲ್ಲಿ ಭಾರತದ ಶಿಲ್ಪಕಲಾ ಪರಂಪರೆ ಮತ್ತೆ ಬೌದ್ಧ ಪ್ರಭಾವಗಳಿಂದ ಬಿಡಿಸಿಕೊಂಡು ಹಿಂದೂ(ವೈದಿಕ)ಧರ್ಮದ ಹಿನ್ನೆಲೆಯಲ್ಲಿ ರೂಪುಗೊಳ್ಳತೊಡಗಿತು. ಈ ನಡುವೆ ಶಾತವಾಹನರು, ವಾಕಾಟಕರು ಬೌದ್ಧಶಿಲ್ಪಕಲೆಯನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿದರು. ಗುಪ್ತರ ನಂತರ 'ವರ್ಧನರು' ಕನೋಜವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು. ಇವರ ಕಾಲದಲ್ಲಿ ಬೌದ್ಧಶಿಲ್ಪಕಲೆ ಮತ್ತೊಮ್ಮೆ ಅಭಿವೃದ್ಧಿ ಪಥದಲ್ಲಿ ಸಾಗಿತು. ಶಿಲೆ, ಲೋಹ, ಮರ, ಜೇಡಿಮಣ್ಣು ಮುಂತಾದ ಮಾಧ್ಯಮಗಳಿಂದ ಇವರ ಕಾಲದಲ್ಲಿ ಶಿಲ್ಪಗಳನ್ನು ತಯಾರಿಸಲಾಗುತ್ತಿತ್ತು. ನಳಂದಾ ಪ್ರದೇಶವು ಈ ಕಾಲದಲ್ಲಿ ವಿದ್ಯಾಕೇಂದ್ರವಲ್ಲದೆ ಕಲಾಕೇಂದ್ರವೂ ಆಗಿತ್ತು. ಶಿಲ್ಪಕಲೆಯನ್ನೊಳ–ಗೊಂಡಂತೆ ಇನ್ನಿತರ ಲಲಿತಕಲೆಗಳನ್ನು ಕಲಿಸುವ ದೊಡ್ಡ ಕಲಾ

ಶಾಲೆ ಇಲ್ಲಿತ್ತು. ಅಲ್ಲದೆ ನಳಂದಾ ವಿಶ್ವವಿದ್ಯಾಲಯದಲ್ಲಿ ಕಲಾವಿಭಾಗವು ಇತ್ತು. ಇದಕ್ಕೆ ಹರ್ಷವರ್ಧನ ದೊರೆಯು ೨೫ ಮೀಟರ್ ಎತ್ತರದ ಕಂಚಿನಿಂದ ತಯಾರಿಸಿದ ಬುದ್ಧನ ಪ್ರತಿಮೆಯನ್ನು ಕಾಣಿಕೆಯಾಗಿ ನೀಡಿದ್ದನು ಎಂಬ ವಿವರಗಳು ದೊರಕುತ್ತವೆ.[೭] ನಂತರದ ದಿನಗಳಲ್ಲಿ ಚಂದೇಲರು, ರಜಪೂತರು, ಕೆಲವು ಪ್ರಾದೇಶಿಕ ಅರಸರು ಭಾರತೀಯ ಶಿಲ್ಪಕಲಾ ಪರಂಪರೆ ಬೆಳೆಯಲು ಪ್ರೋತ್ಸಾಹ ನೀಡಿದ್ದಾರೆ.

ಶಾತವಾಹನರು ಕುಶಾನರ ನಂತರ ಭಾರತದ ಶಿಲ್ಪಕಲಾ ಪರಂಪರೆಗೆ ಶಕ್ತಿ ತುಂಬಿದವರು. ಇವರ ಕಾಲದಲ್ಲಿಯೂ ಬೌದ್ಧಶಿಲ್ಪಕಲೆ ಪ್ರವರ್ಧಮಾನವಾಗಿ ಬೆಳೆಯಿತು. ಬೋಧಿಸತ್ವ, ಪದ್ಮಪಾಣಿ ಮುಂತಾದ ವಿವಿಧ ಬಗೆಯ ಬುದ್ಧನ ಶಿಲ್ಪಗಳು ಹೆಚ್ಚಾಗಿ ರಚನೆಯಾದವು. ಪ್ರಮಾಣಬದ್ಧವಾದ, ಸುಂದರ ಶಿಲ್ಪಗಳು ಇವರ ಕಾಲದಲ್ಲಿ ನಿರ್ಮಾಣವಾಗಿರುವುದು ಕಂಡುಬರುತ್ತದೆ. ಅದಕ್ಕೆ ಅಜಂತಾದಲ್ಲಿನ ಕೆಲವು ಶಿಲ್ಪಗಳು ಸಾಕ್ಷಿಯಾಗಿವೆ.

## ದಖ್ಖನಿ

ಮೌರ್ಯರು ಭಾರತದ ಇತಿಹಾಸದಲ್ಲಿ ಮಹತ್ವದ ಪಾತ್ರ ವಹಿಸಿದಂತೆ, ಸಾಂಸ್ಕೃತಿಕ ಮತ್ತು ಕಲಾತ್ಮಕ ಚರಿತ್ರೆಯಲ್ಲಿಯೂ ಗಮನಾರ್ಹ ಕೊಡುಗೆಗಳನ್ನು ನೀಡಿದ್ದಾರೆ. ಸಾಮ್ರಾಟ ಅಶೋಕನು ಬೌದ್ಧಧರ್ಮವನ್ನು ಸ್ವೀಕರಿಸುವ ಮೂಲಕ ಬೌದ್ಧಕಲೆಯು ಮಹತ್ತರ ಬದಲಾವಣೆಗಳನ್ನು ಹೊಂದಿತು. ಧರ್ಮ ಪ್ರಚಾರಕ್ಕಾಗಿ ಬೌದ್ಧರು ಶಿಲ್ಪಕಲೆ ಮತ್ತು ಚಿತ್ರಕಲಾ ಪ್ರಕಾರಗಳನ್ನು ಸಾಧನಗಳನ್ನಾಗಿ ಮಾಡಿಕೊಂಡರು. ಸ್ತೂಪ, ಚೈತ್ಯ, ವಿಹಾರಗಳನ್ನು ನಿರ್ಮಿಸುವ ಮೂಲಕ ಶಿಲ್ಪಕಲಾ ಪ್ರಕಾರವನ್ನು ಅದರ ಸೌಂದರ್ಯದ ಅವಿಭಾಜ್ಯ ಅಂಗವನ್ನಾಗಿ ಮಾಡಿದರು. ಸಾರಾನಾಥ, ಸಾಂಚಿ, ಬೋಧಗಯಾ ಮುಂತಾದ ಕಡೆಗಳಲ್ಲಿ ಮೌರ್ಯರ ಕಾಲದ ಸುಂದರ ಶಿಲ್ಪಕಲಾಕೃತಿಗಳಿವೆ. ಸಾರಾನಾಥದಲ್ಲಿರುವ ನಾಲ್ಕು ಮುಖಗಳ ಸಿಂಹ ಶಿಲ್ಪವು ಭಾರತದ ರಾಜಲಾಂಛನವಾಗಿದ್ದು ತನ್ನ ಸೌಂದರ್ಯ, ನೈಜತೆಯಿಂದ ಗಮನ ಸೆಳೆಯುತ್ತದೆ.

ದಕ್ಷಿಣ ಭಾರತದಲ್ಲಿ ಪಲ್ಲವರು ಮತ್ತು ಚೋಳರು ಶಿಲ್ಪಕಲಾ ಪರಂಪರೆಗೆ ವಿಶಿಷ್ಟ ಕೊಡುಗೆ ನೀಡಿದ್ದಾರೆ. ಪಲ್ಲವ ದೊರೆ ನರಸಿಂಹವರ್ಮನ ಕಾಲದಲ್ಲಿ ಮಹಾಬಲಿಪುರಂನಲ್ಲಿ ಏಕಶಿಲೆಯ ದೇವಾಲಯಗಳನ್ನು ನಿರ್ಮಿಸಲಾಯಿತು. ಪಂಚಪಾಂಡವ ರಥಗಳೆಂದು ಕರೆಯುವ ಈ ಐದು ಏಕಶಿಲಾ ದೇವಾಲಯಗಳಲ್ಲಿ ಸುಂದರವಾದ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಇದಲ್ಲದೆ ಬೃಹತ್ ಬಂಡೆಯೊಂದರಲ್ಲಿ ಕೆತ್ತಲಾದ 'ಗಂಗಾವತರಣ' ಉಬ್ಬುಶಿಲ್ಪವು ಪಲ್ಲವರ ಕಾಲದ ಶಿಲ್ಪಿಗಳ ಕುಶಲತೆಯನ್ನು ಬಿಂಬಿಸುವಂತಿದೆ. ಚೋಳರ ಕಾಲದಲ್ಲಿ ಶಿಲೆ, ಮರ ಮಾಧ್ಯಮದ ಶಿಲ್ಪಗಳ ಜೊತೆಗೆ ಲೋಹ ಶಿಲ್ಪಗಳನ್ನು ರಚಿಸುವ ಪರಂಪರೆ ಹೆಚ್ಚಾಯಿತು. ವಿಶೇಷವಾಗಿ ತಾಮ್ರ, ಕಂಚು, ಲೋಹಗಳಿಂದ ಹೆಚ್ಚಿನ ಶಿಲ್ಪಗಳನ್ನು ರಚಿಸಲಾಯಿತು. ಇವರ ಕಾಲದ ಸುಂದರ ಶಿಲಾಶಿಲ್ಪಗಳು ತಂಜಾವೂರಿನ ಬೃಹದೀಶ್ವರ ದೇವಾಲಯದಲ್ಲಿ ಕಂಡುಬರುತ್ತವೆ.

---

೭. ಡಾ. ವಿಜಯ್ ಪೂಣಚ್ಚ ತಂಬಂಡ: ಸಮಾಜ ವಿಜ್ಞಾನ(ಆರನೇ ತರಗತಿಯ ಪಠ್ಯಪುಸ್ತಕ), ಪು–೫೮

**ಕರ್ನಾಟಕ**

ಕರ್ನಾಟಕದಲ್ಲಿ ಪಾರಂಪರಿಕ ಶಿಲ್ಪಕಲೆಯ ಕುರುಹುಗಳು ಕದಂಬರ ಕಾಲದಿಂದ ಲಭ್ಯವಾಗುತ್ತವೆ. ಬನವಾಸಿಯ ಮಧುಕೇಶ್ವರ ಮತ್ತು ತಾಳಗುಂದದ ಪ್ರಣವೇಶ್ವರ ದೇವಾಲಯಗಳಲ್ಲಿ ಇವರ ಕಾಲದ ಶಿಲ್ಪಗಳು ಉಳಿದುಕೊಂಡಿವೆ. ಇವುಗಳ ಆಧಾರದಲ್ಲಿ ಅಂದಿನ ಶಿಲ್ಪಕಲೆಯ ಸಂಗತಿಗಳು ತಿಳಿದುಬರುತ್ತವೆ. ಕರ್ನಾಟಕ ಪ್ರದೇಶದಲ್ಲಿ ಶಿಲ್ಪಕಲಾ ಶೈಲಿಯಲ್ಲಿ ಅನೇಕ ರೀತಿಯ ಪ್ರಯೋಗಗಳನ್ನು ನಡೆಸಿದವರು ಬಾದಾಮಿ ಚಾಲುಕ್ಯರು. ಕೊರೆದ ಗುಹಾಲಯಗಳಲ್ಲಿ ಬೃಹತ್ ಶಿಲ್ಪಗಳನ್ನು ರಚಿಸಿದಂತೆ ಮಧ್ಯಮ ಗಾತ್ರ ಮತ್ತು ಚಿಕ್ಕ ಆಕಾರದ ಶಿಲ್ಪಗಳನ್ನು ಕೆತ್ತಿದ್ದಾರೆ. ರಾಚನಿಕ ದೇವಾಲಯಗಳಲ್ಲಿನ ಶಿಲ್ಪಗಳು ಮತ್ತೊಂದು ರೀತಿಯ ಸೌಂದರ್ಯವನ್ನು ಪ್ರತಿನಿಧಿಸುವಂತೆ ಮಾಡಿರುವುದು ಚಾಲುಕ್ಯ ಶಿಲ್ಪಗಳ ಸೃಜನಶೀಲತೆಗೆ ಸಾಕ್ಷಿಯಾಗಿದೆ. ಗುಹಾಲಯಗಳಲ್ಲಿನ ಬೃಹತ್‌ಶಿಲ್ಪಗಳು ಚಾಲುಕ್ಯರ ಪ್ರಾತಿನಿಧಿಕ ಕೃತಿಗಳಾಗಿವೆ. ಮೊದಲನೆಯ ಗುಹಾಲಯದಲ್ಲಿರುವ ಹದಿನೆಂಟು ಕೈಗಳ ನಟರಾಜ ಶಿಲ್ಪವು ವಿಶ್ವ ಪ್ರಸಿದ್ಧವಾಗಿದೆ. ರಾಚನಿಕ ದೇವಾಲಯಗಳಲ್ಲಿನ ಸುಂದರ ಶಿಲ್ಪಗಳು ಬಾದಾಮಿ, ಐಹೊಳೆ, ಪಟ್ಟದಕಲ್ಲು, ಆಂಧ್ರಪ್ರದೇಶ ಆಲಂಪುರಗಳಲ್ಲಿ ಕಂಡುಬರುತ್ತವೆ.

ಕರ್ನಾಟಕದಲ್ಲಿ ಚಾಲುಕ್ಯರ ನಂತರ ಶಿಲ್ಪ ಪರಂಪರೆಯ ಉತ್ತರದಾಯಿತ್ವವನ್ನು ಪಡೆದುಕೊಂಡವರು ರಾಷ್ಟ್ರಕೂಟರು. ಇವರು ಸಹಿತ ತಮ್ಮ ಹಿಂದಿನ ಬಾದಾಮಿ ಚಾಲುಕ್ಯರಂತೆ ಕೊರೆದ ಗುಹಾಲಯಗಳು ಮತ್ತು ರಾಚನಿಕ ದೇವಾಲಯಗಳನ್ನು ನಿರ್ಮಿಸಿ ಅವುಗಳನ್ನು ಶಿಲ್ಪಗಳಿಂದ ಅಲಂಕರಿಸಿದರು. ಅವರಂತೆಯೇ ಬೃಹತ್‌ಶಿಲ್ಪಗಳು, ಮಧ್ಯಮಗಾತ್ರದ ಶಿಲ್ಪಗಳು ಮತ್ತು ಚಿಕ್ಕ ಶಿಲ್ಪಗಳನ್ನು ಇವರು ನಿರ್ಮಿಸಿದರು. ರಾಷ್ಟ್ರಕೂಟರ ಉತ್ಕೃಷ್ಟ ಶಿಲ್ಪಗಳು ಮತ್ತು ಬೃಹತ್ ಶಿಲ್ಪಗಳು ಎಲ್ಲೋರಾ ಮತ್ತು ಎಲಿಫೆಂಟಾಗಳಲ್ಲಿ ಕಂಡುಬರುತ್ತವೆ. ಕರ್ನಾಟಕದಲ್ಲಿ ಕುಕನೂರು, ಕಡೂರು, ಸಿರಿವಾಳ, ಮುಧೋಳ, ಕರಮುಡಿ, ಸೂಡಿ ಮುಂತಾದ ಕಡೆಗಳಲ್ಲಿ ಇವರ ಕಾಲದ ಶಿಲ್ಪಗಳು ಕಂಡುಬರುತ್ತವೆ.

ಕಲ್ಯಾಣ ಚಾಲುಕ್ಯರು ರಾಷ್ಟ್ರಕೂಟರ ನಂತರ ಕರ್ನಾಟಕ ಇತಿಹಾಸದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಇವರು ಶಿಲ್ಪಕಲಾ ಪರಂಪರೆಗೆ ಹೊಸ ಚೈತನ್ಯ ತುಂಬಿದರು. ತಮ್ಮ ಹಿಂದಿನ ಚಾಲುಕ್ಯರು ಮತ್ತು ರಾಷ್ಟ್ರಕೂಟರ ಶಿಲ್ಪಶೈಲಿಯನ್ನು ಪ್ರಮುಖ ಅಂಶಗಳನ್ನು ಅಳವಡಿಸಿಕೊಂಡು ಪ್ರತ್ಯೇಕ ಶಿಲ್ಪಶೈಲಿಯನ್ನು ಅಳವಡಿಸಿಕೊಂಡರು. ಇವರು ಮೊದಲಿಗೆ ಒರಟಾದ ಕೆಂಪು ಶಿಲೆಯನ್ನು ಶಿಲ್ಪರಚನೆಗಾಗಿ ಬಳಸಿದರು.

ನಂತರದ ದಿನಗಳಲ್ಲಿ ನಯವಾದ 'ಕ್ಲೋರೋಟಿಕ್‌ಸಿಸ್ಟ' ಎಂಬ ಹಸಿರು ಮಿಶ್ರಿತ ಕಪ್ಪುಶಿಲೆಯನ್ನು ಸೂಕ್ಷ್ಮಶಿಲ್ಪಗಳಿಗಾಗಿ ಉಪಯೋಗಿಸಿದರು. ಇವುಗಳಲ್ಲದೆ ಒರಟಾಗಿರುವ ಕಣಶಿಲೆ, ಉಸುಕು ಶಿಲೆಗಳನ್ನೂ ಶಿಲ್ಪರಚನೆಗಾಗಿ ಕಲ್ಯಾಣ ಚಾಲುಕ್ಯರ ಕಾಲದ ಶಿಲ್ಪಿಗಳು ಬಳಸಿದರು. ಇವರ ಕಾಲದ ಶಿಲ್ಪಕಲಾಕೃತಿಗಳು ಇಟಗಿ ಮಹಾದೇವ ದೇವಾಲಯ, ಲಕ್ಕುಂಡಿಯ ಕಾಶಿವಿಶ್ವನಾಥ, ಕುಕನೂರಿನ ನವಲಿಂಗೇಶ್ವರ, ಕಲ್ಲೂರಿನ ಕಲ್ಲೇಶ್ವರ, ಗದುಗಿನ ತ್ರಿಕೂಟೇಶ್ವರ, ಸರಸ್ವತಿ, ಸೋಮೇಶ್ವರ

ದೇವಾಲಯಗಳಲ್ಲಿ ಕಂಡುಬರುತ್ತವೆ. ಕಲ್ಯಾಣ ಚಾಲುಕ್ಯರ ಕಾಲದ ಶಿಲ್ಪಿಯೊಬ್ಬನ ಹೆಸರು 'ಹೊಳಲಿನ' ಶಾಸನದಲ್ಲಿ ಕಂಡುಬರುತ್ತದೆ. ಕಲಿಯುಗದ ವಿಶ್ವಕರ್ಮನೆನಿಸಿದ್ದ ಶ್ರೀಕರನಾಗನು ಎಲ್ಲ ಬಗೆಯ ಶಿಲ್ಪಗಳನ್ನು ರಚಿಸುವಲ್ಲಿ ಪ್ರಖ್ಯಾತನಾಗಿದ್ದನು ಎಂದು ತಿಳಿಸುತ್ತದೆ.[೮]

ಹೊಯ್ಸಳರು ಕರ್ನಾಟಕ ಶಿಲ್ಪ ಪರಂಪರೆಗೆ ಹೊಸ ಆಯಾಮ ನೀಡಿದರು. ಅದುವರೆಗಿನ ವಿಶಾಲತೆ, ಅಗಾಧತೆ, ಭವ್ಯತೆಗಳ ಬದಲಾಗಿ ಸೂಕ್ಷ್ಮತೆ, ನಯಗಾರಿಕೆ, ಅತ್ಯಲಂಕಾರ, ಇಂತಹ ಅಂಶಗಳಿಂದ ಶಿಲ್ಪರಚನೆಯಲ್ಲಿ ತಮ್ಮ ಹಿಂದಿನ ಶಿಲ್ಪಿಗಳಿಗಿಂತ ಭಿನ್ನವಾಗಿ ನಿಂತರು. ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರ ಪ್ರಾರಂಭಿಕ ಶಿಲ್ಪಿಗಳಂತೆ ಕಠಿಣವಾದ ಉಸುಕುಶಿಲೆ ಮತ್ತು ಕಣಶಿಲೆಗಳನ್ನು ಶಿಲ್ಪರಚನೆಗಾಗಿ ಇವರು ಬಳಸಲಿಲ್ಲ. ಬದಲಾಗಿ ಹಸಿರು ಮಿಶ್ರಿತ ಮೃದುವಾದ ಮತ್ತು ನಯವಾದ ಕಲ್ಲನ್ನು ಶಿಲ್ಪರಚನೆಗಾಗಿ ಬಳಸಿಕೊಂಡರು. ಇದರಿಂದಾಗಿ ಅತ್ಯಂತ ಸೂಕ್ಷ್ಮವಾದ ಅಲಂಕಾರಗಳನ್ನು ಶಿಲ್ಪಗಳಲ್ಲಿ ಅಳವಡಿಸಿದರಲ್ಲದೇ ತೀರಾ ಚಿಕ್ಕ ಗಾತ್ರದ ಶಿಲ್ಪಗಳಲ್ಲಿ ಅತ್ಯಂತ ಸೂಕ್ಷ್ಮ ವಿನ್ಯಾಸಗಳನ್ನು ರಚಿಸಿದರು. ಹೊಯ್ಸಳರ ಶಿಲಾಬಾಲಿಕೆಯರ ವಿಗ್ರಹಗಳು ಅವರ ಶ್ರೇಷ್ಠ ಶಿಲ್ಪಗಳಿಗೆ ಉದಾಹರಣೆಗಳಾಗಿವೆ. ಇವರ ಕಾಲದ ಶಿಲ್ಪಗಳು ಬೇಲೂರು, ಹಳೇಬೀಡು, ಶ್ರವಣಬೆಳಗೊಳ, ಮೂಡಬಿದಿರೆ, ಕರ್ಕಾಳ, ವೇಣೂರು ಮುಂತಾದ ಕಡೆಗಳಲ್ಲಿ ಕಂಡುಬರುತ್ತವೆ.

ವಿಜಯನಗರ ಸಾಮ್ರಾಟರು ಕರ್ನಾಟಕದ ಇತಿಹಾಸದಲ್ಲಿ ಮಾತ್ರವಲ್ಲದೆ ಸಾಂಸ್ಕೃತಿಕ ಕ್ಷೇತ್ರದಲ್ಲಿಯೂ ಪ್ರಮುಖ ಪಾತ್ರ ವಹಿಸಿದ್ದಾರೆ. ಶಿಲ್ಪಕಲಾ ಪರಂಪರೆಯಲ್ಲಿ ವಿಜಯನಗರ ಕಾಲವು ಮತ್ತೆ ಭವ್ಯತೆ ಮತ್ತು ಅಗಾಧತೆಗಳನ್ನು ರೂಢಿಸಿಕೊಂಡಿತು. ಇವರ ಕಾಲದಲ್ಲಿ ಶಿಲೆ, ಲೋಹ, ಮರ, ಮಣ್ಣು ಮುಂತಾದ ಮಾಧ್ಯಮಗಳಲ್ಲಿ ಶಿಲ್ಪಗಳನ್ನು ರಚಿಸಲಾಯಿತು. ಬೃಹತ್ ಆಕಾರದ ಶಿಲ್ಪಗಳನ್ನು ರಚಿಸುವ ಪರಂಪರೆಯು ಹೊಯ್ಸಳರ ಕಾಲದಲ್ಲಿ ಕಡಿಮೆಯಾಗಿದ್ದರೆ, ವಿಜಯನಗರ ಕಾಲದಲ್ಲಿ ಮತ್ತೆ ಜನಪ್ರಿಯವಾಯಿತು. ಹಂಪೆಯಲ್ಲಿರುವ ಗಣಪತಿಯ ಶಿಲ್ಪಗಳು, ಬೃಹತ್‌ಲಿಂಗ ಮತ್ತು ನಂದಿಶಿಲ್ಪಗಳು, ಉಗ್ರನರಸಿಂಹ, ಉದ್ದಾನವೀರಭದ್ರ ಮುಂತಾದ ಶಿಲ್ಪಗಳು ಬೃಹತ್‌ಶಿಲ್ಪಗಳಿಗೆ ಉದಾಹರಣೆಗಳಾಗಿವೆ. ಇವುಗಳಲ್ಲದೆ ದೇವಾಲಯಗಳಲ್ಲಿಯೂ ಸುಂದರ ಶಿಲ್ಪಗಳು ಕಂಡುಬರುತ್ತವೆ. ಲೋಹಶಿಲ್ಪಗಳಲ್ಲಿ ತಿರುಪತಿ ದೇವಾಲಯದಲ್ಲಿರುವ ಕೃಷ್ಣದೇವರಾಯ ಮತ್ತು ಆತನ ಇಬ್ಬರು ಮಡದಿಯರ ಶಿಲ್ಪಗಳು ಮುಖ್ಯವಾಗಿವೆ.

ವಿಜಯನಗರ ಪತನದ ನಂತರ ಪಾಳೇಗಾರರು, ಮರಾಠ ಪೇಶ್ವೆಗಳು, ಸ್ಥಳೀಯ ನಾಯಕರು ಪ್ರಾದೇಶಿಕವಾಗಿ ಶಿಲ್ಪಕಲಾ ಪರಂಪರೆಯನ್ನು ಬೆಳೆಸುವ ಮೂಲಕ ವೈವಿಧ್ಯತೆ ತಂದರು. ಕೆಳದಿ, ಇಕ್ಕೇರಿ, ಸುರಪುರ, ಮೈಸೂರು ಮುಂತಾದ ಸಂಸ್ಥಾನಿಕರನ್ನು ಇಲ್ಲಿ ಹೆಸರಿಸ ಬಹುದು. ರಾಜ ಪ್ರೋತ್ಸಾಹ ಕಡಿಮೆಯಾದ ನಂತರ ಪಾರಂಪರಿಕ ಶಿಲ್ಪಕಲಾವಿದರಿಗೆ ಬೇಡಿಕೆ ಕಡಿಮೆಯಾಯಿತು. ಜನಸಾಮಾನ್ಯರ ಅಪೇಕ್ಷೆಯ ಮೇರೆಗೆ ಸಂಬಂಧಪಟ್ಟ ದೇವಾಲಯದ ಮುಖ್ಯಶಿಲ್ಪ ಮತ್ತು ಕೆಲವು ಬಿಡಿಶಿಲ್ಪಗಳನ್ನು ರಚಿಸುವುದನ್ನು ಮಾತ್ರ ಮಾಡತೊಡಗಿದರು.

---

೮. ಡಾ. ಕೆ. ಎಂ. ಸುರೇಶ: ಕರ್ನಾಟಕ ದೇವಾಲಯ ಕೋಶ – ಕೊಪ್ಪಳ ಜಿಲ್ಲೆ, ಪು–೧೬

**ಹೈದರಾಬಾದ್-ಕರ್ನಾಟಕ**

ಹೈದರಾಬಾದ್ ಕರ್ನಾಟಕ ಪ್ರದೇಶದ ಜಿಲ್ಲೆಗಳಲ್ಲಿ ಆಡಳಿತ ನಿರ್ವಹಿಸಿದ ರಾಜವಂಶಗಳು ಅಖಂಡ ಕರ್ನಾಟಕದ ರಾಜವಂಶಗಳೇ ಆಗಿವೆ. ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರು, ವಿಜಯನಗರ ಸಾಮ್ರಾಟರ ಕಲಾಕೊಡುಗೆಗಳು ವಿಶೇಷವಾಗಿ ಹೈದರಾಬಾದ್ ಕರ್ನಾಟಕ ಪ್ರದೇಶದ ವ್ಯಾಪ್ತಿಗೆ ಒಳಪಡುತ್ತವೆ. ಹಾಗಾಗಿ ಇವರ ಕೊಡುಗೆಗಳನ್ನು ಈಗಾಗಲೇ ಪರಿಶೀಲಿಸಲಾಗಿದ್ದು, ಪ್ರತ್ಯೇಕವಾಗಿ ವಿವರಿಸುವುದು ಸಮಂಜಸವಾಗಲಾರದು. ಈ ಭಾಗದ ಬೀದರ, ಕಲಬುರ್ಗಿ ಪ್ರದೇಶಗಳಲ್ಲಿ ಬಹಮನಿ ಸುಲ್ತಾನರು ಬಹುಕಾಲದವರೆಗೆ ಆಳ್ವಿಕೆ ಮಾಡಿದರು. ಈ ಕಾಲದಲ್ಲಿ ರಾಜ ಪ್ರೋತ್ಸಾಹದ ಪಾರಂಪರಿಕ ಶಿಲ್ಪಕಲೆ ಬೆಳೆದುಬರಲಿಲ್ಲ. ಬ್ರಿಟಿಷರ ಆಗಮನದ ನಂತರ ಪಾರಂಪರಿಕ ಶಿಲ್ಪಕಲಾ ಪರಂಪರೆ ಮತ್ತಷ್ಟು ಕ್ಷೀಣವಾಯಿತು. ಇಂತಹ ಕುತೂಹಲಕರವಾದ ಅಂಶಗಳನ್ನು ತಿಳಿದುಕೊಳ್ಳುವ ಉದ್ದೇಶವನ್ನು ಈ ಅಧ್ಯಯನದಲ್ಲಿ ಹೊಂದಲಾಗಿದೆ.

**ಅಧ್ಯಯನದ ಉದ್ದೇಶ**

ಹೈದರಾಬಾದ್ ಕರ್ನಾಟಕ ಪ್ರದೇಶವು ಹಲವು ರಾಜವಂಶಗಳ ಆಳ್ವಿಕೆಗೆ ಒಳಪಟ್ಟ ಪ್ರದೇಶವಾಗಿದೆ. ಬಾದಾಮಿ ಚಾಲುಕ್ಯರಿಂದ ಹಿಡಿದು ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರು, ಕಳಚೂರಿಗಳು, ವಿಜಯನಗರ ಸಾಮ್ರಾಟರು, ಬಹಮನಿ ಸುಲ್ತಾನರು, ಸ್ಥಳೀಯ ಪಾಳೇಗಾರರು, ಹೈದರಾಬಾದ್ ನಿಜಾಮರು. ಹೀಗೆ ಹಲವರ ಆಡಳಿತವನ್ನು ಕಂಡ ಪ್ರದೇಶವಾಗಿದ್ದು, ವಿಭಿನ್ನ ಸಾಂಸ್ಕೃತಿಕ ನೆಲೆಗಳನ್ನು ಹೊಂದಿದೆ. ಅದಕ್ಕನುಸುರವಾಗಿ ಇಲ್ಲಿನ ಕಲಾಪರಂಪರೆಯೂ ಬೆಳೆದು ಬಂದಿತು. ಈ ಹಿನ್ನೆಲೆಯಿಂದ ಈ ಭಾಗದ ಪಾರಂಪರಿಕ ಶಿಲ್ಪ ಪರಂಪರೆ ಮತ್ತು ಶಿಲ್ಪಕಲಾವಿದರ ಬಗ್ಗೆ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಬೀದರ ಭಾಗದಲ್ಲಿ ಬಹಮನಿ ಸುಲ್ತಾನರ ಕಾಲದಲ್ಲಿ ಪ್ರಸಿದ್ಧಿ ಪಡೆದಿದಿದ್ದ 'ಬಿದರಿ' ಕಲೆಯ ಕರಕುಶಲ ಕಲಾವಸ್ತುಗಳು ಇಂದಿಗೂ ತಯಾರಾಗುತ್ತಿವೆ. ಈ ಕಲಾವಸ್ತುಗಳು ಒಂದು ರೀತಿಯ ಶಿಲ್ಪಕಲಾ ಕೃತಿಗಳೇ ಆಗಿವೆ. ಇವುಗಳ ತಯಾರಿಕೆಯ ವಿಧಾನವು ಎರಕ ಹೊಯ್ಯುವ ಮತ್ತು ಟೆರ್ರಾಕೋಟ ಶಿಲ್ಪ ತಯಾರಿಸುವ ವಿಧಾನಗಳನ್ನು ಹೋಲುತ್ತದೆ. ಇದು ಈ ಪರಿಸರದ ಕಲಾವಿದರ ಮೇಲೆ ಪತ್ಯಕ್ಷ ಮತ್ತು ಪರೋಕ್ಷ ಪ್ರಭಾವ ಬೀರಿರುವುದು ಕಂಡುಬರುತ್ತದೆ.

ವಿಜಯನಗರ ಪತನದ ನಂತರ ಇಲ್ಲಿ ಆಶ್ರಯ ಪಡೆದಿದ್ದ ಸಂಪ್ರದಾಯ ಕಲಾವಿದರು ಬೇರೆ ಬೇರೆ ಕಡೆಗೆ ಚದುರಿ ಹೋದರು. ಕೆಲವು ಶಿಲ್ಪಕಲಾವಿದರು ಕೊಪ್ಪಳ ಸಮೀಪದ 'ಕಿನ್ನಾಳ' ಎಂಬಲ್ಲಿ ಬಂದು ನೆಲೆಸಿದರು. ತಮ್ಮ ಮೂಲ ಕಸುಬು ಶಿಲ್ಪ ತಯಾರಿಕೆ, ಬಣ್ಣಗಾರಿಕೆ, ಆಲಂಕಾರಿಕ ವಸ್ತುಗಳ ತಯಾರಿಕೆಯನ್ನು ಮಾಡಿಕೊಂಡು ಜೀವನ ನಿರ್ವಹಿಸತೊಡಗಿದರು. ಇವರು ನೆಲೆಸಿದ 'ಕಿನ್ನಾಳ' ಹಳ್ಳಿಯು ಕಲಾಕಾರರಿಂದ ತುಂಬಿಕೊಂಡಿದ್ದು, ಇಲ್ಲಿನ ಕಲೆಯು ಕಿನ್ನಾಳಕಲೆ ಎಂದೇ ಪ್ರಖ್ಯಾತವಾಗಿದೆ. ಇದು ಈ ಭಾಗದ ಶಿಲ್ಪಕಲಾವಿದರಿಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಪ್ರಭಾವ ಬೀರಿರುವುದಲ್ಲದೆ ಪ್ರೇರಣೆಯನ್ನು ಒದಗಿಸಿದೆ. ಇಂತಹ ಅನೇಕ ಅಂಶಗಳನ್ನು ವಿಶ್ಲೇಷಿಸುವ ಉದ್ದೇಶ ಈ ಅಧ್ಯಯನದಲ್ಲಿದೆ.

ಹೈದರಾಬಾದ್ ಕರ್ನಾಟಕವು ವೈವಿಧ್ಯಮಯವಾದ ಐತಿಹಾಸಿಕ ಹಿನ್ನೆಲೆ ಮತ್ತು ಸಾಂಸ್ಕೃತಿಕ ಪರಿಸರವನ್ನು ಹೊಂದಿದ ಪ್ರದೇಶವಾಗಿದೆ. ಆದಿಮಾನವರ ಕಾಲದ ಚಿತ್ರಗಳನ್ನು ಒಳಗೊಂಡ ಸಂಪದ್ಭರಿತ ನೆಲೆಗಳಾದ ಹಂಪಿ, ಆನೆಗೊಂದಿ, ಹಿರೇಬೆನಕಲ್, ಕೊಪ್ಪಳ, ರಾಯಚೂರು, ತೆಕ್ಕಲಕೋಟೆ, ಪಿಕ್ಕಿಹಾಳ, ಮಾನ್ವಿ, ಯಾದಗಿರಿ, ಬಲಿಚಕ್ರ ಮುಂತಾದ ನೂರಾರು ನೆಲೆಗಳಿವೆ. ಶಿಲಾಯುಗ ಕಾಲದ ಆಯುಧಗಳು, ಕಲ್ಮನೆಗಳು, ಸಮಾಧಿಗಳು ಈ ಪ್ರದೇಶದಲ್ಲಿವೆ.

ಮೌರ್ಯರ ಕಾಲದ ಶಾಸನಗಳು ಹೈದರಾಬಾದ್ ಕರ್ನಾಟಕ ಪ್ರದೇಶದ ಕೊಪ್ಪಳ, ರಾಯಚೂರು ಜಿಲ್ಲೆಗಳಲ್ಲಿ ಕಂಡುಬಂದಿವೆ. ಶಾತವಾಹನರ ಕಾಲದಲ್ಲಿ ಪ್ರಮುಖ ಕಲಾನೆಲೆಯಾಗಿದ್ದ ಸನ್ನತಿಯಲ್ಲಿ ಬೌದ್ಧಸ್ತೂಪಗಳು ಮತ್ತು ಬೌದ್ಧಶಿಲ್ಪಗಳು ವಿಪುಲವಾಗಿ ಕಂಡುಬಂದಿವೆ. ರಾಷ್ಟ್ರಕೂಟರ ಕುರುಹುಗಳನ್ನು ಹೊಂದಿದ ಮಾನ್ಯಖೇಟ, ನಾಗಾವಿ, ದಿಗ್ಗಾಂವ್‌ಗಳಲ್ಲಿ ಅಂದಿನ ಶಿಲ್ಪಕಲಾಕೃತಿಗಳನ್ನು ನೋಡಬಹುದಾಗಿದೆ. ಕಲ್ಯಾಣ ಚಾಲುಕ್ಯರ ಕಲಾಕೊಡುಗೆಗಳು ಈ ಭಾಗದಲ್ಲಿವೆ. ಬೀದರ, ರಾಯಚೂರು, ಕಲಬುರಗಿ ಪ್ರದೇಶಗಳು ಬಹಮನಿ ಸುಲ್ತಾನರ ವಾಸ್ತುವೈಭವಗಳನ್ನು ಒಳಗೊಂಡ ಪ್ರದೇಶಗಳಾಗಿವೆ. ಬಳ್ಳಾರಿ ಜಿಲ್ಲೆಯ ಹಂಪಿಯು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದು ಇಂದಿಗೂ ತನ್ನ ಕಲಾ ಸೌಂದರ್ಯದಿಂದಾಗಿ ವಿಶ್ವವಿಖ್ಯಾತವಾಗಿದೆ. ಕೊಪ್ಪಳವು ಪ್ರಾಚೀನ ಕಾಲದಲ್ಲಿ ಜೈನಕೇಂದ್ರವಾಗಿದ್ದು, ನಂತರದ ದಿನಗಳಲ್ಲಿ ವಿವಿಧ ರಾಜರ ಆಳ್ವಿಕೆಯನ್ನು ಕಂಡ ಪ್ರಮುಖ ಪ್ರದೇಶವಾಗಿದೆ. ಹೀಗೆ ಬಹುಮುಖ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ ಹೈದರಾಬಾದ್ ಕರ್ನಾಟಕ ಪ್ರದೇಶದ ಸಾಂಪ್ರದಾಯಿಕ ಶಿಲ್ಪಕಲಾವಿದರ ಕುರಿತಾದ ಅಧ್ಯಯನವೇ ಒಂದು ಕುತೂಹಲಕರವಾದ ಸಂಗತಿಯಾಗಿದೆ. ಅದನ್ನು ಇಂತಹ ಸಾಂಸ್ಕೃತಿಕ ಮತ್ತು ಕಲಾತ್ಮಕ ಹಿನ್ನೆಲೆಗಳಿಂದಲೇ ಅಧ್ಯಯನಕ್ಕೊಳಪಡಿಸುವ ಉದ್ದೇಶವು ಪ್ರಸ್ತುತ ಪ್ರಬಂಧದಲ್ಲಿದೆ.

ಹೈದರಾಬಾದ್ ಕರ್ನಾಟಕದ ಬೀದರ, ಕಲಬುರ್ಗಿ, ಯಾದಗಿರಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಅನೇಕ ಜನ ಸಾಂಪ್ರದಾಯಿಕ ಶಿಲ್ಪಕಲಾವಿದರಿದ್ದಾರೆ. ಪ್ರತಿ ಜಿಲ್ಲೆಯ ಪ್ರಾತಿನಿಧಿಕ ಕಲಾವಿದರನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡುವ ಉದ್ದೇಶವು ಈ ಪ್ರಬಂಧದಲ್ಲಿದೆ. ಪ್ರತಿಯೊಬ್ಬ ಶಿಲ್ಪಕಲಾವಿದರು ತಮ್ಮ ಪಾರಂಪರಿಕ ಪದ್ಧತಿ, ಪ್ರಭಾವ, ಪ್ರೇರಣೆ ಮುಂತಾದವುಗಳಿಂದಾಗಿ ಪ್ರತ್ಯೇಕ ಕಲಾಶೈಲಿಗಳನ್ನು ರೂಢಿಸಿಕೊಂಡಿದ್ದಾರೆ. ಅಲ್ಲದೆ ಶಿಲೆ, ಲೋಹ, ಮರ, ಮಿಶ್ರಮಾಧ್ಯಮ, ಮಣ್ಣು ಹೀಗೆ ಅನೇಕ ಮಾಧ್ಯಮಗಳಲ್ಲಿ ಶಿಲ್ಪರಚನೆ ಮಾಡುತ್ತಲಿದ್ದಾರೆ. ಆಯಾ ಮಾಧ್ಯಮಗಳ ಸಾಧ್ಯತೆಗಳು, ವೈಶಿಷ್ಟ್ಯಗಳನ್ನು ವಿವೇಚಿಸಲಾಗುವುದು. ಜೊತೆಗೆ ಪ್ರತಿಯೊಬ್ಬ ಶಿಲ್ಪಕಲಾವಿದರ ಶಿಲ್ಪರಚನೆಯ ವಿಶಿಷ್ಟತೆಗಳು, ಪ್ರಭಾವ, ಪ್ರೇರಣೆ, ಚಾರಿತ್ರಿಕ ಅಂಶಗಳಿಂದ ಅವರ ಕೃತಿಗಳಲ್ಲಿ ಉಂಟಾದ ವೈಶಿಷ್ಟ್ಯಗಳಂತಹ ಸಂಗತಿಗಳ ಬಗ್ಗೆ ಚರ್ಚಿಸುವ ಉದ್ದೇಶವನ್ನು ಹೊಂದಲಾಗಿದೆ.

ಸಾಂಪ್ರದಾಯಿಕ ಶಿಲ್ಪಕಲಾವಿದರ ಸ್ಥಿತಿಗತಿಗಳು ಹಿಂದಿಗಿಂತ ಇಂದು ಭಿನ್ನವಾಗಿವೆ. ರಾಜಮಹಾರಾಜರ ಪ್ರೋತ್ಸಾಹ, ಮಾನಸಮ್ಮಾನಗಳು, ಆರ್ಥಿಕ ಅನುಕೂಲತೆಗಳು ಹಿಂದಿನಂತಿಲ್ಲ. ಬದಲಾಗುತ್ತ ಬಂದಿರುವ ಜೀವನಪದ್ಧತಿ, ಸಾಮಾಜಿಕ ಅಂಶಗಳು, ವೈಜ್ಞಾನಿಕ ಬೆಳವಣಿಗೆಗಳು,

ಜಾಗತೀಕರಣಗಳಂತಹ ಅಂಶಗಳು ಸಾಂಪ್ರದಾಯಿಕ ಶಿಲ್ಪಕಲಾವಿದರ ಜೀವನಪದ್ಧತಿ ಮತ್ತು ಅವರ ಕೃತಿರಚನೆಯ ಮೇಲೆ ಪ್ರಭಾವ ಬೀರಿವೆ. ವೈಯಕ್ತಿಕವಾಗಿ ಜೀವನ ನಿರ್ವಹಣೆಯ ಉದ್ಯೋಗವಾಗಿ ಶಿಲ್ಪ ಪರಂಪರೆ ಬದಲಾವಣೆಗೊಂಡಿದೆ. ಕಲಾವಿದರ ಇಂತಹ ಸ್ಥಿತ್ಯಂತರಗಳ ಬಗ್ಗೆ ವಿವೇಚಿಸುವ ಉದ್ದೇಶಗಳನ್ನು ಸಹಿತ ಈ ಅಧ್ಯಯನ ಒಳಗೊಂಡಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದ ಬೀದರ, ಕಲಬುರ್ಗಿ, ಬಳ್ಳಾರಿ, ರಾಯಚೂರು, ಕೊಪ್ಪಳ, ಯಾದಗಿರಿ ಜಿಲ್ಲೆಗಳ ಕಲಾ ವಿಷಯಗಳ ಕುರಿತಾದ ಅಧ್ಯಯನಗಳು ಚಿತ್ರಕಲೆಗೆ ಅನ್ವಯಿಸಿ ಸ್ವಲ್ಪಮಟ್ಟಿಗೆ ನಡೆಯುತ್ತಲಿವೆ. ಆದರೆ ಶಿಲ್ಪಕಲೆಗೆ ಅನ್ವಯಿಸಿ ಈ ಭಾಗದ ಅಧ್ಯಯನಗಳು ಪ್ರತ್ಯೇಕವಾಗಿ ನಡೆದಿರುವುದು ಕಂಡುಬರುವುದಿಲ್ಲ. ಕೇವಲ ಇತಿಹಾಸ ಮತ್ತು ಆಯಾಭಾಗದ ಸಂಸ್ಕೃತಿಯನ್ನು ಬಿಂಬಿಸುವಾಗ ಸಾಂದರ್ಭಿಕವಾಗಿ ಚಿತ್ರಕಲೆ ಹಾಗೂ ಶಿಲ್ಪಕಲೆಯನ್ನು ಹೆಸರಿಸಲಾಗುತ್ತದೆ. ಅದರಲ್ಲೂ ವಿಶೇಷವಾಗಿ ಸಾಂಪ್ರದಾಯಿಕ ಶಿಲ್ಪ ಕಲಾವಿದರ ಕುರಿತು ಪಿಎಚ್.ಡಿ.ಯಂತಹ ಗಂಭೀರ ಅಧ್ಯಯನಗಳು ಇದುವರೆಗೆ ನಡೆದಿಲ್ಲ. ಇಂತಹ ಕೊರತೆಯನ್ನು ಸ್ವಲ್ಪಮಟ್ಟಿಗಾದರೂ ತುಂಬಿಕೊಡುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕಲಾ ಪ್ರಕಾರಗಳ ಅಧ್ಯಯನದಿಂದ ಪರೋಕ್ಷವಾಗಿ ಆಯಾ ಕಾಲದ ಧಾರ್ಮಿಕ, ಸಾಮಾಜಿಕ, ಐತಿಹಾಸಿಕ ಮತ್ತು ಸಾಂಸ್ಕೃತಿಕ ಬದುಕಿನ ಆಯಾಮಗಳು ತಿಳಿದುಬರುತ್ತವೆ. ಕಲಾವಿದನು ಪರಿಸರದ ಕೂಸಾಗಿದ್ದು, ತನ್ನ ಕೃತಿಗಳಲ್ಲಿ ಅದನ್ನು ಭಾವನಾತ್ಮಕವಾಗಿ ಬಿಂಬಿಸುತ್ತಾನೆ. ಸಮಾಜದ ಆಗುಹೋಗುಗಳು, ರೀತಿನೀತಿಗಳು, ಧಾರ್ಮಿಕ ಆಚಾರ ವಿಚಾರಗಳು, ಸಾಮಾಜಿಕ ಸ್ಥಿತ್ಯಂತರಗಳು ಆತನ ಕಲಾಕೃತಿಗಳಲ್ಲಿ ಅನಾವರಣಗೊಂಡಿರುತ್ತವೆ. ಹೀಗಾಗಿ ಕಲೆ ಮತ್ತು ಕಲಾವಿದರ ಕುರಿತಾದ ಅಧ್ಯಯನವು ಒಂದು ರೀತಿಯಲ್ಲಿ ಸಾಂಸ್ಕೃತಿಕ, ಸಾಮಾಜಿಕ ಮತ್ತು ಐತಿಹಾಸಿಕ ಅಧ್ಯಯನವಾಗಿದೆ ಎನ್ನಬಹುದು. ಇಂತಹ ಸಂಗತಿಗಳ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು" ಎಂಬ ವಿಷಯವನ್ನು ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಅಧ್ಯಯನದಲ್ಲಿ ಆರು ಅಧ್ಯಾಯಗಳಿವೆ. ಅವುಗಳಲ್ಲಿ ವಿಷಯ ವಿಂಗಡಿಸಿಕೊಂಡು ವಿಶ್ಲೇಷಿಸಲಾಗಿದೆ. ಅದರ ಸಂಕ್ಷಿಪ್ತ ಸ್ವರೂಪವು ಈ ಕೆಳಗಿನಂತಿದೆ.

**ಮೊದಲನೆಯ ಅಧ್ಯಾಯ**ದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿಗಳ ಕುರಿತು ಹೇಳಲಾಗಿದೆ. ಈ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳಲು ಇರುವ ಕಾರಣಗಳು, ಅಧ್ಯಯನದ ಮಹತ್ವ, ಐತಿಹಾಸಿಕವಾಗಿ, ಕಲಾತ್ಮಕವಾಗಿ, ಸಾಮಾಜಿಕವಾಗಿ ಇದರ ಮಹತ್ವ ವಿಶೇಷವಾಗಿ ಶಿಲ್ಪಕಲಾ ಕ್ಷೇತ್ರಕ್ಕೆ ಅಧ್ಯಯನದಿಂದ ಉಂಟಾಗುವ ಪ್ರಯೋಜನಗಳು ಮತ್ತು ಸಾಂಪ್ರದಾಯಿಕ ಶಿಲ್ಪಕಲೆಯ ಹಿನ್ನೆಲೆಗಳನ್ನು ಮೊದಲನೆಯ ಅಧ್ಯಾಯದಲ್ಲಿ ಹೇಳಲಾಗಿದೆ.

**ಎರಡನೆಯ ಅಧ್ಯಾಯ**ವು ಹೈದರಾಬಾದ್ ಕರ್ನಾಟಕದ ಐತಿಹಾಸಿಕ ಹಿನ್ನೆಲೆ ಮತ್ತು ಸಾಂಸ್ಕೃತಿಕ ಪರಿಸರ ಎಂಬುದಾಗಿದೆ. ಇದರಲ್ಲಿ ಬೀದರ, ಕಲಬುರ್ಗಿ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ ಮತ್ತು ಸಾಂಸ್ಕೃತಿಕ ಪರಿಸರಗಳನ್ನು ಕಟ್ಟಿ

ಕೊಡಲಾಗಿದೆ. ಆಯಾ ಭಾಗದಲ್ಲಿ ಆಳ್ವಿಕೆ ಮಾಡಿದ ಪ್ರಮುಖ ರಾಜವಂಶಗಳು, ಪ್ರಮುಖ ರಾಜರು ಅವರು ನೀಡಿದ ಸಾಂಸ್ಕೃತಿಕ ಕೊಡುಗೆಗಳು, ವಿಶೇಷವಾಗಿ ದೇವಾಲಯ ಮತ್ತು ಶಿಲ್ಪಕಲಾ ಪರಂಪರೆಯನ್ನು ಕುರಿತಂತೆ ವಿವರಗಳನ್ನು ಕೊಡಲಾಗಿದೆ.

**ಮೂರನೆಯ ಅಧ್ಯಾಯ**ದಲ್ಲಿ ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರ ಬಗ್ಗೆ ವಿವೇಚಿಸಲಾಗಿದೆ. ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡ ಸಾಂಪ್ರದಾಯಿಕ ಶಿಲ್ಪಕಲಾವಿದರ ಸಂಕ್ಷಿಪ್ತ ಜೀವನ, ಕಲಾಬದುಕು, ಕಲಾಕೃತಿ ರಚನೆಯ ಮಾಧ್ಯಮಗಳು, ವಿಧಿವಿಧಾನಗಳು, ಶಿಲ್ಪದ ಪ್ರಕಾರಗಳು, ವಸ್ತುವಿಷಯಗಳಂತಹ ಸಂಗತಿಗಳನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

**ನಾಲ್ಕನೆಯ ಅಧ್ಯಾಯ**ವು ಹೈದಾರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರ ವೈಶಿಷ್ಟ್ಯಗಳು ಎಂಬುದಾಗಿದೆ. ಅಧ್ಯಯನಕ್ಕೊಳಪಡಿಸಲಾದ ಕಲಾವಿದರ ಕೃತಿಗಳು, ಕಲಾಬದುಕು, ಪ್ರಭಾವ, ಪ್ರೇರಣೆ, ರಚನಾತಂತ್ರ, ಶಿಲ್ಪಗಳ ವಿಶೇಷತೆ, ಮಾಧ್ಯಮಗಳನ್ನು ಬಳಸುವಲ್ಲಿ ಕಲಾವಿದರ ಪರಿಣತಿ, ತಜ್ಞತೆ, ಅವರ ಶಿಲ್ಪವಿನ್ಯಾಸಗಳ ವಿಶಿಷ್ಟತೆ, ಚಾರಿತ್ರಿಕ ಅಂಶಗಳು ಮುಂತಾದವುಗಳನ್ನು ಕುರಿತು ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಐದನೆಯ ಅಧ್ಯಾಯ**ವು ಸಾಂಪ್ರದಾಯಿಕ ಶಿಲ್ಪಕಲಾವಿದರ ಇಂದಿನ ಸ್ಥಿತಿಗತಿಗಳ ಕುರಿತಾಗಿದೆ. ರಾಜಾಶ್ರಯ ತಪ್ಪಿದ ನಂತರ ಬದಲಾದ ಸಾಂಪ್ರದಾಯಿಕ ಶಿಲ್ಪಕಲಾವಿದರ ಪರಿಸ್ಥಿತಿ, ಆರ್ಥಿಕತೆ, ಮಾನಸಮ್ಮಾನಗಳು, ವೈಜ್ಞಾನಿಕ ಬೆಳವಣಿಗೆಗಳಿಂದ ಅವರ ಕಲೆ ಮತ್ತು ಕಲಾಬದುಕಿನಲ್ಲಿ ಉಂಟಾದ ಸ್ಥಿತ್ಯಂತರಗಳ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಆರನೆಯ ಅಧ್ಯಾಯ**ವು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಒಳಗೊಂಡಿದೆ.

**ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಸಂಶೋಧನ ಅಧ್ಯಯನಗಳ ಸಮೀಕ್ಷೆ**

ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಸಂಶೋಧನೆಯ ಅಧ್ಯಯನ ಪ್ರಾರಂಭಗೊಂಡಿರುವುದು ತೊಂಬತ್ತರ ದಶಕದಿಂದೀಚೆಗೆ. ಬಹಳಷ್ಟು ತಡವಾಗಿ ದೃಶ್ಯಕಲೆಗಳ ಕುರಿತು ಸಂಶೋಧನಾ ಅಧ್ಯಯನ ವಿಶೇಷವಾಗಿ ವಿಶ್ವವಿದ್ಯಾಲಯ ಮಟ್ಟದಲ್ಲಿ ಎಂ.ಫಿಲ್., ಪಿಎಚ್.ಡಿಯಂತಹ ಪದವಿಯ ಹಿನ್ನೆಲೆಯಲ್ಲಿ ಪ್ರಾರಂಭವಾಗಿರುವುದು ಕಂಡುಬರುತ್ತದೆ. ಇಷ್ಟು ತಡವಾಗಿ ಈ ಕ್ಷೇತ್ರದಲ್ಲಿ ಸಂಶೋಧನೆ ನಡೆಯಲು ಮುಖ್ಯಕಾರಣ ಚಿತ್ರಕಲೆಯ ಅಧ್ಯಯನದ ಕೋರ್ಸ್‌ಗಳು ಕರ್ನಾಟಕದಲ್ಲಿ ಎಸ್.ಎಸ್.ಎಲ್.ಸಿ. ಬೋರ್ಡ್‌ನಲ್ಲಿ ನಡೆಯುತ್ತಿದ್ದವು. ವಿಶೇಷವಾಗಿ ಈ ಎಲ್ಲಾ ಕೋರ್ಸ್‌ಗಳು ಡಿಪ್ಲೋಮಾ ಹಂತಕ್ಕೆ ಸೀಮಿತವಾಗಿದ್ದವು. ಈ ಕೋರ್ಸ್‌ಗಳನ್ನು ಮುಗಿಸಿದ ವಿದ್ಯಾರ್ಥಿಗಳು ಸಾಮಾನ್ಯವಾಗಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಚಿತ್ರಕಲಾ ಶಿಕ್ಷಕರಾಗಿ ನೇಮಕಗೊಳ್ಳುತ್ತಿದ್ದರು. ಇನ್ನುಳಿದವರು ಹವ್ಯಾಸಿ ಚಿತ್ರಕಲಾವಿದರಾಗಿ, ಕಮರ್ಶಿಯಲ್ ಆರ್ಟಿಸ್ಟಾಗಿ ವೃತ್ತಿಜೀವನವನ್ನು ನಡೆಸಿಕೊಂಡು ಬರುತ್ತಿದ್ದರು. ಈ ಐದು ವರ್ಷದ ಡಿಪ್ಲೋಮಾ ಪಾಸಾದ ವಿದ್ಯಾರ್ಥಿಗಳಿಗೆ ಪದವಿ ತರಗತಿಗೆ ಸೇರಲು ಅವಕಾಶವಿರುತ್ತಿರಲಿಲ್ಲ. ಅವರು ಪದವಿ ತರಗತಿಗೆ ಸೇರಲೇಬೇಕೆಂದರೆ

ಒಂದು ವರ್ಷದ ಬ್ರಿಡ್ಜ್‌ಕೋರ್ಸ್‌ನ್ನು ಕಡ್ಡಾಯವಾಗಿ ಮಾಡಿಕೊಂಡಲ್ಲಿ ಮಾತ್ರ ಸ್ನಾತಕೋತ್ತರ ಹಂತಕ್ಕೆ ಹೋಗಲು ಅವಕಾಶವಿದ್ದ ಕಾರಣ ಬಹುಪಾಲು ವಿದ್ಯಾರ್ಥಿಗಳು ಪದವಿ ಮತ್ತು ಸ್ನಾತಕೋತ್ತರ ಪದವಿ ಪಡೆಯಲು ಸಾಧ್ಯವಾಗುತ್ತಿರಲಿಲ್ಲ.

ಇನ್ನು ಸ್ನಾತಕೋತ್ತರ ಹಂತದಲ್ಲಿ ದೃಶ್ಯಕಲೆ ಅಧ್ಯಯನಕ್ಕೆ ಕರ್ನಾಟಕದ ಯಾವ ವಿಶ್ವ ವಿದ್ಯಾಲಯಗಳಲ್ಲಿಯೂ ಸ್ವತಂತ್ರವಾದ ದೃಶ್ಯಕಲಾ ಅಧ್ಯಯನದ ವಿಭಾಗಗಳು ಪ್ರಾರಂಭಗೊಳ್ಳಲಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಈ ಕ್ಷೇತ್ರದಲ್ಲಿ ಸಂಶೋಧನಾ ಅಧ್ಯಯನ ಮುಖ್ಯವಾಗಿ ಹಿಂದುಳಿಯಲು ಕಾರಣವಾಯಿತು. ಪದವಿಯ ಹಂತದಲ್ಲಿ ಬೆರಳೆಣಿಕೆಯಷ್ಟು ಲಲಿತಕಲಾ ಮಹಾವಿದ್ಯಾಲಯಗಳು ಪ್ರಾರಂಭಗೊಂಡಿದ್ದು, ಅವು ಹೆಚ್ಚಾಗಿ ಪದವಿಹಂತಕ್ಕೆ ಮಾತ್ರ ಸೀಮಿತಗೊಂಡು ಕಾರ್ಯನಿರ್ವಹಿಸಿವೆ. ಅಲ್ಲಿ ಸ್ನಾತಕೋತ್ತರ ದೃಶ್ಯಕಲೆಗಳ ಅಧ್ಯಯನಕ್ಕೆ ಅವಕಾಶಗಳು ಲಭ್ಯವಾಗದೇ ಇರುವುದು ಇನ್ನೊಂದು ಪ್ರಮುಖ ಕಾರಣವಾಗಿದೆ ಎನ್ನಬಹುದು.

ಧಾರವಾಡ, ಗದಗ, ಕಲಬುರ್ಗಿ, ಮೈಸೂರು, ದಾವಣಗೆರೆ ಹಾಗೂ ಬೆಂಗಳೂರು ಈ ಕೆಲವು ಸ್ಥಳಗಳಲ್ಲಿ ಸ್ನಾತಕೋತ್ತರ ದೃಶ್ಯಕಲಾ ಪದವಿ ಕೋರ್ಸ್‌ಗಳು ಪ್ರಾರಂಭಗೊಂಡರೂ ಈ ಕೋರ್ಸ್‌ಗಳು ಪ್ರಾಯೋಗಿಕತೆಗೆ ಹೆಚ್ಚು ಮಹತ್ವ ಕೊಟ್ಟ ಕಾರಣವಾಗಿ ಹಾಗೂ ಅಲ್ಲಿ ಇದ್ದುದು ಈ ಕ್ಷೇತ್ರದಲ್ಲಿ ದೃಶ್ಯಕಲೆಗಳ ಶಿಕ್ಷಣವೆಂದರೆ ಕೇವಲ ಪ್ರಾಯೋಗಿಕವಾದ ಕಲೆಗಳ ಅಧ್ಯಯನ ಎಂಬ ಪ್ರಧಾನ ದೃಷ್ಟಿಕೋನವು ಈ ಹಂತದಲ್ಲಿ ಪ್ರಮುಖವಾಗಿತ್ತು. ಹೀಗಾಗಿ ಈ ಕ್ಷೇತ್ರದಲ್ಲಿ ಸಂಶೋಧನಾ ಪ್ರಜ್ಞೆಯ ಕೊರತೆಯಿಂದಾಗಿ ಕೇವಲ ಸ್ನಾತಕೋತ್ತರ ಪದವಿಗಳನ್ನು ಮಾತ್ರ ವಿದ್ಯಾರ್ಥಿಗಳು ಪಡೆದುಕೊಳ್ಳುವಂತಾಯಿತು. ಸ್ನಾತಕೋತ್ತರ ನಂತರದ ಎಂ.ಫಿಲ್, ಪಿಎಚ್.ಡಿ. ಯಂತಹ ಅಧ್ಯಯನಗಳಿಗೆ ಇಲ್ಲಿ ಅವಕಾಶವಿಲ್ಲದಂತಾಗಿ ಈ ಕ್ಷೇತ್ರದ ಸಂಶೋಧನೆ ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿ ನಡೆಯಬೇಕಾದಷ್ಟು ಪ್ರಮಾಣದಲ್ಲಿ ನಡೆಯಲಿಲ್ಲ.

ಈ ಪರಂಪರೆ ತೊಂಬತ್ತರ ದಶಕದವರೆಗೂ ಮುಂದುವರಿದುಕೊಂಡು ಬಂದಿತು. ತೊಂಬತ್ತರ ದಶಕದ ನಂತರದಲ್ಲಿ ೧೯೯೭ರಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ದೃಶ್ಯಕಲಾ ವಿಭಾಗದಲ್ಲಿ ಎಂ.ಫಿಲ್., ಪಿಎಚ್.ಡಿ. ಸಂಶೋಧನ, ಅಧ್ಯಯನ ಪ್ರಾರಂಭಗೊಳ್ಳುವುದರ ಮೂಲಕ ಈ ವಾತಾವರಣ ಸ್ವಲ್ಪ ಬದಲಾಗಿ ಸ್ನಾತಕೋತ್ತರ ಹಂತದಲ್ಲಿ ಸಂಶೋಧನಾಧ್ಯಯನಕ್ಕೆ ಅವಕಾಶ ದೊರೆಯಿತು. ಇಲ್ಲಿ ಸ್ನಾತಕೋತ್ತರ ಹಂತದಲ್ಲಿ ಪ್ರಾಯೋಗಿಕತೆಗೆ ಮತ್ತು ಸಿದ್ಧಾಂತ ಪತ್ರಿಕೆಗಳಿಗೆ ಸಮಾನಾವಕಾಶ ಸಿಕ್ಕ ಕಾರಣ ದೃಶ್ಯಕಲಾ ಸಂಶೋಧನೆಯ ಹೊಸಪರಂಪರೆಗೆ ಈ ವಿಶ್ವವಿದ್ಯಾಲಯ ಹೊಸದಾರಿಯನ್ನು ಹಾಕಿಕೊಟ್ಟಿತು. ನಂತರದಲ್ಲಿ ಕರ್ನಾಟಕದ ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ದೃಶ್ಯಕಲಾ ಸಂಶೋಧನೆಯ ಅಧ್ಯಯನಕ್ಕೆ ಅವಕಾಶಗಳು ದೊರಕಿವೆ.

ಈ ಕ್ಷೇತ್ರದಲ್ಲಿ ಸಂಶೋಧನಾಧ್ಯಯನವು ಈಗ ವಿಶ್ವವಿದ್ಯಾಲಯ ಮಟ್ಟದಲ್ಲಿ ಇನ್ನುಳಿದ ವಿಷಯಗಳಂತೆ ದೃಶ್ಯಕಲೆಗಳ ಸಂಶೋಧನೆಗೆ ಪ್ರಾಧಾನ್ಯ ಸಿಕ್ಕ ಕಾರಣವಾಗಿ ಈಗ ಸಾಕಷ್ಟು ವಿದ್ಯಾರ್ಥಿಗಳು, ಅಧ್ಯಾಪಕರು ತಮ್ಮನ್ನು ದೃಶ್ಯಕಲಾ ಕ್ಷೇತ್ರದ ಸಂಶೋಧನಾಧ್ಯಯನದಲ್ಲಿ ತೊಡಗಿಸಿಕೊಳ್ಳಲು ಕಾರಣವಾಗಿದೆ. ಹೀಗೆ ತೊಂಬತ್ತರ ದಶಕದಿಂದ ಪ್ರಾರಂಭವಾದ ದೃಶ್ಯಕಲಾ

ಅಧ್ಯಯನದ ಸ್ಥೂಲವಾದ ನೋಟವನ್ನು ಇಲ್ಲಿ ನೋಡಬಹುದಾಗಿದೆ. ಮುಖ್ಯವಾಗಿ ಎಂ.ಫಿಲ್. ಪದವಿಗಾಗಿ, ಪಿಎಚ್.ಡಿ. ಪದವಿಗಾಗಿ ನಡೆಸಿದ ಅಧ್ಯಯನಗಳು ಹಾಗೂ ಡಿ.ಲಿಟ್. ಪದವಿಗಾಗಿ ಸಂಶೋಧನಾ ಅಧ್ಯಯನ ಪ್ರಾರಂಭವಾಗಿದ್ದು, ಅವುಗಳಲ್ಲಿ ಇಲ್ಲಿ ೧. ಪಿಎಚ್.ಡಿ. ಪ್ರಬಂಧಗಳು ೨. ಎಂ.ಫಿಲ್. ಪ್ರಬಂಧಗಳು ೩. ಡಿ.ಲಿಟ್. ಪ್ರಬಂಧಗಳು ಎಂದು ವಿಂಗಡಿಸಿ ನೋಡಬಹುದಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಯ ಕುರಿತು ಡಾ. ಎಸ್. ಸಿ. ಪಾಟೀಲ ಅವರು ೧೯೮೩ರಲ್ಲಿ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ-ಒಂದು ಅಧ್ಯಯನ್** ಎಂಬ ಕಿರು ಸಂಶೋಧನ ಪ್ರಬಂಧವನ್ನು ಸ್ನಾತಕೋತ್ತರ ಶಿಕ್ಷಣ ಪದವಿಯ ಆಂಶಿಕ ಅವಶ್ಯಕತೆಗಾಗಿ ೧೯೮೩ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಲ್ಲಿಸಿದ್ದು, ಇದು ದೃಶ್ಯಕಲಾ ಕ್ಷೇತ್ರದಲ್ಲಿ, ವಿಶ್ವವಿದ್ಯಾಲಯ ಹಂತದಲ್ಲಿ ಕಲಾವಿದರೊಬ್ಬರು ದೃಶ್ಯಕಲೆಯಲ್ಲಿ ನಡೆಸಿದ ಪ್ರಥಮ ಚಿತ್ರಕಲಾ ಶಿಕ್ಷಣದ ಕಿರು ಸಂಶೋಧನಾ ಅಧ್ಯಯನವಾಗಿದೆ.

೧೯೮೭ರಲ್ಲಿ ಡಾ. ಚೂಡಾಮಣಿ ನಂದಗೋಪಾಲರ **ಡ್ಯಾನ್ಸ್ ಆ್ಯಂಡ್ ಅದರ್ ಫೈನ್ ಆರ್ಟ್ಸ್ ಇನ್ ಕರ್ನಾಟಕ ಸ್ಕಲ್ಪ್ಚರ್ ಆ್ಯಂಡ್ ಪೇಂಟಿಂಗ್ಸ್**[೧೦] ಎಂಬ ಪಿಎಚ್.ಡಿ. ಮಹಾಪ್ರಬಂಧವು ಮೈಸೂರು ವಿಶ್ವವಿದ್ಯಾನಿಲಯದಿಂದ ಬಂದಿದೆ. ಇಲ್ಲಿ ವಿಶೇಷವಾಗಿ ನೃತ್ಯವನ್ನು ಪ್ರಮುಖವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಪೂರಕವಾಗಿ ಚಿತ್ರಕಲೆಯ ಕುರಿತು ಪ್ರಸ್ತಾಪಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದಿಂದ "ಡಾ. ಬಿ. ಕೆ. ಹಿರೇಮಠರ **ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ**[೧೧] ಎಂಬ ಪಿಎಚ್.ಡಿ. ಪ್ರಬಂಧ ಬಂದಿದ್ದು, ಇದರಲ್ಲಿ ಸಹ ಚಿತ್ರಕಲೆಯ ಕುರಿತು ಒಂದೆರಡು ಅಧ್ಯಾಯಗಳು ಪ್ರಾಸಂಗಿಕವಾಗಿ ಚರ್ಚೆಗೊಂಡಿವೆ. ಆದರೆ ಇವರ ಮುಖ್ಯವಾದ ಅಧ್ಯಯನವು ಕನ್ನಡ ಹಸ್ತಪ್ರತಿಗಳ ಕುರಿತ ಅಧ್ಯಯನವಾಗಿದೆ. ಇವು ಪ್ರಾರಂಭಿಕ ಹಂತದಲ್ಲಿ ನಡೆದ ಒಂದೆರಡು ಸಣ್ಣ ಪ್ರಯತ್ನಗಳಾಗಿವೆ.

### ೧. ಪಿಎಚ್.ಡಿ. ಮಹಾಪ್ರಬಂಧಗಳು

ಚಿತ್ರಕಲೆಯನ್ನೇ ಕುರಿತು ಕರ್ನಾಟಕದಲ್ಲಿ ಸಂಶೋಧನಾಧ್ಯಯನವು ಪೂರ್ಣಪ್ರಮಾಣದಲ್ಲಿ ಕಂಡುಬಂದಿರುವುದು ೧೯೯೧ರಲ್ಲಿ. ಇಲ್ಲಿ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕ ಜನಪದ ಚಿತ್ರಕಲೆ.**[೧೨] ಈ ಮಹಾಪ್ರಬಂಧವನ್ನು ಡಾ. ಎಸ್.ಸಿ. ಪಾಟೀಲರು ಸಿದ್ಧಪಡಿಸಿದ್ದು ದೃಶ್ಯಕಲಾಕ್ಷೇತ್ರದ ಮೊದಲ ಅಧ್ಯಯನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ. ಅ. ಲ. ನರಸಿಂಹನ್ ಅವರು ಬೆಂಗಳೂರು

---

೯. ಎಸ್. ಸಿ. ಪಾಟೀಲ: ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೩.
೧೦. ಡಾ. ಚೂಡಾಮಣಿ ನಂದಗೋಪಾಲ: ಡ್ಯಾನ್ಸ್ ಆ್ಯಂಡ್ ಆದರ್ ಫೈನ್ ಆರ್ಟ್ಸ್ ಇನ್ ಕರ್ನಾಟಕ ಸ್ಕಲ್ಪ್ಚರ್ ಆ್ಯಂಡ್ ಪೇಂಟಿಂಗ್ಸ್ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೭.
೧೧. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತಪ್ರತಿಗಳು – ಪಿಹೆಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೭.
೧೨. ಡಾ. ಎಸ್. ಸಿ. ಪಾಟೀಲ: ಕರ್ನಾಟಕ ಜನಪದ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿ.ವಿ. ಧಾರವಾಡ, ೧೯೯೧.

ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು,**[೧೩] ೧೯೯೭ರಲ್ಲಿ ಡಾ. ಸಂಪದಾ ಭಟ್ ಅವರ **ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲಾ ಚಿತ್ರಗಳು,**[೧೪] ಕನ್ನಡ ವಿಶ್ವವಿದ್ಯಾಲಯಕ್ಕೆ, ೧೯೯೭ರಲ್ಲಿ ಡಾ. ಪುಷ್ಪಾ ದ್ರಾವಿಡ ಇವರು ಮಂಡಿಸಿದ **ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು,**[೧೫] ೨೦೦೧ರಲ್ಲಿ ಡಾ. ಯಾದಪ್ಪ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ: ಒಂದು ಅಧ್ಯಯನ,**[೧೬] ೨೦೦೨ರಲ್ಲಿ ಡಾ. ಶಿವಾನಂದ ಬಂಟನೂರು ಇವರ **ಕರ್ನಾಟಕ ಜನಪದ ಶಿಲ್ಪಕಲೆ: ಒಂದು ಅಧ್ಯಯನ,**[೧೭] ಡಾ. ಗಿರೀಶ ಅವರ **ಬುಡಕಟ್ಟು ಚಿತ್ರಕಲೆ,**[೧೮] ೨೦೦೨ರಲ್ಲಿ ಡಾ. ಲಕ್ಷ್ಮೀದೇವಿ ಗವಾಯಿಯವರ **ಕಲಾವಿದ ಎಂ.ಎ.ಚೆಟ್ಟಿಯವರ ಜೀವನ– ಕಲಾಕೃತಿಗಳು: ಒಂದು ಅಧ್ಯಯನ,**[೧೯] ಡಾ. ಶಂಕ್ರಪ್ಪ ಕೋಲ್ಕಾರ್ ಅವರ **ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ,**[೨೦] ಡಾ. ಸೌಮ್ಯಾ ಅವರ **ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್,**[೨೧] ಡಾ. ಪ್ರಮಿಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಆ್ಯಂಡ್ ಕಲರ್ ಎಕ್ಸಪೋಜಿಸ್ ಆ್ಯಂಡ್ ಡೆವೆಲಪ್‌ಮೆಂಟ್ ಆಫ್ ರಾಗಮಾಲಾ ಆ್ಯಂಡ್ ಕಾಂಟೆಂಪರರಿ ಪೇಂಟಿಂಗ್,**[೨೨] ೨೦೦೩ರಲ್ಲಿ ಡಾ. ವೀಣಾ ಶೇಖರ ಮಂಡಿಸಿದ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦ –೧೮೨೦),**[೨೩] ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್. ಹಡಪದ : ಒಂದು ಅಧ್ಯಯನ,**[೨೪] ಡಾ. ಎಸ್.ಸಿ.ಪಾಟೀಲರು ಕರ್ನಾಟಕ ವಿ.ವಿ.ಗೆ ಮಂಡಿಸಿದ **ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ್ ಎಜ್ಯುಕೇಶನ್ ಎಟ್ ಸ್ಕೂಲ್ ಲೆವಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫರನ್ಸ್ ಟು ಡ್ರಾಯಿಂಗ್ ಆ್ಯಂಡ್ ಪೇಂಟಿಂಗ್,**[೨೫] ಇದು ಡಾ. ಎಸ್. ಸಿ. ಪಾಟೀಲ ಅವರ ಎರಡನೆಯ

---

೧೩. ಡಾ. ಅ.ಲ.ನರಸಿಂಹನ್: ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೮.

೧೪. ಡಾ. ಸಂಪದಾ ಭಟ್: ಹಿಂದೂಸ್ಥಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೮.

೧೫. ಡಾ. ಪುಷ್ಪಾ ದ್ರಾವಿಡ: ಅನಿವಾಸಿ ಭಾರತೀಯ ಕಲಾವಿದ ದಿ ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು, ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೭.

೧೬. ಡಾ. ಯಾದಪ್ಪ ಪರದೇಶಿ: ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೧.

೧೭. ಡಾ. ಶಿವಾನಂದ ಬಂಟನೂರು: ಕರ್ನಾಟಕ ಜನಪದ ಶಿಲ್ಪಕಲೆ–ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨.

೧೮. ಡಾ. ಗಿರೀಶ: ಬುಡಕಟ್ಟು ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨.

೧೯. ಡಾ. ಲಕ್ಷ್ಮೀದೇವಿ ಗವಾಯಿ: ಕಲಾವಿದ ಎಂ. ಎ.ಚೆಟ್ಟಿಯವರ ಜೀವನ–ಕಲಾಕೃತಿಗಳು: ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨.

೨೦. ಡಾ. ಶರಣಪ್ಪ ಕೋಲ್ಕಾರ: ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨.

೨೧. ಡಾ. ಸೌಮ್ಯಾ: ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್, ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ , ೨೦೦೨.

೨೨. ಡಾ. ಪ್ರಮಿಳಾ ಲೋಚನ: ಮೈಂಡ್ ಮ್ಯೂಜಿಕ್ ಆ್ಯಂಡ್ ಕಲರ್ ಎಕ್ಸಪೋಜಿಸ್ ಆ್ಯಂಡ್ ಡೆವೆಲಪ್‌ಮೆಂಟ್ ಆಫ್ ರಾಗಮಾಲಾ ಆ್ಯಂಡ್ ಕಾಂಟೆಂಪರರಿ ಪೇಂಟಿಂಗ್, ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ, ೨೦೦೨.

೨೩. ಡಾ. ವೀಣಾ ಶೇಖರ ಮಂಡಿಸಿದ 'ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ(೧೭೮೦–೧೮೨೦)', ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ , ೨೦೦೩.

೨೪. ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ: ಕಲಾವಿದ ಆರ್.ಎಮ್.ಹಡಪದ: ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೩.

ಪಿಎಚ್.ಡಿ ಮಹಾಪ್ರಬಂಧವಾಗಿದೆ. ೨೦೦೪ರಲ್ಲಿ ಡಾ. ವಿ.ಎಮ್.ಬಾಗಾಯತ್ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ: ಒಂದು ಅಧ್ಯಯನ** (೧೪೦೦–೧೮೦೦),[೨೬] ಡಾ. ಶಿವಕುಮಾರ. ಜಿ. ಓ. ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು,**[೨೭] ಡಾ. ಪಿ. ಗೌರೀಶ ಅವರ **ಮೈಸೂರು ಜಿಲ್ಲೆಯ ಜನಪದ ಚಿತ್ರಕಲೆ,**[೨೮] ೨೦೦೫ರಲ್ಲಿ ಡಾ. ಶಶಿಕಲಾ ಹೂಗಾರ ಅವರ **ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ,**[೨೯] ಡಾ. ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ,**[೩೦] ಡಾ. ಎಚ್. ಎನ್. ಚಿತ್ರಗಾರ ಅವರ **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ,**[೩೧] ಡಾ. ಎಸ್. ವಿ. ವೆಂಕಟೇಶಯ್ಯ ಅವರ **ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು: ಒಂದು ಅಧ್ಯಯನ,**[೩೨] ೨೦೦೬ರಲ್ಲಿ ಡಾ. ವಿಶ್ವೇಶ್ವರಿ ತಿವಾರಿ ಅವರ **ರಂಗೋಲಿ ಕಲೆ,**[೩೩] ೨೦೦೭ರಲ್ಲಿ ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ ಅವರ **ಸುರಪುರ ಶೈಲಿಯ ಚಿತ್ರಕಲೆ: ಒಂದು ಅಧ್ಯಯನ,**[೩೪] ಡಾ. ಗೀತಾಂಜಲಿ ಬಿ. ಆರ್. ಅವರ **ಐತಿಹಾಸಿಕ ದೀಪಸ್ತಂಭಗಳು,**[೩೫] ಡಾ. ರಾಠೋಡ್ ಅವರ **ಆನ್ವಯಿಕ ಕಲೆ–ಹಿಂದಿನಿಂದ ಇಂದಿನವರೆಗೆ,**[೩೬] ೨೦೦೮ರಲ್ಲಿ ಡಾ. ಮೋಹನ್‌ರಾವ್ ಬಿ. ಪಂಚಾಳ ಅವರ **ಚಿತ್ರಕಲಾವಿದ ಡಾ. ಎಸ್. ಎಮ್. ಪಂಡಿತ್,**[೩೭] ಡಾ. ವಿಶ್ವನಾಥ ಎ.ಎಸ್. ಅವರ **ಕರಾವಳಿ ಕರ್ನಾಟಕದ ಯಕ್ಷಗಾನ ಮುಖವರ್ಣಿಕೆ ಹಾಗೂ ವೇಷಭೂಷಣಗಳು,**[೩೮] ಡಾ. ರವೀಂದ್ರ ಎಸ್. ಕಮ್ಮಾರ ಅವರ **ಕಲಾವಿದ ವಿ.ಬಿ. ಹಿರೇಗೌಡರ್– ಬದುಕು ಮತ್ತು ಕಲಾಕೃತಿಗಳು,**[೩೯] ಡಾ. ಪ್ರೇಮಾನಂದ ಟಿ. ಲಕ್ಕಣ್ಣನವರ ಅವರ

---

೨೫. ಡಾ. ಎಸ್.ಸಿ. ಪಾಟೀಲ: ಎ ಕ್ರಿಟಿಕಲ್ ಅನಾಲಿಸಿಸ್ ಆಫ್ ಎಜ್ಯುಕೇಶನ್ ಎಟ್ ಸ್ಕೂಲ್ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ್ ಆ್ಯಂಡ್ ಪೇಂಟಿಂಗ್, ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೨.

೨೬. ಡಾ. ಎಂ.ವ್ಹಿ. ಬಾಗಾಯತ್: ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ – ಒಂದು ಅಧ್ಯಯನ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪.

೨೭. ಡಾ. ಜಿ. ಶಿವಕುಮಾರ: ಕನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಪಿಎಚ್.ಡಿ. ಮಹಾಪ್ರಬಂಧ, ಕಲಬುರ್ಗಿ ವಿಶ್ವವಿದ್ಯಾಲಯ, ಕಲಬುರಗಿ, ೨೦೦೪.

೨೮. ಡಾ. ಪಿ. ಗೌರೀಶ: ಮೈಸೂರು ಜಿಲ್ಲೆಯ ಜಾನಪದ ಚಿತ್ರಕಲೆ(ಅ.ಪ್ರ. ಪಿಎಚ್.ಡಿ. ಮ.ಪ್ರ.), ಮೈಸೂರು ವಿ.ವಿ., ಮೈಸೂರು, ೨೦೦೪.

೨೯. ಡಾ. ಶಶಿಕಲಾ ಹೂಗಾರ: ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ(ಅ.ಪ್ರ. ಪಿಎಚ್.ಡಿ. ಮ.ಪ್ರ.), ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪.

೩೦. ಡಾ. ಶಿವಪ್ರಕಾಶ ಎಲ್. ತುಕ್ಕಣ್ಣವರ: ಕರ್ನಾಟಕ ರಥ ಶಿಲ್ಪಕಲೆ(ಅ.ಪ್ರ. ಪಿಎಚ್.ಡಿ. ಮ.ಪ್ರ.), ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪

೩೧. ಡಾ. ಎಸ್.ವಿ. ವೆಂಕಟೇಶಯ್ಯ: ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು: ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫.

೩೨. ಡಾ. ಎಚ್.ಎನ್.ಚಿತ್ರಗಾರ: ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫.

೩೩. ಡಾ. ವಿಶ್ವೇಶ್ವರಿ ತಿವಾರಿ: ರಂಗೋಲಿ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪಿಎಚ್.ಡಿ. ಮಹಾಪ್ರಬಂಧ, ಕಲಬುರ್ಗಿ ವಿಶ್ವವಿದ್ಯಾಲಯ, ಕಲಬುರಗಿ–೨೦೦೬.

೩೪. ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ: ಸುರಪುರ ಶೈಲಿಯ ಚಿತ್ರಕಲೆ: ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕಲಬುರ್ಗಿ ವಿಶ್ವವಿದ್ಯಾಲಯ, ಕಲಬುರಗಿ–೨೦೦೭.

೩೫. ಡಾ. ಗೀತಾಂಜಲಿ ಬಿ.ಆರ್.: ಕರ್ನಾಟಕದ ಐತಿಹಾಸಿಕ ದೀಪಸ್ತಂಭಗಳು, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭.

೩೬. ಡಾ. ಲಕ್ಷ್ಮಣಸಿಂಗ್ ಆರ್. ರಾಠೋಡ: ಆನ್ವಯಿಕ ಕಲೆ – ಹಿಂದಿನಿಂದ ಇಂದಿನವರೆಗೆ, ಪಿಎಚ್.ಡಿ. ಮಹಾಪ್ರಬಂಧ, ಮೈಸೂರು ವಿ.ವಿ. ಮೈಸೂರು, ೨೦೦೭.

೩೭. ಡಾ. ಮೋಹನ್ ಪಂಚಾಳ: ಕಲಾವಿದ ಎಸ್.ಎಮ್. ಪಂಡಿತ, ಬದುಕು ಮತ್ತು ಕಲೆ, ಪಿಎಚ್.ಡಿ. ಮ.ಪ್ರ. ಗು.ವಿ.ವಿ. ಕಲಬುರಗಿ, ೨೦೦೮.

೩೮. ಡಾ. ವಿಶ್ವನಾಥ ಎ.ಎಸ್.: ಕರಾವಳಿ ಕರ್ನಾಟಕದ ಯಕ್ಷಗಾನ ಮುಖವರ್ಣಿಕೆ ಹಾಗೂ ವೇಷಭೂಷಣಗಳು, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮.

**ಕರ್ನಾಟಕದ ದೃಶ್ಯಕಲಾ ಸಾಹಿತ್ಯ-ಒಂದು ವೈಚಾರಿಕ ಅಧ್ಯಯನ,**[೪೦] ಡಾ. ಜಿ. ಲಕ್ಷ್ಮೀಪತಿ ಅವರ **ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ,**[೪೧] ಡಾ. ಮಂಟಗಿ ಅವರ **ಧನಂಜಯ ಶಿಲ್ಪಿಯವರ ಜೀವನ ಮತ್ತು ಕಲೆ: ಒಂದು ಅಧ್ಯಯನ,**[೪೨] ಡಾ. ರೆಹಮಾನ್ ಪಟೇಲ್ ಅವರ **ಕರ್ನಾಟಕದ ಬಿದರಿ ಕಲೆ- ಒಂದು ಅಧ್ಯಯನ- ವಿಶೇಷವಾಗಿ ಬೀದರ ಜಿಲ್ಲೆಯನ್ನು ಅನುಲಕ್ಷಿಸಿ,**[೪೩] ೨೦೧೦ರಲ್ಲಿ ಡಾ. ಸುನಿತಾ ಪಾಟೀಲ್ ಅವರ **ವಿಜಯ ಸಿಂಧೂರ ಅವರ ಕಲಾಕೃತಿಗಳ ಒಳನೋಟಗಳು,**[೪೪] ಡಾ. ನಿಂಗಪ್ಪ ಎಂ. ಅಂಗಡಿಯವರ **ಗಾಜಿನ ಮೇಲಿನ ಚಿತ್ರಗಳು : ಒಂದು ಅಧ್ಯಯನ,**[೪೫] ಡಾ. ಕಿಶೋರ್ ಎನ್. ದಾಟನಾಳ್ ಅವರ **ಕಲಾವಿದ ಶಂಕರ ಪಾಟೀಲರ ಜೀವನ ಮತ್ತು ಕಲಾಕೃತಿಗಳು: ಒಂದು ಅಧ್ಯಯನ,**[೪೬] ೨೦೧೧ರಲ್ಲಿ ಡಾ. ಕಾಶಿನಾಥ ಡಿ. ವಡ್ಡರ ಅವರ **ಶಾಂತಿನಿಕೇತನದ ಭಿತ್ತಿಚಿತ್ರಗಳು,**[೪೭] ಡಾ. ಸತೀಶಕುಮಾರ ವಲ್ಲ್ಯೇಪೂರೆ ಅವರ **ಜೆ. ಜೆ. ಕಲಾಶಾಲೆಯ ಪ್ರಾತಿನಿಧಿಕ ಕಲಾವಿದರು,**[೪೮] ಡಾ. ಶಂಕ್ರಪ್ಪ ಎಂ. ಕುಂದಗೋಳ ಅವರ **ಕರ್ನಾಟಕದ ಗಂಜೀಫಾ ಚಿತ್ರಕಲೆ,**[೪೯] ೨೦೧೨ರಲ್ಲಿ ಡಾ. ಭಾರತಿ ಮರವಂತಿ ಅವರ **ಕರಾವಳಿ ಕರ್ನಾಟಕದ ರಂಗೋಲಿ ಚಿತ್ರಕಲೆ,**[೫೦] ಡಾ. ಕಾಮಾಕ್ಷಿ ಸಿ. ಸೊಪ್ಪಣ ಅವರ **ಕರ್ನಾಟಕದ ಬಟ್ಟೆ ಮಾಧ್ಯಮದ ಚಿತ್ರಕಲೆ,**[೫೧] ಡಾ. ಪರಶುರಾಮ ಪಿ. ಅವರ **ಕರ್ನಾಟಕದ ಕಲಾಗ್ಯಾಲರಿಗಳು ಒಂದು ವಿಶ್ಲೇಷಣಾತ್ಮಕ ಅಧ್ಯಯನ,**[೫೨] ಡಾ. ಷಾಹಿದ್ ಪಾಷಾ ಅವರ **ಕಲಾವಿದ ಎ. ಎ. ಆಲಮೇಲಕರ ಬದುಕು ಮತ್ತು ಕಲಾಕೃತಿಗಳು.**[೫೩] ೨೦೧೩ರಲ್ಲಿ ಡಾ. ಬಿ. ಎಲ್ ಲಮಾಣಿ ಅವರ **ಚಿತ್ರಕಲಾ ಕ್ಷೇತ್ರಕ್ಕೆ ಗದಗ ಜಿಲ್ಲೆಯ ಕೊಡುಗೆ,**[೫೪]

---

೩೯. ಡಾ. ರವೀಂದ್ರ ಎಸ್. ಕಮ್ಮಾರ: ಕಲಾವಿದ ವಿ.ಬಿ.ಹಿರೇಗೌಡರ ಬದುಕು ಮತ್ತು ಕಲಾಕೃತಿಗಳು, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮.

೪೦. ಡಾ. ಪಿ.ಟಿ. ಲಕ್ಕಣ್ಣನವರ: ಕರ್ನಾಟಕದ ಚಿತ್ರಕಲಾ ಸಾಹಿತ್ಯ – ಒಂದು ವೈಚಾರಿಕ ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮.

೪೧. ಡಾ. ಲಕ್ಷ್ಮೀಪತಿ ಜಿ.: ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮.

೪೨. ಡಾ. ಮಂಟಗಿ: ಧನಂಜಯ ಶಿಲ್ಪಿಯವರ ಜೀವನ ಮತ್ತು ಕಲೆ – ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಗು.ವಿ.ವಿ., ಕಲಬುರಗಿ–೨೦೦೯.

೪೩. ಡಾ. ರೆಹಮಾನ ಪಟೇಲ: ಕರ್ನಾಟಕದ ಬಿದ್ರಿಕಲೆ–ಒಂದು ಅಧ್ಯಯನ, (ಅ.ಪ್ರ. ಪಿಎಚ್.ಡಿ. ಮ.ಪ್ರ), ಕಲಬುರ್ಗಿ ವಿಶ್ವವಿದ್ಯಾಲಯ, ಕಲಬುರಗಿ, ೨೦೦೯.

೪೪. ಡಾ. ಸುನಿತಾ ಪಾಟೀಲ: ವಿಜಯ ಸಿಂಧೂರ ಅವರ ಕಲಾಕೃತಿಗಳ ಒಳನೋಟಗಳು, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೦.

೪೫. ಡಾ. ನಿಂಗಪ್ಪ ಎಂ. ಅಂಗಡಿ: ಗಾಜೀನ ಮೇಲಿನ ಚಿತ್ರಗಳು–ಒಂದು ಅಧ್ಯಯನ, ಪಿಎಚ್.ಡಿ. ಮ.ಪ್ರ., ಕನ್ನಡ ವಿ.ವಿ. ಹಂಪಿ, ೨೦೧೦.

೪೬. ಡಾ. ಕಿಶೋರ ಎನ್. ದಾಟನಾಳ: ಕಲಾವಿದ ಶಂಕರ ಪಾಟೀಲರ ಜೀವನ ಮತ್ತು ಕಲಾಕೃತಿಗಳ ಒಂದು ಅಧ್ಯಯನ, (ಅ.ಪ್ರ.ಪಿಎಚ್.ಡಿ. ಮ.ಪ್ರ), ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೦.

೪೭. ಡಾ. ಕಾಶಿನಾಥ ಡಿ. ವಡ್ಡರ: ಶಾಂತಿನಿಕೇತನದ ಭಿತ್ತಿಚಿತ್ರಗಳು, ಪಿಎಚ್.ಡಿ. ಮಹಾಪ್ರಬಂಧ, ಗು.ವಿ.ವಿ.ಕಲಬುರಗಿ, ೨೦೧೧.

೪೮. ಡಾ. ಸತೀಶಕುಮಾರ ವಲ್ಲ್ಯೇಪೂರೆ: ಜೆ.ಜೆ. ಕಲಾಶಾಲೆಯ ಪ್ರಾತಿನಿಧಿಕ ಕಲಾವಿದರು, ಪಿಎಚ್.ಡಿ. ಮ.ಪ್ರ., ಗು.ವಿ.ವಿ. ಕಲಬುರಗಿ, ೨೦೧೧.

೪೯. ಡಾ. ಶಂಕರ ಕುಂದಗೋಳ: ಕರ್ನಾಟಕದ ಗಂಜೀಫಾ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೧

೫೦. ಡಾ. ಭಾರತಿ ಮರವಂತಿ: ಕರಾವಳಿ ಕರ್ನಾಟಕದ ರಂಗೋಲಿ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ ಮೈಸೂರು ವಿ.ವಿ., ೨೦೧೨.

೫೧. ಡಾ. ಕಾಮಾಕ್ಷಿ ಸಿ. ಸೊಪ್ಪಣ: ಕರ್ನಾಟಕ ಬಟ್ಟೆ ಮಾಧ್ಯಮದ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕಲಬುರ್ಗಿ ವಿಶ್ವವಿದ್ಯಾಲಯ, ಕಲಬುರ್ಗಿ, ೨೦೧೨

೫೨. ಡಾ. ಪರಶುರಾಮ ಪಿ.: ಕರ್ನಾಟಕದ ಕಲಾಗ್ಯಾಲರಿಗಳು – ಒಂದು ವಿಶ್ಲೇಷಣಾತ್ಮಕ ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕಲಬುರ್ಗಿ ವಿಶ್ವವಿದ್ಯಾಲಯ, ಕಲಬುರ್ಗಿ, ೨೦೧೨.

೫೩. ಡಾ. ಶಾಹೆದ್ ಪಾಷಾ: ಕಲಾವಿದ ಎ. ಎ. ಆಲಮೇಲಕರ ಬದುಕು ಮತ್ತು ಕಲಾಕೃತಿಗಳು, ಪಿಎಚ್.ಡಿ. ಮಹಾಪ್ರಬಂಧ, ಕಲಬುರ್ಗಿ ವಿಶ್ವವಿದ್ಯಾಲಯ, ಕಲಬುರ್ಗಿ, ೨೦೧೨.

ಡಾ. ರೇಣುಕಾ ಮಾರ್ಕಾಂಡೆಯವರ **ಕರ್ನಾಟಕದ ವೈಷ್ಣವಪರಂಪರೆಯ ಚಿತ್ರಕಲೆ,**[೫೫] ಡಾ. ಶಶಿಕಲಾ ನಂದನಗೌಡ ಅವರ **ಕರ್ನಾಟಕದ ಹುದುಗು ಕಲೆ,**[೫೬] ಡಾ. ಕೃಷ್ಣೇಗೌಡ ಹೆಚ್. ಎನ್ ಅವರ **ಕರ್ನಾಟಕದ ಬೌದ್ಧ ಚಿತ್ರಕಲೆ,**[೫೭] ಡಾ. ಬಿ. ಎಂ. ಪಾಟೀಲ ಅವರ **ಕರ್ನಾಟಕದ ವೀರಶೈವ ಪರಂಪರೆಯ ಚಿತ್ರಕಲೆ,**[೫೮] ಡಾ. ಕೃಷ್ಣವೇಣಿ ಅವರ **ಬಳ್ಳಾರಿ ಜಿಲ್ಲೆಯ ಚಿತ್ರಕಲೆ,**[೫೯] ಡಾ. ರವಿ ವಸಾರಾಮ ನಾಯಕ ಅವರ **ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು,**[೬೦] ಡಾ. ಮಹಾಂತೇಶ ಎಂ. ಪಲದಿನ್ನಿ ಅವರ **ಬಾದಾಮಿ ಚಾಲುಕ್ಯರ ಕಾಲದ ಶಿಲ್ಪಗಳು,**[೬೧] ಡಾ.ಪಿ.ಬಿ.ಗವಾನಿ ಅವರ **ಕರ್ನಾಟಕದ ವಸ್ತುಸಂಗ್ರಹಾಲಯಗಳಲ್ಲಿನ ಚಿತ್ರಕಲೆ,**[೬೨] ಡಾ. ಸುಚಿತ್ರಾ ಜಿ. ಲಿಂಗದಳ್ಳಿ ಅವರ **ಕಲಾವಿದ ವಿ.ಟಿ.ಕಾಳೆ ಅವರ ಬದುಕು ಮತ್ತು ಕಲಾಕೃತಿಗಳು,**[೬೩] ಡಾ. ಬಸವಯ್ಯ ಗವಿಮಠ ಅವರ **ಬಾಗಲಕೋಟ ಜಿಲ್ಲೆಯ ಚಿತ್ರಕಲೆ,**[೬೪] ಡಾ. ಸುಬ್ಬಯ್ಯ ಮಹಾದೇವಯ್ಯ ನೀಲಾ ಅವರ **ಶರಣಬಸವೇಶ್ವರರ ಕುರಿತು ರಚಿಸಿದ ವರ್ಣಚಿತ್ರಗಳು–ಒಂದು ಅಧ್ಯಯನ,**[೬೫] ೨೦೧೫ರಲ್ಲಿ ಡಾ. ಜ್ಯೋತಿ ಎಸ್. ವೈದ್ಯ ಅವರ **ಉತ್ತರಕನ್ನಡ ಜಿಲ್ಲೆಯ ಚಿತ್ರಕಲೆ,**[೬೬] ಡಾ. ಪರಮಶಿವಂ ಅವರ **ಫೋಕ್ ಪೆಯಿಂಟಿಂಗ್ಸ್ ಆಫ್ ಆಂಧ್ರಪ್ರದೇಶ,**[೬೭] ೨೦೧೬ರಲ್ಲಿ ಡಾ. ಅಶೋಕ ಎಸ್. ಶಟಕಾರ ಅವರ **ಡಾ. ಜೆ. ಎಸ್. ಖಂಡೇರಾವ್ ಬದುಕು ಮತ್ತು ಕಲಾಕೃತಿಗಳು,**[೬೮] ೨೦೧೭ರಲ್ಲಿ ಬಸವರಾಜ ಅನಗವಾಡಿ ಅವರ **ಬಸವಣ್ಣನವರ ಕುರಿತ ವರ್ಣಚಿತ್ರಕಲೆ ವಿಶ್ಲೇಷಣಾತ್ಮಕ ಅಧ್ಯಯನ,**[೬೯] ಸಂತೋಷಕುಮಾರ ಎಂ. ನಾಗರಾಳ ಅವರ **ಕರ್ನಾಟಕದ ಪ್ರಾಗೈತಿಹಾಸಿಕ ಚಿತ್ರಕಲೆ(ಉತ್ತರ**

---

೫೪. ಡಾ. ಬಿ.ಎಲ್. ಲಮಾಣಿ: ಚಿತ್ರಕಲಾ ಕ್ಷೇತ್ರಕ್ಕೆ ಗದಗ ಜಿಲ್ಲೆಯ ಕೊಡುಗೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ಹಂಪಿ, ೨೦೧೩.
೫೫. ಡಾ. ರೇಣುಕಾ ಮಾರ್ಕಂಡೆ: ಕರ್ನಾಟಕದ ವೈಷ್ಣವ ಪರಂಪರೆಯ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ಹಂಪಿ, ೨೦೧೩.
೫೬. ಡಾ. ಶಶಿಕಲಾ ನಂದನಗೌಡ: ಕರ್ನಾಟಕದ ಹುದುಗುಕಲೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ಹಂಪಿ, ೨೦೧೩.
೫೭. ಡಾ. ಕೃಷ್ಣೇಗೌಡ ಹೆಚ್.ಎನ್.: ಕರ್ನಾಟಕದ ಬೌದ್ಧಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ಹಂಪಿ, ೨೦೧೩.
೫೮. ಡಾ. ಬಿ. ಎಂ. ಪಾಟೀಲ: ಕರ್ನಾಟಕದ ವೀರಶೈವ ಪರಂಪರೆಯ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩.
೫೯. ಡಾ. ಕೃಷ್ಣವೇಣಿ: ಬಳ್ಳಾರಿ ಜಿಲ್ಲೆಯ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩.
೬೦. ಡಾ. ರವಿ ವಸಾರಾಮ ನಾಯಕ: ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩.
೬೧. ಡಾ. ಮಹಾಂತೇಶ ಎಂ. ಪಲದಿನ್ನಿ: ಬಾದಾಮಿ ಚಾಲುಕ್ಯರ ಕಾಲದ ಶಿಲ್ಪಗಳು, ಪಿಎಚ್.ಡಿ. ಮ.ಪ್ರ., ಕ.ವಿ.ವಿ.ಹಂಪಿ, ೨೦೧೩.
೬೨. ಡಾ. ಪಿ.ಬಿ. ಗವಾನಿ: ಕರ್ನಾಟಕದ ವಸ್ತುಸಂಗ್ರಹಾಲಯಗಳಲ್ಲಿನ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩.
೬೩. ಡಾ. ಸುಚಿತ್ರಾ ಜಿ. ಲಿಂಗದಳ್ಳಿ: ಕಲಾವಿದ ವಿ.ಟಿ.ಕಾಳೆ ಅವರ ಬದುಕು ಮತ್ತು ಕಲಾಕೃತಿಗಳು, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ.ಹಂಪಿ, ೨೦೧೩.
೬೪. ಡಾ. ಬಸವಯ್ಯ ಗವಿಮಠ: ಬಾಗಲಕೋಟ ಜಿಲ್ಲೆಯ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ.ಹಂಪಿ, ೨೦೧೩.
೬೫. ಡಾ. ಸುಬ್ಬಯ್ಯ ಮಹಾದೇವಯ್ಯ ನೀಲಾ: ಶರಣಬಸವೇಶ್ವರರ ಕುರಿತು ರಚಿಸಿದ ವರ್ಣಚಿತ್ರಗಳು ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಗು.ವಿ.ವಿ. ಗುಲ್ಬರ್ಗಾ, ೨೦೧೩.
೬೬. ಡಾ. ಜ್ಯೋತಿ ಎಸ್. ವೈದ್ಯ: ಉತ್ತರಕನ್ನಡ ಜಿಲ್ಲೆಯ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಗು.ವಿ.ವಿ.ಗುಲ್ಬರ್ಗಾ, ೨೦೧೫.
೬೭. ಡಾ. ಪರಮಶಿವಂ: ಫೋಕ್ ಪೆಯಿಂಟಿಂಗ್ಸ್ ಆಫ್ ಆಂಧ್ರಪ್ರದೇಶ, ಪಿಎಚ್.ಡಿ. ಮಹಾಪ್ರಬಂಧ, ಗು.ವಿ.ವಿ.ಗುಲ್ಬರ್ಗಾ, ೨೦೧೫.
೬೮. ಡಾ. ಅಶೋಕ ಶಟಕಾರ: ಡಾ. ಜೆ. ಎಸ್. ಖಂಡೇರಾವ್ ಬದುಕು ಮತ್ತು ಕಲಾಕೃತಿಗಳು, ಪಿಎಚ್.ಡಿ. ಮಹಾಪ್ರಬಂಧ, ಗು.ವಿ.ವಿ.ಗುಲ್ಬರ್ಗಾ, ೨೦೧೬.
೬೯. ಡಾ. ಬಸವರಾಜ ಅನಗವಾಡಿ: ಬಸವಣ್ಣನವರ ಕುರಿತ ವರ್ಣಚಿತ್ರಕಲೆ ವಿಶ್ಲೇಷಣಾತ್ಮಕ ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಹಂಪಿ, ೨೦೧೭.

**ಕರ್ನಾಟಕವನ್ನು ಅನುಲಕ್ಷಿಸಿ),**[೨೦] ಡಾ. ಜೈರಾಜ ಅವರ **ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ,**[೨೧] ಡಾ. ರಾಜೀವ ಎಂ.ವೈ. ಅವರ **ಕರ್ನಾಟಕ ಜೈನ ಚಿತ್ರಕಲಾ ಪರಂಪರೆ,**[೨೨] ಡಾ. ಮಲ್ಲಿಕಾರ್ಜುನ ಕೆ.ಜಿ. ಅವರ **ವಿಜಯನಗರ ಚಿತ್ರಕಲಾ ಪರಂಪರೆ,**[೨೩] ಡಾ. ವೈಶಾಲಿಬಾಯಿ ಕಾಂಬಳೆ ಅವರ **ಸಿ ಚಂದ್ರಶೇಖರ ಕಲಾಕೃತಿಗಳ ಅಧ್ಯಯನ,**[೨೪] ಡಾ. ಡಿ.ಎಸ್. ಶ್ವೇತ ಅವರ **ಚಿ.ಸು. ಕೃಷ್ಣಸೆಟ್ಟಿಯವರ ದೃಶ್ಯಕಲಾ ಸಾಹಿತ್ಯ ಮತ್ತು ಕಲಾಕೃತಿಗಳು,**[೨೫] ಡಾ. ಡಿ. ಆರ್. ಸುರೇಂದ್ರನಾಥ ಅವರ **ದಕ್ಷಿಣ ಕರ್ನಾಟಕದ ಭಿತ್ತಿಚಿತ್ರಕಲೆ,**[೨೬] ೨೦೧೮ರಲ್ಲಿ ಡಾ. ಸಿ. ಡಿ. ಜಟ್ಟಣ್ಣನವರ **ಕರ್ನಾಟಕದ ಚಿತ್ರಕಲಾ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳು**[೨೭] ಇವು ದೃಶ್ಯಕಲೆಗಳ ಕುರಿತು ಬಂದ ಪಿಎಚ್.ಡಿ. ಮಹಾಪ್ರಬಂಧಗಳಾಗಿವೆ. ಅನೇಕ ಜನ ವಿದ್ಯಾರ್ಥಿಗಳು ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಈಗ ದೃಶ್ಯಕಲಾ ಕ್ಷೇತ್ರದಲ್ಲಿ ಸಂಶೋಧನಾಧ್ಯಯನ ಕೈಗೊಂಡಿದ್ದಾರೆ. ಇವು ದೃಶ್ಯಕಲೆಗಳ ಕುರಿತು ಬಂದ ಪಿಎಚ್.ಡಿ. ಮಹಾಪ್ರಬಂಧಗಳಾಗಿವೆ. ಅನೇಕ ಜನ ವಿದ್ಯಾರ್ಥಿಗಳು ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಈಗ ದೃಶ್ಯಕಲಾ ಕ್ಷೇತ್ರದಲ್ಲಿ ಸಂಶೋಧನಾಧ್ಯಯನ ಕೈಗೊಂಡಿದ್ದಾರೆ.

### ೨. ಡಿ.ಲಿಟ್. ಮಹಾಪ್ರಬಂಧಗಳು

ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದಲ್ಲಿ ಮೊದಲಬಾರಿಗೆ ದೃಶ್ಯಕಲೆಗಳಿಗೆ ಸಂಬಂಧಿಸಿದಂತೆ ಡಿ.ಲಿಟ್. ಸಂಶೋಧನಾ ಅಧ್ಯಯನಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದು, ಈ ಹಿನ್ನೆಲೆಯಲ್ಲಿ ಹೊರಬಂದ ಡಿ.ಲಿಟ್. ಪ್ರಬಂಧಗಳು ಹೀಗಿವೆ. ೨೦೦೧ರಲ್ಲಿ ದೇವದಾಸ ಕಳಸದ ಇವರ **ಕರ್ನಾಟಕದ ರಂಗಭೂಮಿ, ರಂಗಸಜ್ಜಿಕೆ ಮತ್ತು ಪ್ರಸಾಧನ ಕಲೆ,**[೨೮] ೨೦೦೫ರಲ್ಲಿ ಬಂದ ಆನಂದ ಪೂಜಾರರ **ಕರಾವಳಿಯ ಕಾವಿ ಚಿತ್ರಕಲೆ,**[೨೯] ಡಿ.ಎ. ಉಪಾಧ್ಯ ಅವರ **ವಾಸ್ತು-ಶಿಲ್ಪ-ಚಿತ್ರಕಲೆಯ ಹಿನ್ನೆಲೆಯಲ್ಲಿ ದೃಶ್ಯಕಲೆಗಳ ತೌಲನಿಕ ಅಧ್ಯಯನ,**[೩೦] ೨೦೧೦ರಲ್ಲಿ ಎಂ.ಎಸ್. ಮೂರ್ತಿ ಅವರ **ಮಕ್ಕಳ ಮನಸ್ಸಿನ ಚಿತ್ರಗಳು,**[೩೧] ೨೦೧೩ರಲ್ಲಿ ಜಿ. ಎಸ್. ಭೂಸಗೊಂಡ ಅವರ **ಚಿತ್ರಕಲಾವಿದ**

---

೨೦. ಡಾ. ಸಂತೋಷಕುಮಾರ ಎಂ. ನಾಗರಾಳ: ಕರ್ನಾಟಕದ ಪ್ರಾಗೈತಿಹಾಸಿಕ ಚಿತ್ರಕಲೆ(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ), ಪಿಎಚ್.ಡಿ. ಮಹಾಪ್ರಬಂಧ, ಗು.ವಿ.ವಿ.ಗುಲ್ಬರ್ಗಾ, ೨೦೧೭.

೨೧. ಡಾ. ಜೈರಾಜ: ಕನ್ನಡ ಗ್ರಂಥಗಳ ರಕ್ಷಾಪುಟ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಹಂಪಿ, ೨೦೧೭

೨೨. ಡಾ. ರಾಜೀವ ಎಂ.ವೈ: ಕರ್ನಾಟಕ ಜೈನ ಚಿತ್ರಕಲಾ ಪರಂಪರೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಹಂಪಿ, ೨೦೧೭.

೨೩. ಡಾ. ಮಲ್ಲಿಕಾರ್ಜುನ ಕೆ.ಜಿ.: ವಿಜಯನಗರ ಚಿತ್ರಕಲಾ ಪರಂಪರೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಹಂಪಿ, ೨೦೧೭.

೨೪. ಡಾ. ವೈಶಾಲಿಬಾಯಿ ಕಾಂಬಳೆ: ಸಿ ಚಂದ್ರಶೇಖರ ಕಲಾಕೃತಿಗಳ ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಹಂಪಿ, ೨೦೧೭.

೨೫. ಡಾ. ಡಿ. ಎಸ್. ಶ್ವೇತ: ಚಿ. ಸು. ಕೃಷ್ಣಸೆಟ್ಟಿಯವರ ದೃಶ್ಯಕಲಾ ಸಾಹಿತ್ಯ ಮತ್ತು ಕಲಾಕೃತಿಗಳು, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಹಂಪಿ, ೨೦೧೭

೨೬. ಡಾ. ಡಿ. ಆರ್. ಸುರೇಂದ್ರನಾಥ: ದಕ್ಷಿಣ ಕರ್ನಾಟಕದ ಭಿತ್ತಿಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಹಂಪಿ, ೨೦೧೭.

೨೭. ಸಿ. ಡಿ. ಜಟ್ಟಣ್ಣನವರ: ಕರ್ನಾಟಕದ ಚಿತ್ರಕಲಾ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳು, ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಧಾರವಾಡ, ೨೦೧೮.

೨೮. ಡಾ. ದೇವದಾಸ ಕಳಸದ: ಕರ್ನಾಟಕದ ರಂಗಭೂಮಿ, ರಂಗಸಜ್ಜಿಕೆ ಮತ್ತು ಪ್ರಸಾಧನ ಕಲೆ, ಡಿ.ಲಿಟ್. ಮಹಾಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೧.

೨೯. ಡಾ. ಆನಂದ ಪೂಜಾರ: ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ, ಡಿ.ಲಿಟ್. ಮಹಾಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೫.

೩೦. ಡಾ. ಡಿ.ವಿ. ಉಪಾಧ್ಯ: ವಾಸ್ತು-ಶಿಲ್ಪ-ಚಿತ್ರಕಲೆಯ ಹಿನ್ನೆಲೆಯಲ್ಲಿ ದೃಶ್ಯಕಲೆಗಳ ತೌಲನಿಕ ಅಧ್ಯಯನ, ಡಿ.ಲಿಟ್. ಮಹಾಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೫.

೩೧. ಡಾ. ಎಂ.ಎಸ್. ಮೂರ್ತಿ: ಮಕ್ಕಳ ಮನಸ್ಸಿನ ಚಿತ್ರಗಳು, ಡಿ.ಲಿಟ್ ಮಹಾಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೦.

**ಚಂದ್ರವರ್ಮ ಬಿ. ಆರ್. ಕೋಟ್ಯಾಳಕರ – ಒಂದು ಅಧ್ಯಯನ,**[೮೨] ಹೀಗೆ ಹಲವು ಡಿ.ಲಿಟ್ ಮಹಾಪ್ರಬಂಧಗಳು ಹೊರಬಂದಿವೆ. ಈ ಡಿ.ಲಿಟ್. ಅಧ್ಯಯನಕ್ಕೆ ಯಾವುದೇ ರೀತಿಯ ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿಗಳ ಅವಶ್ಯಕತೆ ಇರುವುದಿಲ್ಲ. ಆಯಾ ಕ್ಷೇತ್ರದಲ್ಲಿ ಅಧ್ಯಯನ ಮಾಡುವವರ ತಜ್ಞತೆಯನ್ನೇ ಮುಖ್ಯವಾಗಿ ಪರಿಗಣಿಸಿ, ಕನ್ನಡ ವಿಶ್ವವಿದ್ಯಾಲಯವು ತಜ್ಞರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಇಂತಹ ಅಧ್ಯಯನಕ್ಕೆ ಅವಕಾಶವನ್ನು ನೀಡುತ್ತಾ ಬಂದಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಮಾತ್ರ ಇಂತಹ ಡಿ.ಲಿಟ್. ಸಂಶೋಧನ ಅಧ್ಯಯನಕ್ಕೆ ಅವಕಾಶವಿರುವುದು ಗಮನಾರ್ಹ ಅಂಶವಾಗಿದೆ.

### ೩. ಎಂ.ಫಿಲ್. ಅಧ್ಯಯನಗಳು

ಕರ್ನಾಟಕದಲ್ಲಿ ಮೊದಲ ಬಾರಿಗೆ ಎಂ.ಫಿಲ್. ಸಂಶೋಧನಾ ಅಧ್ಯಯನವು ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಪ್ರಾರಂಭಗೊಂಡಿದ್ದು ಗಮನಾರ್ಹ ಅಂಶವಾಗಿದೆ. ಈಗ ಕನ್ನಡ ವಿಶ್ವವಿದ್ಯಾಲಯದಲ್ಲಿ ಮಾತ್ರ ಎಂ.ಫಿಲ್. ಸಂಶೋಧನಾ ಅಧ್ಯಯನ ನಡೆಯುತ್ತಿದೆ. ಹೀಗೆ ನಡೆದು ಬಂದ ಎಂ.ಫಿಲ್. ಸಂಶೋಧನಾ ಅಧ್ಯಯನಗಳು ಹೀಗಿವೆ. ೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರ **ಚಿತ್ರಕಲಾವಿದ ಜೆ.ಎಸ್.ಖಂಡೇರಾವ: ಒಂದು ಅಧ್ಯಯನ,**[೮೩] ೨೦೦೩ರಲ್ಲಿ ಎ.ಎಸ್. ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು,**[೮೪] ೨೦೦೫ರಲ್ಲಿ ಸಿ.ಡಿ. ಜಟ್ಟೆಣ್ಣವರ ಅವರ **ಎಂ.ವಿ. ಮಿಣಜಗಿಯವರ ಜೀವನ ಮತ್ತು ಕಲಾಬದುಕು,**[೮೫] ಶಂಕರ ಕುಂದಗೋಳರ **ಡಿ.ವಿ. ಹಾಲಭಾವಿಯವರ ಜೀವನ ಮತ್ತು ಕಲಾಬದುಕು,**[೮೬] ೨೦೦೬ರಲ್ಲಿ ಸುಚಿತ್ರಾ ಲಿಂಗದಳ್ಳಿಯವರ **ವಿಜಯನಗರದ ಭಿತ್ತಿ ಚಿತ್ರಕಲೆ,**[೮೭] ರಾಜಕುಮಾರ ಎಸ್. ಕಾಳೆ ಅವರ **ಔಂಧ್ ಗ್ಯಾಲರಿ**[೮೮] ಕುರಿತು ೨೦೦೭ರಲ್ಲಿ ಜಿತೇಂದ್ರ ಜಿ. ಕೋತಳಿಕರ ಅವರ **ಕಲಾವಿದ ವಿದ್ಯಾಭೂಷಣರ ಕಲಾಕೃತಿಗಳು,**[೮೯] ಬಿ.ಎಂ. ಪಾಟೀಲರ **ನಿಪ್ಪಾಣಿ ವಾಡೆಯ ಭಿತ್ತಿ ಚಿತ್ರಗಳು,**[೯೦] ಉಮೇಶ ಎ.ಎಸ್. **ಕರ್ನಾಟಕ ಜೈನ ಚಿತ್ರಕಲೆ,**[೯೧] ರವಿ ವಸಾರಾಮ ನಾಯಕರ **ಕಿನ್ನಾಳ ಕಲೆ,**[೯೨] ಶಶಿಕಾಂತ ಬಸರಿಕಟ್ಟಿಯವರ **ಕಲಘಟಗಿಯ ಚಿತ್ರಕಲೆ,**[೯೩] ಶೈಲಾ ಬರಡೋಲರ **ಸಂತ ಕಲಾವಿದ ಶುಭಾರಾಯರ**

---

೮೨. ಡಾ. ಜಿ. ಎಸ್. ಭೂಸಗೊಂಡ: ಚಿತ್ರಕಲಾವಿದ ಚಂದ್ರವರ್ಮ ಬಿ. ಆರ್ ಕೋಟ್ಯಾಳಕರ: ಒಂದು ಅಧ್ಯಯನ, ಡಿ.ಲಿಟ್. ಮಹಾಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೦.

೮೩. ಮಲ್ಲಿಕಾರ್ಜುನ ಬಾಗೋಡಿ: ಚಿತ್ರಕಲಾವಿದ ಜೆ.ಎಸ್. ಖಂಡೇರಾವ್: ಒಂದು ಅಧ್ಯಯನ, ಎಂ.ಫಿಲ್ ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೨.

೮೪. ಎ.ಎಸ್. ವಿಶ್ವನಾಥ : ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು, ಎಂ.ಫಿಲ್. ಪ್ರ. ಕನ್ನಡ ವಿ.ವಿ. ಹಂಪಿ, ೨೦೦೩.

೮೫. ಸಿ.ಡಿ. ಜಟ್ಟೆಣ್ಣವರ: ಎಂ.ವಿ.ಮಿಣಜಗಿ ಜೀವನ ಮತ್ತು ಕಲಾಬದುಕು, ಎಂ.ಫಿಲ್ ಪ್ರಬಂಧ, ಕನ್ನಡ ವಿ.ವಿ.ಹಂಪಿ, ೨೦೦೫.

೮೬. ಶಂಕರ ಕುಂದಗೋಳ: ಡಿ.ವಿ. ಹಾಲಭಾವಿಯವರ ಜೀವನ ಮತ್ತು ಕಲಾಬದುಕು, ಎಂ.ಫಿಲ್ ಪ್ರಬಂಧ, ಕ.ವಿ.ವಿ.ಹಂಪಿ. ೨೦೦೬

೮೭. ಸುಚಿತ್ರಾ ಲಿಂಗದಳ್ಳಿ: ವಿಜಯನಗರದ ಭಿತ್ತಿಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೬.

೮೮. ರಾಜಕುಮಾರ ಎಸ್. ಕಾಳೆ: ಔಂದ ಗ್ಯಾಲರಿ ಎಂ.ಫಿಲ್. ಪ್ರಬಂಧ, ಗು.ವಿ.ವಿ., ೨೦೦೭.

೮೯. ಜಿತೇಂದ್ರ ಜಿ. ಕೋತಳಿಕರ: ಕಲಾವಿದ ವಿದ್ಯಾಭೂಷಣರ ಕಲಾಕೃತಿಗಳು. ಎಂ.ಫಿಲ್. ಪ್ರಬಂಧ, ಗು.ವಿ.ವಿ., ೨೦೦೭.

೯೦. ಬಿ.ಎಂ. ಪಾಟೀಲ: ನಿಪ್ಪಾಣಿ ವಾಡೆಯ ಭಿತ್ತಿ ಚಿತ್ರಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೭.

೯೧. ಉಮೇಶ ಎ.ಎಸ್.: ಕರ್ನಾಟಕ ಜೈನ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೭

೯೨. ರವಿ ನಾಯಕ: ಕಿನ್ನಾಳ ಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೭

೯೩. ಶಶಿಕಾಂತ ಬಸರಿಕಟ್ಟಿ: ಕಲಘಟಗಿಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೭

**ಜೀವನ ಮತ್ತು ಕಲಾಕೃತಿಗಳು,**[೯೪] ಎಂಬ ಪ್ರಬಂಧಗಳು ಹೊರಬಂದಿವೆ. ೨೦೦೮ರಲ್ಲಿ ಕೃಷ್ಣವೇಣಿ **ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ,**[೯೫] ಯೋಗೀಶ ಹೆಚ್. **ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ,**[೯೬] ಮಹಾಕೂಟೇಶ್ವರಗೌಡ ಪಾಟೀಲ **ಬೆಳಗಾವಿ ಜಿಲ್ಲೆಯ ಚಿತ್ರಕಲೆ,**[೯೭] ಸುರೇಶ ಬಡಿಗೇರರ **ಕನ್ನಡ ವಿಶ್ವವಿದ್ಯಾಲಯದ ಸಂಗ್ರಹದ ಹಸ್ತಪ್ರತಿಗಳ ಚಿತ್ರಕಲೆ,**[೯೮] ಸಂತೋಷಕುಮಾರ ಕುಲಕರ್ಣಿ ಅವರ **ದಾವಣಗೆರೆ ಜಿಲ್ಲೆಯ ಚಿತ್ರಕಲೆ,**[೯೯] ಜಯರಾಜ ಚಿಕ್ಕಪಾಟೀಲರ **ಕರ್ನಾಟಕದ ಜಾಹೀರಾತುಗಳಲ್ಲಿ ಸಾಂಸ್ಕೃತಿಕ ನೆಲೆಗಳು,**[೧೦೦] ಮಹೇಶ ಉಮತಾರ ಅವರ **ಬಿ.ಪಿ. ಬಾಯಿರಿ ಕಲೆ ಮತ್ತು ಕಲಾ ಸಾಹಿತ್ಯ,**[೧೦೧] ಗಿರಿಜಾ ಬಿರಾದಾರರ **ವಿಜಾಪೂರ ಜಿಲ್ಲೆಯ ಚಿತ್ರಕಲೆ,**[೧೦೨] ಬಸಯ್ಯ ಗವಿಮಠ ಅವರ **ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ,**[೧೦೩] ಕೃಷ್ಣೇಗೌಡ ಹೆಚ್.ಎನ್. ಅವರ **ಕರ್ನಾಟಕದಲ್ಲಿ ಟಿಬೇಟಿಯನ್ನರ ಚಿತ್ರಕಲೆ,**[೧೦೪] ಮಹಾಂತೇಶ ಪಲದಿನ್ನಿ ಅವರ **ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು,**[೧೦೫] ಮತ್ತು ೨೦೦೯ರಲ್ಲಿ ಕಾಂತರಾಜ ಅವರ **ಸಿಬಿ ದೇವಾಲಯದ ಭಿತ್ತಿ ಚಿತ್ರಕಲೆ,**[೧೦೬] ರಂಗಸ್ವಾಮಿ ಅವರ **ಚಿತ್ರಕಲಾವಿದ ರುಮಾಲೆ ಚನ್ನಬಸಯ್ಯನವರ ಬದುಕು ಮತ್ತು ಕಲೆ,**[೧೦೭] ಶ್ಯಾಮ ತಾ. ಜಮಾದಾರ ಅವರ **ಕಲಾವಿದ ಸಿ.ಎನ್. ಪಾಟೀಲರ ಬದುಕು ಮತ್ತು ಕಲಾಕೃತಿಗಳು,**[೧೦೮] ೨೦೧೦ರಲ್ಲಿ ಭಾನುಮತಿ ಕೆ.ಎಲ್. ಅವರ **ಚಿತ್ರಕಲಾವಿದ ಎಂ.ಜಿ. ವಾಚೇದಮಠ ಬದುಕು ಮತ್ತು ಕಲಾಕೃತಿಗಳು,**[೧೦೯] ದಿನೇಶ ಬಿ. ಅವರ **ಚನ್ನಪಟ್ಟಣದ ಚಿತ್ತಾರ ಗೊಂಬೆಗಳು,**[೧೧೦] ವಾದಿರಾಜ ಎ. ಅವರ **ಕಲಾವಿದ ಎಲ್. ಶಿವಲಿಂಗಪ್ಪನವರ ಜೀವನ ಕಲಾಕೃತಿಗಳು,**[೧೧೧] ಚಿಂತಾಮಣಿ ಅವರ **ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ.**[೧೧೨] ೨೦೧೨ರಲ್ಲಿ ಮಲ್ಲಿಕಾರ್ಜುನ ಕೆ.ಜಿ. ಅವರ **ಕೆ.ಕೆ. ಹೆಬ್ಬಾರರ ಕಲೆ ಮತ್ತು**

---

೯೪. ಶೈಲಾ ಬರಡೋಲ: ಸಂತ ಕಲಾವಿದ ಶುಭಾರಾಯರ ಜೀವನ ಮತ್ತು ಕಲಾಕೃತಿಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೭.

೯೫. ಕೃಷ್ಣವೇಣಿ: ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೯೬. ಯೋಗೀಶ ಹೆಚ್.: ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೯೭. ಮಹಾಕೂಟೇಶ್ವರಗೌಡ ಪಾಟೀಲ: ಬೆಳಗಾವಿ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೯೮. ಸುರೇಶ ಬಡಿಗೇರ: ಕನ್ನಡ ವಿ.ವಿ. ಸಂಗ್ರಹದ ಹಸ್ತಪ್ರತಿಗಳ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೯೯. ಸಂತೋಷಕುಮಾರ ಕುಲಕರ್ಣಿ: ದಾವಣಗೆರೆ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೧೦೦. ಜಯರಾಜ ಚಿಕ್ಕಪಾಟೀಲ: ಕರ್ನಾಟಕದ ಜಾಹೀರಾತುಗಳಲ್ಲಿ ಸಾಂಸ್ಕೃತಿಕ ನೆಲೆಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೧೦೧. ಮಹೇಶ ಉಮತಾರ: ಬಿ.ಪಿ. ಬಾಯಿರಿ: ಕಲೆ ಮತ್ತು ಕಲಾಸಾಹಿತ್ಯ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೧೦೨. ಗಿರಿಜಾ ಬಿರಾದಾರ: ವಿಜಾಪೂರ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೧೦೩. ಬಸಯ್ಯ ಗವಿಮಠ: ಬಾಗಲಕೋಟ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೧೦೪. ಕೃಷ್ಣೇಗೌಡ ಹೆಚ್.ಎನ್.: ಕರ್ನಾಟಕದಲ್ಲಿ ಟಿಬೇಟಿಯನ್ನರ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೧೦೫. ಮಹಾಂತೇಶ ಪಲದಿನ್ನಿ: ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೮.

೧೦೬. ಕಾಂತರಾಜ: ಸಿಬಿ ದೇವಾಲಯದ ಭಿತ್ತಿ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೯.

೧೦೭. ರಂಗಸ್ವಾಮಿ: ಚಿತ್ರಕಲಾವಿದ ರುಮಾಲೆ ಚನ್ನಬಸಯ್ಯನವರ ಬದುಕು ಮತ್ತು ಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೯.

೧೦೮. ಶ್ಯಾಮ ತಾ. ಜಮಾದಾರ: ಕಲಾವಿದ ಸಿ.ಎನ್. ಪಾಟೀಲರ ಬದುಕು ಮತ್ತು ಕಲಾಕೃತಿಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೦೯.

೧೦೯. ಭಾನುಮತಿ ಕೆ.ಎಲ್.: ಚಿತ್ರಕಲಾವಿದ ಎಂ.ಜಿ. ವಾಚೇದಮಠ : ಬದುಕು ಮತ್ತು ಕಲಾಕೃತಿಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೦.

೧೧೦. ದಿನೇಶ ಬಿ.: ಚನ್ನಪಟ್ಟಣದ ಚಿತ್ತಾರ ಗೊಂಬೆಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೦.

೧೧೧. ವಾದಿರಾಜ ಎ.: ಕಲಾವಿದ ಎಲ್. ಶಿವಲಿಂಗಪ್ಪನವರ ಜೀವನ ಕಲಾಕೃತಿಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೦.

೧೧೨. ರೇವಣಪ್ಪ ಚಿಂತಾಮಣಿ: ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೦.

**ಬದುಕು,**[೧೧೩] ರಾಜೀವ್ ಎಂ.ವೈ. ಅವರ **ಕೆ. ವೆಂಕಟಪ್ಪನವರ ಜೀವನ ಮತ್ತು ಕಲಾಕೃತಿಗಳು,**[೧೧೪] ರಾಘವೇಂದ್ರ ಅವರ **ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ,**[೧೧೫] ವೈಶಾಲಿ ಕೆ. ಕಾಂಬಳೆ ಅವರ **ಬೀದರ ಜಿಲ್ಲೆಯ ಚಿತ್ರಕಲೆ,**[೧೧೬] ಶಶಿಕಲಾ ಜಿ.ವಿ. ಅವರ **ಕರ್ನಾಟಕದ ವ್ಯಂಗ್ಯ ಚಿತ್ರಕಲೆ,**[೧೧೭] ಎನ್.ಜಿ. ಅಂಬರೀಶ್ ಅವರ **ಕರ್ನಾಟಕದ ಆಧುನಿಕ ಭಿತ್ತಿಚಿತ್ರ / ಶಿಲ್ಪಕಲೆ,**[೧೧೮] ಸುರೇಂದ್ರನಾಥ ಡಿ.ಆರ್. ಅವರ **ಕರಾವಳಿ ಕರ್ನಾಕಟದ ಕ್ರೈಸ್ತಚಿತ್ರಕಲೆ,**[೧೧೯] ಶ್ವೇತಾ ಡಿ.ಎಸ್. ಅವರ **ರಾಜ ರವಿವರ್ಮನ ಕಲಾಕೃತಿಗಳಲ್ಲಿನ ಸ್ತ್ರೀ ಚಿತ್ರಣ,**[೧೨೦] ಮಹಾದೇವಪ್ಪ ಸಣತಂಗಿಯವರ **ಕರ್ನಾಟಕದ ದೃಶ್ಯಕಲೆಯಲ್ಲಿ ಗಣೇಶ ಚಿತ್ರಣ.**[೧೨೧] ೨೦೧೩ರಲ್ಲಿ ದಯಾನಂದ ಕೋಳಿ ಅವರ **ಕೊಪ್ಪಳ ಜಿಲ್ಲೆಯ ಚಿತ್ರಕಲೆ,**[೧೨೨] ಸವಿತಾ ಬಡಿಗೇರ ಅವರ **ಧಾರವಾಡ ಜಿಲ್ಲೆಯ ಚಿತ್ರಕಲೆ,**[೧೨೩] ಹೇಮಂತಕುಮಾರ ಅವರ **ಮೈಸೂರು ಜಿಲ್ಲೆಯ ಚಿತ್ರಕಲೆ,**[೧೨೪] ಬಸವರಾಜ ಕಲೆಗಾರ ಅವರ **ಯಾದಗಿರಿ ಜಿಲ್ಲೆಯ ಚಿತ್ರಕಲೆ,**[೧೨೫] ೨೦೧೪ರಲ್ಲಿ ಡಿ.ಕೆ. ಕೀರ್ತಿವರ್ಮ ಅವರ **ಕೆ ರಾಮಚಂದ್ರನ್‌ರವರ ಕಲೆ ಮತ್ತು ಬದುಕು,**[೧೨೬] ವಿಶ್ವನಾಥ್ ಹೆಚ್. ಹಂಡಿ ಅವರ **ಕೆ. ವಿ. ಸುಬ್ರಹ್ಮಣ್ಯ ಅವರ ದೃಶ್ಯಕಲಾ ಸಾಹಿತ್ಯ,**[೧೨೭] ಗಾಯತ್ರಿ ಮಂತ ಅವರ **ಪಿ. ಎಸ್. ಕಡೇಮನಿಯವರ ಕಲೆ ಮತ್ತು ಬದುಕು,**[೧೨೮] ಎಲ್. ಟಿ. ಮಂಜುಳಾಬಾಯಿ ಅವರ **ಕೆ. ಜ್ಞಾನೇಶ್ವರ್‌ರವರ ಕಲೆ ಮತ್ತು ಬದುಕು,**[೧೨೯] ಸಾವಿತ್ರಿ ಟೆಂಕಲಿ ಅವರ **ಎಂ. ಆರ್. ಬಾಳೇಕಾಯಿಯವರ ಕಲೆ ಮತ್ತು ಬದುಕು,**[೧೩೦] ಖಾದರ್‌ಶಾಬ್ ಇ. ಗುಳೇದಗುಡ್ಡ ಅವರ **ಬಹುಮುಖ ಕಲಾಸಾಧಕ ವಿ.ಜಿ. ಅಂದಾನಿ,**[೧೩೧] ಮಾಯಾದೇವಿ ಮಮ್ಮಾ

---

೧೧೩. ಮಲ್ಲಿಕಾರ್ಜುನ ಕೆ.ಜಿ.: ಕೆ.ಕೆ. ಹೆಬ್ಬಾರರ ಕಲೆ ಮತ್ತು ಬದುಕು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೨.

೧೧೪. ರಾಜೀವ ಎಂ.ವೈ.: ಕೆ. ವೆಂಕಟಪ್ಪನವರ ಜೀವನ ಮತ್ತು ಕಲಾಕೃತಿಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೨.

೧೧೫. ರಾಘವೇಂದ್ರ: ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೨.

೧೧೬. ವೈಶಾಲಿ ಕೆ. ಕಾಂಬಳೆ: ಬೀದರ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೨.

೧೧೭. ಶಶಿಕಲಾ ಜಿ.ವಿ.: ಕರ್ನಾಟಕದ ವ್ಯಂಗ್ಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೨.

೧೧೮. ಎನ್.ಜಿ. ಅಂಬರೀಶ್: ಕರ್ನಾಟಕದ ಅಧುನಿಕ ಭಿತ್ತಿಚಿತ್ರ/ಶಿಲ್ಪಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೨.

೧೧೯. ಸುರೇಂದ್ರನಾಥ ಡಿ.ಆರ್.: ಕರಾವಳಿ ಕರ್ನಾಟಕದ ಕ್ರೈಸ್ತಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೨.

೧೨೦. ಶ್ವೇತಾ ಡಿ.ಎಸ್.: ರಾಜಾ ರವಿವರ್ಮನ ಕಲಾಕೃತಿಗಳಲ್ಲಿನ ಸ್ತ್ರೀ ಚಿತ್ರಣ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೨.

೧೨೧. ಮಹಾದೇವಪ್ಪಸಣತಂಗಿ: ಕರ್ನಾಟಕದ ದೃಶ್ಯಕಲೆಯಲ್ಲಿ ಗಣೇಶ ಚಿತ್ರಣ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೨.

೧೨೨. ದಯಾನಂದ ಕೋಳಿ: ಕೊಪ್ಪಳ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೩.

೧೨೩. ಸವಿತಾ ಬಡಿಗೇರ: ಧಾರವಾಡ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೩.

೧೨೪. ಹೇಮಂತಕುಮಾರ: ಮೈಸೂರು ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೩.

೧೨೫. ಬಸವರಾಜ ಕಲೆಗಾರ: ಯಾದಗಿರಿ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೩.

೧೨೬. ಡಿ. ಕೆ. ಕೀರ್ತಿವರ್ಮ: ಕೆ. ರಾಮಚಂದ್ರನ್ ಅವರ ಕಲೆ ಮತ್ತು ಬದುಕು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೪.

೧೨೭. ವಿಶ್ವನಾಥ ಹೆಚ್. ಹಂಡಿ: ಸುಬ್ರಹ್ಮಣ್ಯಂ ಅವರ ದೃಶ್ಯಕಲಾ ಸಾಹಿತ್ಯ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೪.

೧೨೮. ಗಾಯತ್ರಿ ಮಂತ: ಪಿ. ಎಸ್. ಕಡೇಮನಿ ಅವರ ಕಲೆ ಮತ್ತು ಬದುಕು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೪.

೧೨೯. ಎಲ್. ಟಿ. ಮಂಜುಳಾಬಾಯಿ: ಕೆ. ಜ್ಞಾನೇಶ್ವರ ಅವರ ಕಲೆ ಮತ್ತು ಬದುಕು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೪.

೧೩೦. ಸಾವಿತ್ರಿ ಟೆಂಕಲಿ: ಎಂ. ಆರ್. ಬಾಳೇಕಾಯಿ ಅವರ ಕಲೆ ಮತ್ತು ಬದುಕು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೪.

೧೩೧. ಖಾದರ್‌ಶಾಬ್ ಇ. ಗುಳೇದಗುಡ್ಡ: ಬಹುಮುಖ ಕಲಾಸಾಧಕ ವಿ. ಜಿ. ಅಂದಾನಿ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೪.

ಅವರ ಎ. ಎಸ್. ಪಾಟೀಲ್‌ರವರ ಕಲೆ ಮತ್ತು ಬದುಕು,[೧೩೨] ರಾಜಪ್ಪ ಹೆಚ್. ಅವರ ಬಾಗೂರು ಮಾರ್ಕಂಡೇಯ ಅವರ ಚಿತ್ರಕಲೆ ಮತ್ತು ಸಾಹಿತ್ಯ,[೧೩೩] ೨೦೧೫ರಲ್ಲಿ ಅಶೋಕ ಚಂ. ನಡುವಿನಮನಿ ಅವರ ಹೈದ್ರಬಾದ ಕರ್ನಾಟಕದ ಭಾವಚಿತ್ರಕಲಾವಿದರ ಒಂದು ಅಧ್ಯಯನ,[೧೩೪] ಆಸೆಂಗಪ್ಪ ರಾ. ಗುಳೇದಗುಡ್ಡ ಅವರ ದೃಶ್ಯಕಲಾ ಕ್ಷೇತ್ರಕ್ಕೆ ಅಕ್ಕಿಮನೆತನದ ಕೊಡುಗೆ,[೧೩೫] ನಟರಾಜ ಶಿಲ್ಪಿ ಅವರ ಕನಗನಹಳ್ಳಿಯ ಸ್ತೂಪ ಶಿಲ್ಪಗಳು,[೧೩೬] ಬಸವರಾಜ ರೊಳ್ಳಿ ಅವರ ವಿಜಯಪುರ ಜಿಲ್ಲೆಯ ಸಮಕಾಲೀನ ಚಿತ್ರಕಲೆ,[೧೩೭] ವೆಂಕಟೇಶ್ ಕುಮಾರ್ ಕೆ.ಎಚ್. ಅವರ ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ,[೧೩೮] ವೆಂಕಟೇಶ ಪಾಟೀಲ ಅವರ ದಶಕದ ದೃಶ್ಯಕಲಾ ಸಾಹಿತ್ಯ ವಿಮರ್ಶಾತ್ಮಕ ಅಧ್ಯಯನ,[೧೩೯] ಸಂತೋಷ ಬೇವಿನಮರದ ಅವರ ಹಂಪಿ ಪರಿಸರದ ಹನುಮಾನ ಪ್ರತಿಮೆಗಳ ಅಧ್ಯಯನ(ದೃಶ್ಯಕಲೆಗಳನ್ನು ಆಧರಿಸಿ),[೧೪೦] ೨೦೧೬ರಲ್ಲಿ ಸಂಗಪ್ಪ ಕೋತಂಬರಿ ಅವರ ಚಿಕ್ಕಮಕ್ಕಳ ಚಿತ್ರಕಲೆ,[೧೪೧] ಅಮೀನರೆಡ್ಡಿ ಅವರ ವಿಜಯನಗರ ಕಾಲದ ಲೇಪಾಕ್ಷಿಯ ಭಿತ್ತಿಚಿತ್ರಕಲೆ,[೧೪೨] ವೀರೇಶ ರುದ್ರಸ್ವಾಮಿ ಅವರ ಕರ್ನಾಟಕದ ಭಾವಚಿತ್ರಕಲೆ(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ),[೧೪೩] ಬಸವರಾಜ ಕಿಶೋರ ಅವರ ಕರ್ನಾಟಕದಲ್ಲಿ ಸಂಯೋಜನಾ ಚಿತ್ರಕಲೆ(ಉತ್ತರಕರ್ನಾಟಕವನ್ನು ಅನುಲಕ್ಷಿಸಿ),[೧೪೪] ನಿಜಲಿಂಗ ಮುಗಳಿ ಅವರ ಕರ್ನಾಟಕದ ನಿಸರ್ಗ ಚಿತ್ರಕಲೆ,[೧೪೫] ಈ ಎಂ.ಫಿಲ್. ಪ್ರಬಂಧಗಳು ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನಾ ಅಧ್ಯಯನಗಳಾಗಿವೆ.

ಗುಲ್ಬರ್ಗಾ ವಿ.ವಿ., ಬೆಂಗಳೂರು ವಿ.ವಿ., ಕರ್ನಾಟಕ ವಿ.ವಿ., ಮೈಸೂರು ವಿ.ವಿ., ಬೆಂಗಳೂರಿನ ಜೈನ್ ಡೀಮ್ಡ್ ವಿ.ವಿ. ಮತ್ತು ಕನ್ನಡ ವಿ.ವಿ.ಗಳಲ್ಲಿ ಪಿಎಚ್.ಡಿ. ಪದವಿಗಾಗಿ ಅನೇಕ ಸಂಶೋಧನಾ ವಿದ್ಯಾರ್ಥಿಗಳು ಅಧ್ಯಯನದಲ್ಲಿ ನಿರತರಾಗಿದ್ದಾರೆ. ಇದಲ್ಲದೇ ವಿಶ್ವವಿದ್ಯಾಲಯ

---

೧೩೨. ಮಾಯಾದೇವಿ ಮಮ್ಮಾ: ಎ. ಎಸ್. ಪಾಟೀಲ ಅವರ ಕಲೆ ಮತ್ತು ಬದುಕು, ಎಂ.ಫಿಲ್ ಪ್ರಬಂಧ, ಕ.ವಿ.ವಿ. ಹಂಪಿ, ೨೦೧೪.

೧೩೩. ರಾಜಪ್ಪ ಹೆಚ್.: ಬಾಗೂರು ಮಾರ್ಕಂಡೇಯ ಅವರ ಚಿತ್ರಕಲೆ ಮತ್ತು ಸಾಹಿತ್ಯ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೪.

೧೩೪. ಅಶೋಕ ಚಂ. ನಡುವಿನಮನಿ: ಹೈದ್ರಾಬಾದಕರ್ನಾಟಕದ ಭಾವಚಿತ್ರಕಲಾವಿದರ ಒಂದು ಅಧ್ಯಯನ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೫.

೧೩೫. ಆಸೆಂಗಪ್ಪ ಗುಳೇದಗುಡ್ಡ: ದೃಶ್ಯಕಲಾ ಕ್ಷೇತ್ರಕ್ಕೆ ಅಕ್ಕಿಮನೆತನದ ಕೊಡುಗೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೫.

೧೩೬. ನಟರಾಜ ಶಿಲ್ಪಿ: ಕನಗನಹಳ್ಳಿಯ ಸ್ತೂಪ ಶಿಲ್ಪಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೫.

೧೩೭. ಬಸವರಾಜ ರೊಳ್ಳಿ: ವಿಜಯಪುರ ಜಿಲ್ಲೆಯ ಸಮಕಾಲೀನ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೫.

೧೩೮. ವೆಂಕಟೇಶಕುಮಾರ ಎಚ್.: ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೫.

೧೩೯. ವೆಂಕಟೇಶ ಪಾಟೀಲ: ದಶಕದ ದೃಶ್ಯಕಲಾ ಸಾಹಿತ್ಯ ವಿಮರ್ಶಾತ್ಮಕ ಅಧ್ಯಯನ (೨೦೦೪–೨೦೧೪), ಎಂ.ಫಿಲ್. ಪ್ರಬಂಧ, ಕನ್ನಡ ವಿ.ವಿ. ಹಂಪಿ, ೨೦೧೫.

೧೪೦. ಸಂತೋಷ ಬೇವಿನಮರದ: ಹಂಪಿ ಪರಿಸರದ ಹನುಮಾನ ಪ್ರತಿಮೆಗಳ ಅಧ್ಯಯನ(ದೃಶ್ಯಕಲೆಗಳನ್ನು ಆಧರಿಸಿ), ಎಂ.ಫಿಲ್. ಪ್ರಬಂಧ, ಕ.ವಿ.ವಿ. ಹಂಪಿ, ೨೦೧೫.

೧೪೧. ಸಂಗಪ್ಪ ಕೋತಂಬರಿ: ಚಿಕ್ಕಮಕ್ಕಳ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕ.ವಿ.ವಿ. ಹಂಪಿ, ೨೦೧೬.

೧೪೨. ಅಮೀನರೆಡ್ಡಿ: ವಿಜಯನಗರ ಕಾಲದ ಲೇಪಾಕ್ಷಿಯ ಭಿತ್ತಿಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕ.ವಿ.ವಿ. ಹಂಪಿ, ೨೦೧೬.

೧೪೩. ವೀರೇಶ ರುದ್ರಸ್ವಾಮಿ: ಕರ್ನಾಟಕದ ಭಾವಚಿತ್ರಕಲೆ(ಉತ್ತರಕರ್ನಾಟಕವನ್ನು ಅನುಲಕ್ಷಿಸಿ), ಎಂ.ಫಿಲ್. ಪ್ರಬಂಧ, ಕ.ವಿ.ವಿ. ಹಂಪಿ, ೨೦೧೬.

೧೪೪. ಬಸವರಾಜ ಕಿಶೋರ: ಕರ್ನಾಟಕದಲ್ಲಿ ಸಂಯೋಜನಾ ಚಿತ್ರಕಲೆ(ಉತ್ತರಕರ್ನಾಟಕವನ್ನು ಅನುಲಕ್ಷಿಸಿ). ಎಂ.ಫಿಲ್.ಪ್ರಬಂಧ, ಕ.ವಿ.ವಿ. ಹಂಪಿ, ೨೦೧೬.

೧೪೫. ನಿಜಲಿಂಗ ಮುಗಳಿ: ಕರ್ನಾಟಕದ ನಿಸರ್ಗ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕ.ವಿ.ವಿ. ಹಂಪಿ, ೨೦೧೬.

ಗಳ ಬಿ.ಎಫ್.ಎ. (ಬ್ಯಾಚ್ಯುಲರ್ ಆಫ್ ಫೈನ್ ಆರ್ಟ್ಸ್-ಡಿಗ್ರಿ), ಬಿ.ವಿ.ಎ.(ಬ್ಯಾಚ್ಯುಲರ್ ಆಫ್ ವಿಜ್ಯುವಲ್ ಆರ್ಟ್ಸ್-ಡಿಗ್ರಿ) ಐದು ವರ್ಷಗಳ ದೃಶ್ಯಕಲೆಯ ಡಿಪ್ಲೊಮಾ ಪದವಿ ಹಾಗೂ ಸ್ನಾತಕೋತ್ತರ ಹಂತದಲ್ಲಿ ಸುಮಾರು ೨೦೦೦ಕ್ಕೂ ಹೆಚ್ಚಿನ ಲಘುಶೋಧ ಪ್ರಬಂಧಗಳು ರಚನೆ ಗೊಂಡಿವೆ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಈ ಸಂಶೋಧನಾ ಪ್ರಕಾರವು ದೃಶ್ಯಕಲಾ ಕ್ಷೇತ್ರದಲ್ಲಿ ಅನಿವಾರ್ಯ ಅಧ್ಯಯನವಾಗಿ ಬೆಳೆಯುತ್ತಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತೀವ್ರವಾಗಿ ಮುನ್ನಡೆಯುತ್ತಲಿದ್ದು, ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕವಾಗಿ, ಸದೃಢವಾಗಿ ಮುನ್ನಡೆಯುತ್ತಲಿರುವುದು ದೃಶ್ಯಕಲಾ ಕ್ಷೇತ್ರದಲ್ಲಾದ ಬಹುದೊಡ್ಡ ಬದಲಾವಣೆ ಎಂದರೆ ತಪ್ಪಾಗಲಾರದು.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ಹೈದರಾಬಾದ್ ಕರ್ನಾಟಕ ಪ್ರದೇಶದ ಬೀದರ, ಕಲಬುರ್ಗಿ, ಯಾದಗಿರಿ, ರಾಯಚೂರು, ಬಳ್ಳಾರಿ, ಕೊಪ್ಪಳ ಜಿಲ್ಲೆಗಳ ಸಾಂಪ್ರದಾಯಿಕ ಶಿಲ್ಪ ಕಲಾವಿದರ ಕುರಿತಾಗಿದೆ. ಈ ಅಧ್ಯಯನದಲ್ಲಿ ಸ್ವಾತಂತ್ರ್ಯೋತ್ತರ ಕಾಲದ ಪ್ರಾತಿನಿಧಿಕ ಆಯ್ದ ಶಿಲ್ಪ ಕಲಾವಿದರನ್ನು ಮಾತ್ರ ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿದೆ. ಹೈದರಾಬಾದ್ ಕರ್ನಾಟಕ ಆರು ಜಿಲ್ಲೆಗಳಲ್ಲಿ ಸ್ವಾತಂತ್ರ್ಯೋತ್ತರ ಕಾಲದ ಕಲಾವಿದರನ್ನು ಅಧ್ಯಯನಕ್ಕೆ ಪ್ರಾತಿನಿಧಿಕವಾಗಿ ಆಯ್ದುಕೊಳ್ಳುವಾಗ ಪ್ರತಿ ಜಿಲ್ಲೆಯಿಂದ ಇಬ್ಬರು ಕಲಾವಿದರಂತೆ ಒಟ್ಟು ಹನ್ನೆರಡು ಜನ ಸಾಂಪ್ರದಾಯಿಕ ಶಿಲ್ಪ ಕಲಾವಿದರನ್ನು ಆಯ್ದುಕೊಳ್ಳಲಾಗಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದ ಆರು ಜಿಲ್ಲೆಗಳಲ್ಲಿ ಅನೇಕ ಜನ ಸಾಂಪ್ರದಾಯಿಕ ಶಿಲ್ಪಕಲಾವಿದರಿದ್ದಾರೆ. ಯುವಕರು, ಮಧ್ಯವಯಸ್ಕರು, ಬೇರೆ ಬೇರೆ ಸಮುದಾಯಗಳಿಂದ ಬಂದವರು, ಪಾರಂಪರಿಕವಾಗಿ ಶಿಲ್ಪಕಲಾವೃತ್ತಿಯನ್ನು ಮಾಡುವವರು. ಹೀಗೆ ಅನೇಕ ಶಿಲ್ಪಕಲಾವಿದರು ಕೃತಿ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಆದರೆ ಇಲ್ಲಿ ಅಧ್ಯಯನದ ಚೌಕಟ್ಟಿಗೆ ಅನುಸಾರವಾಗಿ ಕೆಲವು ಮಾನದಂಡಗಳನ್ನು ಅನುಸರಿಸಿ ಪ್ರತಿ ಜಿಲ್ಲೆಯಿಂದ ಇಬ್ಬರು ಕಲಾವಿದರನ್ನು ಮಾತ್ರ ಆಯ್ದು ಕೊಳ್ಳಲಾಗಿದೆ. ಪಾರಂಪರಿಕ ಶಿಲ್ಪಕಲೆಯಲ್ಲಿ ಪರಿಣತಿ ಪಡೆದವರು, ಸಾಂಪ್ರದಾಯಿಕ ಶಿಲ್ಪಕಲಾಕೃತಿಗಳ ರಚನೆಯಲ್ಲಿ ವಿವಿಧ ಮಾಧ್ಯಮಗಳನ್ನು ದುಡಿಸಿಕೊಂಡವರು, ವಿಶೇಷವಾಗಿ ಸಂಬಂಧಪಟ್ಟ ಕ್ಷೇತ್ರದಲ್ಲಿ ಜ್ಞಾನವೃದ್ಧರು, ವಯೋವೃದ್ಧರು, ಇದನ್ನೇ ವೃತ್ತಿಯಾಗಿ ಮಾಡಿಕೊಂಡವರು, ಅನೇಕ ಪ್ರಶಸ್ತಿ, ಮಾನ, ಸನ್ಮಾನಗಳನ್ನು ಪಡೆದುಕೊಂಡವರು, ಸಾಂಪ್ರದಾಯಿಕ ಶಿಲ್ಪಕಲಾ ಕ್ಷೇತ್ರದಲ್ಲಿ ಸಾಧನೆ ಮಾಡಿದವರು. ಇಂತಹ ಅನೇಕ ಮಾನದಂಡಗಳ ಹಿನ್ನೆಲೆಯಲ್ಲಿ ಕಲಾವಿದರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕಲಾವಿದರ ಕೆಲವು ಲಭ್ಯವಾದ ಪ್ರಾತಿನಿಧಿಕ ಕೃತಿಗಳು, ಅವರ ಕಲಾಬದುಕು, ಸಂಕ್ಷಿಪ್ತ ಜೀವನ, ಶಿಕ್ಷಣ ಇವುಗಳು ಮಾತ್ರ ಈ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿವೆ.

**ಅಧ್ಯಯನದ ವೈಧಾನಿಕತೆ**

"ಹೈದರಾಬಾದ್-ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು" ಎಂಬ ಈ ಅಧ್ಯಯನದಲ್ಲಿ ಎರಡು ರೀತಿಯ ಆಕರಸಾಮಗ್ರಿಗಳಿಂದ ವಿಷಯ ಸಂಗ್ರಹ ಮಾಡಿಕೊಂಡು ಬರವಣಿಗೆಗೆ ಅಳವಡಿಸಿಕೊಳ್ಳುವ ವಿಧಾನವನ್ನು ಅನುಸರಿಸಲಾಗಿದೆ. ಅವು ಕೆಳಗಿನಂತಿವೆ.

೧. ಮೂಲ ಆಕರಸಾಮಗ್ರಿ

೨. ಆನುಷಂಗಿಕ ಆಕರಸಾಮಗ್ರಿ

**೧. ಮೂಲ ಆಕರಸಾಮಗ್ರಿ**

ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಂಡ ಹೈದರಾಬಾದ್ ಕರ್ನಾಟಕ ಪ್ರದೇಶದ ಸಾಂಪ್ರದಾಯಿಕ ಶಿಲ್ಪಕಲಾವಿದರ ಕಲಾಕೃತಿಗಳು ಮತ್ತು ಅವರ ಕಲಾಬದುಕನ್ನು ಮೂಲ ಆಕರಸಾಮಗ್ರಿಯಾಗಿ ಬಳಸಿಕೊಳ್ಳಲಾಗಿದೆ. ಮೂಲ ಆಕರಸಾಮಗ್ರಿಗಳಿಂದ ವಿಷಯ ಸಂಗ್ರಹಿಸಲು ಅನುಸರಿಸಿದ ವಿಧಾನಗಳು ಕೆಳಗಿನಂತಿವೆ.

**ಛಾಯಾಚಿತ್ರಣ:** ಅಧ್ಯಯನಕ್ಕೆ ಆಯ್ದುಕೊಂಡ ಕಲಾವಿದರ ಪ್ರಮುಖ ಶಿಲ್ಪಕಲಾ ಕೃತಿಗಳನ್ನು ಛಾಯಾಚಿತ್ರಣ ಮಾಡಿಕೊಳ್ಳಲಾಯಿತು. ಅಲ್ಲದೆ ಕಲಾವಿದರ ಕೌಟುಂಬಿಕ ವಿವರ, ಶಿಕ್ಷಣ, ಕಲಾ ಸ್ಟುಡಿಯೋ, ಸಮಕಾಲೀನ ಕಲಾಪರಿಸರ, ಕಲಾವಿದರು ಕೃತಿ ನಿರ್ಮಿಸುವ ವಿಧಿವಿಧಾನಗಳನ್ನು ಹಂತ ಹಂತವಾಗಿ ಛಾಯಾಚಿತ್ರಣ ಹಾಗೂ ವಿಡಿಯೋ ಚಿತ್ರೀಕರಣ ಮಾಡಿಕೊಳ್ಳಲಾಯಿತು. ಕಲಾವಿದರು ರಚಿಸಿದ ಪ್ರಮುಖ ಶಿಲ್ಪಕಲಾಕೃತಿಗಳು ರಾಜ್ಯದ ಅನೇಕ ದೇವಾಲಯಗಳು, ಸಂಗ್ರಹಾಲಯಗಳು, ಖಾಸಗಿ ಒಡೆತನದಲ್ಲಿ ಸಂಗ್ರಹಗೊಂಡಿದ್ದು, ಕೆಲವು ಆಯ್ದ ಪ್ರಮುಖ ಶಿಲ್ಪಕೃತಿಗಳ ಛಾಯಾಚಿತ್ರಣ ಮಾಡಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಸಂದರ್ಶನ ಮತ್ತು ಧ್ವನಿಮುದ್ರಣ:** ಅಧ್ಯಯನಕ್ಕೆ ಆಯ್ದುಕೊಂಡ ಕಲಾವಿದರನ್ನು ಸಂದರ್ಶನ ಮಾಡಿ ವಿವರಗಳನ್ನು ಧ್ವನಿಮುದ್ರಿಸಿಕೊಳ್ಳಲಾಯಿತು. ಇದಕ್ಕಾಗಿ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಪ್ರಶ್ನಾವಳಿಯನ್ನು ಸಿದ್ಧಪಡಿಸಿಕೊಳ್ಳಲಾಗಿತ್ತು. ಕಲಾವಿದರು ಕೃತಿರಚನೆ ಮಾಡುವ ವಿಧಿವಿಧಾನಗಳು, ಕ್ರಮಬದ್ಧ ಹಂತಗಳು, ಮಾಧ್ಯಮಗಳ ಆಯ್ಕೆ ವಿಧಾನ ಮತ್ತು ಸಾಧ್ಯತೆಗಳು, ಪಾರಂಪರಿಕ ಶಿಲ್ಪಕಲಾ ಪರಂಪರೆ, ಪ್ರಭಾವ, ಪ್ರೇರಣೆ, ಅವರ ಕಲಾಶೈಲಿ ಇವುಗಳ ಕುರಿತಾಗಿ ಮಾಹಿತಿಯನ್ನು ಸಂದರ್ಶನದ ಮೂಲಕ ಸಂಗ್ರಹಿಸಿಕೊಳ್ಳಲಾಯಿತು. ಇದಲ್ಲದೆ ಕಲಾವಿದರ ಕೌಟುಂಬಿಕ ವಿವರಗಳು, ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲೆಯ ಕಡೆಗೆ ಆಕರ್ಷಿತರಾಗಲು ಉಂಟಾದ ಪ್ರೇರಣೆಗಳು, ಸಮಕಾಲೀನ ಮಿತ್ರವರ್ಗ, ಕಲಾಕೃತಿಗಳ ವ್ಯಾಪಾರವಹಿವಾಟು, ಕಲಾವಿದರ ಇಂದಿನ ಸ್ಥಿತಿಗತಿಗಳು ಇವುಗಳ ಬಗ್ಗೆಯೂ ಪ್ರಶ್ನಾವಳಿಯನ್ನು ಸಿದ್ಧಪಡಿಸಿಕೊಂಡು ಸಂದರ್ಶನ ಮಾಡಿ ವಿವರ ಪಡೆದುಕೊಳ್ಳಲಾಯಿತು. ಸಂಬಂಧಪಟ್ಟ ಸಂದರ್ಶನದ ಭಾಗಗಳನ್ನು ಧ್ವನಿಮುದ್ರಿಸಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಕಲಾಗ್ಯಾಲರಿಗಳು ಮತ್ತು ವಿದ್ವಾಂಸರ ಭೇಟಿ:** ಹೈದರಾಬಾದ್ ಕರ್ನಾಟಕ ಪ್ರದೇಶ ಸಾಂಪ್ರದಾಯಿಕ ಶಿಲ್ಪಕಲಾಕೃತಿಗಳು ಸಂಗ್ರಹಗೊಂಡಂತಹ ಕಲಾಗ್ಯಾಲರಿಗಳು, ಖಾಸಗಿ ಸಂಗ್ರಹಾಲಯಗಳು, ಪ್ರಾಚೀನ ಕಲಾನೆಲೆಗಳು, ಪುರಾತತ್ವ ಇಲಾಖೆಯ ಸಂಗ್ರಹಾಲಯಗಳು ಮುಂತಾದ ಕಡೆಗೆ ತೆರಳಿ ಛಾಯಾಚಿತ್ರಣ ಮಾಡಿಕೊಳ್ಳುವುದರ ಜೊತೆಗೆ ಸ್ಥಳದಲ್ಲಿಯೇ ವಿವರಗಳನ್ನು ಅಧ್ಯಯನಕ್ಕೆ ಸಂಬಂಧಪಟ್ಟಂತೆ ನಮೂದಿಸಿಕೊಳ್ಳಲಾಯಿತು.

ಹೈದರಾಬಾದ್ ಕರ್ನಾಟಕ ಪ್ರದೇಶದ ಬಗ್ಗೆ ಅಧ್ಯಯನ ಮಾಡಿದ ಇತಿಹಾಸಕಾರರು, ಪುರಾತತ್ವಶಾಸ್ತ್ರಜ್ಞರು, ಕಲಾವಿಮರ್ಶಕರು, ಕಲಾವಿದರು, ಸಾಹಿತಿಗಳು, ವಿಮರ್ಶಕರು ಹಾಗೂ ಇನ್ನಿತರ ವಿದ್ವಾಂಸರನ್ನು ಭೇಟಿ ಮಾಡಿ ಅವರಿಂದ ಅಧ್ಯಯನಕ್ಕೆ ಸಂಬಂಧಿಸಿದ ಮಾಹಿತಿ ಪಡೆದುಕೊಳ್ಳಲಾಗಿದೆ.

**೨. ಆನುಷಂಗಿಕ ಆಕರಸಾಮಗ್ರಿಗಳು**

ಹೈದರಾಬಾದ್ ಕರ್ನಾಟಕ ಪ್ರದೇಶದ ಸಾಂಪ್ರದಾಯಿಕ ಶಿಲ್ಪಕಲಾವಿದರ ಕುರಿತಾಗಿ ಬಂದ ಸಂಬಂಧಪಟ್ಟ ಲೇಖನಗಳು, ಅವರ ಕಲಾಕೃತಿಗಳ ಲೇಖನಗಳು, ಬಿ.ವಿ.ಎ. ಪದವಿ ಹಂತದಲ್ಲಿ ರಚಿಸಲ್ಪಟ್ಟ ಕಿರುಯೋಜನಾ ವರದಿಗಳು, ಪತ್ರಿಕಾ ಲೇಖನಗಳು, ಪಿಎಚ್.ಡಿ., ಎಂ.ಫಿಲ್. ಮತ್ತು ಸ್ನಾತಕೋತ್ತರ ಹಂತದ ಸಂಶೋಧನಾ ಪ್ರಬಂಧಗಳು, ಪ್ರಕಟಿತ ಮತ್ತು ಅಪ್ರಕಟಿತ ಸಾಹಿತ್ಯ ಕೃತಿಗಳು, ಅರ್ಥಕೋಶಗಳು, ಗ್ಯಾಜೆಟಿಯರ್‌ಗಳು, ಜಿಲ್ಲಾದರ್ಶನದಂತಹ ಕೈಪಿಡಿಗಳು, ಜಿಲ್ಲಾ ದೇವಾಲಯಗಳ ಬಗ್ಗೆ ಬಂದ ಕೋಶಗಳು, ವಿಶ್ವಕೋಶಗಳು, ಇತಿಹಾಸ ಮತ್ತು ಪುರಾತತ್ವ ಸಂಶೋಧನಾ ಲೇಖನ ಮತ್ತು ಕೃತಿಗಳು, ಪ್ರಾಚೀನ ಶಿಲ್ಪಶಾಸ್ತ್ರಗಳು ಹೀಗೆ ಅನೇಕ ಪೂರಕ ಮಾಹಿತಿ ಕೊಡುವ ಸಾಹಿತ್ಯವನ್ನು ಆನುಷಂಗಿಕ ಆಕರಸಾಮಗ್ರಿಗಳಾಗಿ ಬಳಸಿಕೊಳ್ಳಲಾಗಿದೆ.

ಮೇಲಿನಂತೆ ಮೂಲ ಆಕರಸಾಮಗ್ರಿ ಹಾಗೂ ಆನುಷಂಗಿಕ ಆಕರಸಾಮಗ್ರಿಗಳಿಂದ ದೊರೆತ ಮಾಹಿತಿಯನ್ನು ಪಟ್ಟಿಕೆಗಳಲ್ಲಿ ನಮೂದಿಸಿಕೊಂಡು ನಂತರ ಬರವಣಿಗೆಗೆ ಅಳವಡಿಸಿಕೊಳ್ಳುವ ವಿಧಾನ ಅನುಸರಿಸಲಾಗಿದೆ.

## ಅಧ್ಯಾಯ : ಎರಡು

# ಹೈದರಾಬಾದ್ ಕರ್ನಾಟಕದ ಐತಿಹಾಸಿಕ ಹಿನ್ನೆಲೆ ಮತ್ತು ಸಾಂಸ್ಕೃತಿಕ ಪರಿಸರ

"ಯಾವುದೇ ಒಂದು ಕಲಾಸಂಪ್ರದಾಯ ತನ್ನನ್ನು ಎಲ್ಲ ಬದಲಾವಣೆಗಳಿಗೆ ಪೂರಕವಾದಂತೆ ಒಗ್ಗಿಸಿಕೊಳ್ಳುತ್ತದೆ ಮತ್ತು ಹೊಂದಿಸಿಕೊಳ್ಳುತ್ತದೆ. ಕಲಾಸಂವೇದನೆಗಳಲ್ಲಿರುವ ಜಡತ್ವರಹಿತ ಹೊಂದಿಕೊಳ್ಳುವ ಗುಣಗಳು ಆಯಾ ಕಾಲಘಟ್ಟಗಳ ಸಾಂಸ್ಕೃತಿಕ ಚಟುವಟಿಕೆಗಳಿಗೆ ಪೂರಕವಾಗಿ ಬಿಡುತ್ತವೆ. ಹೊಸದೊಂದು ಧಾರ್ಮಿಕ ಬದಲಾವಣೆಯಾದಾಗ ಅದರ ಭಾಗವಾಗಿ ಮೂಡಿಬರುವ ಕಲಾಕೃತಿಗಳು ಆ ಧರ್ಮದ ಅಂಶಗಳನ್ನು ದೃಶ್ಯರೂಪದಲ್ಲಿ ಪ್ರಚುರಪಡಿಸುತ್ತವೆ."[೧]

"ಭಾರತೀಯ ಸಾಂಪ್ರದಾಯಿಕತೆ ಹಲವು ವಿಭಿನ್ನ ನೆಲೆಗಳಿಂದ ಸಂಪದ್ಭರಿತವಾದದ್ದು. ಕಲೆ, ಸಾಹಿತ್ಯ, ಸಾಂಸ್ಕೃತಿಕ ಚಹರೆಗಳಿಂದ ಕಂಗೊಳಿಸುತ್ತಿದ್ದು, ಪ್ರಾಚೀನ ಪರಂಪರೆ ಮತ್ತು ಸಮಕಾಲೀನ ಸಂದರ್ಭದ ಸಾಂಸ್ಕೃತಿಕ ಸ್ಥಿತ್ಯಂತರಗಳಿಂದ ಪ್ರಚಲಿತ ಚರ್ಚಿತ ವಿಷಯವಾಗಿದೆ."[೨] ಅವುಗಳಲ್ಲಿ ಕರ್ನಾಟಕವು ಭಾರತೀಯ ಇತಿಹಾಸದಲ್ಲಿ ಮಹತ್ವಪೂರ್ಣವಾದಂತಹ ಸ್ಥಾನವನ್ನು ಪಡೆದಿವೆ. ಇಲ್ಲಿ ಕಂಡುಬರುವಂತಹ ಚಿತ್ರಕಲೆ, ವಾಸ್ತುಕಲೆ, ಶಿಲ್ಪಕಲೆಗಳು ಅನೂಚಾನವಾಗಿ ಕರ್ನಾಟಕದ ಕಲಾಪರಂಪರೆಯನ್ನು ಪ್ರಚುರಪಡಿಸುವುದರೊಂದಿಗೆ, ವೈವಿಧ್ಯಮಯವಾದಂತಹ ಕಲಾಪ್ರಕಾರಗಳು ಮತ್ತು ಶೈಲಿಗಳು ಕಲಾ ಇತಿಹಾಸದ ಭವ್ಯ ಪರಂಪರೆಯನ್ನು ಬಿಂಬಿಸುತ್ತವೆ. ಇವುಗಳಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಹಿಡಿದು ಚಿತ್ರ ಮತ್ತು ಶಿಲ್ಪಗಳ ನಿರಂತರ ಬೆಳವಣಿಗೆಯನ್ನು ಗುರುತಿಸಬಹುದು. ಪ್ರತಿಯೊಂದು ಘಟ್ಟದಲ್ಲಿ ತನ್ನದೇಯಾದಂತಹ ವಿಶಿಷ್ಟತೆಯೊಡನೆ ದೃಶ್ಯ ಸಂವೇದನೆಗಳನ್ನು ಪ್ರಚುರಪಡಿಸುತ್ತವೆ. ಆ ಕಾಲದ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಾಗೂ ರಾಜಕೀಯ ಪರಿವ್ಯಾಪ್ತಿಯ ಚೌಕಟ್ಟಿಗನುಗುಣವಾಗಿಯೇ ಕಲಾಚಟುವಟಿಕೆಗಳು ನಡೆದು ಬಂದಿವೆ. ಈ ಚಟುವಟಿಕೆಗಳಿಂದ ಹೊರಹೊಮ್ಮಿದ ಕಲಾಕೃತಿಗಳ ಅಂದಿನ ಸಾಂಸ್ಕೃತಿಕ ಉದಾಹರಣೆಗಳಾಗಿ ಉಳಿದುಕೊಂಡಿವೆ."[೩]

---

೧. ಡಾ. ಲಕ್ಷ್ಮಣಸಿಂಗ್ ಆರ್. ರಾಥೋಡ್: ಕರ್ನಾಟಕದಲ್ಲಿ ಆನ್ವಯಿಕ ಕಲೆ ಐತಿಹಾಸಿಕ ದೃಷ್ಟಿಕೋನ, ಪು–೨೧೯.

೨. ಡಾ. ಬಸವರಾಜ ಕಲೆಗಾರ: ಹೈದ್ರಾಬಾದ್–ಕರ್ನಾಟಕ ಚಿತ್ರಕಲೆ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು–೧೩.

೩. ಡಾ. ಲಕ್ಷ್ಮಣಸಿಂಗ್ ಆರ್. ರಾಥೋಡ್: ಕರ್ನಾಟಕದಲ್ಲಿ ಅನ್ವಯಿಕ ಕಲೆ ಐತಿಹಾಸಿಕ ದೃಷ್ಟಿಕೋನ, ಪು–೨೧೭.

“ಸ್ಥಳೀಯ ಇತಿಹಾಸ ಅಧ್ಯಯನ ಕೈಗೊಳ್ಳುವಾಗ ಸಾಂಸ್ಕೃತಿಕ ದೃಷ್ಟಿಯಿಂದ ಅದನ್ನು ಪರಿಶೀಲಿಸುವುದು ಅತ್ಯಂತ ಉಪಯುಕ್ತವಾದುದು. ರಾಜಕೀಯ ಚಟುವಟಿಕೆಯ ಅನ್ವೇಷಣೆ ಅನೇಕ ತೊಡಕುಗಳಿಂದ ಕೂಡಿರುತ್ತದೆ. ಇಲ್ಲಿ ಇತಿಹಾಸಕಾರ ಪೂರ್ವಗ್ರಹ ಪೀಡಿತನಾಗುವ ಸಂಭವವಿರುತ್ತದೆ. ಇದಲ್ಲದೆ ತಮ್ಮದೇ ಆದ ರಾಜಕೀಯ ಇತಿಹಾಸ ರಚನೆಯಲ್ಲಿ ವಿದ್ವಾಂಸನಾದವನು ಘಟನಾವಳಿಗಳಿಂದ ಹೊರಗೆ ನಿಂತು ಬರೆಯುವುದು ಕಷ್ಟವಾಗುತ್ತದೆ. ಆದುದರಿಂದ ರಾಜಕೀಯ ಜೀವನದ ನಿರೂಪಣೆಗಿಂತ ಕಲಾ ಇತಿಹಾಸ ಬಹುಸೂಕ್ತವಾದ ವಿಷಯವೆನಿಸುತ್ತದೆ. ಸಂಗೀತ, ಶಿಲ್ಪ ಮೊದಲಾದ ಕಲೆಗಳು ಸಾಹಿತ್ಯ, ದರ್ಶನ, ಧರ್ಮ ಮೊದಲಾದ ವಿಷಯಗಳು ವಿಕಾಸ ನೀತಿಯನ್ನು ಅನುಸರಿಸುವುದರಿಂದ ಅವು ಭೌಗೋಳಿಕ ಗಡಿಗಳನ್ನು ದಾಟಿ ಅನೇಕ ಕಡೆ ವ್ಯಾಪಿಸುತ್ತದೆ. ಸಾಂಸ್ಕೃತಿಕ ಹಾಗೂ ಸಾಮಾಜಿಕ ಇತಿಹಾಸದ ಅಧ್ಯಯನದಲ್ಲಿ ಹೆಚ್ಚಿನ ಭಿನ್ನಾಭಿಪ್ರಾಯ ತಲೆದೋರುವ ಸಂಭವ ಕಡಿಮೆ. ಕರ್ನಾಟಕವನ್ನು ಉದಾಹರಣೆಗೆ ತೆಗೆದುಕೊಂಡರೆ, ಶ್ರವಣಬೆಳಗೊಳ, ಬನವಾಸಿ, ಲಕ್ಷ್ಮೇಶ್ವರ, ಮೇಲುಕೋಟೆ ಮೊದಲಾದ ಕೇಂದ್ರಗಳನ್ನು ಕುರಿತು ಅಧ್ಯಯನ ನಡೆದಿದೆ. ಇದೇ ರೀತಿ ಸ್ಥಳೀಯ ವಾಸ್ತುಶಿಲ್ಪ, ಲಲಿತಕಲೆಗಳು, ಜಾನಪದ ಮೊದಲಾದ ವಿಷಯಗಳ ಬಗೆಗೂ ಸಾಕಷ್ಟು ಅಧ್ಯಯನ, ಸಂಶೋಧನೆ ನಡೆದಿದೆ. ಈ ವಿಷಯಗಳ ಬಗೆಗೆ ಅನೇಕ ಉತ್ತಮ ಗ್ರಂಥಗಳು ಹೊರಬಂದಿವೆ. ಆದರೆ ಇತಿಹಾಸಕಾರ ತನ್ನ ಕ್ಷೇತ್ರವನ್ನು ಸೀಮಿತಗೊಳಿಸುವುದರಿಂದ ಅಥವಾ ಯಾವುದೇ ಒಂದು ಕ್ಷೇತ್ರವನ್ನು ಆರಿಸಿಕೊಳ್ಳುವುದರಿಂದ ಇತಿಹಾಸ ರಚನೆಯಲ್ಲಿ ಕಂಡುಬರುವ ಸಮಸ್ಯೆಗಳಲ್ಲಿ ಬಗೆ ಹರಿಯುತ್ತವೆಂದು ಹೇಳುವುದು ಅತಿ ಸರಳೀಕರಣವಾಗುತ್ತದೆ.”[೪]

ಹೈದ್ರಾಬಾದ್ ಕರ್ನಾಟಕದ ಸಾಂಸ್ಕೃತಿಕ ಹಿನ್ನೆಲೆಯನ್ನು ಅವಲೋಕಿಸಿದಾಗ ತನ್ನದೇಯಾದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಈ ಪ್ರದೇಶದ ವ್ಯಾಪ್ತಿಯು ಬೀದರ, ಕಲಬುರ್ಗಿ, ಯಾದಗಿರಿ, ರಾಯಚೂರು, ಕೊಪ್ಪಳ ಹಾಗೂ ಬಳ್ಳಾರಿ ಜಿಲ್ಲೆಗಳ ನೆಲ, ಭೌಗೋಳಿಕ ಪರಿಸರ, ಇತಿಹಾಸ, ಸಾಹಿತ್ಯ ಮತ್ತು ಕಲಾ ಸಂಸ್ಕೃತಿಗಳು ವೈವಿಧ್ಯಮಯವಾಗಿವೆ. ಬಿರುಬಿಸಿಲಿಗೆ ಹೆಸರಾದ ಕಲಬುರ್ಗಿ, ರಾಯಚೂರು, ಬಳ್ಳಾರಿ ಒಂದು ಕಡೆಗಾದರೆ, ವಿಶೇಷವಾಗಿ ಕಲಬುರ್ಗಿ ಜಿಲ್ಲೆಗೆ ಹೊಂದಿಕೊಂಡಿರುವ ಬೀದರ ಸಮಶೀತೋಷ್ಣ ಪ್ರದೇಶವಾಗಿ ಗಮನ ಸೆಳೆಯುತ್ತದೆ. “ಶಿಲಾಯುಗ ಕಾಲದಿಂದ ಸ್ವಾತಂತ್ರ್ಯದವರೆಗೆ ಈ ಪ್ರದೇಶವು ಅನೇಕ ಸ್ಥಿತ್ಯಂತರಗಳನ್ನು ಪಡೆದುಕೊಂಡಿದೆ. ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಬಹಮನಿ ಸುಲ್ತಾನರು, ಬರಿದ್‌ಶಾಹಿಗಳು, ಮೊಗಲರು, ಮರಾಠರು, ರಜಾಕಾರರು ಈ ಪ್ರದೇಶದಲ್ಲಿ ತಮ್ಮ ಆಳ್ವಿಕೆ ನಡೆಸಿದ್ದಾರೆ. ಕಲಬುರ್ಗಿಯ ಬಂದೇ ನವಾಜ್, ಮಹಾದಾಸೋಹಿ ಶರಣಬಸವೇಶ್ವರರು ಭಾವೈಕ್ಯತೆಗೆ ಸಾಕ್ಷಿಯಾಗಿದ್ದಾರೆ. ಬಸವೇಶ್ವರರ ಅನುಭವಸಾರ ಅರಳಿದ್ದು ಈ ನೆಲದಲ್ಲಿ. ಮಹಮ್ಮದ್ ಗವಾನನಂತಹ ಶಿಕ್ಷಣಪ್ರೇಮಿಗಳು, ಎಸ್.ಎಂ. ಪಂಡಿತರಂತಹ ಕಲಾವಿದರು ತಿರುಗಾಡಿದ ಭೂಮಿ ಈ ಪ್ರದೇಶ. ಕನ್ನಡದ ಪ್ರಥಮ ಸಾಹಿತ್ಯ ಕೃತಿ ಎಂದು ನಂಬಲಾಗಿರುವ

---

೪. ಡಾ. ಚನ್ನಬಸಪ್ಪ ಎಸ್. ಪಾಟೀಲ: ಕರ್ನಾಟಕ ಶಿಲ್ಪಗಳಲ್ಲಿ ಪಂಚತಂತ್ರ, ಪು–೫೮.

‘ಕವಿರಾಜಮಾರ್ಗ’ ರಚನೆಯಾಗಿದ್ದು ಈ ನೆಲದಲ್ಲಿ. ಹಿಂದೂ, ಮುಸ್ಲಿಂ ಸಂಪ್ರದಾಯಗಳ ವಾಸ್ತುಶಿಲ್ಪಗಳು ಅನಾವರಣಗೊಂಡಿರುವುದು ಈ ಪ್ರದೇಶದ ವೈಶಿಷ್ಟ್ಯ. ಇಂತಹ ಕುತೂಹಲಕರವಾದ ಸಂಗತಿಗಳನ್ನು ಹೊಂದಿದ ಹೈದರಾಬಾದ್ ಕರ್ನಾಟಕ ಪ್ರದೇಶದ ಪ್ರತಿಯೊಂದು ಜಿಲ್ಲೆಗಳ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಕೆಳಗಿನಂತೆ ಸಂಕ್ಷಿಪ್ತವಾಗಿ ತಿಳಿದುಕೊಳ್ಳಬಹುದು.

## ೨.೧. ಬೀದರ ಜಿಲ್ಲೆ

“ಕನ್ನಡ ನೆಲದ ಕಂಪನ್ನು ಪಸರಿಸುತ್ತಿರುವ ಕರ್ನಾಟಕದ ಶಿಖರ ಬೀದರ ಜಿಲ್ಲೆ ಸಾಂಪ್ರದಾಯಿಕ ನೆಲೆಯಿಂದ ವಿಶಿಷ್ಟವಾದದ್ದು. ಭಾಷೆ, ನೆಲ, ಜಲ, ಧರ್ಮ, ಸಾಮಾಜಿಕ ಸಮನ್ವಯತೆ, ಸಂಸ್ಕೃತಿಯಿಂದ ವೈವಿಧ್ಯಮಯವಾದದ್ದು. ಇತಿಹಾಸ ಪ್ರಜ್ಞೆಯಿಂದ ಬೀದರ ನೆಲವು ಮಣ್ಣಿನ ಕಲೆಯ ಗುಣದಿಂದ ನಾಡಿನಾದ್ಯಂತ ಮೆರಗು ಕಂಡಿದೆ. ಈ ಮಣ್ಣಿನ ಸಂಸ್ಕೃತಿ ಯಲ್ಲಿ ಹಿಂದಿ, ಮರಾಠಿ, ಉರ್ದು, ತೆಲುಗು, ಇಂಗ್ಲಿಷ್ ಭಾಷೆಗಳ ಸಂಗಮದಿಂದ ಸಮಸಂಸ್ಕೃತಿಯ ಕಳಕಳಿಯ ಜೀವವಾಗಿದೆ. ಹಿಂದು, ಮುಸ್ಲಿಂ, ಬೌದ್ಧ, ಮಹಾವೀರ, ಬಸವ, ಏಸುಕ್ರಿಸ್ತ, ಗುರುನಾನಕ, ಭಕ್ತಪ್ರಭು, ಮಾಣಿಕಪ್ರಭು, ಯಂಕಮ್ಮ, ಬೊಮ್ಮಗೊಂಡೇಶ್ವರ, ಕರಿಬಸವೇಶ್ವರ, ಅಂಬೇಡ್ಕರ್ ಸೇರಿದಂತೆ ಹಲವು ಮತ ಧರ್ಮದ ತತ್ವ ಸಿದ್ಧಾಂತ ಪರಿಪಾಲಿಸುವ ಸಹೃದಯತೆ ಈ ಜಿಲ್ಲೆಗಿದೆ.”[೫]

ಬೀದರ ಜಿಲ್ಲೆಯು ಐದು ತಾಲೂಕುಗಳನ್ನು ಹೊಂದಿದ ಪ್ರದೇಶ. ಬೃಹತ್ ಬೆಟ್ಟಗುಡ್ಡಗಳು, ದೊಡ್ಡ ನದಿ, ದಟ್ಟ ಅರಣ್ಯಗಳನ್ನೊಳಗೊಂಡ ದಖ್ಖನ್ ಪ್ರಸ್ಥಭೂಮಿಯ ಒಂದು ಪ್ರದೇಶ. ಶಿಲಾಯುಗದ ಕಾಲದಿಂದ ಇಲ್ಲಿನ ಜನ ವಸತಿ ಇತ್ತೆಂದು, ಬೀದರ ಎಂಬ ಸ್ಥಳಕ್ಕೆ ಪ್ರಾಚೀನ ಕಾಲದಲ್ಲಿ ಬೇರೆ ಬೇರೆ ಹೆಸರುಗಳಿದ್ದವೆಂದು ತಿಳಿದುಬರುತ್ತದೆ. ನಳ-ದಮಯಂತಿಯರು ಪ್ರಣಯ ಸಲ್ಲಾಪದಲ್ಲಿ ತೊಡಗುತ್ತಿದ್ದ ಉದ್ಯಾನದ ಸ್ಥಳ ಇದಾಗಿತ್ತು. ಅಲ್ಲದೆ ‘ವಿದುರನಗರ’ವೆಂತಲೂ ಇದನ್ನು ಪುರಾಣಗಳಲ್ಲಿ ಉಲ್ಲೇಖಿಸಲಾಗಿದೆ. ವಿಶ್ವವಿಖ್ಯಾತ ಬಿದ್ರಿ ಕಲೆಯಿಂದ ಬೀದರ ಆಗಿದೆ ಎಂಬುದು ಒಂದು ವಾದವಾಗಿದ್ದರೆ, ಇಲ್ಲಿನ ಜನರು ಬೇಡರಾಗಿದ್ದರು. ಬೆಡರ ಮುಂದೆ ಬೀದರ ಆಗಿರಬಹುದು ಎನ್ನುತ್ತಾರೆ. ಇನ್ನೂ ಕೆಲವರ ಪ್ರಕಾರ ಇಲ್ಲಿ ವಿದುಷ(ಪಂಡಿತ) ಜನರು ಹೆಚ್ಚಾಗಿದ್ದರು. ಅದು ಜನಸಾಮಾನ್ಯರ ಬಾಯಲ್ಲಿ ವಿದುಷ>ವಿದುರು>ವಿದುರರು>ಬಿದುರರು> ವಿದುರನಗರ> ಬಿದುರ ಎಂಬುದು ನಂತರದಲ್ಲಿ ಬೀದರ ಆಗಿದೆ ಎನ್ನುತ್ತಾರೆ. ಜನಪದರು ಬೀದರ ಪ್ರದೇಶವನ್ನು ಇಂದಿಗೂ ‘ಕ್ವಾಟಿ’ ಎಂದು ಕರೆಯುವುದು ವಾಡಿಕೆಯಾಗಿದೆ. ಇಲ್ಲಿ ಕೋಟೆ ನಿರ್ಮಾಣವಾದಾಗಿನಿಂದ ಈ ಹೆಸರು ರೂಢಿಗೆ ಬಂದಿರಬಹುದು. ಮತ್ತೊಂದು ತರ್ಕದ ಪ್ರಕಾರ ‘ಬಿದ್ರಿ’ ಕಲೆಯನ್ನು ಕಂಡುಕೊಂಡವನು ತನ್ನ ಭಾಗ್ಯದಿಂದ ಅಂದರೆ ವಿಧಿಯಿಂದ ಈ ಕಲೆಯು ಕರಗತವಾಯಿತು. ಆದ್ದರಿಂದ ವಿಧಿ ಎಂದು ಕರೆದ. ಅದು ಮುಂದೆ ವಿದಿ>ಬಿದಿ ಮುಂತಾಗಿ ಅಪಭ್ರಂಶ ಹೊಂದಿ ‘ಬಿದ್ರಿ’ ಆಯಿತು.[೬] ಇದರಿಂದ ಬಿದ್ರಿ ಕಲೆಯ ನೆಲೆ ಬೀದರ ಆಯಿತು ಎಂಬುದಾಗಿ ಹೇಳುತ್ತಾರೆ.

---

೫. ಡಾ. ಬಸವರಾಜ ಕಲೆಗಾರ: ಹೈದ್ರಾಬಾದ್ ಕರ್ನಾಟಕದ ಚಿತ್ರಕಲೆ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು-೧೩.

೬. ಡಾ. ಸೋಮನಾಥ ಯಾಳವಾರ(ಸಂ.): ಬೀದರ ಜಿಲ್ಲಾ ದರ್ಶನ, ಪು-೪, ೫.

ಬಿದ್ರಿ ಕಲೆಯನ್ನು ಕಂಡುಕೊಂಡವನು ಇದಕ್ಕೆ ಕಪ್ಪು ಬಣ್ಣ ಏರಿಸುವ ಪ್ರಯತ್ನದಲ್ಲಿದ್ದಾಗ ಕೋಟೆಯ ಕಪ್ಪುಮಣ್ಣಿನಲ್ಲಿ ಅದನ್ನು ಕಂಡುಕೊಂಡನು. ಅಂದಿನಿಂದ ಬಣ್ಣ ಏರಿಸಲು ಬಳಸುವ ಮಣ್ಣು ಇಲ್ಲೇ ಕೋಟೆಯಲ್ಲಿ ಬಿದ್ದಿದೆ ಎಂದನು. ಅದು ಮುಂದೆ ಬಿದ್ದಿದೆ, ಬಿದ್ದಿನಿ, ಬಿದ್ದಿನಿರಿ, ಬಿದ್ನಿನ್ರಿ, ಬಿದ್ದರಿ, ಬಿದ್ರಿ ಎಂದಾಯಿತು. ಬಿದ್ರಿ ಪದ ಹುಟ್ಟಿಕೊಂಡು ಹೊಸರೂಪ ತಾಳಿ ಬೀದರ ಆಗಿದೆ ಎಂಬುದನ್ನೂ ಹೇಳುತ್ತಾರೆ. ಇತಿಹಾಸ ಕಾಲದಲ್ಲಿ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರ ಆಡಳಿತದ ವ್ಯಾಪ್ತಿಗೆ ಈ ಪ್ರದೇಶ ಒಳಪಟ್ಟಿತ್ತು. ರಾಷ್ಟ್ರಕೂಟರ ಕಾಲದಿಂದ ಈ ಪ್ರದೇಶ ಐತಿಹಾಸಿಕ ಮಹತ್ವ ಪಡೆದುಕೊಂಡಿತು. ವಿಶೇಷವಾಗಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಬೀದರ ಜಿಲ್ಲೆಯಲ್ಲಿ ಪ್ರತ್ಯೇಕ ರಾಜಧಾನಿ ಸ್ಥಾಪನೆಗೊಂಡು ಅಲ್ಲಿಂದ ಆಡಳಿತ ನಡೆಯತೊಡಗಿತು. ಕಲ್ಯಾಣ ಚಾಲುಕ್ಯರ ಪತನದ ನಂತರ ಕಲ್ಯಾಣ ರಾಜ್ಯವು ಕಲಚೂರಿಗಳ ವಶವಾಯಿತು. ಈ ಸಂದರ್ಭದಲ್ಲಿ ಧಾರ್ಮಿಕವಾಗಿ, ಸಾಮಾಜಿಕವಾಗಿ, ಸಾಹಿತ್ಯಿಕವಾಗಿ ದೊಡ್ಡ ಆಂದೋಲನವೇ ನಡೆಯಿತು. ದೆಹಲಿ ಸುಲ್ತಾನರು ತಮ್ಮ ದಕ್ಷಿಣ ಭಾರತದ ದಾಳಿಯಲ್ಲಿ ಈ ಭಾಗದ ಹಿಂದೂ ಅರಸರನ್ನು ವಶಪಡಿಸಿಕೊಂಡು ಬೀದರನ್ನು ಸಹ ಕೈವಶ ಮಾಡಿಕೊಂಡರು. ಕ್ರಿ.ಶ. ೧೩೨೫ರಲ್ಲಿ ಮಹಮ್ಮದ್ ತುಘಲಕ್‌ನು ಬೀದರ ನಗರದ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡನು. ಇದರಿಂದಾಗಿ ಅಲ್ಲಿ ಬಹಮನಿ ಸುಲ್ತಾನರ ಆಳ್ವಿಕೆ ಆರಂಭವಾಯಿತು.

ಕ್ರಿ.ಶ. ೧೪೨೨ರಿಂದ ೧೪೩೫ರವರೆಗೆ ಆಳ್ವಿಕೆ ಮಾಡಿದ ಸುಲ್ತಾನ ಅಹಮ್ಮದಶಹನು ಬೀದರನ್ನು ರಾಜಧಾನಿಯಾಗಿ ಮಾಡಿಕೊಂಡನು. ರಾಜಧಾನಿಯಾಗಿದ್ದರಿಂದ ಸಹಜವಾಗಿ ನಗರದ ಅಭಿವೃದ್ಧಿ, ನವೀಕರಣ, ಹೊಸಕೋಟೆಗಳ ನಿರ್ಮಾಣ, ಅರಮನೆ, ಮಹಲುಗಳು, ಸಾರ್ವಜನಿಕ ಕಟ್ಟಡಗಳ ನಿರ್ಮಾಣ ಆರಂಭವಾಯಿತು. ಈ ಸಂದರ್ಭದಲ್ಲಿ ಸೂಫಿಸಂತರು ಬೀದರಿಗೆ ಆಗಮಿಸಿದರು. ೩ನೆಯ ಮಹಮ್ಮದಶಹನ ಕಾಲಕ್ಕೆ ಮಹಮ್ಮದ್ ಗವಾನನು ಬೀದರಿಗೆ ಆಗಮಿಸಿದನು. ಪ್ರಧಾನಮಂತ್ರಿಯಾಗಿ ನಿಯುಕ್ತಿಗೊಂಡ ಮೇಲೆ ಬೀದರ ಸ್ವರೂಪವೇ ಬದಲಾಯಿತು. ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಅಭಿವೃದ್ಧಿ ಹೊಂದಿತು. ವಿಶಿಷ್ಟವಾದ ಶಿಕ್ಷಣ ಸಂಸ್ಥೆಯಾದ ಮಹಮ್ಮದ್‌ಗವಾನ್ ಮದರಸಾ ಈತನ ಕಾಲದಲ್ಲಿ ನಿರ್ಮಾಣವಾಯಿತು. ಮುಂದೆ ಔರಂಗಜೇಬನ ಕಾಲಕ್ಕೆ ಬೀದರ ಮೊಗಲರ ವಶವಾಯಿತು. ಮೊಗಲರ ಪತನದ ನಂತರ ಕೆಲಭಾಗಗಳು ಮರಾಠರ ವಶದಲ್ಲಿ ಮತ್ತೆ ಕೆಲವು ಪ್ರದೇಶಗಳು ಹೈದರಾಬಾದ್ ನಿಜಾಮರ ಆಡಳಿತಕ್ಕೆ ಒಳಪಟ್ಟವು. ಕ್ರಿ.ಶ. ೧೨ನೇ ಶತಮಾನದಲ್ಲಿ ಕಲ್ಯಾಣದಲ್ಲಿ ಕಲಚೂರಿಗಳ ಆಡಳಿತಾವಧಿಯಲ್ಲಿ ವಿಶೇಷವಾದ ಧಾರ್ಮಿಕ, ಸಾಹಿತ್ಯಿಕ, ಸಾಮಾಜಿಕ ಚಟುವಟಿಕೆಗಳು ನಡೆದವು. ಬಸವಣ್ಣನವರ ನೇತೃತ್ವದಲ್ಲಿ ಅನೇಕ ಶರಣಶರಣೆಯರು ವಚನಗಳ ಮೂಲಕ ಭಕ್ತಿ ಸಾಹಿತ್ಯ ರಚಿಸಿದರು. ಇದು ಸಾಹಿತ್ಯದ ವಿಶಿಷ್ಟ ಕೊಡುಗೆಯೂ ಆಗಿದೆ. ಕನ್ನಡದ ಪ್ರಥಮ ಗದ್ಯ ಕೃತಿ ವಡ್ಡಾರಾಧನೆ

ರಚನೆಯಾಗಿದ್ದು ಬೀದರ ಜಿಲ್ಲೆಯ ಹಳ್ಳಿಖೇಡದಲ್ಲಿ. ವಿಜ್ಞಾನೇಶ್ವರನ ಮಿತಾಕ್ಷರ, ಬಿಲ್ಹಣನ "ವಿಕ್ರಮಾಂಕದೇವ ಚರಿತ", ಸುಲ್ತಾನರ ಕಾಲದಲ್ಲಿ ಆಧರಿಯ "ಬಹುಮನ್‌ನಾಮ್"ಗಳು ಇದೇ ನೆಲದಲ್ಲಿ ರಚನೆಯಾಗಿದೆ.[೭]

## ಸಾಂಸ್ಕೃತಿಕ ಪರಿಸರ ಮತ್ತು ಲಲಿತಕಲೆಗಳು

ಬೀದರ ಜಿಲ್ಲೆಯಲ್ಲಿ ವೈವಿಧ್ಯಮಯ ವಾಸ್ತುಶಿಲ್ಪಕಲೆಯ ರಚನೆಗಳಿವೆ. ಮುಸ್ಲಿಂ ಮತ್ತು ಹಿಂದೂ ಶೈಲಿಯ ವಾಸ್ತುರಚನೆಗಳು ಜಿಲ್ಲೆಯಲ್ಲಿ ಕಂಡುಬರುತ್ತವೆ. ಬೀದರ, ಕಲ್ಯಾಣ, ಭಾಲ್ಕಿ, ಹುಮನಾಬಾದ್, ಚಿಟಿಗುಪ್ಪ, ಬದಗಲ್, ಅಷ್ಟೂರು, ರಂಜೋಳ, ರಾಜೇಶ್ವರ, ಸಂಕಪುರ ಮುಂತಾದ ಕಡೆಗಳಲ್ಲಿರುವ ಕೋಟೆಗಳು, ಗುಂಬಜಗಳು, ಸಮಾಧಿಭವನಗಳು, ಮಸೀದಿಗಳು, ಅರಮನೆಗಳು ಆಕರ್ಷಕವಾಗಿವೆ.

ಬೀದರನಲ್ಲಿನ ರಂಗೀನ್‌ಮಹಲ್, ಗಗನ್‌ಮಹಲ್, ತಕ್ತ್‌ಮಹಲ್, ಟಕಣ್‌ಮಹಲ್, ದರಬಾರ್ ಮಹಲ್ ಮುಂತಾದ ಅರಮನೆಗಳು, ಜಾಮೀಮಸೀದಿ, ಅರಸರ ಸಮಾಧಿ ಭವನಗಳು, ಬರೀದ್‌ಶಾಹಿ ಸಮಾಧಿ, ಚೌಬಾರಾ ಕಟ್ಟಡ, ಮಹಮ್ಮದ್ ಗವಾನನ ಮದರಸಾ ಮುಂತಾದವುಗಳು ಇಂಡೋ ಪರ್ಶಿಯನ್ ಶೈಲಿಯ ಆಕರ್ಷಕ ವಾಸ್ತುರಚನೆಗಳಾಗಿವೆ. ರಂಗೀನ್ ಮಹಲಿನಲ್ಲಿರುವ ಸುಲ್ತಾನರ ಕಾಲದ ವರ್ಣಚಿತ್ರಕಲೆ ಅತ್ಯಂತ ಆಕರ್ಷಕವಾಗಿದೆ. ಬೀದರ ಸಮೀಪ ಇರುವ ಅಷ್ಟೂರದಲ್ಲಿ ಸುಲ್ತಾನರ ಭವ್ಯವಾದ ಸಮಾಧಿ ಭವನಗಳಿವೆ. ಬೃಹತ್ ಆಕಾರದ ಈ ಕಟ್ಟಡಗಳು ವಿಶಾಲವಾದ ಗುಂಬಜ್‌ಗಳನ್ನು ಹೊಂದಿವೆ. ಅನೇಕ ಸಮಾಧಿ ಭವನಗಳ ಒಳಭಾಗದಲ್ಲಿ ವರ್ಣಚಿತ್ರ ಕಲೆಯಿಂದ ಅಲಂಕರಿಸಲಾಗಿದೆ. ಹೂಬಳ್ಳಿಯ ನಕ್ಷೆಗಳು, ಜಾಮಿತಿಕ ನಕ್ಷೆಗಳು, ಕುರಾನಿನ ವಾಕ್ಯಗಳನ್ನು ಕೆಂಪು, ನೀಲಿ, ಹಸಿರು, ಹಳದಿ, ಬಿಳಿ ಹೀಗೆ ವಿವಿಧ ವರ್ಣಗಳಿಂದ ರಚನೆಯಾಗಿವೆ. ಕೆಲವು ಕಡೆಗೆ ನೈಜವಾದ ಬೆಳ್ಳಿ ಮತ್ತು ಬಂಗಾರದ ವರ್ಣಗಳನ್ನು ಚಿತ್ರಗಳಿಗೆ ಬಳಸಿದ್ದಾರೆ. ಜಿಲ್ಲೆಯ ಇನ್ನಿತರ ಕಡೆಗಳಲ್ಲೂ ಅನೇಕ ಬಗೆಯ ದೇವಾಲಯಗಳು, ಮಠಮಾನ್ಯಗಳು, ಗುಹಾಲಯಗಳು ಕಂಡುಬರುತ್ತವೆ. ಹಿಂದೆ ರಾಜಧಾನಿಯಾಗಿದ್ದ ಇಂದಿನ ಬಸವಕಲ್ಯಾಣದಲ್ಲಿಯೂ ಅನೇಕ ಐತಿಹಾಸಿಕ ವಾಸ್ತುರಚನೆಗಳಿವೆ. ದೇವಾಲಯಗಳು, ಶರಣರು ವಾಸಿಸುತ್ತಿದ್ದರು ಎಂದು ನಂಬಲಾಗಿರುವ ಕೊರೆದ ಗುಹೆಗಳಿವೆ. ಬಸವಕಲ್ಯಾಣದ ಹೊರವಲಯ ದಲ್ಲಿರುವ ಒಂದು ಗುಹೆಯನ್ನು 'ಬಸವಣ್ಣನವರ ಅರಿವಿನ ಮನೆ' ಎಂದು ಕರೆಯುತ್ತಾರೆ. ಗಟ್ಟಿಯಾದ ಜಂಬಿಟ್ಟಿಗೆ ಗುಡ್ಡದಲ್ಲಿ ಇದನ್ನು ಕೊರೆಯಲಾಗಿದೆ. ಇಲ್ಲಿ ಬಸವೇಶ್ವರರ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಈ ಗುಹೆಯ ಪಕ್ಕದಲ್ಲಿ ಮತ್ತೊಂದು ಗುಹೆ ಇದೆ. ಅದನ್ನು ಹಡಪದ ಅಪ್ಪಣ್ಣ ಗುಹೆ ಎನ್ನುತ್ತಾರೆ. ಸುರಂಗ ಮಾರ್ಗದಂತೆ ಇರುವ ಈ ಗುಹೆಯ ಕೊನೆಯ ಭಾಗದಲ್ಲಿ ಶಿವಲಿಂಗ್ ಕಂಡುಬರುತ್ತದೆ.

---

೭. ಡಾ. ಸೋಮನಾಥ ಯಾಳವಾರ(ಸಂ.): ಬೀದರ ಜಿಲ್ಲಾ ದರ್ಶನ, ಪು-೩೪, ೩೫.

೮. ಡಾ. ಸೋಮನಾಥ ಯಾಳವಾರ(ಸಂ.): ಬೀದರ ಜಿಲ್ಲಾ ದರ್ಶನ, ಪು-೩೬, ೩೭.

ತ್ರಿಪುರಾಂತಕ ಕೆರೆಯ ಬಲಭಾಗದಲ್ಲಿ ಅಕ್ಕನಾಗಮ್ಮ ಮತ್ತು ನೀಲಾಂಬಿಕೆಯರ ಗುಹೆಗಳಿವೆ. ಜಂಬಿಟ್ಟಿಗೆ ಕಲ್ಲಿನ ಕೊರೆದ ಈ ಎರಡೂ ಗುಹೆಗಳ ಜೊತೆಯಾಗಿವೆ. ಇವುಗಳ ಪ್ರವೇಶದ್ವಾರ ಚಿಕ್ಕದಾಗಿದ್ದು, ಮೇಲ್ಭಾಗದಲ್ಲಿ ಪಡಸಾಲೆಯಂತೆ ಕಾಣುವ ಕಟ್ಟಡಗಳಿವೆ. ಗುಹೆಯ ಒಳಭಾಗದಲ್ಲಿ ಒಂದು ಕಟ್ಟೆ ಇದೆ. ಅದನ್ನು 'ಚನ್ನಬಸವಣ್ಣನವರ ತೊಟ್ಟಿಲು' ಎನ್ನುತ್ತಾರೆ. ಇನ್ನೊಂದು ಚಿಕ್ಕ ಕಟ್ಟೆಯ ಮೇಲೆ ಹಲವಾರು ಶಿಲ್ಪಗಳಿವೆ. ಗುಹೆಯ ಮೇಲ್ಭಾಗದ ಮಂಟಪದಲ್ಲಿ ಅಕ್ಕನಾಗಮ್ಮನು ಇಷ್ಟಲಿಂಗ ಪೂಜಿಸುತ್ತಿರುವ ಇತ್ತೀಚಿನ ಶಿಲ್ಪವಿದ್ದು ಭಗ್ನಗೊಳಿಸಲಾಗಿದೆ. ತ್ರಿಪುರಾಂತಕ ಕೆರೆಯ ದಕ್ಷಿಣ ಭಾಗದಲ್ಲಿ 'ಮರಿದೇವರಗುಡ್ಡ' ಎಂದು ಕರೆಯುವ ಸ್ಥಳವಿದೆ. ಇಲ್ಲಿ ಘನಲಿಂಗ ರುದ್ರಮುನಿ ದೇವರು ಮತ್ತು ವಿಜ್ಞಾನೇಶ್ವರರ ಗುಹೆಗಳಿವೆ. ರುದ್ರಮುನಿ ದೇವರ ಗುಹೆಯು ಉದ್ದ ಹಾಗೂ ಅಗಲದಲ್ಲಿ ಅತ್ಯಂತ ಸುಂದರವಾಗಿ ಕಂಡುಬರುತ್ತದೆ. ಈ ಗುಹೆಯ ಎದುರುಗಡೆ ಒಂದು ಮಂಟಪವಿದ್ದು, ನಂದಿಯ ಶಿಲ್ಪವನ್ನು ಅದರಲ್ಲಿ ಸ್ಥಾಪಿಸಲಾಗಿದೆ. ರುದ್ರಮುನಿದೇವರ ಗವಿಯ ಎಡಭಾಗದಲ್ಲಿ ವಿಜ್ಞಾನೇಶ್ವರರ ಗುಹೆ ಇದೆ. ಇದಕ್ಕೆ ಹೊಂದಿಕೊಂಡಂತೆ ಕೆಲವು ಕೋಣೆಗಳನ್ನು ನಿರ್ಮಿಸಲಾಗಿದೆ.

ನುಲಿಯ ಚಂದಯ್ಯ ಮತ್ತು ಅಂಬಿಗರ ಚೌಡಯ್ಯನವರ ಗುಹೆಗಳು ತ್ರಿಪುರಾಂತಕ ಕೆರೆಯ ಮತ್ತೊಂದು ಬದಿಗಿವೆ. ಈ ಎರಡೂ ಚಿಕ್ಕ ಗುಹೆಗಳು ಗಟ್ಟಿಯಾದ ಜಂಬಿಟ್ಟಿಗೆ ನೆಲದಲ್ಲಿ ಕೊರೆಯಲ್ಪಟ್ಟಿವೆ. ಚಂದಯ್ಯನ ಗುಹೆಯ ಎದುರಿಗೆ ಒಂದು ಚಿಕ್ಕ ಬಾವಿ ಇದ್ದು, ಸದಾಕಾಲ ಸಿಹಿ ನೀರಿನಿಂದ ತುಂಬಿರುತ್ತದೆ. ತ್ರಿಪುರಾಂತಕ ಕೆರೆಯ ಕೆಳಭಾಗದಲ್ಲಿ ಒಂದು ಸುಂದರವಾದ ತೆರೆದ ಬಾವಿ ಇದೆ. ಕಲಾತ್ಮಕವಾದ ಈ ಬಾವಿಯನ್ನು 'ಮಡಿವಾಳ ಮಾಚಿದೇವರ ಹೊಂಡ' ಎನ್ನುತ್ತಾರೆ. ಶಿವಶರಣರ ಮಲಿನ ಬಟ್ಟೆಗಳನ್ನು ಇದೇ ಹೊಂಡದಲ್ಲಿ ಮಾಚಿದೇವರು ಸ್ವಚ್ಛಗೊಳಿಸುತ್ತಿದ್ದರು ಎನ್ನುತ್ತಾರೆ. ಹೊಂಡದ ಮಧ್ಯಭಾಗದಲ್ಲಿ ಒಂದು ದೇವಾಲಯವಿದೆ. ಅದರಲ್ಲಿ ಶಿವಲಿಂಗವಿದೆ. ಮಡಿವಾಳ ಮಾಚಿದೇವರು ಈ ದೇವಾಲಯದಲ್ಲಿ ವಾಸಿಸುತ್ತಿದ್ದರು ಎನ್ನುತ್ತಾರೆ. ಅಲ್ಲಮಪ್ರಭುದೇವರ ಗದ್ದುಗೆಯು ಕೆರೆಯ ದಕ್ಷಿಣದ ಮೂಲೆಯಲ್ಲಿದೆ. ಈ ಗದ್ದುಗೆಯ ಮಾದರಿಯು ಮಠದ ವಿನ್ಯಾಸದಲ್ಲಿದೆ. ಗದ್ದುಗೆಯ ಮೇಲೆ ಸುಂದರವಾದ ಮಂಟಪದಂತಹ ಕಟ್ಟಡವಿದೆ. ಸುತ್ತಲೂ ಕೆಲವು ಕೋಣೆಗಳಿವೆ. ಮಠದ ಎದುರಿನಲ್ಲಿ ನಂದಿ ಮಂಟಪವಿದೆ. ಅಲ್ಲಮಪ್ರಭುದೇವರ ಮಠದ ಈ ಸ್ಥಳವು ಇಂದು ಸ್ಮಶಾನ ಭೂಮಿಯಾಗಿ ಬಳಕೆಯಾಗುತ್ತಿದೆ. ಬಸವಕಲ್ಯಾಣದ ಬಸವೇಶ್ವರ ದೇವಾಲಯದ ಸಮೀಪ 'ಪರುಷಕಟ್ಟೆ' ಎಂಬ ಕಟ್ಟೆ ಕಂಡುಬರುತ್ತದೆ. ಬಸವೇಶ್ವರರು ಇದೇ ಕಟ್ಟೆಯ ಮೇಲೆ ಕುಳಿತು ಭಕ್ತರ ಇಚ್ಛೆಗಳನ್ನು ನೆರವೇರಿಸುತ್ತಿದ್ದರು ಎನ್ನುತ್ತಾರೆ. ೩೦ ಅಡಿ ಉದ್ದ, ೧೫ ಅಡಿ ಅಗಲವಾಗಿರುವ ಈ ಕಟ್ಟೆಯ ಮೆಟ್ಟಿಲುಗಳ ಪಕ್ಕದಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯ ಎರಡು ಕಲಾತ್ಮಕ ಕಂಬಗಳನ್ನು ನೋಡಬಹುದು. ಕಟ್ಟೆಯ ಮೇಲೆ ನಂದಿಯ ಶಿಲ್ಪವಿದೆ.[೯]

---

೯. ಡಾ. ಸೋಮನಾಥ ಯಾಳವಾರ(ಸಂ.): ಬೀದರ ಜಿಲ್ಲಾ ದರ್ಶನ, ಪು–೩೯. ೪೦.

ಬಸವ ಕಲ್ಯಾಣದಿಂದ ೫ ಕಿ.ಮೀ. ದೂರದಲ್ಲಿ ಭೂಕೊರಕಲಿನ ಒಂದು ಪ್ರದೇಶದಲ್ಲಿ ತಿಳಿಯಾದ ನೀರಿನ ಹಳ್ಳವು ಹರಿಯುತ್ತದೆ. ಇದಕ್ಕೆ ಚನ್ನಬಸವಣ್ಣನ ತೀರ್ಥ ಮತ್ತು ಅಕ್ಕನ ತೀರ್ಥ ಎಂಬುದಾಗಿ ಕರೆಯುತ್ತಾರೆ. ಈ ಹಳ್ಳದ ಬಲಬದಿಗೆ ದಿಬ್ಬದಲ್ಲಿ ಗುಹೆಯನ್ನು ಕೊರೆಯಲಾಗಿದೆ. ಇದಕ್ಕೆ ಅಕ್ಕಮಹಾದೇವಿಯ ವಾಸಸ್ಥಳವೆಂದು ಕರೆಯುತ್ತಾರೆ. ಸಿದ್ಧೇಶ್ವರ ದೇವಾಲಯವು ಕಲ್ಯಾಣದಿಂದ ೨ ಕಿ.ಮೀ. ದೂರದಲ್ಲಿದೆ. ಕಲ್ಯಾಣ ಚಾಲುಕ್ಯ ಶೈಲಿಯ ಈ ದೇವಾಲಯವು ಸುಂದರ ಶಿಲ್ಪಗಳಿಂದ ಅಲಂಕೃತಗೊಂಡಿದೆ. ಸೊನ್ನಲಾಪುರದಿಂದ ಆಗಮಿಸಿದ ಸಿದ್ಧರಾಮನು ಇದೇ ಸ್ಥಳದಲ್ಲಿ ಕುಟೀರ ಸ್ಥಾಪಿಸಿಕೊಂಡು ವಾಸಿಸುತ್ತಿದ್ದನು ಎನ್ನುತ್ತಾರೆ. ದೇವಾಲಯದ ಒಳಭಾಗದಲ್ಲಿ ಶಿವಲಿಂಗ, ಎದುರಿಗೆ ನಂದಿ ಶಿಲ್ಪಗಳಿವೆ. ಕೆಲವರು ಇದನ್ನು ಕೊಂಡಗುಳಿಕೇಶಿರಾಜನ ದೇವಾಲಯ ಎಂದು ಗುರುತಿಸುತ್ತಾರೆ. ಮುಗ್ಧ ಸಂಗಯ್ಯನ ಗವಿಯು ಬಸವಕಲ್ಯಾಣದ ಸಮೀಪದಲ್ಲಿರುವ ಶಿವಪುರ ಎಂಬ ಹಳ್ಳಿಯಲ್ಲಿದೆ. ಗಟ್ಟಿಯಾದ ನೆಲದಲ್ಲಿ ಕೊರೆಯಲಾದ ಈ ಗುಡಿಯು ದೊಡ್ಡದಾಗಿದ್ದು, ಒಳಭಾಗದಲ್ಲಿ ಶಿವಲಿಂಗವನ್ನು ಸ್ಥಾಪಿಸಲಾಗಿದೆ. ಮೋಳಿಗೆ ಮಾರಯ್ಯನ ಗುಹೆಯು ಕಲ್ಯಾಣದಿಂದ ೨೦ ಕಿ.ಮೀ. ದೂರದಲ್ಲಿರುವ ಮೊಳಕೇರಿ ಗ್ರಾಮದಲ್ಲಿದೆ. ಗಟ್ಟಿಯಾದ ಪ್ರಸ್ಥಭೂಮಿಯಲ್ಲಿ ಈ ಗುಹೆಯನ್ನು ಕೊರೆಯಲಾಗಿದೆ. ಈ ಗುಹೆಯಲ್ಲಿ ಕೋಣೆಗಳು, ಕಂಬಗಳು, ಪಾವಟಿಗೆಗಳನ್ನು ಕೊರೆದಿರುವುದು ವಿಶೇಷವಾಗಿದೆ. ೫೦ ಅಡಿ ಉದ್ದ ಮತ್ತು ಅಗಲವಾಗಿರುವ ಈ ಗುಹೆಯ ಮೇಲ್ಭಾಗದಲ್ಲಿ ದೇವಾಲಯ ನಿರ್ಮಿಸಲಾಗಿದೆ. ಗವಿಯ ಒಳಭಾಗದಲ್ಲಿ ಶಿವಲಿಂಗವನ್ನು ಸ್ಥಾಪಿಸಲಾಗಿದೆ. ಇವುಗಳಲ್ಲದೆ ಬಸವಕಲ್ಯಾಣದ ಸುತ್ತಲೂ ಹಲವಾರು ಐತಿಹಾಸಿಕ ಸ್ಮಾರಕಗಳು ಕಂಡುಬರುತ್ತವೆ.

ಕಲ್ಯಾಣದ ಪಶ್ಚಿಮ ದಿಕ್ಕಿನಲ್ಲಿರುವ ಉರಿಲಿಂಗಪೆದ್ದಿಯಗುಹೆ, ದೇವರ ಹಾಲಹಳ್ಳಿಯಲ್ಲಿನ ಚನ್ನಬಸವಣ್ಣನ ಗುಹೆ, ಹಳ್ಳಿಖೇಡದಲ್ಲಿರುವ ಕಿನ್ನರಿ ಬ್ರಹ್ಮಯ್ಯನ ಮಠ, ಹಂದ್ರಾಳ ಗ್ರಾಮದಲ್ಲಿನ ಘಟ್ಟಿವಾಳಯ್ಯನ ಗವಿ, ಚಿದ್ರಿಯಲ್ಲಿರುವ ಮೇದಾರಕೇತಯ್ಯಗವಿ, ರೆಕೂಳಗಿಯಲ್ಲಿನ ಬಹುರೂಪಿ ಚೌಡಯ್ಯನ ಗವಿ, ಸಂತಾಪೂರದಲ್ಲಿನ ಗೊಗ್ಗವ್ವೆಯ ದೇವಾಲಯ, ಭಾಲ್ಕಿಯಲ್ಲಿರುವ ಕುಂಬಾರ ಗುಂಡಯ್ಯನ ಗವಿ, ಬೋರಾಳದಲ್ಲಿರುವ ಶಂಕರ ದಾಸಿಮಯ್ಯಗವಿ, ಇಲ್ಲಾಳ ಗ್ರಾಮದ ಇಳೆಹಾಳ ಬೊಮ್ಮಯ್ಯಗವಿ, ನಾರಾಯಣಪುರದಲ್ಲಿನ ಒಕ್ಕಲಿಗ ಮುದ್ದಯ್ಯಗವಿ, ಸಕಲೇಶ ಮಾದರಸಗವಿ ಹೀಗೆ ಹತ್ತಾರು ಸ್ಮಾರಕಗಳನ್ನು ಹೆಸರಿಸಬಹುದು.[೧೦]

**ಬೀದರ ಜಿಲ್ಲೆಯ ಪ್ರಾಚೀನ ಶಿಲ್ಪಕಲೆ**

ಶಿಲಾಯುಗ ಕಾಲದಲ್ಲಿ ಮಾನವನು ಕೆತ್ತಿ ರೂಪಿಸಿದ ವಿವಿಧ ಮಾದರಿಯ ಆಯುಧ ಹಾಗೂ ನಿತ್ಯೋಪಯೋಗಿ ವಸ್ತುಗಳು ಒಂದು ರೀತಿಯಲ್ಲಿ ಪ್ರಾರಂಭಿಕ ಹಂತದ ಶಿಲ್ಪಗಳಾಗಿವೆ ಎನ್ನಬಹುದು. ಬೀದರ ಜಿಲ್ಲೆಯ ಅನೇಕ ಸ್ಥಳಗಳಲ್ಲಿ ಶಿಲಾಯುಗ ಕಾಲದ ಮಾನವರ

---

೧೦. ಡಾ. ಸೋಮನಾಥ ಯಾಳವಾರ(ಸಂ.): ಬೀದರ ಜಿಲ್ಲಾ ದರ್ಶನ, ಪು-೪೦

ಆಯುಧಗಳು ಮತ್ತು ಉಪಕರಣಗಳು ಕಂಡುಬಂದಿವೆ. ಅಲೆಂಬರ, ಮೈನಳ್ಳಿ, ಖಣಿರಂಜೋಳ, ಸಂಗಾವಿ, ಅಬೆಸಂಗವಿ, ಗೋರಚಿಂಚೋಳಿ, ಚಿಟ್ಟ, ಕಣಜಿ, ಡೋಣಗಾಪುರ, ನಾರದ ಸಂಗಮ, ಹಜ್ಜರಗಿ ಔರಾದ, ಮುಂಗನಾಳ, ವಾನಮರಪಳ್ಳಿ, ಮಮದಾಪುರ, ತೇಗಂಪುರ, ಶಂಬಳ್ಳಿ, ಹಳ್ಳಿಖೇಡ, ಎಕಲಾರ ಮುಂತಾದ ಇನ್ನೂ ಹಲವಾರು ನೆಲೆಗಳಲ್ಲಿ ಆದಿಮಾನವರ ಆಯುಧಗಳು ಕಂಡುಬಂದಿವೆ.

ವಿದ್ವಾಂಸರ ಅನ್ವೇಷಣೆಯಲ್ಲಿ ಬೀದರ ಜಿಲ್ಲೆಯಲ್ಲಿ ಪ್ರಾಚೀನ ಇತಿಹಾಸ ಕಾಲದ ಕೆಲವು ಶಿಲ್ಪಗಳು ಕಂಡುಬಂದಿವೆ. ಬಸವಕಲ್ಯಾಣದಿಂದ ೧೦ ಕಿ.ಮೀ. ದೂರದಲ್ಲಿರುವ ಮೋರಖಂಡಿ ಎಂಬ ಹಳ್ಳಿಯಲ್ಲಿ ಕ್ರಿ.ಶ. ೮ರಿಂದ ೯ನೇ ಶತಮಾನಕ್ಕೆ ಸೇರಿದ ೫ ಗುಹೆಗಳು ಕಂಡುಬಂದಿವೆ. ಇವುಗಳಲ್ಲಿ ಸಪ್ತಮಾತೃಕೆಯರ ಏಳು ಬಿಡಿ ಶಿಲ್ಪಗಳು, ಶಿವಲಿಂಗ, ಚೌರಿ ಬೀಸುವ ಸೇವಕ, ಮಹಿಷಾಸುರ ಮರ್ದಿನಿ, ನಟರಾಜ ಶಿಲ್ಪಗಳು ಪತ್ತೆಯಾಗಿವೆ. ಮೋರಖಂಡಿಯ ಐದು ಗುಹಾಲಯಗಳ ಒಳಭಾಗದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಮೊದಲನೆಯ ಗುಹೆಯ ಹೊರಗೋಡೆಗೆ ಹೊಂದಿಕೊಂಡಂತೆ ಒಂದು ಗಣೇಶನ ಶಿಲ್ಪವು ಕಂಡುಬಂದಿದೆ. ವಸ್ತ್ರಾಭರಣಗಳನ್ನು ಧರಿಸಿರುವ ಗಣಪತಿ ಕುಳಿತ ಭಂಗಿಯಲ್ಲಿದೆ. ಎರಡನೆಯ ಗುಹೆಯಲ್ಲಿ ಇತ್ತೀಚಿನ ದಿನಗಳಲ್ಲಿ ಕಂಡರಿಸಲಾದ ಶಿವಲಿಂಗವಿದೆ. ಬಸವಕಲ್ಯಾಣದಿಂದ ೩ ಕಿ.ಮೀ. ದೂರದಲ್ಲಿರುವ ನೀಲಕಂಠ ಎಂಬ ಗ್ರಾಮದಲ್ಲಿಯೂ ಹಲವಾರು ಪ್ರಾಚೀನ ಶಿಲ್ಪಗಳು ಪತ್ತೆ ಮಾಡಲ್ಪಟ್ಟಿವೆ. ಅಷ್ಟಭುಜದ ಮಹಿಷಾಸುರ ಮರ್ದಿನಿಯ ಎರಡು ವಿಭಿನ್ನ ಭಂಗಿಯ ಶಿಲ್ಪಗಳು ಸುಂದರವಾಗಿದ್ದು ಕ್ರಿ.ಶ. ೧೧ನೇ ಶತಮಾನಕ್ಕೆ ಸೇರುತ್ತವೆ. ಇದೇ ಕಾಲದ ಪದ್ಮಾವತಿ ಯಕ್ಷಿಣಿಯ ಶಿಲ್ಪವು ಮಿರ್ಕಲ್ ಹಳ್ಳಿಯಲ್ಲಿದೆ. ಅಲ್ಲದೆ ಉಜಳಂ ಗ್ರಾಮದ ಶೈವ ದ್ವಾರಪಾಲಕರು ಚೌರಿ ಹಿಡಿದುಕೊಂಡ ಸೇವಕಿಯರು, ಧನ್ನೂರುದಲ್ಲಿರುವ ಮನುಷ್ಯರೂಪದ ನಾಗ-ನಾಗಿಣಿಯರ ಶಿಲ್ಪಗಳು ಇದೇ ಕಾಲಮಾನದವುಗಳಾಗಿವೆ. ಹಲಸೂರು ಎಂಬಲ್ಲಿ ಹಾಳಾದ ಸ್ಥಿತಿಯಲ್ಲಿರುವ ಜೈನ ಬಸದಿಯಲ್ಲಿ ತೀರ್ಥಂಕರರ ಶಿಲ್ಪಗಳು, ಚೈತ್ಯ ಮಾದರಿಯ ಉಬ್ಬುಶಿಲ್ಪಗಳು, ಪಾರ್ಶ್ವನಾಥನ ಶಿಲ್ಪ ಕಂಡುಬರುತ್ತವೆ. ಈ ಕಾಲಮಾನದ ಶಿಲ್ಪಗಳು, ಸೂರ್ಯ, ಭೈರವ ಶಿಲ್ಪಗಳು, ಕೆರೆಯ ದಂಡೆಯಲ್ಲಿರುವ ಪಾಶ್ವನಾಥ ಶಿಲ್ಪಗಳು ಗಮನಾರ್ಹವಾಗಿವೆ.[೧೧]

ಬೀದರ ತಾಲೂಕಿನ ಭೂದೇವರ ಗ್ರಾಮದಲ್ಲಿ ಮಾರುತಿ ಮಂದಿರವಿದೆ. ಇದರಲ್ಲಿರುವ ಆಂಜನೇಯ ಶಿಲ್ಪವು ಕ್ರಿ.ಶ. ೧೧ನೇ ಶತಮಾನಕ್ಕೆ ಸೇರುತ್ತದೆ. ಖಣಿರಂಜೋಳ ಎಂಬಲ್ಲಿ ಒಂದು ವೀರಗಲ್ಲಿನಲ್ಲಿ ಆಕರ್ಷಕ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಮೂವರು ವೀರರು, ಅಪ್ಸರೆಯರು, ನಕ್ಷೆಯ ವಿನ್ಯಾಸಗಳನ್ನು ಒಂದೇ ಕಲ್ಲಿನಲ್ಲಿ ನಿರ್ಮಿಸಲಾಗಿದೆ. ಸಂಗೊಳ್ಳಿ ಗ್ರಾಮದಲ್ಲಿರುವ ಒಂದು ಹಾಳಾದ ಗುಡಿಯಲ್ಲಿ ನಾಗ-ನಾಗಿಣಿಯರ ಸುಂದರ ಶಿಲ್ಪಗಳಿವೆ. ಮನುಷ್ಯ ಮತ್ತು ನಾಗ

---

೧೧. ಡಾ. ಸೋಮನಾಥ ಯಾಳವಾರ(ಸಂ.): ಬೀದರ ಜಿಲ್ಲಾ ದರ್ಶನ, ಪು–೪೧.

ರೂಪಗಳು ಸಂಯುಕ್ತಗೊಂಡಿರುವ ಆಕಾರಗಳಾಗಿವೆ. ಈ ಕಾಲದ ಇನ್ನಿತರ ಕೆಲವು ಶಿಲ್ಪಗಳಲ್ಲಿ ಅಲೆಂಬರ ಗ್ರಾಮದಲ್ಲಿನ ದ್ವಿಭುಜಗಣೇಶ, ಚಂಡೇಶ್ವರ, ಭಾಲ್ಕಿ, ಚಳಕಾಪುರ, ಹಳ್ಳಿಖೇಡ, ಸಂಗೊಳ್ಳಿಗಳಲ್ಲಿರುವ ಮಹಿಷಾಸುರ ಮರ್ದಿನಿ ಶಿಲ್ಪಗಳು ತುಂಬಾ ಆಕರ್ಷಕವಾಗಿವೆ. ಹುಮನಾಬಾದ ತಾಲೂಕಿನ ಬೋರಂಪಳ್ಳಿಯಲ್ಲಿ ಪದ್ಮನಿಧಿಯ ಶಿಲ್ಪಗಳು, ದಂಪತಿ ಶಿಲ್ಪಗಳು, ಪಾರ್ಶ್ವನಾಥ ಶಿಲ್ಪ, ಸೇವಕರ ಶಿಲ್ಪಗಳು ಆಕರ್ಷಕವಾಗಿವೆ. ಭಾಲ್ಕಿಯಲ್ಲಿರುವ ಜೈನ ತೀರ್ಥಂಕರರ ಶಿಲ್ಪಗಳು, ಶಿವಲಿಂಗ, ಡೋಣಗಾಪುರದ ಯಕ್ಷ-ಯಕ್ಷಿಯರ ಶಿಲ್ಪಗಳು, ಗಜಲಕ್ಷ್ಮೀ ಶಿಲ್ಪಗಳು ಕ್ರಿ.ಶ. ೧೦ನೇ ಶತಮಾನಕ್ಕೆ ಸೇರಿದವುಗಳಾಗಿವೆ. ಇಂತಹ ವಿವಿಧ ರೀತಿಯ ಶಿಲ್ಪ ಮತ್ತು ವಾಸ್ತುಕಲೆಗಳಲ್ಲದೆ ಬೀದರ ಜಿಲ್ಲೆಯಲ್ಲಿ ಧಾರ್ಮಿಕ ಮತ್ತು ಐತಿಹಾಸಿಕವಾಗಿ ಮಹತ್ವ ಹೊಂದಿರುವ ಅನೇಕ ನೆಲೆಗಳು ಮತ್ತು ಸ್ಮಾರಕಗಳು ಕಲಾತ್ಮಕವಾಗಿವೆ. ಬೀದರಿನ ಚೌಬಾರಾಕಟ್ಟಡ, ನರಸಿಂಹ ಝುರಣಿ, ಬರೀದಶಾಹಿ ಸಮಾಧಿ, ಗುರುನಾನಕ್ ಝುರಾ, ಚರ್ಚ್, ಜಲಸಂಗಿಯ ಕಲ್ಲೇಶ್ವರ ದೇವಾಲಯ, ನಾರಾಯಣಪುರದ ಶಿವದೇವಾಲಯ, ಬಸವಕಲ್ಯಾಣದ ಅನುಭವಮಂಟಪ, ಪಾಪನಾಶ ದೇವಾಲಯ ಬೀದರ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು.[೧೨]

## ೨.೨. ಕಲಬುರಗಿ(ಗುಲಬರ್ಗಾ) ಜಿಲ್ಲೆ

ದಕ್ಷಿಣ ಭಾರತದ ಇತಿಹಾಸದಲ್ಲಿ ಕಲಬುರ್ಗಿ(ಗುಲಬರ್ಗಾ) ಶಿಲ್ಪ, ವಾಸ್ತುಶಿಲ್ಪ ಮತ್ತು ಚಿತ್ರಕಲೆಯಲ್ಲಿ ತನ್ನದೇ ಆದ ವಿಶಿಷ್ಟ ಪರಂಪರೆಯನ್ನು ಹೊಂದಿದೆ. ಈ ಪ್ರದೇಶದಲ್ಲಿ ರಾಷ್ಟ್ರಕೂಟ ಚಾಲುಕ್ಯ, ಬಹಮನಿ ರಾಜಮನೆತನಗಳ ಹಾಗೂ ಜೈನ ವೀರಶೈವ ಧರ್ಮಗಳ ಸಾಂಸ್ಕೃತಿಕ ಪರಂಪರೆಯನ್ನು ಕಾಣುತ್ತೇವೆ. ಹೈದ್ರಾಬಾದ್ ಕರ್ನಾಟಕದ ಶೈಕ್ಷಣಿಕ ಇತಿಹಾಸವನ್ನು ತಿಳಿಸುವ ಸ್ಥಳವೆಂದರೆ, ಇಂದಿನ ಚಿತ್ತಾಪೂರ ತಾಲೂಕಿನ ನಾಗಾಯಿ. ಹಾಳುಬಿದ್ದ ಈ ಊರಲ್ಲಿ ರಾಷ್ಟ್ರಕೂಟ ಅರಸರ ಗತವೈಭವ ಸಾರುವ ಅನೇಕ ಶಿಲಾಶಾಸನಗಳು ದೊರೆತಿವೆ. ಇದರಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳೂ ಲಭ್ಯವಾಗಿವೆ. ನಾಗಾಯಿ ವಿಶ್ವವಿದ್ಯಾಲಯ ಮಟ್ಟದ ಜ್ಞಾನ ಪ್ರಸಾರದ ಸಂಸ್ಥೆಯಾಗಿತ್ತು. ನಾಗಾಯಿ ೮ನೇ ಶತಮಾನದ ಉತ್ತರಾರ್ಧ ಮತ್ತು ೯ನೇ ಶತಮಾನದ ಪೂರ್ವಾರ್ಧದಲ್ಲಿ ಉತ್ಕೃಷ್ಟ ಶಿಕ್ಷಣ ಸಂಸ್ಥೆಯಾಗಿತ್ತೆಂದು ತಿಳಿದುಬರುತ್ತದೆ.

ಸಂಪ್ರದಾಯ ಮತ್ತು ಸಮಕಾಲೀನ ಪ್ರಜ್ಞೆಯೊಂದಿಗೆ ಕಲಬುರ್ಗಿ ಜಿಲ್ಲೆಯ ಚಿತ್ರ, ವಾಸ್ತುಶಿಲ್ಪಗಳಲ್ಲಿ ತನ್ನದೇ ಆದ ನೆಲದ ಕಲ್ಪನೆ ರೂಪಿಸಿಕೊಂಡಿದೆ. ಹಲವಾರು ಕ್ರಾಂತಿ ದಾಳಿಗಳ ಪ್ರಭಾವದಿಂದ ಬರಗಾಲ, ಬಡತನ ಎದುರಿಸುತ್ತಾ ನಿರಂತರವಾಗಿ ತನ್ನ ನೋವನ್ನು ಚಿತ್ರಕಲೆ, ಶಿಲ್ಪ, ವಾಸ್ತುಕಲೆಗಳಲ್ಲಿ ತೋರಿಸಿಕೊಟ್ಟಿದ್ದಾರೆ. ಹಲವಾರು ಚಿತ್ರ ಶಿಲ್ಪ ಕಲಾಕೃತಿಗಳಿಗೆ ಶಾಶ್ವತವಾಗಿ ಯಾವುದೇ ಪೋಷಣೆ ಸಿಗದೇ ನೂರಾರು ರೀತಿಯ ಅನಾಹುತಗಳಿಗೆ ತುತ್ತಾಗಿ ಅಳಿದು ಉಳಿದ ಕಲಾ ಸ್ಮಾರಕಗಳು ಈಗಲೂ ನೋಡಲು ಸಿಗುತ್ತವೆ. ಇವುಗಳಲ್ಲಿ ಕಾಳಗಿ, ಸಿರಿವಾಳ, ಸನ್ನತಿ,

---

೧೨. ಡಾ. ಸೋಮನಾಥ ಯಾಳವಾರ(ಸಂ.): ಬೀದರ ಜಿಲ್ಲಾ ದರ್ಶನ, ಪು–೪೨, ೪೩.

ವಾವೂರು, ಕಿರಣಗಿ, ಮಣ್ಣೂರು ಮಳಖೇಡ, ಹರಸೂರದಂತಹ ಹಲವಾರು ಗ್ರಾಮಗಳು ಒಂದಾನೊಂದು ಕಾಲಕ್ಕೆ ಮೆರೆದ ಐತಿಹಾಸಿಕ ಕಲಾ ಕೇಂದ್ರಗಳಾಗಿದ್ದವು. ರಾಷ್ಟ್ರಕೂಟರ, ಹೊಯ್ಸಳರ, ಜೈನ, ಶೈವ, ಮುಸ್ಲಿಮರ ವಿವಿಧ ಸಾಂಸ್ಕೃತಿಕ, ಶೈಕ್ಷಣಿಕ, ಧಾರ್ಮಿಕ ಜೀವನದ ಬೆಳವಣಿಗೆಗಳ ವಿಕಾಸವನ್ನು ಅಳಿದುಳಿದ ಚಿತ್ರಶಿಲ್ಪಗಳಿಂದ ತಿಳಿಯಬಹುದಾಗಿದೆ.

ಸಿರಿವಾಳ ಶಿಲ್ಪ ಮತ್ತು ವಾಸ್ತುಶಿಲ್ಪಕ್ಕೆ ಹೆಸರಾದ ಕಲಾಕೇಂದ್ರವಾಗಿದ್ದು ೧ನೆಯ ಶತಮಾನದ ನಾಗರಿಕತೆಯ ಜೊತೆಗೆ ದೇವಾಲಯಗಳು ಕೈ ಶಾಲೆಗಳ ಕೆತ್ತನೆಯ ಕೆಲಸ ಅದರ ಉತ್ಕೃಷ್ಟತೆ ಈಗಲೂ ನೋಡಲು ಸಿಗುತ್ತವೆ. ಇದು ೩ನೆಯ ಶತಮಾನದಲ್ಲಿ ಮಹಾನಗರವಾಗಿತ್ತು. ಇಲ್ಲಿಯ ಒಂದು ನೀರಿನ ಬಾವಿಯ ವಾಸ್ತುಶಿಲ್ಪವು ಕಲಾತ್ಮಕ ಮತ್ತು ವಿಶೇಷವಾದುದ್ದಾಗಿದೆ. ಇಲ್ಲಿ ನೂರಕ್ಕೂ ಹೆಚ್ಚು ಶೈವ ದೇವಾಲಯಗಳು, ಜೈನ ಬಸದಿಗಳೂ ಇದ್ದವು ಎಂದು ಇತಿಹಾಸದಿಂದ ತಿಳಿದುಬರುತ್ತದೆ. ಇದೇ ರೀತಿ ಕಾಳಗಿ ೩ನೆಯ ಶತಮಾನದ ಪಟ್ಟಣವಾಗಿದ್ದು, ಇಲ್ಲಿ ಕಲ್ಯಾಣ ಚಾಲುಕ್ಯ, ರಾಷ್ಟ್ರಕೂಟರ ಶೈಲಿಯ ದೇವಾಲಯಗಳನ್ನು ಈಗಲೂ ನೋಡಬಹುದು. ದೇವಾಲಯಗಳ ಸುತ್ತಲಿನ ಶಿಲ್ಪಕೃತಿ, ಶಿಲಾಬಾಲಕೆಯರ ವಿಗ್ರಹಗಳು ತುಂಬಾ ಕಲಾತ್ಮಕವಾಗಿ ಕೆತ್ತಲ್ಪಟ್ಟಿವೆ. ಇಲ್ಲಿ ನಿರ್ಮಾಣಗೊಂಡ ಕಾಳೇಶ್ವರ ದೇವಾಲಯದ ಹತ್ತಿರದ ಬಾವಿ ಅದರ ವಾಸ್ತುಶಿಲ್ಪಕಲೆ ನಿರ್ಮಾಣ ಗೊಂಡ ರೀತಿ ದಕ್ಷಿಣ ಭಾರತದಲ್ಲಿಯೇ ವಿಶೇಷವಾದದ್ದೆಂದು ಇತಿಹಾಸಕಾರರು ಹೇಳಿದ್ದಾರೆ.[೧೩]

ಭಾರತ ಸಾಂಸ್ಕೃತಿಕವಾಗಿ ಇಡೀ ಜಗತ್ತಿಗೆ ಕೊಡುಗೆ ಕೊಟ್ಟಿದೆ ಎಂದರೆ ಅದು ಶಿಲ್ಪಕಲೆಯೇ ಎಂದು ಹೇಳಿದರೆ ತಪ್ಪಾಗಲಾರದು. ಒಂದು ಕಲೆ ರೂಪಗೊಳ್ಳಲು ಶಿಲ್ಪಿಯ ಕಲ್ಪನೆ, ನೈಪುಣ್ಯ, ಶಕ್ತಿ ಪ್ರದರ್ಶನ, ಬೆವರು, ಸಮಯ ಎಲ್ಲವೂ ಕೆಲಸ ಮಾಡುತ್ತದೆ. ಶಿಲೆಯಲ್ಲಿ ಕೆಲಸ ಮಾಡುವ ವರನ್ನು ಶಿಲ್ಪಿ ಎಂದು ಕರೆಯಬಹುದಾದರೂ, ಕಲ್ಲು ಕುಟಿಗರೂ ಕಲ್ಲಿನಲ್ಲಿಯೇ ಕೆಲಸ ಮಾಡು ತ್ತಾರೆ. ಆದರೆ ಪೂಜೆಗೋಸ್ಕರ, ಆರಾಧನೆಗೋಸ್ಕರ ಕಲೆ ಬೇರೆ, ಬಳಕೆಗೊಳ್ಳುವ ವಸ್ತುಗಳು ಬೇರೆ. ಇದಕ್ಕೆ ತನ್ನದೇ ಆದ ಆಚಾರ, ನಂಬಿಕೆ, ಆಯಾ ಕಲ್ಪನೆಗಳಿವೆ. ಇವುಗಳನ್ನು ಸ್ಥಪತಿಗಳು ಮಾತ್ರ ಮಾಡುವ ಕಾರ್ಯವಾದ್ದರಿಂದ ಈ ಕೃತಿಗೆ ವಿಶೇಷ ಸ್ಥಾನವಿದೆ. ಏಕಾಗ್ರ ಚಿತ್ತದಿಂದ ಶಿಲ್ಪಿಯು ನಡೆಸುವ ಶಿಲ್ಪ ಕರ್ಮದಿಂದ ಫಲವಾಗಿ ರೂಪಗೊಳ್ಳುವ ಶಿಲ್ಪವು ಅದನ್ನು ನೋಡುವ ವನಲ್ಲಿಯ ಸೌಂದರ್ಯೋಪಸನಾ ಪ್ರಜ್ಞೆಯನ್ನು ಉದ್ದೀಪನಗೊಳಿಸಿ ಅವನಿಗೆ ಸಮಾಧಿ ಸ್ಥಿತಿಯನ್ನು ತಂದುಕೊಟ್ಟು ಆನಂದವನ್ನು ಕರುಣಿಸುತ್ತದೆ. ಆದ್ದರಿಂದಲೇ ಶಿಲ್ಪವು ಅತ್ಯಂತ ಮಹತ್ವವೂ ಪೂಜ್ಯವೂ ಆಗಿದೆ. ಇವರು ತಯಾರಿಸುವ ವಸ್ತುಗಳು ಅಡಿಪಟ್ಟಿ ಉದರ ಭಾಗ, ಎಳೆ, ಕುಂಡಾ ಭರಣ, ಕರ್ಣಕುಂಡಲ, ಕೀರ್ತಿಮುಖ, ಕರಂಡ, ಕಿರೀಟ, ತೋಳುಬಂದಿ, ದೇವತಾ ಮೂರ್ತಿ, ಪ್ರತಿಮೆ, ಭುಜಕೀರ್ತಿ, ಮಿಥುನ ಶಿಲ್ಪಗಳು, ಗೋಪುರ, ಕಳಸ, ದೇವತಾಮೂರ್ತಿ ಪಾಲ್ಕಿಗಳು ರಥ ನಿರ್ಮಾಣ ಒಟ್ಟಾರೆಯಾಗಿ ಪೂಜೆಗೊಳ್ಳುವ ಪ್ರತಿಯೊಂದು ಶಿಲಾಮೂರ್ತಿಗಳು ವಿಶಿಷ್ಟವೇ ಆಗಿವೆ.[೧೪]

---

೧೩. ಡಾ. ಪಿ. ಕೆ. ಖಂಡೋಬಾ, ಡಾ. ಎಸ್. ಸಿ. ಪಾಟೀಲ(ಸಂ.): ಹೈದ್ರಾಬಾದ್–ಕರ್ನಾಟಕದ ಸಾಂಸ್ಕೃತಿಕ ವಿಷಯಕೋಶ–ಲಲಿತಕಲೆಗಳ ಸಂಪುಟ, ಪು–೨೨೫.

೧೪. ಡಾ. ಪಿ. ಕೆ. ಖಂಡೋಬಾ, ಡಾ. ಎಸ್. ಸಿ. ಪಾಟೀಲ(ಸಂ.): ಹೈದ್ರಾಬಾದ್–ಕರ್ನಾಟಕದ ಸಾಂಸ್ಕೃತಿಕ ವಿಷಯಕೋಶ–ಲಲಿತಕಲೆಗಳ ಸಂಪುಟ, ಪು–೪೮೧.

ಇತ್ತೀಚಿನ ದಿನಗಳವರೆಗೂ ಕಲಬುರ್ಗಿ ಜಿಲ್ಲೆಯು ಕರ್ನಾಟಕದ ದೊಡ್ಡ ಜಿಲ್ಲೆಗಳಲ್ಲಿ ಒಂದಾಗಿತ್ತು. ಇಂದು ಕಲಬುರ್ಗಿ ಜಿಲ್ಲೆಯ ಕೆಲಭಾಗಗಳು ಹೊಸದಾಗಿ ರಚನೆಯಾದ ಯಾದಗಿರಿ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಿವೆ. ಹಾಗಾಗಿ ಯಾದಗಿರಿ ಜಿಲ್ಲೆಯ ಐತಿಹಾಸಿಕ ಹಿನ್ನೆಲೆಯನ್ನು ಪ್ರತ್ಯೇಕ ವಾಗಿ ಹೇಳದೇ ಅಖಂಡ ಕಲಬುರ್ಗಿ ಜಿಲ್ಲೆಯ ವಿವರಗಳಲ್ಲಿ ಅಡಕಗೊಳಿಸಿಕೊಂಡು ವಿವರಿಸಲಾಗಿದೆ.

'ಕಲಬುರ್ಗಿ' ಹೆಸರಿನ ನಿಷ್ಪತ್ತಿ ಬಗ್ಗೆ ಅಧ್ಯಯನ ಮಾಡಿದ ಸವದತ್ತಿಮಠ ಅವರು ಕಲ್+ಅಂಬಲಗೆ =ಕಲಬುರ್ಗಿಯಾಯಿತು ಎನ್ನುತ್ತಾರೆ. 'ಅಂಬಲ' ಎಂಬುದು ದೇವಾಲಯವನ್ನು ಸೂಚಿಸುವ ದ್ರಾವಿಡ ಪದ. ಕಲ್ಲಿನಿಂದ ನಿರ್ಮಾಣವಾದ ದೇವಾಲಯವನ್ನು ಸೂಚಿಸುವ 'ಕಲ್ ಅಂಬಲಗೆ' ಎಂಬ ಪದವು ಮುಂದೆ ರೂಪಾಂತರಗೊಂಡು 'ಕಲಬುರ್ಗಿ'ಯಾಯಿತು ಎಂದು ಹೇಳುವರು. ಪುರಾತತ್ವ ಶೋಧನೆಯಲ್ಲಿ ಕೋಟೆಯ ಒಳಭಾಗದಲ್ಲಿ ಕಂಡುಬಂದಂತಹ ಜೀರ್ಣವಾದ ದೇವಾಲಯಗಳನ್ನು ಇದಕ್ಕೆ ಪುರಾವೆಯಾಗಿ ಕೊಡುತ್ತಾರೆ. ಇಂದು ನೋಡಲು ಸಿಗುವ ಹಾಳಾದ ದೇವಾಲಯದ ಭಾಗಗಳು ಕೋಟೆ ನಿರ್ಮಾಣದ ಪೂರ್ವದಲ್ಲಿದ್ದ ಸೋಮೇಶ್ವರ ದೇವಾಲಯಕ್ಕೆ ಸಂಬಂಧಪಟ್ಟವುಗಳಾಗಿವೆ. ಇವುಗಳಲ್ಲಿ ಸುಂದರವಾದ ಶಿಲ್ಪಕಲಾ ಕೃತಿಗಳು ಕಂಡುಬಂದಿವೆ. ಕಲಬುರ್ಗಿಯಿಂದ ಸ್ವಲ್ಪ ದೂರದಲ್ಲಿರುವ ನಾಗಹಳ್ಳಿಯಲ್ಲಿ ನಾಗಲಿಂಗೇಶ್ವರ ದೇವಾಲಯದ ಮುಂದೆ ಕ್ರಿ.ಶ. ೧೪ನೇ ಶತಮಾನದ ಶಾಸನವಿದೆ. ಇದರಲ್ಲಿ ಕಲಬುರ್ಗಿಯನ್ನು 'ಕಲಂಬರಿಗೆ' ಎಂದು ಉಲ್ಲೇಖಿಸಲಾಗಿದೆ.[೧೫]

ಕಲ್ಬುರ್ಗಿ, ಕಲಬುರ್ಗಿ, ಗುಲ್ಬರ್ಗ ಎಂಬ ಹೆಸರುಗಳಿಂದ ಕರೆಯಲ್ಪಟ್ಟ ಈ ಪ್ರದೇಶದ ಪ್ರಾಚೀನ ಹೆಸರಿನ ಬಗ್ಗೆ ಇನ್ನು ಕೆಲವು ವಿವರಗಳು ಲಭ್ಯವಾಗುತ್ತಿವೆ. ಕ್ರಿ.ಶ. ೧೨ನೇ ಶತಮಾನಕ್ಕೆ ಸೇರುವ ಚಿನಮಳ್ಳಿ ಶಾಸನದಲ್ಲಿ ಮತ್ತು ಬೀದರ ಜಿಲ್ಲೆಯ ಒಂದು ಶಾಸನದಲ್ಲಿ 'ಕಲಂಬರಿಗೆ' ಎಂದು ಉಲ್ಲೇಖಿತವಾಗಿದೆ. ಕ್ರಿ.ಶ. ೧೩೯೭ರ ಶಿರವಾಳ ಶಾಸನದಲ್ಲಿ 'ಕಲಬುರಗೆ' ಎಂದು, ಕ್ರಿ.ಶ. ೧೫೩೭ರ ಬೇಲೂರು ಶಾಸನದಲ್ಲಿ 'ಕಲಬುರಿಗೆ' ಎಂದು ದಾಖಲಾಗಿದೆ. ವಿಜಯನಗರಕ್ಕೆ ಬಂದಿದ್ದ ಪರ್ಶಿಯನ್ ರಾಯಭಾರಿ ಅಬ್ದುಲ್ ರಜಾಕನು ಇದನ್ನು 'ಕಲಬುರ್ಗಿ' ಎಂದು ಕರೆದಿದ್ದಾನೆ. 'ಕಲಬುರ್ಗಿ' ಎಂಬ ಹೆಸರು ರೂಢಿಗೆ ಬಂದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ಗಳಿವೆ. 'ಕಲಬುರ್ಗಿ' ಎಂಬುದು ಪಾರಸೀಕರಣಗೊಂಡ 'ಕಲಬುರಗಿ' ಹೆಸರಿನ ರೂಪಾಂತರ ವಾಗಿದೆ.[೧೬] ಪಾರಸಿಯಲ್ಲಿ 'ಗುಲ್' ಎಂದರೆ 'ಹೂ', 'ಬರ್ಗ' ಎಂದರೆ 'ಎಲೆ' ಎಂಬ ಅರ್ಥ ಗಳಿವೆ. 'ಕಲಬುರ್ಗಿ' ಎಂಬ ಕನ್ನಡದ ರೂಪವೇ ಮಹಮ್ಮದೀಯರಿಗೆ 'ಕಲ್‌ಬುರ್ಗ್' ಎಂದೆನಿಸಿ ಮುಂದೆ 'ಕಲಬುರ್ಗಿ' ಎಂದಾಗಿರುವಂತೆ ತೋರುತ್ತದೆ ಎಂಬುದು ಹೆಚ್ಚಿನವರ ಅನಿಸಿಕೆಯಾಗಿದೆ. ಕ್ರಿ.ಶ. ೧೬ನೇ ಶತಮಾನದವರೆಗೂ ಇದಕ್ಕೆ 'ಕಲಬುರಗಿ' ಎಂಬ ಹೆಸರು ರೂಢಿಯಲ್ಲಿತ್ತು. ಮುಸ್ಲಿಮರ ಆಡಳಿತದ ಪ್ರಭಾವದಿಂದಾಗಿ 'ಕಲಬುರ್ಗಿ' ಎಂಬ ರೂಪವನ್ನು

---

೧೫. ಡಾ. ಸಂಗಮೇಶ ಸವದತ್ತಿಮಠ: ಭಾಷಾಲೇಖ, ಪು-೩೪೧.
೧೬. ಟಿ. ಎಂ. ಭಾಸ್ಕರ್(ಸಂ.): ಕಲಬುರ್ಗಿ ಜಿಲ್ಲಾ ದರ್ಶನ, ಪು-೨೨೯.

ಪಡೆಯಿತು ಎಂಬ ಸಾಮಾನ್ಯ ಅಭಿಪ್ರಾಯವನ್ನು ಒಪ್ಪಿಕೊಳ್ಳಬಹುದಾಗಿದೆ. ಆದರೆ ಇತ್ತೀಚೆಗೆ ಸರಕಾರವು ಅಧಿಕೃತವಾಗಿ 'ಕಲಬುರ್ಗಿ' ಹೆಸರನ್ನು ಮತ್ತೆ 'ಕಲಬುರಗಿ' ಎಂದು ಬದಲಾಯಿಸಿದೆ.[೧೭]

ಭೌಗೋಳಿಕವಾಗಿ ದಖ್ಖನ್ ಪ್ರಸ್ಥಭೂಮಿಯಲ್ಲಿರುವ ಕಲಬುರಗಿ ಜಿಲ್ಲೆಯು ಕರ್ನಾಟಕದ ಉತ್ತರ ಭಾಗದಲ್ಲಿದೆ. ಈ ಜಿಲ್ಲೆಯು ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶ ರಾಜ್ಯಗಳ ಗಡಿಗೆ ಹೊಂದಿಕೊಂಡಿದೆ. ಉಳಿದಂತೆ ಬೀದರ, ರಾಯಚೂರು, ಯಾದಗಿರಿ, ಕೊಪ್ಪಳ ಹಾಗೂ ಬಳ್ಳಾರಿ ಜಿಲ್ಲೆಯ ಗಡಿಗಳನ್ನು ಒಳಗೊಂಡಿದೆ. ಇತ್ತೀಚೆಗೆ ಯಾದಗಿರಿ ಜಿಲ್ಲೆಗಾಗಿ ಕೆಲವು ಪ್ರದೇಶಗಳನ್ನು ಬಿಟ್ಟುಕೊಟ್ಟ ಕಲಬುರ್ಗಿ ಜಿಲ್ಲೆಯು ಸುದೀರ್ಘವಾದ ಹಾಗೂ ಸಂಪದ್ಭರಿತವಾದ ಐತಿಹಾಸಿಕ ಪರಂಪರೆ ಹೊಂದಿದೆ. ಶಿಲಾಯುಗ ಕಾಲದ ಆದಿಮಾನ ನೆಲೆಗಳು, ಅವರ ಕಲಾರಚನೆಗಳು, ನಿತ್ಯೋಪಯೋಗಿ ವಸ್ತುಗಳು ಅನೇಕ ಕಡೆಗಳಲ್ಲಿ ಲಭ್ಯವಾಗಿವೆ.

ಭಾರತದ ಇತಿಹಾಸದಲ್ಲಿ ಮಹತ್ವದ ಪಾತ್ರ ವಹಿಸಿದ ಮೌರ್ಯರ ಆಡಳಿತವು ಜಿಲ್ಲೆಯ ವ್ಯಾಪ್ತಿಯಲ್ಲಿ ಹರಡಿಕೊಂಡಿತ್ತು. ನಂತರದ ಶಾತವಾಹನರ ಆಡಳಿತವು ಕಲಬುರಗಿ ಜಿಲ್ಲೆಯಲ್ಲಿ ಮಹತ್ವದ ಪಾತ್ರ ವಹಿಸಿತ್ತು. ವಿಶೇಷವಾಗಿ ವಾಸ್ತುಕಲೆ ಮತ್ತು ಶಿಲ್ಪಕಲೆಗಳ ದೃಷ್ಟಿಯಿಂದ ಇವರ ಕಾಲ ಮಹತ್ವದ್ದಾಗಿತ್ತು. ಚಿತ್ತಾಪುರ ತಾಲೂಕಿನ 'ಸನ್ನತಿ'ಯು ಶಾತವಾಹನರ ಕಾಲದಲ್ಲಿ ಕ್ರಿ.ಶ. ೧ ಮತ್ತು ೨ನೇ ಶತಮಾನದಲ್ಲಿ ಪ್ರಮುಖ ಬೌದ್ಧ ಕೇಂದ್ರವಾಗಿತ್ತು. 'ಮಹಾಯಾನ' ಪಂಥದ ಆರಾಧನಾ ಕೇಂದ್ರವಾಗಿದ್ದ ಸನ್ನತಿಯಲ್ಲಿ ಇಂದಿಗೂ ಬೌದ್ಧಧರ್ಮಕ್ಕೆ ಸಂಬಂಧಿಸಿದ ಸುಂದರವಾದ ಶಿಲ್ಪಗಳು, ಚೈತನ್ಯ ವಿಹಾರ ಮತ್ತು ಸ್ತೂಪಗಳು ಕಂಡುಬರುತ್ತವೆ. ಶಾತವಾಹನರ ನಂತರ ಬಾದಾಮಿ ಚಾಲುಕ್ಯರ ಆಡಳಿತಕ್ಕೆ ಈ ಪ್ರದೇಶ ಒಳಪಟ್ಟಿತ್ತು. ಆದರೆ ಆ ಕಾಲದ ಹೆಚ್ಚಿನ ಆಧಾರಗಳು ಮತ್ತು ಕಲಾಸ್ಮಾರಕಗಳು ಕಂಡುಬಂದಿಲ್ಲ. ದಕ್ಷಿಣ ಭಾರತದಲ್ಲಿಯೇ ಅತಿ ದೊಡ್ಡ ಸಾಮ್ರಾಜ್ಯ ಸ್ಥಾಪಿಸಿ ಆಳ್ವಿಕೆ ಮಾಡಿದ ರಾಷ್ಟ್ರಕೂಟರ ಆಡಳಿತವು ಕಲಬುರ್ಗಿ ಜಿಲ್ಲೆಯ ರಾಜಕೀಯ ಇತಿಹಾಸದಲ್ಲಿ ಮಹತ್ವದ್ದಾಗಿತ್ತು. ಐತಿಹಾಸಿಕವಾಗಿ, ಸಾಹಿತ್ಯಿಕವಾಗಿ ಮತ್ತು ಕಲಾತ್ಮಕ ದೃಷ್ಟಿಯಿಂದ ಇವರ ಕಾಲ ಗಮನಾರ್ಹ ಸ್ಥಾನ ಪಡೆದುಕೊಂಡಿದೆ.

ರಾಷ್ಟ್ರಕೂಟರ ಪ್ರಖ್ಯಾತ ದೊರೆಯಾಗಿದ್ದ ನೃಪತುಂಗನ ಕಾಲದಲ್ಲಿ ಕನ್ನಡದ ಮೊದಲ ಸಾಹಿತ್ಯ ಕೃತಿ 'ಕವಿರಾಜಮಾರ್ಗ'ವು ರಚನೆಗೊಂಡಿತು. ಕಲಬುರ್ಗಿ ಸಮೀಪ ಇರುವ ಮಳಖೇಡವು ರಾಷ್ಟ್ರಕೂಟರ ರಾಜಧಾನಿಯಾಗಿತ್ತು. ಕಾಗಿನಾ ನದಿಯ ದಂಡೆಯ ಮೇಲೆ ಇರುವ ಇಂದು ಪುಟ್ಟ ಹಳ್ಳಿಯಾಗಿರುವ ಮಳಖೇಡವು ರಾಷ್ಟ್ರಕೂಟರ ಕಾಲದಲ್ಲಿ 'ಮಾನ್ಯಖೇಟ' ಎಂಬ ಹೆಸರಿ ನಿಂದ ಕರೆಯಲ್ಪಡುತ್ತಿತ್ತು. ರಾಜಧಾನಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳು ಮಾತ್ರವಲ್ಲದೆ ತಮ್ಮ ರಾಜ್ಯವು ವಿಸ್ತರಿಸಿದ ವ್ಯಾಪ್ತಿಯ ತುಂಬೆಲ್ಲ ರಾಷ್ಟ್ರಕೂಟರು ಸುಂದರವಾದ ದೇವಾಲಯಗಳು, ಕೋಟೆಕೊತ್ತಲಗಳು, ಶಿಲ್ಪಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಇಂದಿನ

---

೧೭. ಎಂ.ಬಿ. ಪಾಟೀಲ(ಸಂ.): ಕರ್ನಾಟಕ ರಾಜ್ಯ ಗೆಝೆಟಿಯರ್, ಗುಲಬರ್ಗಾ ಜಿಲ್ಲೆ, ಪು–೬೩, ೬೪.

ಮಹಾರಾಷ್ಟ್ರ ರಾಜ್ಯದಲ್ಲಿರುವ ಎಲ್ಲೋರಾ ಎಂಬಲ್ಲಿ ರಾಷ್ಟ್ರಕೂಟರು ಅನೇಕ ಗುಹಾಲಯಗಳನ್ನು ಕೊರೆಸಿದ್ದಾರೆ. ಬೌದ್ಧ, ಜೈನ ಹಾಗೂ ಹಿಂದೂಧರ್ಮಕ್ಕೆ ಸೇರಿದ ಈ ಗುಹಾಲಯಗಳನ್ನು ಬೃಹತ್ ಬೆಟ್ಟಗಳಲ್ಲಿ ಅಖಂಡ ಶಿಲೆಯಲ್ಲಿ ನಿರ್ಮಿಸಲಾಗಿದೆ.

ಎಲ್ಲೋರಾದಲ್ಲಿ ರಾಷ್ಟ್ರಕೂಟರು ನಿರ್ಮಿಸಿದ ಅನೇಕ ಗುಹಾಲಯಗಳಲ್ಲಿ 'ಕೈಲಾಸನಾಥ ದೇವಾಲಯ' ಎಂಬ ಗುಹಾಲಯ ಅತ್ಯಂತ ಸುಂದರವಾಗಿದೆ. ರಾಷ್ಟ್ರಕೂಟರ ೧ನೇ ಕೃಷ್ಣನ ಕಾಲದಲ್ಲಿ ಆತನ ಪ್ರೋತ್ಸಾಹದಿಂದ ನಿರ್ಮಿಸಲಾದ ಈ ಗುಹಾಲಯವು ಎರಡು ಅಂತಸ್ತುಗಳನ್ನು ಹೊಂದಿದೆ. ಅಖಂಡವಾದ ಶಿಲೆಯಲ್ಲಿ ಕೊರೆಯಲಾದ ಈ ಗುಹೆಯು ಬೃಹತ್ ಆನೆಗಳಿಂದ ಎಳೆಯಲ್ಪಟ್ಟ ರಥದ ಮಾದರಿಯಲ್ಲಿದೆ. ಬೃಹತ್ ಆಕಾರದ ಆನೆಗಳು, ಕುದುರೆಗಳು, ಶಿವನ ಮಹಿಮೆಯನ್ನು ಸಾರುವ ಹಲವಾರು ಶಿಲ್ಪಗಳು, ಅರ್ಧನಾರೀಶ್ವರ, ರಾವಣ ಕೈಲಾಸ ಪರ್ವತ ಎತ್ತುತ್ತಿರುವ ಶಿಲ್ಪ, ಗಂಗಾವತರಣಶಿಲ್ಪ, ಗಿರಿಜಾಕಲ್ಯಾಣ, ನಂದಿ, ಬೃಂಗಿ, ನಟರಾಜ ಶಿಲ್ಪ ಮುಂತಾದ ಹಲವಾರು ಶಿಲ್ಪಗಳು ಅತ್ಯಂತ ಸುಂದರವಾಗಿ ಕೆತ್ತಲ್ಪಟ್ಟಿವೆ. ಎಲ್ಲೋರಾದಲ್ಲಿ ಕೈಲಾಸನಾಥ ದೇವಾಲಯವಲ್ಲದೆ ದಶಾವತಾರಗುಹೆ, ಜೈನ ಹಾಗೂ ಬೌದ್ಧ ಗುಹೆಗಳು ಸಹಿತ ಕಂಡುಬರುತ್ತವೆ. ಈ ಗುಹೆಗಳಲ್ಲಿರುವ ಸುಂದರ ಶಿಲ್ಪ ಕಲಾಕೃತಿಗಳು ರಾಷ್ಟ್ರಕೂಟರ ಕಲಾ ಹಿರಿಮೆಯನ್ನು ಸಾರುತ್ತವೆ.

ರಾಷ್ಟ್ರಕೂಟರ ನಂತರ ಕಲ್ಯಾಣ ಚಾಲುಕ್ಯರ ಆಡಳಿತವು ಈ ಭಾಗದಲ್ಲಿ ಪ್ರಾಮುಖ್ಯತೆಯನ್ನು ಪಡೆಯಿತು. ಕಲ್ಯಾಣವನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡ ಚಾಲುಕ್ಯರು ಈ ಭಾಗವನ್ನು ಕಲೆಯ ಬೀಡಾಗಿ ಮಾಡಿದರು. ರಾಜಧಾನಿ ಮತ್ತು ಸುತ್ತಲಿನ ಪರಿಸರ ಮಾತ್ರವಲ್ಲದೆ ತಮ್ಮ ರಾಜ್ಯವು ವಿಸ್ತರಿಸಿದ ದೂರದ ಸ್ಥಳಗಳಲ್ಲಿಯೂ ಇವರ ಕಾಲದ ದೇವಾಲಯ ಹಾಗೂ ಶಿಲ್ಪಕಲಾ ಕೃತಿಗಳು ಕಂಡುಬರುತ್ತವೆ. ಎಲ್ಲೋರಾದಲ್ಲಿ ಜೈನ ಗುಹಾಲಯಗಳ ಸಾಲಿನಲ್ಲಿ ಛೋಟಾ ಕೈಲಾಸ, ಇಂದ್ರಸಭಾ ಮತ್ತು ಜಗನ್ನಾಥಸಭಾ ಗುಹೆಗಳು ಮುಖ್ಯವಾಗಿವೆ. ಇಂದ್ರಸಭಾ ಗುಹೆಯಲ್ಲಿ ಇಂದ್ರ, ಶಚಿದೇವಿಯರ ವಿಗ್ರಹಗಳು ಅತ್ಯಂತ ಸುಂದರವಾಗಿವೆ. ಈ ಗುಹೆಯನ್ನು ಒಳಗೊಂಡಂತೆ ಇನ್ನುಳಿದ ಜೈನ ಗುಹೆಗಳಲ್ಲಿ ಬಾಹುಬಲಿ ಶಿಲ್ಪಗಳಿವೆ. ಇವರ ಕಾಲದಲ್ಲಿ ಇನ್ನಿತರ ಶಿಲ್ಪ ಕಲಾಕೃತಿಗಳನ್ನು ರಚಿಸುವಂತೆ ಬಾಹುಬಲಿ ಶಿಲ್ಪಗಳನ್ನು ರಚಿಸುವ ಪರಂಪರೆ ಮುಂದುವರಿಯಿತು. ಹಿಂದೆ ಬಾದಾಮಿ ಚಾಲುಕ್ಯರು ಬಾಹುಬಲಿ ಶಿಲ್ಪಗಳನ್ನು ರಚಿಸುವ ಪರಿಪಾಟ ಹೊಂದಿದ್ದರು. ಚಾಲುಕ್ಯರ ಬಾಹುಬಲಿ ಶಿಲ್ಪಗಳಿಗಿಂತ ರಾಷ್ಟ್ರಕೂಟರ ಬಾಹುಬಲಿ ಶಿಲ್ಪಗಳು ವಿಶಿಷ್ಟ ಲಕ್ಷಣಗಳನ್ನು ಹೊಂದಿವೆ. ರಾಷ್ಟ್ರಕೂಟರ ಬಾಹುಬಲಿ ಶಿಲ್ಪಗಳು ಆಕಾರದಲ್ಲಿ ಸ್ವಲ್ಪ ದೊಡ್ಡವಾಗಿವೆ. ಚಾಲುಕ್ಯರು ಗರ್ಭಗೃಹದ ಮುಂಭಾಗ, ಎಡಬಲಗಳಲ್ಲಿ ಬಾಹುಬಲಿಯನ್ನು ಕೆತ್ತಿದರೆ, ರಾಷ್ಟ್ರಕೂಟರು ಸಭಾಮಂಟಪದ ಗೋಡೆಗಳ ಮೇಲೆ ಕೆತ್ತಿದ್ದಾರೆ. ಇವರ ಕಾಲದ ಬಾಹುಬಲಿ ಶಿಲ್ಪದಲ್ಲಿ ತಲೆಕೂದಲು ನೀಳವಾಗಿವೆ. ಕೆಳಭಾಗದಲ್ಲಿ ಹುತ್ತ, ಬಳ್ಳಿಗಳು, ಹಾವು, ನವಿಲು, ಚೇಳು, ಇಲಿ ಮುಂತಾದವುಗಳನ್ನು ಕೆತ್ತಲಾಗಿದೆ.[೧೮]

---

೧೮. ಪ್ರೊ. ಬಿ. ಸುರೇಂದ್ರರಾವ್(ಸಂ.): ಕರ್ನಾಟಕ ಚರಿತ್ರೆ (ಸಂಪುಟ–೨), ಪು–

ಮಳಖೇಡದ ರಾಷ್ಟ್ರಕೂಟರು ಎಲ್ಲೋರಾದಂತೆ ಎಲಿಫೆಂಟಾ, ಜೋಗೇಶ್ವರಿ ಮತ್ತು ಧಾರೇಶ್ವರಗಳಲ್ಲಿ ಕೊರೆದ ಗುಹಾಲಯಗಳು ಮತ್ತು ಅವುಗಳಲ್ಲಿ ಸುಂದರವಾದ ಶಿಲ್ಪಕಲಾಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಎಲಿಫೆಂಟಾ ಗುಹಾಲಯದಲ್ಲಿರುವ ಶಿವನ ಎದೆ ಮೊಗದ ಶಿರಭಾವ ಶಿಲ್ಪವು ಜಗತ್‌ಪ್ರಸಿದ್ಧವಾಗಿದೆ. ಶಿವನ ಮೂರು ಮುಖಗಳನ್ನು ಈ ಶಿಲ್ಪ ಒಳಗೊಂಡಿದೆ. ಇವರ ಕಾಲದಲ್ಲಿ ಕಟ್ಟಲ್ಪಟ್ಟ ದೇವಾಲಯಗಳು ರಾಜಧಾನಿ ಮಳಖೇಡ ಮಾತ್ರವಲ್ಲದೆ ಇನ್ನಿತರ ಭಾಗಗಳಲ್ಲೂ ಕಂಡುಬಂದಿವೆ. ಬಾದಾಮಿ, ಐಹೊಳೆ, ಪಟ್ಟದಕಲ್ಲು, ನಂದವಾಡಿಗೆ, ಗೂಡೂರು, ಯಂಕಂಚಿ, ಹಳ್ಳೂರು, ಮಹಾಕೂಟ, ರೋಣ, ಗದಗ, ರಾಜೂರು, ನರೇಗಲ್ಲು, ಕುಕನೂರು, ಕೊಣ್ಣೂರು, ಸೂಡಿ, ಸವಡಿ, ನರಗುಂದ, ಲಕ್ಷ್ಮೇಶ್ವರ, ಸವದತ್ತಿ, ಹೂಲಿ, ಸೊಗಲ, ಕುಡತಿನಿ, ಕುಮಾರಸ್ವಾಮಿಬೆಟ್ಟ ಸೊಂಡೂರು, ಹಂಪಿ, ಜಟಿಂಗರಾಮೇಶ್ವರ, ಅಡ್ನೂರು ಮುಂತಾದ ಕಡೆಗಳಲ್ಲಿ ಇವರ ಕಾಲದ ದೇವಾಲಯಗಳು ಮತ್ತು ಶಿಲ್ಪಕಲಾಕೃತಿಗಳು ಕಂಡುಬರುತ್ತವೆ.

ರಾಷ್ಟ್ರಕೂಟರ ನಂತರ ಕಲ್ಯಾಣವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ಚಾಲುಕ್ಯರನ್ನು ಕಲ್ಯಾಣ ಚಾಲುಕ್ಯರು ಎಂಬ ಹೆಸರಿನಿಂದ ಕರೆಯಲಾಯಿತು. ಇಂದು ಕಲ್ಯಾಣವು ಬೀದರ ಜಿಲ್ಲೆಯಲ್ಲಿದ್ದರೂ ಅಂದು ಕಲಬುರ್ಗಿ ಜಿಲ್ಲೆಯ ವ್ಯಾಪ್ತಿಯು ಇವರ ರಾಜ್ಯದಲ್ಲಿ ಅಡಕವಾಗಿತ್ತು. ಕಲ್ಯಾಣ ಚಾಲುಕ್ಯರ ನಂತರ ಕಳಚೂರ್ಯರು, ಶಿಲಾಹಾರರು, ಅರಳು ಮುನ್ನೂರಿನ ಹೈಹಯ ವಂಶಜರು, ಯಾದವರು, ವಿಜಯನಗರದವರು ಮತ್ತು ಬಹಮನಿ ಸುಲ್ತಾನರು ಕಲಬುರ್ಗಿ ಪ್ರದೇಶವನ್ನು ಆಳ್ವಿಕೆ ಮಾಡಿದ್ದಾರೆ. ಅನಂತರದಲ್ಲಿ ಕೆಲವು ಸಾಮಂತರು, ಸಂಸ್ಥಾನಿಕರು, ಸ್ಥಳೀಯ ನಾಯಕರುಗಳು ಈ ಭಾಗದಲ್ಲಿ ಆಳ್ವಿಕೆ ಮಾಡಿದ್ದಾರೆ. ಚಿತ್ತಾಪುರ ತಾಲೂಕಿನ ಅಲ್ಲೂರು ಅಂದಿನ ದಿನಗಳಲ್ಲಿ ಅರಳು ಮುನ್ನೂರಿನ ಹೈಹಯ ವಂಶಜರ ರಾಜಧಾನಿಯಾಗಿತ್ತು. ಅದೇ ರೀತಿ ಯಾದಗಿರಿ ತಾಲೂಕಿನ ಏತಗಿಯು ಕಲ್ಯಾಣ ಚಾಲುಕ್ಯ ದೊರೆ ಜಯಸಿಂಹನ ರಾಜಧಾನಿಯಾಗಿ ಮೆರೆದಿತ್ತು. ಕಲಬುರ್ಗಿ ಜಿಲ್ಲೆಯ ನಾಗಾವಿ, ಸೇಡಂ, ದಿಗ್ಗಾಂವ, ಅಡ್ಕಿ, ಹಂದರ್ಕಿ, ಮಣ್ಣೂರು, ತೆಂಗಳಿ ಮುಂತಾದವುಗಳು ಅಗ್ರಹಾರ, ಬ್ರಹ್ಮಪುರಿ ಮತ್ತು ಘಟಿಕಾ ಸ್ಥಾನಗಳಾಗಿದ್ದವು. ಸನ್ನತಿ, ಕನಗಾನಹಳ್ಳಿ, ಗುರುಸಣಗಿಗಳು ಬೌದ್ಧರ ನೆಲೆಗಳಾಗಿದ್ದವು. ಶೈವಧರ್ಮದ ಪ್ರಾಬಲ್ಯವಿದ್ದಾಗ ಮಾನ್ಯಖೇಟ, ಸೇಡಂ, ಅಡ್ಕಿ, ಹರಸೂರು, ಆಳಂದ, ಹೊಡಲ್, ಧುತ್ತರಗಾಂವ್, ಚಿಂಚೋಳಿ, ಹಂದರಕಿ, ಅಫಜಲಪುರ, ಚಿನಮಳ್ಳಿ, ಮಣ್ಣೂರು ಮುಂತಾದವುಗಳು ಶೈವ ಕೇಂದ್ರಗಳಾಗಿದ್ದವು. ವೈದಿಕ ಮತಾನುಯಾಯಿಗಳು ಸಹಿತ ಪ್ರಾಚೀನ ಕಾಲದಲ್ಲಿ ಇಲ್ಲಿ ನೆಲೆಸಿದ್ದರು. ಮತ್ತೂರು, ದಿಗ್ಗಾಂವ, ನಿಂಬರಗಾ, ಆಳಂದಗಳು ವೈದಿಕ ಕೇಂದ್ರಗಳಾಗಿದ್ದವು. ಜೈನರು ಕೂಡ ಇಲ್ಲಿ ಸಮನ್ವಯತೆಯಿಂದ ನೆಲೆಸಿದ್ದರು. ಹರಸೂರು, ಇಂಗಳಗಿ, ತೆಂಗಳಿ, ಸೇಡಂ, ಅಡಕಿ ಈ ಸ್ಥಳಗಳಲ್ಲಿ ಜೈನರು ನೆಲೆಸಿದ್ದರು.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಲಬುರ್ಗಿ ಜಿಲ್ಲೆಯಲ್ಲಿ ಅನೇಕ ಕಲಾತ್ಮಕ ದೇವಾಲಯಗಳು ಮತ್ತು ಶಿಲ್ಪಗಳನ್ನು ರಚಿಸಲಾಯಿತು. ತೆಂಗಳಿಯ ಈಶ್ವರ ದೇವಾಲಯ, ಮಲ್ಲಿಕಾರ್ಜುನ,

ಭೋಗೇಶ್ವರ ದೇವಾಲಯಗಳು ಗಮನಾರ್ಹವಾಗಿವೆ. ನಾಗಾಯಿಯ ದೇವಾಲಯಗಳು, ಕಾಳಗಿಯ ಸೂರ್ಯ ನಾರಾಯಣ ದೇವಾಲಯಗಳು ಸುಂದರವಾಗಿವೆ. ಹಲಕರ್ತಿಯ ವೀರಭದ್ರೇಶ್ವರ, ಇಂಗಳಗಿಯ ಮೂಲೇಶ್ವರ ದೇವಾಲಯಗಳು ಶಿಲ್ಪಕಲೆಗಳಿಂದ ಅಲಂಕೃತವಾಗಿವೆ. ಅದೇ ರೀತಿ ದಿಗ್ಗಾಂವ, ನಾಲ್ವಾರ, ಮರ್ತೂರು, ಕಿರಣಗಿ ಗ್ರಾಮಗಳಲ್ಲಿರುವ ಪ್ರಾಚೀನ ದೇವಾಲಯಗಳು ಕಲ್ಯಾಣ ಚಾಲುಕ್ಯರ ಕಲಾಸೊಬಗನ್ನು ಪ್ರತಿನಿಧಿಸುತ್ತವೆ.[೧೯]

ನಿಡಗುಂದದ ವೀರಭದ್ರೇಶ್ವರ, ಕಾಳಿದೇವಾಲಯ, ಶಿರೊಳ್ಳಿಯ ಈಶ್ವರ ದೇವಾಲಯ, ಸುಲೇಪೇಟದ ಶೈವದೇವಾಲಯ, ಚಂದಾಪೂರ, ಕೊಂಚಾವರಂಗಳಲ್ಲಿರುವ ಪ್ರಾಚೀನ ದೇವಾಲಯಗಳು ತಮ್ಮ ಗತಕಾಲದ ಶಿಲ್ಪ ವೈಭವಕ್ಕೆ ಸಾಕ್ಷಿಗಳಾಗಿವೆ. ಅದೇ ರೀತಿ ನರೋಣದ ಕ್ಷೇಮಲಿಂಗೇಶ್ವರ ದೇವಾಲಯ, ಆಳಂದದ ಏಕಾಂತರಾಮ ದೇವಾಲಯ, ಜೈನಬಸದಿ, ಧುತ್ತರಗಾಂವ, ಲಾಡ ಚಿಂಚೋಳಿಗಳಲ್ಲಿರುವ ಶಿವದೇವಾಲಯಗಳು ಆಕರ್ಷಕವಾಗಿವೆ. ಮಣ್ಣೂರಿನಲ್ಲಿರುವ ಚನ್ನಕೇಶವ, ಅತನೂರಿನ ಈಶ್ವರ, ಚಿನಮಳ್ಳಿಯ ಮಲ್ಲಿಕಾರ್ಜುನ, ಬೈರಾಮಡಗಿಯಲ್ಲಿರುವ ಭೈರವ ದೇವಾಲಯ, ಘತ್ತರಗಿ ಭಾಗ್ಯವಂತಿ ದೇವಾಲಯ, ಶಿರವಾಳದ ಸಿದ್ಧಲಿಂಗೇಶ್ವರ, ಗಾಣಗಾಪೂರದ ದತ್ತಾತ್ರೇಯ, ಹಗರಟಗಿಯ ಕುಂತೇಶ್ವರ ಮತ್ತು ಏವೂರುಗಳಲ್ಲಿರುವ ದೇವಾಲಯಗಳು ಕಲಬುರ್ಗಿ ಜಿಲ್ಲೆಯ ಪ್ರಾಚೀನ ಕಲಾವಂತಿಕೆಯನ್ನು ಪ್ರತಿಬಿಂಬಿಸುತ್ತವೆ. ಸುರಪುರದ ವೇಣುಗೋಪಾಲ, ಯಾಳಗಿಯ ಬೀರೇಶ್ವರ, ಕೆಲ್ಲೂರಿನ ಮಲ್ಲಿಕಾರ್ಜುನ, ಅಂದೇಲಿಯ ಅಷ್ಟಲಿಂಗೇಶ್ವರ, ಸಂಗಮೇಶ್ವರ, ದೇವಾಲಯಗಳಲ್ಲದೆ ವಾಗಣಗೇರಿ, ಹಿರೆಮುದನೂರು, ಚಿಕ್ಕಮುದನೂರುಗಳಲ್ಲಿರುವ ದೇವಾಲಯಗಳು ಗಮನಾರ್ಹವಾಗಿವೆ. ಹಂದರ್ಕಿಯ ಲೋಕೇಶ್ವರ, ಅನಮೇಶ್ವರ, ಮೇದಕಿನ ಭೂತೇಶ್ವರ, ಚನ್ನಕೇಶವ, ಊಡ್ಗಿಯ ಲೋಕೇಶ್ವರ, ಮೋತರಸಲ್ಲಿಯ ಭೀಮದೇವಾಲಯ, ಮೂಗನೂರಿನ ರಾಮಲಿಂಗೇಶ್ವರ, ಮಳಖೇಡದ ಈಶ್ವರ ದೇವಾಲಯ, ಜೈನ ಬಸದಿಗಳು, ಕುರಕುಂಟದ ಸಂಗಮೇಶ್ವರ, ಸೇಡಮ್‌ದಲ್ಲಿನ ಪಂಚಲಿಂಗೇಶ್ವರ, ಮಾಣಿಕೇಶ್ವರ, ಈಶ್ವರ ದೇವಾಲಯ, ತ್ರೈಲಿಂಗೇಶ್ವರ ದೇವಾಲಯ, ಶಾಂತಿನಾಥ ಬಸದಿಗಳು, ಯಡ್ರಾಮಿ, ಗುರುಮಿಠಕಲ್, ತಗಿರಿ, ಚಂದ್ರಕಿ, ಗಾಜರಕೋಟ ಮುಂತಾದ ಗ್ರಾಮಿಗಳಲ್ಲಿನ ಪ್ರಾಚೀನ ದೇವಾಲಯಗಳು ಕಲೆಯ ಪ್ರತೀಕಗಳಾಗಿವೆ.[೨೦]

## ಸಾಂಸ್ಕೃತಿಕ ಪರಿಸರ ಮತ್ತು ಲಲಿತಕಲೆಗಳು

೧೨ನೇ ಶತಮಾನದಲ್ಲಿ ಹರಿದಾಸರು ಈ ಪ್ರಾಂತದಲ್ಲಿ ಕಾಣಿಸಿಕೊಂಡರು. ದ್ವೈತ ತತ್ವದ ಮಧ್ವಾಚಾರ್ಯರ ಶಿಷ್ಯ ಬಳಗದ ನರಹರಿತೀರ್ಥನೇ ಹರಿದಾಸ ಸಾಹಿತ್ಯ ಪರಂಪರೆಗೆ ಮೊದಲಿಗನಾದ. ಮಧ್ವಾಚಾರ್ಯ, ಶ್ರೀಪಾದರಾಯ, ವ್ಯಾಸರಾಯ ಇವರೆಲ್ಲ ಮಠಾಧಿಪತಿಗಳಾಗಿದ್ದರು. ಬಹಳ ಪ್ರಮುಖರಾಗಿ ಪುರಂದರದಾಸ, ಕನಕದಾಸ, ಹರಿದಾಸ ಸಾಹಿತ್ಯಕ್ಕೆ ಬಹು ಆಯಾಮಗಳನ್ನು ಕಲ್ಪಿಸಿದರು. ವಿಜಯನಗರ ಪತನವಾದ ಬಳಿಕ ರಾಯಚೂರು ಜಿಲ್ಲಾ ಪ್ರದೇಶದಲ್ಲಿ ಹರಿದಾಸರು

---

೧೯. ಟಿ. ಎಂ. ಭಾಸ್ಕರ್(ಸಂ.): ಕಲಬುರ್ಗಿ ಜಿಲ್ಲಾ ದರ್ಶನ, ಪು–೨೨೪.

೨೦. ಟಿ. ಎಂ. ಭಾಸ್ಕರ್(ಸಂ.): ಕಲಬುರ್ಗಿ ಜಿಲ್ಲಾ ದರ್ಶನ, ಪು–೨೨೪.

ಹುಟ್ಟಿದರು. ೩ನೇ ಹಂತದಲ್ಲಿ ಈ ಸಾಹಿತ್ಯಕ್ಕೆ ಕಾರಣರಾದ ವಿಜಯದಾಸ, ಗೋಪಾಲದಾಸ, ಜಗನ್ನಾಥದಾಸರು, ರಾಯಚೂರು ಜಿಲ್ಲೆಗೆ ಸೇರಿದವರಾಗಿದ್ದಾರೆ. ಹಾಗೆ ನೋಡಿದರೆ, ತುಂಗಭದ್ರ, ಕೃಷ್ಣಾನದಿಗಳ ನಡುವಣ ಪ್ರದೇಶದಲ್ಲಿ ಪ್ರಮುಖ ದಾಸರು ಕಾಣಿಸಿಕೊಂಡರು. ಕೃಷ್ಣಾನದಿ ಮೇಲುಗಡೆ ಕಲಬುರ್ಗಿ, ಬೀದರ ಜಿಲ್ಲಾ ಪ್ರದೇಶದಲ್ಲಿ ದಾಸರು ಕಾಣಿಸಿಕೊಳ್ಳಲಿಲ್ಲ(ತತ್ವಪದಕಾರರ ಈ ಭಾಗದಲ್ಲಿ ಹೆಚ್ಚಿಗೆ ಕಾಣಿಸಿಕೊಂಡರು). ಇದಕ್ಕೆ ರಾಜಕೀಯ, ಧಾರ್ಮಿಕ ಕಾರಣಗಳಿವೆ. ಸುರಪುರದ ಆನಂದದಾಸ, ಶಾಮಸುಂದರ ದಾಸ, ಪ್ರಾಣೇಶದಾಸ, ರಾಮದಾಸ(ಪಿಂಜಾರ ಕುಟುಂಬದಲ್ಲಿ ಹುಟ್ಟಿದ ಬಡೇ ಸಾಬನು) ಮುಂತಾದ ಅನೇಕ ದಾಸರು ಈ ಪ್ರಾಂತಕ್ಕೆ ಸೇರಿದವರು. ವೈದಿಕ ಪರಿಸರದಲ್ಲಿ ಈ ದಾಸರು ಹೆಚ್ಚು ಮನ್ನಣೆ ಪಡೆದರು. ಆದರೆ ಈ ದಾಸರು ಕೃಷ್ಣನನ್ನು ಆರಾಧಿಸುವ ಭಾಗವತ ಪಂಥಕ್ಕೆ ಸೇರಿರುವ ಕುಮಾರವ್ಯಾಸ, ಲಕ್ಷ್ಮೀಶ ಇಬ್ಬರೂ ಪ್ರಮುಖ ಜನಪ್ರಿಯ ಕವಿಗಳು. ಇಬ್ಬರ ಕಾಲವನ್ನು ಸುಮಾರು ೧೪-೧೫ನೇ ಶತಮಾನವೆಂದು ಗುರುತಿಸಲಾಗಿದೆ. ಕೃಷ್ಣಾನದಿಯ ಕೆಳಗಡೆ ತಿರುಳ್ಗನ್ನಡ ನಾಡಿನ ಗದಗಿನಲ್ಲಿ ಕುಮಾರವ್ಯಾಸ ಹುಟ್ಟಿದರೆ, ಕೃಷ್ಣಾನದಿ ಮೇಲುಗಡೆ ಸುರಪುರ ತಾಲೂಕಿನ ದೇವಪುರದಲ್ಲಿ ಲಕ್ಷ್ಮೀಶ ಹುಟ್ಟಿದ್ದಾನೆ. ವಿದ್ವತ್ ಪರಂಪರೆ ಮತ್ತು ಜಾನಪದ ಪರಂಪರೆಯನ್ನು ಮೇಳೈಸಿಕೊಂಡು ಕುಮಾರವ್ಯಾಸ ತನ್ನ 'ಗದುಗಿನ ಭಾರತ'ವನ್ನು ಬರೆದಿದ್ದಾನೆ. ಓದುವ ವಿದ್ವಾಂಸರಿಗೆ ಈ ಕಾವ್ಯ ಪ್ರಿಯವಾಗುತ್ತದೆ. ಕೇಳುವ ಜನಪದರಿಗೂ ಈ ಕಾವ್ಯ ಪ್ರಿಯವಾಗುತ್ತದೆ. ಓದುವ ವಿದ್ವಾಂಸರು 'ಗದುಗಿನ ಭಾರತ'ವನ್ನು ಕೇವಲ ಓದಿ ಆಸ್ವಾದಿಸಲೂ ಸಾಧ್ಯವಿಲ್ಲ. ಅದನ್ನು ಕೇಳುವ ಮೂಲಕವೇ ಆಸ್ವಾದಿಸಬೇಕು. ಅಂಥ ಅನನ್ಯ ಕಾವ್ಯವನ್ನು ಕುಮಾರವ್ಯಾಸ ಕಟ್ಟಿದ್ದಾನೆ. ಕೃಷ್ಣ ಭಕ್ತನಾದ 'ಲಕ್ಷ್ಮೀಶನ 'ಜೈಮಿನಿ ಭಾರತ'ವು ಈ ಪ್ರಾಂತದಲ್ಲಿ ಅತ್ಯಂತ ಜನಪ್ರಿಯ ಕಾವ್ಯವಾಗಿದೆ. ಸ್ವಾತಂತ್ರ್ಯಪೂರ್ವ ದಲ್ಲಿ 'ಜೈಮಿನಿ ಭಾರತ' ಓದಿದವರು ಉನ್ನತ ಪದವೀಧರರು ಎಂಬ ಖ್ಯಾತಿಗೆ ಒಳಗಾಗುತ್ತಿದ್ದರು.

ಕನ್ನಡದ ಮೊದಲ ಸಾಹಿತ್ಯ ಕೃತಿ 'ಕವಿರಾಜಮಾರ್ಗ' ರಚನೆಗೊಂಡ ಈ ನೆಲದಲ್ಲಿ ಧರ್ಮಸಮನ್ವಯತೆಯು ಪ್ರಾಚೀನ ಕಾಲದಿಂದಲೇ ಕಂಡುಬರುತ್ತದೆ. 'ತಿಂಥಿಣಿ' ಎಂಬ ಸ್ಥಳವು ಕೃಷ್ಣಾನದಿಯ ದಡದಲ್ಲಿದೆ. 'ಮೌನೇಶ್ವರ'ರಿಂದ ಈ ಕ್ಷೇತ್ರವು ಪ್ರಸಿದ್ಧವಾಗಿದೆ. ದೇವರಗೋನಾಳದಲ್ಲಿ ಜನಿಸಿದ ಮೋನಪ್ಪನು ಮುಂದೆ ಮೌನೇಶ್ವರ ಎಂಬ ಅಭಿಧಾನದಿಂದ ಪ್ರಖ್ಯಾತನಾಗಿ ಹಿಂದೂ-ಮುಸ್ಲಿಮರನ್ನು ಸಮನಾಗಿ ನೋಡಿದ ಸಂತನಾಗಿದ್ದಾನೆ. ಕಾಲಜ್ಞಾನದ ವಚನಗಳನ್ನು ರಚಿಸಿದ ಮೌನೇಶ್ವರರ ಸಮಾಧಿಯು ಸುರಪುರ ತಾಲೂಕಿನ ತಿಂಥಿಣಿಯಲ್ಲಿದೆ. ಈತನ ಸಮಾಧಿಯ ಮೇಲೆ ಭವ್ಯವಾದ ಮಂದಿರವನ್ನು ಕಟ್ಟಲಾಗಿದೆ. ಇದು ಹಿಂದೂ-ಮುಸ್ಲಿಂ ಸಮ್ಮಿಶ್ರ ಶೈಲಿಯನ್ನು ಒಳಗೊಂಡಿದೆ. ಸುರಪುರ ತಾಲೂಕಿನಲ್ಲಿಯೇ ಮತ್ತೊಂದು ಭಾವೈಕ್ಯತೆ ಸಾರುವ ಧಾರ್ಮಿಕ ಸ್ಥಳವೆಂದರೆ ಕೊಡೇಕಲ್. ಬಸವಣ್ಣ ಎಂಬ ಸಂತನು ಇಲ್ಲಿ ನೆಲೆ ನಿಂತು ಹಿಂದೂ ಮುಸ್ಲಿಮರನ್ನು ಸಮಾನ ದೃಷ್ಟಿಯಿಂದ ಕಂಡು, ತನ್ನ ಉಪದೇಶಗಳನ್ನು ನಾಡಿಗೆ ನೀಡಿದ್ದಾನೆ. ಇವನೂ ಸಹಿತ ಕಾಲಜ್ಞಾನ ವಚನಗಳನ್ನು ಬರೆದಿದ್ದಾನೆ. ಕರ್ನಾಟಕದಲ್ಲಿ ಕಾಲಜ್ಞಾನ ಸಾಹಿತ್ಯಕ್ಕೆ

ಪ್ರಖ್ಯಾತವಾಗಿರುವ ಈ ಮಠವು ಕೊಡೇಕಲ್ ಬಸವಣ್ಣನ ಮಠ ಎಂದು ಪ್ರಸಿದ್ಧಿ ಪಡೆದಿದೆ. ಮುಸ್ಲಿಮರು ಈತನಿಗೆ ಸಮಾಧಿ ನಿರ್ಮಿಸಿದ್ದು, ಹಿಂದೂಗಳು ಭವ್ಯವಾದ ಮಠವನ್ನು ಕಟ್ಟಿದ್ದಾರೆ. ಕಲಬುರ್ಗಿಯು ಇಂದು ಜಿಲ್ಲಾ ಕೇಂದ್ರವಾಗಿದೆ. ಹಿಂದೆ ಕಲ್ಯಾಣದ ಹೆಬ್ಬಾಗಿಲು ಎಂದು ಇದನ್ನು ಪರಿಗಣಿಸುತ್ತಿದ್ದರು. ಶರಣಬಸವೇಶ್ವರರ ಕಲಾತ್ಮಕವಾದ ಭವ್ಯ ಮಂದಿರ ಮತ್ತು ಮಠಗಳನ್ನು ಇಲ್ಲಿ ನಿರ್ಮಿಸಲಾಗಿದೆ. ಜೇವರ್ಗಿ ತಾಲೂಕಿನ ಅರಳಗುಂಡಗಿ ಎಂಬ ಗ್ರಾಮದಲ್ಲಿ ಕ್ರಿ.ಶ. ೧೭೪೬ರಲ್ಲಿ ಜನಿಸಿದ ಶರಣಬಸವೇಶ್ವರರು ಕರುಣಾಮಯಿಗಳು, ಮಹಾದಾಸೋಹಿಗಳು ನೊಂದವರ ಕಣ್ಣೀರೊರೆಸುವ ಶರಣರಾಗಿದ್ದರು. ಇವರ ಭವ್ಯವಾದ ಮಂದಿರ ಕಲಬುರ್ಗಿಯಲ್ಲಿದೆ.[೨೧]

ಕಲಬುರ್ಗಿ ನಗರದಲ್ಲಿ ಇರುವ ಮತ್ತೊಂದು ಪ್ರಮುಖ ಧಾರ್ಮಿಕ ಕೇಂದ್ರ ಖಾಜಾ ಬಂದೇ ನವಾಜರ ದರ್ಗಾ. ಸೂಫಿ ಸಂತರಾಗಿದ್ದ ಇವರು ಸುಲ್ತಾನರ ಕಾಲದಲ್ಲಿ ಧಾರ್ಮಿಕ ಸಹಿಷ್ಣುತೆಯನ್ನು ಸಾರಿದವರು. ಇವರು ಮತ್ತು ಇವರ ಶಿಷ್ಯಂದಿರ ಸಮಾಧಿ ಭವನಗಳನ್ನು ಅತ್ಯಂತ ಸುಂದರವಾಗಿ ನಿರ್ಮಿಸಲಾಗಿದೆ. ಖಾಜಾ ಬಂದೇ ನವಾಜ ದರ್ಗಾ ಸಮುಚ್ಚಯದಲ್ಲಿ ಇರುವ ಅನೇಕ ಭವ್ಯ ಸಮಾಧಿ ಭವನಗಳು ಕಲೆಯ ಹಿನ್ನೆಲೆಯಲ್ಲಿ ಮಹತ್ವದ್ದಾಗಿವೆ. ಈ ಸಮಾಧಿಗಳು ಬೃಹತ್ತಾದ ಗೊಮ್ಮಟಗಳನ್ನು ಹೊಂದಿವೆ. ಒಳಭಾಗದ ಎಲ್ಲ ಗೋಡೆಗಳು ಹಾಗೂ ಗುಂಬಜದ ಒಳಭಾಗಗಳನ್ನು ವರ್ಣಚಿತ್ರಗಳಿಂದ ಮತ್ತು ಲೋಹದ ಹಾಳೆಯ ನಕ್ಷೆಗಳಿಂದ ಅಲಂಕರಿಸಲಾಗಿದೆ. ಹೂಬಳ್ಳಿಯ ನಕ್ಷೆ, ಜ್ಯಾಮಿತಿಕ ವಿನ್ಯಾಸ, ಕುರಾನಿನ ವಾಕ್ಯಗಳು, ವಾಸ್ತುವಿನ್ಯಾಸದ ನಕ್ಷೆಗಳನ್ನು ವಿವಿಧ ವರ್ಣಗಳಿಂದ ರಚಿಸಲಾಗಿದೆ. ಕೆಲವು ಕಡೆಗೆ ನೈಜವಾದ ಬಂಗಾರ ಮತ್ತು ಬೆಳ್ಳಿಯ ವರ್ಣಗಳನ್ನು ಲೇಪನ ಮಾಡಲಾಗಿದೆ.[೨೨]

ಕಲಬುರ್ಗಿ ಜಿಲ್ಲೆಯ 'ಸನ್ನತಿ'ಯು ಐತಿಹಾಸಿಕವಾಗಿ ಮತ್ತು ಧಾರ್ಮಿಕವಾಗಿಯೂ ಪ್ರಸಿದ್ಧಿ ಪಡೆದಿದೆ. ಚಿತ್ತಾಪುರ ತಾಲೂಕಿನಲ್ಲಿರುವ ಈ ಪುಟ್ಟಗ್ರಾಮದಲ್ಲಿ ಐತಿಹಾಸಿಕವಾಗಿ ಪ್ರಖ್ಯಾತವಾದ ಚಂದ್ರಲಾಂಬಾ ಅಥವಾ ಚಂದ್ರಲಾ ಪರಮೇಶ್ವರಿ ದೇವಾಲಯವಿದೆ. ರಾಷ್ಟ್ರಕೂಟರ ಕಾಲದಲ್ಲಿ ಈ ದೇವಾಲಯ ಪ್ರಸಿದ್ಧವಾಗಿತ್ತು. ಸನ್ನತಿಯು ಕ್ರಿ.ಶ. ಒಂದನೆಯ ಮತ್ತು ಎರಡನೆಯ ಶತಮಾನಗಳಲ್ಲಿ ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತು. ಅಂದಿನ ದಿನಗಳಲ್ಲಿ ಪ್ರಸಿದ್ಧ ಬೌದ್ಧ ಧಾರ್ಮಿಕ ಕೇಂದ್ರವಾಗಿದ್ದ ಸನ್ನತಿಯಲ್ಲಿ ಬೌದ್ಧ ಸ್ತೂಪ, ಚೈತ್ಯ ಮತ್ತು ಇನ್ನಿತರ ಶಿಲ್ಪಕಲಾ ಕೃತಿಗಳು ಕಂಡುಬಂದಿವೆ. ಬುದ್ಧನ ಜೀವನಕ್ಕೆ ಸಂಬಂಧಿಸಿದ ಅನೇಕ ಶಿಲ್ಪಗಳು ಇಲ್ಲಿ ಲಭ್ಯವಾಗಿವೆ. ಶಾತವಾಹನರ ಕಾಲದಲ್ಲಿ ಬೌದ್ಧ ಕೇಂದ್ರವಾಗಿ, ನಂತರ ರಾಷ್ಟ್ರಕೂಟರ ಕಾಲದಲ್ಲಿ ಶೈವ ಮತ್ತು ಶಾಕ್ತಪಂಥಗಳ ಪ್ರಮುಖ ಸ್ಥಳವಾಗಿ ಮಾರ್ಪಾಟುಗೊಳ್ಳುತ್ತ ಬಂದಿದೆ. ಆಯಾ ಕಾಲದ ಶಿಲ್ಪಕಲಾ ಕೃತಿಗಳು ಇಲ್ಲಿ ಲಭ್ಯವಾಗಿವೆ.[೨೩]

---

೨೧. ಅಮರೇಶ ನುಗಡೋಣಿ: ಹೈದ್ರಾಬಾದ್ ಕರ್ನಾಟಕದ ಹಾಡುಪಾಡು, ಪು-೩೯, ೪೦.
೨೨. ಟಿ. ಎಂ. ಭಾಸ್ಕರ್(ಸಂ.): ಕಲಬುರ್ಗಿ ಜಿಲ್ಲಾ ದರ್ಶನ, ಪು-೬.
೨೩. ಅದೇ.

ಕಲಬುರ್ಗಿ ಜಿಲ್ಲೆಯ ಮತ್ತೊಂದು ಕಲಾಪ್ರಮುಖ ಪ್ರಾಚೀನ ಸ್ಥಳವೆಂದರೆ 'ನಾಗಾಯಿ'. ಇದು ಸಹಿತ ಚಿತ್ತಾಪುರ ತಾಲೂಕಿನಲ್ಲಿದೆ. ಇದೊಂದು ಘಟಕಾಸ್ಥಾನವಾಗಿ ರಾಷ್ಟ್ರಕೂಟರ ಕಾಲದಲ್ಲಿ ಪ್ರಸಿದ್ಧವಾಗಿತ್ತು. ಈ ವಂಶದ ನಾಲ್ಕನೆಯ ಗೋವಿಂದನು ತನ್ನ ಪಟ್ಟಾಭಿಷೇಕ ಕಾಲದಲ್ಲಿ ದಾನ ಮತ್ತು ದತ್ತಿಗಳನ್ನು ಬಿಟ್ಟ ಶಿಲಾಶಾಸನಗಳು ಇಲ್ಲಿ ಲಭ್ಯವಾಗಿವೆ. ಪ್ರಾಚೀನ ಕಾಲದಲ್ಲಿ ಕಲಾಕೇಂದ್ರವಾಗಿದ್ದಂತೆ ಶಿಕ್ಷಣ ಕೇಂದ್ರವಾಗಿಯೂ ನಾಗಾಯಿ ಪ್ರಖ್ಯಾತವಾಗಿತ್ತು. ಹೈಹವ ಮಹಾಮಂಡಳೇಶ್ವರನಾಗಿದ್ದ ಶಿರಸರಸ ಎಂಬುವವನು ಶಿಕ್ಷಣವು ನಿರಾಂತಕವಾಗಿ ನಡೆದುಕೊಂಡು ಹೋಗಲು ಸಾಕಷ್ಟು ಭೂಮಿ, ಸೀಮೆಗಳನ್ನು ಇದಕ್ಕೆ ದತ್ತಿ ಬಿಟ್ಟಿದ್ದನು. ಅಲ್ಲದೆ ಕಲ್ಯಾಣ ಚಾಲುಕ್ಯದೊರೆ ಸೋಮೇಶ್ವರನ ಕಾಲಕ್ಕೆ ಇಲ್ಲಿ ಶಿಕ್ಷಣಕ್ಕಾಗಿ ಮಧುವರಸ ಎಂಬವನು ಘಟಿಕಾಲಯವನ್ನು ನಿರ್ಮಿಸಿದ್ದನು ಎಂದು ತಿಳಿದುಬರುತ್ತದೆ. ನಾಗಾಯಿಯಲ್ಲಿರುವ ತ್ರೈಪುರುಷ ದೇವಾಲಯದಲ್ಲಿ ಪ್ರಾಚೀನ ಘಟಿಕಾಲಯವಿದ್ದ ಬಗ್ಗೆ ಶಾಸನದಲ್ಲಿ ಹೇಳಲಾಗಿದೆ. ಈ ಘಟಿಕಾಲಯದಲ್ಲಿ ಒಟ್ಟು ೨೫೦ ಜನ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದರು. ಇದರಲ್ಲಿ ೨೦೦ ವಿದ್ಯಾರ್ಥಿಗಳು ವೇದಗಳನ್ನು, ಉಳಿದ ೫೦ ವಿದ್ಯಾರ್ಥಿಗಳು ದರ್ಶನ, ಮೀಮಾಂಸೆ, ವ್ಯಾಕರಣ ಮತ್ತು ಕಲೆಯಂತಹ ಇನ್ನಿತರ ವಿಷಯಗಳನ್ನು ಅಧ್ಯಯನ ಮಾಡುತ್ತಿದ್ದರು. ಇಲ್ಲಿ ಒಟ್ಟು ೬ ಜನ ಅಧ್ಯಾಪಕರಿದ್ದರು. ಅಲ್ಲದೆ ಇಲ್ಲಿ ಅಧ್ಯಯನಕ್ಕಾಗಿ ಸರಸ್ವತಿ ಭಂಡಾರವೆಂಬ ಗ್ರಂಥಾಲಯವಿತ್ತು. ಅದನ್ನು ನೋಡಿಕೊಳ್ಳಲು ಸರಸ್ವತಿ ಭಂಡಾರಿ ಎಂಬ ಗ್ರಂಥಪಾಲಕನಾಗಿದ್ದನು ಎಂದು ತಿಳಿದುಬರುತ್ತದೆ. ಇಲ್ಲಿನ ವಿದ್ಯಾಭ್ಯಾಸಕ್ಕಾಗಿ ದಾನ-ದತ್ತಿಗಳನ್ನು ಬಿಟ್ಟುಕೊಟ್ಟಿರುವ ವಿಷಯಗಳು ಈ ಶಾಸನದಿಂದ ತಿಳಿದುಬರುತ್ತವೆ. ಪ್ರಾಚೀನ ಕಾಲದಲ್ಲಿ ಜೈನ ಕೇಂದ್ರವಾಗಿ ನಂತರ ಬೌದ್ಧ ಮತ್ತು ವೈದಿಕ ನೆಲೆಯಾಗಿ ನಾಗಾಯಿ ಪ್ರಸಿದ್ಧಿ ಪಡೆದುಕೊಂಡಿತ್ತು. ಹಾಳಾದ ಸ್ಥಿತಿಯಲ್ಲಿರುವ ನಾಗಾಯಿಯಲ್ಲಿ ಜೈನ ತೀರ್ಥಂಕರರು, ವೈದಿಕ ಧರ್ಮಕ್ಕೆ ಸೇರಿದ ಅನೇಕ ಮೂರ್ತಿಗಳು, ಬೌದ್ಧ ಶಿಲ್ಪಗಳು ಲಭ್ಯವಾಗಿವೆ.[೨೪]

ಕಲಬುರ್ಗಿ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಶಹಪುರ ತಾಲೂಕಿನ ಶಿರವಾಳವು ಐತಿಹಾಸಿಕವಾಗಿ ಮತ್ತು ಕಲಾತ್ಮಕವಾಗಿ ಪ್ರಸಿದ್ಧಿ ಪಡೆದುಕೊಂಡ ಸ್ಥಳವಾಗಿದೆ. ಪ್ರಾಚೀನ ಬೌದ್ಧ ಕೇಂದ್ರವಾಗಿದ್ದ ಶಿರವಾಳವು ನಂತರದಲ್ಲಿ ಶೈವ ಕೇಂದ್ರವಾಗಿಯೂ ಪ್ರಾಮುಖ್ಯತೆ ಪಡೆದುಕೊಂಡಿತ್ತು. ಬೌದ್ಧಧರ್ಮದ ಸ್ತೂಪಗಳು ಮತ್ತು ಬೌದ್ಧಶಿಲ್ಪಗಳು ಇಲ್ಲಿ ದೊರಕಿವೆ. ಪ್ರಾಚೀನವಾದ ಅನೇಕ ದೇವಾಲಯಗಳು, ಶಿಲ್ಪಕಲಾಕೃತಿಗಳು ಇಲ್ಲಿದ್ದವು. ಆದರೆ ಇಂದು ಕೇವಲ ೧೫ ದೇವಾಲಯಗಳು ಮಾತ್ರ ಸುಸ್ಥಿತಿ ಯಲ್ಲಿ ಉಳಿದುಕೊಂಡಿವೆ. ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೂ ಇಲ್ಲಿ ದೇವಾಲಯ ಮತ್ತು ಶಿಲ್ಪಗಳನ್ನು ರಚಿಸಲಾಗಿದೆ. ಬಾದಾಮಿ ಚಾಲುಕ್ಯರ ಕಾಲದ ಮಲ್ಲಿಕಾರ್ಜುನ ದೇವಾಲಯ ಮತ್ತು ಕಲ್ಯಾಣ ಚಾಲುಕ್ಯರ ಕಾಲದ ಪಂಚಲಿಂಗ ಪೀಠವನ್ನೊಳಗೊಂಡ ಸಿದ್ಧಲಿಂಗೇಶ್ವರ ದೇವಾಲಯಗಳಲ್ಲದೇ ಸುಜ್ಞಾನೇಶ್ವರ ದೇವಾಲಯ, ನನ್ನಯ್ಯ,

---

೨೪. ಟಿ. ಎಂ. ಭಾಸ್ಕರ್(ಸಂ.): ಕಲಬುರ್ಗಿ ಜಿಲ್ಲಾ ದರ್ಶನ, ಪು-೬.

ನಾಗಯ್ಯ, ಶಾಂತೇಶ್ವರ, ವೀರಭದ್ರ ದೇವಾಲಯಗಳು ಸುಂದರವಾದ ಶಿಲ್ಪಕಲೆಗಳಿಂದ ಅಲಂಕೃತಗೊಂಡಿವೆ. ಇದಲ್ಲದೆ ಕೆಲವು ಜೈನ ಬಸದಿಯ ಅವಶೇಷಗಳಲ್ಲಿ ಜೈನ ತೀರ್ಥಂಕರರ ಶಿಲ್ಪಗಳು ಕಂಡುಬಂದಿವೆ.[೧೫]

ಆಳಂದವು ಕಲಬರ್ಗಿ ಜಿಲ್ಲೆಯ ಮತ್ತೊಂದು ಪ್ರಮುಖ ಐತಿಹಾಸಿಕ ನೆಲೆಯಾಗಿದೆ. ಅಲಂದೆ ಸಾಸಿರ ಎಂಬ ಖ್ಯಾತಿಯನ್ನು ಪಡೆದುಕೊಂಡಿದ್ದ ಈ ಸ್ಥಳದಲ್ಲಿ ಶರಣ ಏಕಾಂತಯ್ಯನು ವಾಸವಾಗಿದ್ದನು. ಸೋಮನಾಥ ದೇವಾಲಯ, ಏಕಾಂತ ದೇವಾಲಯ ಮತ್ತು ರಾಮಯ್ಯ ದೇವಾಲಯಗಳು ಇಲ್ಲಿ ಪ್ರಸಿದ್ಧವಾಗಿವೆ. ಚಿತ್ತಾಪುರ ತಾಲೂಕಿನ ಕಾಳಗಿ ಇಂದು ಸಣ್ಣ ಹಳ್ಳಿಯಾಗಿದ್ದು ಊರಿನ ತುಂಬೆಲ್ಲ ಪ್ರಾಚೀನ ಕಾಲದ ದೇವಾಲಯಗಳು ಶಿಲ್ಪಕಲಾ ಕೃತಿಗಳು ಹರಡಿಕೊಂಡಿವೆ. ಹೆಚ್ಚಿನ ಭಾಗ ಹಾಳಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅತ್ಯಂತ ಪ್ರಸಿದ್ಧಿ ಪಡೆದುಕೊಂಡಿದ್ದ ಈ ಸ್ಥಳದಲ್ಲಿ ಹಲವಾರು ದೇವಾಲಯಗಳು ಮತ್ತು ಶಿಲ್ಪಕಲಾ ಕೃತಿಗಳನ್ನು ರಚಿಸಲಾಗಿತ್ತು. ಇಂದು ಅವೆಲ್ಲ ಹಾಳಾಗಿ ಕೆಲವು ಅವಶೇಷಗಳು ಉಳಿದುಕೊಂಡಿವೆ. ಕಾಳೇಶ್ವರ, ನೀಲಕಂಠೇಶ್ವರ, ಜೋತೇಶ್ವರ, ಮಲ್ಲಿಕಾರ್ಜುನ ದೇವಾಲಯಗಳಲ್ಲದೆ ಜೈನ ಬಸದಿಯೊಂದು ಉಳಿದುಕೊಂಡಿದ್ದು ಸುಂದರವಾದ ಶಿಲ್ಪಕಲಾ ಕೃತಿಗಳಿಂದ ಅಲಂಕೃತಗೊಂಡಿವೆ.

ಅಖಂಡ ಕಲಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ಮುದನೂರು ಪ್ರಾಚೀನ ಧಾರ್ಮಿಕ, ಐತಿಹಾಸಿಕ ಮತ್ತು ಕಲಾತ್ಮಕ ನೆಲೆಯಾಗಿತ್ತು. ಇದು ಆದ್ಯ ವಚನಕಾರ ದೇವರದಾಸಿಮಯ್ಯನ ಜನ್ಮ ಸ್ಥಳವಾಗಿದೆ. ಇಲ್ಲಿ ರಾಮನಾಥ, ಲಕ್ಷ್ಮಣ ದೇವಾಲಯಗಳಲ್ಲದೆ ಕೆಲವು ಚಿಕ್ಕಪುಟ್ಟ ದೇವಾಲಯಗಳಿವೆ. ದಾಸಿಮಯ್ಯನ ಶಿಲಾಮೂರ್ತಿ ಅತ್ಯಂತ ಸುಂದರವಾಗಿದೆ. ರಾಮತೀರ್ಥ, ಲಕ್ಷಣತೀರ್ಥ, ಹಾಲುತೀರ್ಥ, ಸಂಗಮತೀರ್ಥ, ಪಾಂಡುತೀರ್ಥ, ಮರುಳತೀರ್ಥ ಮತ್ತು ಸಕ್ಕರೆತೀರ್ಥಗಳೆಂಬ ಏಳು ಕಲಾತ್ಮಕ ಬಾವಿಗಳಿವೆ. ಕೆಂಭಾವಿಯು ಪ್ರಾಚೀನ ಅಗ್ರಹಾರವಾಗಿದ್ದು ಮಾತ್ರವಲ್ಲದೆ ಬಸವಣ್ಣನಿಗಿಂತ ಮುಂಚಿನ ಭೋಗಣ್ಣ ಎಂಬ ಶರಣನ ಜನ್ಮಸ್ಥಳವಾಗಿದೆ. ಹನ್ನೊಂದನೆ ಶತಮಾನಕ್ಕೆ ಸೇರಿದ ರೇವಣಸಿದ್ಧೇಶ್ವರ ದೇವಾಲಯ ಮತ್ತು ಭೋಗೇಶ್ವರ ದೇವಾಲಯಗಳಿವೆ.[೧೬]

ಕಲಬುರ್ಗಿ ಜಿಲ್ಲೆಯ ಸೇಡಂ ಪಟ್ಟಣವು ಹಿಂದೆ ಸೇಂಡಿಂಬಪುರವೆಂದು ಕರೆಯಲ್ಪಡುತ್ತಿತ್ತು. ರಾಜಕೀಯವಾಗಿ, ಆಡಳಿತಾತ್ಮಕವಾಗಿ, ಧಾರ್ಮಿಕವಾಗಿ ಮಹತ್ವ ಪಡೆದ ನೆಲೆಯಾಗಿತ್ತು. ಇಂದಿಗೂ ಹಾಳಾದ ಜೈನಬಸದಿಗಳು, ದೇವಾಲಯಗಳು, ಮೂರ್ತಿಶಿಲ್ಪಗಳು ಕಂಡುಬರುತ್ತವೆ. ಇಲ್ಲಿನ ಸ್ಮಾರಕಗಳು ರಾಷ್ಟ್ರಕೂಟ ಮತ್ತು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರುತ್ತವೆ. ಇಲ್ಲಿರುವ ಶಾಸನಗಳಲ್ಲಿ ತ್ರಿಕೂಟದೇವಾಲಯ, ಬ್ರಹ್ಮಜಿನಾಲಯ, ಶಾಂತಿನಾಥ ಬಸದಿ, ಲೋಕ ಜಿನಾಲಯ, ಪಾರ್ಶ್ವನಾಥ

---

೧೫. ಅದೇ. ಪು–೭.

೧೬. ಟಿ. ಎಂ. ಭಾಸ್ಕರ್(ಸಂ.): ಕಲಬುರ್ಗಿ ಜಿಲ್ಲಾ ದರ್ಶನ, ಪು–೮.

ಬಸದಿ, ತೆಂಕಣಬಸದಿಗಳು ಇಲ್ಲಿದ್ದ ಬಗ್ಗೆ ಮಾಹಿತಿ ದೊರಕುತ್ತದೆ. ಈ ಬಸದಿಗಳಲ್ಲಿ ಪಾರ್ಶ್ವನಾಥ ಬಸದಿಯು ಸುಂದರವಾಗಿದೆ. ಇಲ್ಲಿರುವ ಜೈನಶಿಲ್ಪಗಳು ಕಲಾತ್ಮಕವಾಗಿವೆ. ಪಾರ್ಶ್ವನಾಥ, ಧರಣೇಂದ್ರ, ಪದ್ಮಾವತಿ, ಏಳುಹೆಡೆಯ ನಾಗದೇವತೆ, ಸ್ತ್ರೀಪುರುಷ ಚಾಮರದಾರಿ ಸೇವಕರು, ಪದ್ಮಾಸನದಲ್ಲಿ ಕುಳಿತ ಜೈನ ತೀರ್ಥಂಕರರು, ದಂಪತಿ ಶಿಲ್ಪಗಳು ಅತ್ಯಂತ ಸುಂದರವಾಗಿವೆ. ಇದಲ್ಲದೆ ನೇಮಿನಾಥರ ಮೂರ್ತಿ, ಬಾಹುಬಲಿ, ಆಮ್ರಾ, ಅಂಬಿಕಾ ಯಕ್ಷ-ಯಕ್ಷಿಯರು, ಕೂಷ್ಮಾಂಡನಿದೇವಿ, ಸಿಂಹಶಿಲ್ಪ, ಜ್ವಾಲಾಮಾಲಿನಿ, ಪ್ರಿಯಂಕರಶಿಲ್ಪ ಮುಂತಾದವುಗಳು ಸಾಂಪ್ರದಾಯಿಕ ಶಿಲ್ಪಕಲೆಯ ತಾಳಮಾನಕ್ಕೆ ಅನುಸಾರವಾಗಿ ರಚನೆಯಾಗಿವೆ. ಸೇಡಂ ನಗರದಲ್ಲಿರುವ ಮಾಣಿಕೇಶ್ವರ ಗುಡಿಯನ್ನು ಜನರು ಲಿಂಗದಗುಡಿ ಎನ್ನುತ್ತಾರೆ. ಕ್ರಿ.ಶ. ಹತ್ತನೇ ಶತಮಾನದಲ್ಲಿ ನಿರ್ಮಿಸಿದ ಈ ದೇವಾಲಯದಲ್ಲಿ ೪೫ ಕಲಾತ್ಮಕ ಕಂಬಗಳಿವೆ. ಇದೊಂದು ಪ್ರಾಚೀನ ಜೈನಬಸದಿಯಾಗಿದೆ. ವೃಷಭನಾಥನ ಶಿಲ್ಪವು ಇಲ್ಲಿದೆ.[೨೭]

ಕಲಬುರ್ಗಿ ಜಿಲ್ಲೆಯು ಸಾಹಿತ್ಯಿಕವಾಗಿಯೂ ಪ್ರಾಚೀನ ಪರಂಪರೆ ಹೊಂದಿದ ನಾಡು. ವಚನಕಾರರು, ದಾಸಪರಂಪರೆ, ತತ್ವಪದಕಾರರು ಈ ನಾಡನ್ನು ತಮ್ಮ ಕೃತಿಗಳಿಂದ ಸಂಪದ್ಭರಿತವಾಗಿ ಮಾಡಿದ್ದಾರೆ. ಅವರ ಸಾಹಿತ್ಯವು ಈ ಭಾಗದ ಶಿಲ್ಪ ಮತ್ತು ವಾಸ್ತು ಕಲಾಪರಂಪರೆ ಬೆಳೆಯುವಲ್ಲಿ ಗಮನಾರ್ಹ ಪಾತ್ರ ವಹಿಸಿದೆ ಎಂದು ಹೇಳಬಹುದು. ಮುದನೂರಿನ ದೇವರದಾಸಿಮಯ್ಯ, ಆತನ ಹೆಂಡತಿ ಗೊಬ್ಬೂರಿನ ದುಗ್ಗಳೆ, ಕೆಂಭಾವಿಯ ಭೋಗಣ್ಣ, ಆಳಂದದ ಏಕಾಂತ ರಾಮಯ್ಯ, ಕೊಂಡಗುಳಿ ಕೇಶಿರಾಜ, ಕೆಂಭಾವಿಯ ಚಂದಿಮರಸ, ಸಗರದ ಬ್ರಹ್ಮಯ್ಯ, ಹಾವಿನ ಹಾಳದ ಕಲ್ಲಯ್ಯ, ಮುನ್ನೋಳಿಯ ಗಜೇಶ ಮಸಣಯ್ಯ, ಮಸಣಮ್ಮ, ನೆಲೋಗಿಯ ಕೋಲುಶಾಂತಯ್ಯ, ತಿಂಥಿಣಿಯ ಮೌನೇಶ್ವರ, ಜೇವರ್ಗಿಯ ಷಣ್ಮುಖ ಶಿವಯೋಗಿ ಮುಂತಾದವರು ವಚನಕಾರರಾಗಿ, ಶರಣರಾಗಿ ಈ ನಾಡನ್ನು ಪಾವನ ಮಾಡಿದ್ದಾರೆ. ತತ್ವಪದಕಾರರಲ್ಲಿ ಹಿಂದೂ ಮತ್ತು ಮುಸ್ಲಿಂ ಎರಡೂ ಧರ್ಮದವರೂ ಈ ಪ್ರದೇಶದಲ್ಲಿ ಆಗಿ ಹೋಗಿದ್ದಾರೆ. ಪ್ರಮುಖರಾದವರಲ್ಲಿ ರಾಮಪುರದ ಬಕ್ಕಪ್ಪ, ಕಡಕೋಳದ ಮಡಿವಾಳಪ್ಪ ಸೇರಿದ್ದಾರೆ. ಇವರುಗಳಲ್ಲದೆ ಖೈನೂರು ಕೃಷ್ಣಪ್ಪ, ಚನ್ನೂರ ಜಲಾಲಸಾಬ್, ಕಡ್ಲೆವಾಡದ ಸಿದ್ದಪ್ಪ, ತೆಲಗಬಾಳ ರೇವಪ್ಪ ಮುಂತಾದ ಅನೇಕರು ತಮ್ಮ ಭಕ್ತಿಯ ಜೊತೆಗೆ ತತ್ವಪದಗಳನ್ನು ರಚಿಸಿ ಪ್ರಖ್ಯಾತರಾಗಿದ್ದಾರೆ.[೨೮]

ಕಲಬುರ್ಗಿ ಜಿಲ್ಲೆಯಲ್ಲಿ ಆಗಿ ಹೋದ ದಾಸ ಪರಂಪರೆಯ ದಾಸರಲ್ಲಿ ಸುರಪುರದ ಆನಂದದಾಸರು, ಟೊಂಕದಾಸರು, ದಾಸಾಚಾರ್ಯರು, ಗಿರಿರಾಯಾಚಾರ್ಯರು, ಚಿಕ್ಕಮುದನೂರಿನಲ್ಲಿದ್ದ ಹೊನ್ನರಂಗ ವಿಠಲದಾಸರು, ತಿಂಥಿಣಿಯ ಶ್ರೀನಿವಾಸದಾಸರು, ಮುದನೂರಿನ ಗೋಪತಿದಾಸರು, ಹುಣಿಸಿಹೊಳೆ ಗಿರಿಧರದಾಸರು ಮುಖ್ಯರಾಗಿದ್ದಾರೆ. ಕಲಬುರ್ಗಿ ಜಿಲ್ಲೆಯ ಸಾಂಸ್ಕೃತಿಕ ಹಾಗೂ ಕಲಾ ಪರಂಪರೆಯನ್ನು ಸ್ಥೂಲವಾಗಿ ಗಮನಿಸಿದಾಗ ಅನೇಕ ಸಂಗತಿಗಳು ತಿಳಿದುಬರುತ್ತವೆ.

---

೨೭. ಅದೇ..

೨೮. ಟಿ. ಎಂ. ಭಾಸ್ಕರ್(ಸಂ.): ಕಲಬುರ್ಗಿ ಜಿಲ್ಲಾ ದರ್ಶನ, ಪು–೮.

ಇಲ್ಲಿ ಜೈನ, ಬೌದ್ಧ, ಹಿಂದೂ ಹಾಗೂ ಮುಸ್ಲಿಂ ಧರ್ಮಗಳ ಸಂಸ್ಕೃತಿ ಮತ್ತು ಕಲಾ ಪರಂಪರೆಗಳು ಅನಾವರಣಗೊಂಡಿವೆ. ಇಲ್ಲಿನ ಹಿಂದೂ ದೇವಾಲಯಗಳಲ್ಲಿ ಸಾಮಾನ್ಯವಾಗಿ ಗರ್ಭಗೃಹ, ಮುಖಮಂಟಪ, ರಂಗಮಂಟಪ, ಮಧ್ಯಮಂಟಪ, ಸುಕನಾಸಿ, ಪ್ರದಕ್ಷಿಣಪಥ, ದ್ವಾರಪಾಲಕರು, ಅಲಂಕೃತ ಕಂಬಗಳು, ಮಂಟಪಗಳು, ಎದುರುಮಂಟಪ, ಕಲ್ಯಾಣಿಯಂತಹ ಭಾಗಗಳು ಕಂಡು ಬರುತ್ತವೆ. ಇವು ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳ ಲಕ್ಷಣಗಳಾಗಿವೆ. ದೇವಾಲಯದ ಈ ಎಲ್ಲ ಭಾಗಗಳು ಅವಶ್ಯಕತೆಗೆ ಅನುಸಾರವಾಗಿ ಶಿಲ್ಪಕಲಾಕೃತಿಗಳಿಂದ ಅಲಂಕೃತಗೊಂಡಿವೆ.

ರಾಷ್ಟ್ರಕೂಟರ ಕಾಲದಲ್ಲಿ ಶಿಲ್ಪಗಳು, ವೀರಗಲ್ಲು, ಮಹಾಸತಿಕಲ್ಲುಗಳು ಕಲಾತ್ಮಕವಾಗಿ ರಚನೆಯಾಗಿವೆ. ಇವರ ಕಾಲದ ಗಣೇಶ, ಲಕ್ಷ್ಮೀ, ಸರಸ್ವತಿ, ಶಿವ, ಬ್ರಹ್ಮ, ವಿಷ್ಣು, ಪಾರ್ವತಿ, ಯಕ್ಷ-ಯಕ್ಷಿಯರು, ನಾಗದೇವತೆಗಳು, ಬುದ್ಧನ ಶಿಲ್ಪಗಳು, ಜೈನ ತೀರ್ಥಂಕರರ ಮೂರ್ತಿಗಳು ಸುಂದರವಾಗಿ ಕೆತ್ತಲ್ಪಟ್ಟಿವೆ. ಕಲಬುರ್ಗಿ ಮತ್ತು ಸುತ್ತಲಿನ ಪರಿಸರದಲ್ಲಿ ಕಂಡುಬರುವ ಬಹಮನಿ ಸುಲ್ತಾನರ ಕಾಲದ ವಾಸ್ತುರಚನೆಯು ಇಂಡೋ-ಸಾರ್ಸೆನಿಕ್ ಶೈಲಿಯನ್ನು ಪ್ರತಿನಿಧಿಸುತ್ತದೆ. ಕೋಟೆಗಳು, ಸಮಾಧಿಗಳು, ಮಸೀದಿಗಳು, ಅರಮನೆಗಳು ಇವುಗಳಲ್ಲಿ ಪ್ರಮುಖವಾಗಿವೆ. ಮಸೀದಿಗಳು, ಅರಮನೆಗಳು ಇವುಗಳಲ್ಲಿ ಪ್ರಮುಖವಾಗಿವೆ. ಕಲಬುರ್ಗಿಯ ಬಂದೇ ನವಾಜ್ ದರ್ಗಾ ಇಲ್ಲದೆ ಶಹಾಕಮಾಲ್ ಮಸೀದಿ, ಸಾತ್‌ಗುಂಬಜ್, ಜೋಡುಗುಮ್ಮಟ, ಜಾಮೀ ಮಸೀದಿ ಮುಂತಾದವುಗಳು ಬೃಹತ್ ಗುಂಬಜ್‌ಗಳನ್ನು ಒಳಗೊಂಡಿವೆ. ಕಲಬುರ್ಗಿ ಜಿಲ್ಲೆಯ ಪ್ರಾಚೀನ ವಾಸ್ತುಕಲೆ ಮತ್ತು ಶಿಲ್ಪಕಲೆಗಳು ಈ ಭಾಗದ ಸಾಂಪ್ರದಾಯಿಕ ಶಿಲ್ಪಕಲೆಯ ಬೆಳವಣಿಗೆಯನ್ನು ಪ್ರತಿನಿಧಿಸುವ ಪರಂಪರೆಯಾಗಿದೆ.[೨೯]

## ೨.೩. ಯಾದಗಿರಿ ಜಿಲ್ಲೆ

ಕರ್ನಾಟಕದ ಮೂವತ್ತನೇ ಜಿಲ್ಲೆಯಾದ ಯಾದಗಿರಿ ಪರಿಸರ ಸಾಂಸ್ಕೃತಿಕ ಬೀಡಾಗಿದೆ. ಕಲೆ, ಸಾಹಿತ್ಯ, ಸಂಗೀತ, ಶಿಲ್ಪಕಲೆ ಹೀಗೆ ಹಲವು ಸ್ಮಾರಕಗಳಿಂದ ಕಂಗೊಳಿಸುವಂತಹ ಸಾಂಸ್ಕೃತಿಕ ನಗರ ಮತ್ತು ಲಲಿತಕಲೆಗಳ ನೆಲವಿದು. ಇಲ್ಲಿ ಉಗಮಗೊಂಡ ಕಲೆಗಳು ತಾತ್ವಿಕ ನೆಲೆಯಲ್ಲಿ ದರ್ಶನವಾಗುತ್ತವೆ. ರಾಜಾಶ್ರಯ ನೆಲೆಯಿಂದ ಪೌರಾಣಿಕವಾಗಿ, ಧಾರ್ಮಿಕವಾಗಿ ಸೂಫಿ ಸಂತರು, ಸಾಹಿತಿಗಳು, ಕಲಾವಿದರು ನೆಲೆಸಿದ ಶ್ರೀಮಂತ ನಾಡು ಯಾದಗಿರಿ ಜಿಲ್ಲೆ. ಯಾದಗಿರಿ, ಸುರಪುರ, ಶಹಾಪುರ ಮೂರು ತಾಲೂಕುಗಳನ್ನು ಹೊಂದಿದ ಕರ್ನಾಟಕದ ಅತಿ ಚಿಕ್ಕ ಜಿಲ್ಲೆಯಾಗಿದೆ. ಈ ಜಿಲ್ಲೆ ಬಿಸಿಲಿನ ನಾಡೆಂದರೂ ಕೂಡ ಕೃಷ್ಣ, ಭೀಮೆ ಈ ಎರಡು ನದಿಗಳಿಂದ ಕೂಡಿದೆ. ಸಾಲು ಬೆಟ್ಟಗಳ ಮೇಲೆ ಬೆಳೆಯುವ ಗಿಡ–ಮರ, ಚಳಿ–ಮಳೆಗಾಲದಲ್ಲಿ ಹಚ್ಚ ಹಸಿರು, ಬೇಸಿಗೆಯಲ್ಲಿ ಬರೀ ಕಲ್ಲು, ಮಣ್ಣುಗಳಿಂದ ಕಾಣುವ ಬೆಟ್ಟದಲ್ಲಿ ಹುಟ್ಟಿಕೊಂಡ ರಾಜಾಶ್ರಯ ನೆಲೆಯ ವಾಸ್ತುಶಿಲ್ಪ ಕಟ್ಟಡ, ಕೋಟೆ–ಕೊತ್ತಲುಗಳು ವಿಶೇಷವಾಗಿ ಕಾಣುತ್ತವೆ.

---

೨೯. ಟಿ. ಎಂ. ಭಾಸ್ಕರ್(ಸಂ.): ಕಲಬುರ್ಗಿ ಜಿಲ್ಲಾ ದರ್ಶನ, ಪು–೯, ೧೦.

ಅಲ್ಲದೆ ಯಾದಗಿರಿ ಜಿಲ್ಲೆ ಕೃಷಿ ಪ್ರಧಾನವಾಗಿದ್ದು, ಜೋಳ, ತೊಗರಿ ಬೆಳೆಗಳು ಪ್ರಮುಖವಾಗಿ ಬೆಳೆಯುತ್ತಾರೆ. ಹಬ್ಬ ಹರಿದಿನ, ಜಾತ್ರೆ–ಮಹೋತ್ಸವಗಳೊಂದಿಗೆ ಜನ ಜೀವನ ಸಾಂಸ್ಕೃತಿಕ ಸಂಭ್ರಮವಾಗಿ ಕಂಡುಬರುತ್ತದೆ. ಮೌರ್ಯರು, ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಬಾದಾಮಿ ಯಾದವರು, ವಿಜಯಪುರ ಆದಿಲ್‌ಷಾಹಿ, ಸುರಪುರ ಬೇಡನಾಯಕರು, ಹೀಗೆ ಹಲವಾರು ರಾಜವಂಶಗಳು ಆಳ್ವಿಕೆಯ ನಾಡಾಗಿದೆ. ಅಂತೆಯೇ ಅವರವರ ಕಾಲಾನುಕ್ರಮವಾಗಿ ಹುಟ್ಟಿಕೊಂಡ ದೇವಾಲಯ, ಕೋಟೆ, ಗುಂಬಜ್‌ಗಳು ತಮ್ಮದೇಯಾದ ಸ್ವರೂಪ ಪಡೆದ ವಾಸ್ತುಶಿಲ್ಪ ಕಟ್ಟಡಗಳು ಸಾಕ್ಷಿಯಾಗಿವೆ.[೩೦] 

ಪೌರಾಣಿಕ ಹಿನ್ನೆಲೆಯಾಗಿ ನೋಡುವುದಾದರೆ ಯಾದಗಿರಿ ಜಿಲ್ಲೆ ಪರಿಸರವು ಸಗರನಾಡು ಪ್ರದೇಶವೆಂದೇ ಪ್ರಸಿದ್ಧಿ ಪಡೆದಿದೆ. ಪುರಾಣದಲ್ಲಿ ಪ್ರಸಿದ್ಧ ಮಹಾಬಲಶಾಲಿಯಾಗಿದ್ದ ಪರಮ ಧಾರ್ಮಿಕನೂ ಆಗಿದ್ದ ಸಗರ ಚಕ್ರವರ್ತಿ 'ಸಗರ'ವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಇಡೀ ಜಿಲ್ಲಾ ಪರಿಸರವನ್ನು ಆಳ್ವಿಕೆ ಮಾಡಿದವನೆಂದು ಪೌರಾಣಿಕ ಕಥೆಯಿದೆ. ಐತಿಹಾಸಿಕ ಹಿನ್ನೆಲೆಯನ್ನು ನೋಡಿದಾಗ ಸುರಪುರ, ಯಾದಗಿರಿ, ಶಹಾಪುರ, ಪರಿಸರದ ದೇವಪುರ, ಕಕ್ಕೇರಿ, ರಾಜನಕೋಳೂರು, ಹಗರಟಗಿ, ಕೆಂಭಾವಿ, ಐವೂರು, ಶಹಾಪುರ ತಾಲೂಕಿನ ಭೀಮರಾಯನಗುಡಿ, ಸಗರ, ವಿಭೂತಿಹಳ್ಳಿ, ಜೇವರ್ಗಿ ತಾಲೂಕಿನ ಕುಳಗೇರಿ ಮುಂತಾದ ಸ್ಥಳಗಳು ಪ್ರಾಚೀನ ಅವಶೇಷಗಳನ್ನು ಹೊಂದಿವೆ. ಸುರಪುರ ಸಂಸ್ಥಾನದ ಬ್ರಿಟಿಷ್ ಸರಕಾರದ ರಾಜಕೀಯ ಪ್ರತಿನಿಧಿ ಯಾಗಿ ಬಂದಿದ್ದ ಮೆಡೋಸ್ ಟೇಲರನು ರಾಜನಕೋಳೂರು, ವಿಭೂತಿಹಳ್ಳಿ, ಭೀಮರಾಯನಗುಡಿ, ಮುಂತಾದ ಸ್ಥಳಗಳಲ್ಲಿ ಪ್ರಾಚೀನ ಕುರುಹುಗಳನ್ನು ಸಂಶೋಧನೆ ಮಾಡಿ ಬೆಳಕಿಗೆ ತಂದಿದ್ದಾನೆ. ಖನಿಜ ಸಂಪತ್ತನ್ನು ನೋಡಿದಾಗ ಗೋಗಿ ಗ್ರಾಮದಲ್ಲಿನ ಯುರೇನಿಯಂ, ಮರ್ಕಲ್, ಕೊಳ್ಳೂರು ಗ್ರಾಮಗಳಲ್ಲಿ ವಜ್ರದ ನಿಕ್ಷೇಪವಿದ್ದು, ಕೊಹಿನೂರ್ ವಜ್ರ, ಶಹಾಪುರ ತಾಲೂಕಿನಲ್ಲಿದೆ ಎಂಬುದಕ್ಕೆ ಹಲವು ಸರಕಾರಿ ದಾಖಲೆಗಳನ್ನು ಹೊಂದಿದೆ. ಶಹಾಪುರ ತಾಲೂಕಿನ ನಾಗನಟಗಿ, ಧರಿಯಾಪುರ, ರಾಜಾಪುರ, ಚಂದಾಪುರ, ಸಿರಿವಾಳ, ಅಣಬಿ, ಕರ್ಕಿಹಳ್ಳಿ, ಹೊಸಕೇರಾ, ದೋರನಹಳ್ಳಿ, ಹೊಸೂರು ಮುಂತಾದ ಗ್ರಾಮಗಳಲ್ಲಿ ಸುಣ್ಣದಕಲ್ಲು(ಸೇದಿಕಲ್ಲು) ಚಪ್ಪಡಿಕಲ್ಲು, ಹಾಸುಕಲ್ಲು ದೊರೆಯುತ್ತದೆ.[೩೧]

ಸುರಪುರ ತಾಲೂಕಿನ ಹಲವೆಡೆ ಮಂಗಳೂರು, ಮಾವಿನಮಟ್ಟಿ, ಚನಾಪುರ, ನಗನೂರು ಪ್ರದೇಶಗಳಲ್ಲಿ ಚಿನ್ನದ ಗಣಿಗಳಿದ್ದವೆಂದು ಭೂಗರ್ಭಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ತಿಂಥಿಣಿ ಗ್ರಾಮದಲ್ಲಿ ತಾಮ್ರದ ಅದಿರು, ಹುಣಸಗಿ, ವಜ್ಜಲ, ಚೆನ್ನೂರು ಗ್ರಾಮಗಳಲ್ಲಿ ಸಿಮೆಂಟ್ ತಯಾರಿಕೆಗೆ ಬೇಕಾಗುವ ಸುಣ್ಣದಕಲ್ಲು ದೊರೆಯುತ್ತದೆ. ಹೀಗೆ ಭೂಸಂಪತ್ತಿನಲ್ಲೂ ಯಾದಗಿರಿ ಜಿಲ್ಲಾ ಪರಿಸರ ಶ್ರೇಷ್ಠತೆ ಪಡೆದುಕೊಂಡಿದೆ. ತಿಂಥಿಣಿ ಮೌನೇಶ್ವರ, ಗೋಗಿಯ ಸಂತ ಚಂದಾ

---

೩೦. ಡಾ. ಬಸವರಾಜ ಕಲೆಗಾರ: ಹೈದ್ರಾಬಾದ್ ಕರ್ನಾಟಕದ ಚಿತ್ರಕಲೆ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು–೧೯.
೩೧. ಡಾ. ಬಸವರಾಜ ಕಲೆಗಾರ: ಹೈದ್ರಾಬಾದ್ ಕರ್ನಾಟಕದ ಚಿತ್ರಕಲೆ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು–೨೦.

ಹುಸೇನಿ, ಸಂಗಮನಾಥ, ಮುದನೂರು ದೇವರದಾಸಿಮಯ್ಯ, ಕೂಡಲೂರು ಬಸವಲಿಂಗ ಶರಣ, ಕೆಂಬಾವಿ ಬೋಗಣ್ಣ, ಇಂತಹ ಶರಣರ ನೆಲೆಯಿಂದ ಹಿಂದೂ–ಮುಸ್ಲಿಂ ಭಾವೈಕ್ಯತೆಗೆ ಪ್ರಸಿದ್ಧಿ ಪಡೆದಿವೆ. ಸಂಕ್ರಾಂತಿ, ಶ್ರಾವಣಮಾಸ, ಯುಗಾದಿ, ಮೊಹರಂ, ಮಹಾಪರ್ವ, ದೀಪಾವಳಿ, ಹಂಪಿ ಹುಣ್ಣಿಮೆ, ನಾಗರ ಅಮಾವಾಸ್ಯೆ, ಮಣ್ಣೆತ್ತಿನ ಅಮಾವಾಸ್ಯೆ, ಕಾರಹುಣ್ಣಿಮೆ, ಹೀಗೆ ಹಲವು ಹಬ್ಬ ಹರಿದಿನ ಜಾತ್ರೆಗಳು ನಡೆಯುವ ಮೂಲಕ ಸಾಂಸ್ಕೃತಿಕ ಚಟುವಟಿಕೆ ಕಾರ್ಯ ನಡೆಯುತ್ತದೆ.[೩೨]

## ಲಲಿತಕಲೆಗಳು

ನೂತನ ಯಾದಗಿರಿ ಜಿಲ್ಲೆಯಲ್ಲಿ ಲಲಿತ ಕಲೆಗಳ ಉಗಮ ಈ ರೀತಿ ಅಭಿವ್ಯಕ್ತಿಗೊಂಡಿದೆ. ಪ್ರಮುಖವಾಗಿ ಚಿತ್ರಕಲೆ, ಶಿಲ್ಪಕಲೆ, ನಾಟಕ, ಸಂಗೀತ, ಬಯಲಾಟ, ಹೀಗೆ ಹಲವು ವಿಧಗಳಲ್ಲಿ ಕಾಣಿಸಿಕೊಳ್ಳುತ್ತವೆ. ಕರ್ನಾಟಕದಲ್ಲಿ ೧೮೮೦ರ ಸಂದರ್ಭದಲ್ಲಿ ಹೂಬರ್ಟ್‌ನಾಕ್ಸ್ ಕಪಗಲ್‌ನಲ್ಲಿ ಕುಟ್ಟಿದ ಚಿತ್ರಗಳನ್ನು ಶೋಧಿಸಿದ ನಂತರ ೧೯೩೭ರಲ್ಲಿ ಲಿಯೋನಾರ್ಡ್‌ಮನ್ ಅವರು ಹಿರೇಬೆಣಕಲ್ ಗುಡ್ಡಗಾಡು ಪ್ರದೇಶದಲ್ಲಿ ಗವಿವರ್ಣ ಚಿತ್ರಗಳನ್ನು ಕಂಡುಹಿಡಿದನು. ನಂತರ ೧೯೪೦ರ ದಶಕದಲ್ಲಿ ಮಸ್ಕೀ, ಕಲ್ಲೂರು, ಆತನೂರು ಕೆಲವು ನೆಲೆಗಳೊಂದಿಗೆ ಯಾದಗಿರಿಯ ಬಳಿಚಕ್ರದಲ್ಲಿರುವ ಪ್ರಾಗಿತಿಹಾಸ ಕಾಲದ ವರ್ಣಚಿತ್ರ ಶೋಧಿಸಿದವರು ಅ.ಸುಂದರ ಅವರು. ಈ ನೆಲೆ ಅಷ್ಟೇ ಅಲ್ಲದೇ ಹಗರಟಗಿ, ಹಿರೇಹೆಬ್ಬಾಳ, ಹುಣಸಗಿ ಪರಿಸರ, ವರ್ಕನಳ್ಳಿ ತಾಂಡಾ, ಮುಂತಾದ ಸ್ಥಳಗಳಲ್ಲಿ ಪ್ರಾಗೈತಿಹಾಸ ಕಾಲದ ವರ್ಣ ರೇಖಾಚಿತ್ರಗಳು ಇವೆ. ಈ ಚಿತ್ರ ನೆಲೆಗಳಿಂದ ಪ್ರಾಗಿತಿಹಾಸ ಕಾಲದ ಚಿತ್ರ ರಚನಾಕಾರ್ಯ, ಉತ್ಸಾಹ, ವಸ್ತು, ವಿಷಯ, ನಮಗೆ ಆಧಾರವಾಗಿವೆ. ಪ್ರಾಗಿತಿಹಾಸ ನೆಲೆಗಳನ್ನು ಹೊರತುಪಡಿಸಿದರೆ ಸುರಪುರ ಸಂಸ್ಥಾನದಲ್ಲಿ ಹುಟ್ಟಿಕೊಂಡು ಬೆಳೆದ ಗರುಡಾದ್ರಿ ಚಿತ್ರಕಲಾ ಶೈಲಿ ಭಾರತೀಯ ಹಲವು ಸಾಂಪ್ರದಾಯಿಕ ಶೈಲಿಗಳಲ್ಲಿ ಸುರಪುರ ಶೈಲಿಯೆಂದೇ ಗುರುತಿಸಿ ಗೌರವಿಸಿಕೊಂಡಿರುವುದು ಯಾದಗಿರಿ ಜಿಲ್ಲೆಯಿಂದ ಚಿತ್ರಕಲಾ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯಾಗಿದೆ. ರಂಗಂಪೇಟೆಯ ರುದ್ರಸ್ವಾಮಿಮಠ, ಅಣ್ಣಯ್ಯನ ಮಠ, ಕಾಕಲವಾರ ದೇಶಮುಖ ಸಂಸ್ಥಾನದ ಅರಮನೆಯ ಭಿತ್ತಿಚಿತ್ರಗಳು ಮಹತ್ವದ ಕಲಾಕೃತಿಗಳಾಗಿವೆ.[೩೩]

ಯಾದಗಿರಿ ಜಿಲ್ಲೆಯ ಹಿರಿಯ ಕಲಾವಿದರಾದ ಎಂ.ಟಿ. ಭೋಪಲೆಯವರು ಸಮಕಾಲೀನ ಚಿತ್ರಕಲೆಗೆ ನೀಡಿದ ಕಲಾ ಕೊಡುಗೆ ಅಪಾರವಾದದ್ದು. ಅಂತೆಯೇ ಅವರು ರಚಿಸಿದ ಕಲಾಕೃತಿಗಳು ತಾತ್ವಿಕ ಚರ್ಚೆಗೆ ದಾರಿ ಮಾಡಿಕೊಂಡಿವೆ. ಪ್ರಸ್ತುತ ಹಿರಿಯ ಕಲಾವಿದರಾದ ಸಂಗಣ್ಣ ಮಲಗೊಂಡ ದೋರನಹಳ್ಳಿ, ಡಿ.ಎನ್. ಅಕ್ಕಿ, ಎಸ್.ಡಿ. ಪಾಟೀಲ, ದಿವಂಗತ ಶಂಕ್ರಪ್ಪ ಶೀಲವಂತ, ಮಹ್ಮದ ತಾಹೀರ್ ಸೇರಿದಂತೆ ಹಲವಾರು ಹಿರಿಯ ಚಿತ್ರಕಲಾವಿದರು ನೆಲೆಸಿದ್ದಾರೆ. ಈ ಜಿಲ್ಲೆಯಲ್ಲಿ ಜನಪದ ಚಿತ್ರಕಲೆ, ಹಸೆಕಲೆ, ಹಚ್ಚೆಕಲೆ, ರಂಗೋಲಿ ಕಲೆ, ಕರಕುಶಲ ಕಲೆ,

---

೩೨. ಅದೇ.

೩೩. ಡಾ. ಬಸವರಾಜ ಕಲೆಗಾರ: ಹೈದ್ರಾಬಾದ್ ಕರ್ನಾಟಕದ ಚಿತ್ರಕಲೆ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು–೨೧.

ಮದರಂಗಿ ಕಲೆ, ಹಸ್ತಪ್ರತಿ ಚಿತ್ರಕಲೆ ಹೀಗೆ ಹಲವಾರು ಕಲೆಗಳು ಸಂಕೀರ್ಣದಿಂದ ಕೂಡಿವೆ.

ಪ್ರಸ್ತುತ ಜಿಲ್ಲೆಯಲ್ಲಿ ಯುವ ಚಿತ್ರಕಲಾವಿದರು ಸಮಕಾಲೀನ ಸ್ಪಂದನೆಯ ಕಲಾಕೃತಿಗಳನ್ನು ರಚಿಸುವುದರೊಂದಿಗೆ, ಕೃಷ್ಣಾನದಿಯ ದಡದಲ್ಲಿ ಮರಳಿನ ಶಿಲ್ಪಗಳನ್ನು ಮಾಡುವ ಮೂಲಕ ಕಲಾಕ್ಷೇತ್ರದಲ್ಲಿ ಗಟ್ಟಿ ಹೆಜ್ಜೆಯನ್ನಿಡಲೂ ಪ್ರಯತ್ನಿಸುತ್ತಿದ್ದಾರೆ. ಯಾದಗಿರಿ ಜಿಲ್ಲೆಯಲ್ಲಿ ಚಿತ್ರಕಲೆಯ ಮಹತ್ವ ಪ್ರಮುಖವಾಗಿ ಕಂಡುಬರುತ್ತದೆ. ಚಿತ್ರಕಲೆಯ ಪಾತ್ರ ಅಷ್ಟೇ ಅಲ್ಲದೇ ಜಿಲ್ಲೆಯಲ್ಲಿರುವ ಮಹಲ್-ರೋಜಾ ಗುಮ್ಮಟ, ಸಗರಕೋಟೆ, ಯಾದಗಿರಿ, ಸುರಪುರ ಅರಮನೆ, ಮತ್ತು ಸುರಪುರ ವೇಣುಗೋಪಾಲಸ್ವಾಮಿ ದೇವಾಲಯ, ಗೋಗಿಯ ದರ್ಗಾ, ಮಸೀದಿ, ಗುಮ್ಮಟಗಳು, ಕಾಕಲವಾರ ದೇಶಮುಖರ ಅರಮನೆ, ಸಿರಿವಾಳದ ದೇವಾಲಯಗಳು, ಅಣಬಿ, ಮದ್ರಿಕಿ, ಭೀಮರಾಯನ ಗುಡಿ, ವನದುರ್ಗ ಕೋಟೆ, ಹೀಗೆ ಹಲವಾರು ರಾಜಾಶ್ರಯ ನೆಲೆಯಲ್ಲಿ ಹುಟ್ಟಿಕೊಂಡ ವಾಸ್ತುಶಿಲ್ಪ ಕಟ್ಟಡಗಳು ಶಿಲ್ಪಕಲಾ ಕ್ಷೇತ್ರಕ್ಕೆ ವಿಶೇಷ ಕೊಡುಗೆಯಾಗಿದೆ. ನಾಟಕಕಾರರು, ಬಯಲಾಟಗಳು, ಸಂಗೀತ, ಸಾಹಿತ್ಯ ಹೀಗೆ ಹಲವು ಕಲೆಗಳಿಂದ ಯಾದಗಿರಿ ಜಿಲ್ಲೆ ಲಲಿತಕಲೆಗಳ ಬೀಡಾಗಿದೆ ಎಂಬುದು ಗಮನಾರ್ಹ ಚಿಂತನೆಯಾಗಿದೆ.[೩೪]

## ೨.೪. ರಾಯಚೂರು ಜಿಲ್ಲೆ

ಸಂಸ್ಕೃತಿ ಮತ್ತು ನಾಗರಿಕತೆಯ ದೃಷ್ಟಿಯಿಂದ ಕರ್ನಾಟಕ ರಾಜ್ಯದ ಚರಿತ್ರೆಯಲ್ಲಿ ರಾಯಚೂರು ಜಿಲ್ಲೆಯು ವಹಿಸಿದ ಪಾತ್ರವು ನಿಜಕ್ಕೂ ಮಹತ್ವಪೂರ್ಣವಾಗಿದೆ. ರಾಯಚೂರು ಜಿಲ್ಲೆ ಕೃಷ್ಣತುಂಗೆಯರ ಮಂಗಳ-ಅಂಗಳ ದೋ-ಅಬ್ ಎಂದು ಪ್ರತೀತಿ ಪಡೆದ ಪ್ರದೇಶ. ದೋ-ಅಬ್ ಎಂದರೆ ಎರಡು ನದಿಗಳ ನಡುವಿನ ಭೂಪ್ರದೇಶ.[೩೫] ಈ ಜಿಲ್ಲೆಯು ಉತ್ತರ ಭಾಗದಲ್ಲಿ ಕಲಬುರ್ಗಿ, ಪಶ್ಚಿಮದಲ್ಲಿ ವಿಜಾಪುರ ಹಾಗೂ ಧಾರವಾಡ, ಪೂರ್ವದಲ್ಲಿ ಆಂಧ್ರಪ್ರದೇಶ ಹಾಗೂ ದಕ್ಷಿಣದಲ್ಲಿ ಆಂಧ್ರ ಮತ್ತು ಬಳ್ಳಾರಿ ಜಿಲ್ಲೆಗಳಿಂದ ಆವೃತವಾಗಿದೆ. ಕೃಷ್ಣಾನದಿಯು ಈ ಜಿಲ್ಲೆಯ ಉತ್ತರ ಹಾಗೂ ತುಂಗಭದ್ರ ನದಿಯ ದಕ್ಷಿಣ ಮೇರೆಗಳಾಗಿವೆ. ಕರ್ನಾಟಕದ ಈಶಾನ್ಯ ಭಾಗವು ಬಂಡೆಗಲ್ಲುಗಳ ಬೆಟ್ಟಗಳಿಂದ, ಗಿಡಮರಗಳಿಂದ ಬಯಲು ಭೂಮಿಯಿಂದ ಒಣಹವೆ ಹಾಗೂ ಕಪ್ಪು ಮಣ್ಣಿನಿಂದ ಕೂಡಿದ ಪ್ರದೇಶವಾಗಿದೆ. ಈ ಪ್ರಾಗೈತಿಹಾಸ ಕಾಲದ ಸಂಸ್ಕೃತಿಯನ್ನು ರಾಯಚೂರು, ಲಿಂಗಸೂರು, ಮಸ್ಕಿ, ಭಿಲ್ಲಮರಾಯನಗುಡ್ಡ, ಪಿಕ್ಲಿಹಾಳ, ಕಲ್ಲೂರು, ತಾವರಗೆರೆ, ಅತನೂರು, ಮಾನ್ವಿ ಮುಂತಾದವುಗಳಲ್ಲಿ ಗುರುತಿಸಲಾಗಿದೆ.[೩೬]

ಮಸ್ಕಿ ಮತ್ತು ಪಿಕ್ಲಿಹಾಳ ಸ್ಥಳಗಳಲ್ಲಿ ಉತ್ಖನನದಲ್ಲಿ ಅನೇಕ ಶಿಲಾಯುಗದ ಸಂಸ್ಕೃತಿಯ ಮಡಿಕೆಯ ಚೂರುಗಳು ಮತ್ತು ಮಡಿಕೆಯ ಮೇಲೆ ಚಿತ್ರಗಳನ್ನು ರಚಿಸಿರುವುದು ದೊರೆತಿವೆ. ರಾಯಚೂರು ಜಿಲ್ಲೆಯು ರಾಯಚೂರು, ಮಾನ್ವಿ, ಸಿಂಧನೂರ, ಲಿಂಗಸಗೂರು, ದೇವದುರ್ಗ

---

೩೪. ಡಾ. ಬಸವರಾಜ ಕಲೆಗಾರ: ಹೈದ್ರಾಬಾದ್ ಕರ್ನಾಟಕದ ಚಿತ್ರಕಲೆ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು-೨೧, ೨೨.

೩೫. ಪ್ರೊ. ಷೇಕ್ ಅಲಿ(ಸಂ.): ಕರ್ನಾಟಕ ಚರಿತ್ರೆ(ಸಂಪುಟ-೪), ಪು-೧೦೨.

೩೬. ಡಾ. ಮೃತ್ಯುಂಜಯ ಹೊರಕೇರಿ, ಡಾ. ಬಸವಲಿಂಗ ಸೊಪ್ಪಿಮಠ(ಸಂ.): ರಾಯಚೂರು ಜಿಲ್ಲಾ ದರ್ಶನ, ಪು-೨೩.

ಎಂಬ ಐದು ತಾಲೂಕು ಹೊಂದಿದೆ. ರಾಯಚೂರು ಸೇರಿದಂತೆ ಇಲ್ಲಿ ದೊಡ್ಡ ದೊಡ್ಡ ಬಂಡೆಗಲ್ಲುಗಳನ್ನು ಹೊತ್ತ ಬೆಟ್ಟಗಳು ನದಿ, ಹಳ್ಳಗಳಿಂದ ಕೂಡಿದ ಸಮೃದ್ಧ ಪ್ರದೇಶವಾಗಿದೆ. ಇಲ್ಲಿನ ಭೂಪ್ರದೇಶ ವಾಯವ್ಯದಿಂದ ಆಗ್ನೇಯದ ಕಡೆಗೆ ಇಳಿಜಾರಾಗಿದೆ. ಇಲ್ಲಿನ ನದಿಗಳು, ಹಳ್ಳಗಳು, ಈ ದಿಕ್ಕಿಗೆ ಅನುಗುಣವಾಗಿ ಹರಿಯುತ್ತಿವೆ. ಜಿಲ್ಲೆಯಲ್ಲಿ ಕಪ್ಪು ಜೇಡಿ ಮಣ್ಣು ಪ್ರಧಾನವಾಗಿದೆ. ಅಲ್ಲಲ್ಲಿ ಕೆಂಪು ಮಣ್ಣು ಇದೆ. ಇಲ್ಲಿಯ ಮಣ್ಣು ಫಲವತ್ತತೆಯಿಂದ ಕೂಡಿದೆ. ಜಿಲ್ಲೆಯಲ್ಲಿ ಖನಿಜ ನಿಕ್ಷೇಪಗಳು ಹೇರಳವಾಗಿಲ್ಲ. ಪರಿಣಾಮವಾಗಿ ಕೈಗಾರಿಕೆಗಳು ಕಡಿಮೆ. ದೇವಸಗೂರಿನ ಶಕ್ತಿನಗರದಲ್ಲಿ ರಾಯಚೂರು ಶಾಖೋತ್ಪನ್ನ ವಿದ್ಯುತ್‌ಸ್ಥಾವರ, ಹಟ್ಟಿಯ ಚಿನ್ನದ ಗಣಿ ಇವು ಈ ಜಿಲ್ಲೆಯಲ್ಲಿವೆ. ಭಾರತ ಸರಕಾರ ಕೇಂದ್ರ ಅಂಕಿ-ಸಂಖ್ಯೆಗಳ ಪ್ರಕಾರ ರಾಯಚೂರು ಜಿಲ್ಲೆಯ ಭೌಗೋಳಿಕ ವಿಸ್ತಾರವು ೧೪.೦೧೨ ಕಿ.ಮೀ. ಅಂದರೆ ೫೪೧೦ ಚದರ ಮೈಲುಗಳಾಗಿವೆ. ಕರ್ನಾಟಕ ರಾಜ್ಯದ ಜಿಲ್ಲೆಗಳಲ್ಲಿ ಭೂ ವಿಸ್ತಾರದಲ್ಲಿ ರಾಯಚೂರು ಪ್ರದೇಶವು ಮೂರನೇ ಸ್ಥಾನವನ್ನು ಹೊಂದಿದೆ.[೩೭] ರಾಯಚೂರು ಪ್ರದೇಶ ಸಮುದ್ರ ಪಾತಳಿಯಿಂದ ೧೩೧೧ ಅಡಿ ಎತ್ತರದಲ್ಲಿ ಇರುತ್ತದೆ.

ರಾಯಚೂರು ಜಿಲ್ಲೆಯ ಇತಿಹಾಸವು ಪ್ರಾಗೈತಿಹಾಸಿಕ ಕಾಲದಿಂದ ಆರಂಭವಾಗುತ್ತದೆ. ಜಿಲ್ಲೆಯ ಅನೇಕ ಕಡೆಗಳಲ್ಲಿ ಆದಿ ಮಾನವ ನೆಲೆಗಳು ಗುರುತಿಸಲ್ಪಟ್ಟಿವೆ. ಜಿಲ್ಲೆಯಲ್ಲಿ ಬೃಹತ್ ಶಿಲಾಯುಗ, ಸೂಕ್ಷ್ಮಶಿಲಾಯುಗ, ನವ ಶಿಲಾಯುಗ, ತಾಮ್ರಯುಗ ಮತ್ತು ಕಬ್ಬಿಣಯುಗದ, ಸಂಸ್ಕೃತಿಗಳು ಬೆಳಕಿಗೆ ಬಂದಿವೆ.[೩೮] ಇಲ್ಲಿ ಕೈಯಿಂದ ಮಾಡಿದ ಬೂದು ಬಣ್ಣದ ಮಡಿಕೆಗಳು, ತಿಗರಿಯಿಂದ ಮಾಡಿದ ಕಪ್ಪು ಹಾಗೂ ಕಂದುಗೆಂಪಿನ ಮಡಿಕೆಗಳು ಮಣ್ಣಿನ ಆಟಿಕೆ ವಸ್ತುಗಳು, ಶಿಲಾ ಉಪಕರಣಗಳು, ವಿವಿಧ ಬಗೆಯ ಬೃಹತ್ ಶಿಲಾಗೋರಿ ಮೊದಲಾದವುಗಳು ಕಂಡುಬಂದಿವೆ. ಮಸ್ಕಿಯಲ್ಲಿ ದೊರೆತ ಹೇರಳ ಮಣಿಗಳಿಂದಾಗಿ ಅಲ್ಲೊಂದು ಮಣಿ ತಯಾರಿಕೆ ಕೇಂದ್ರವಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುವುದಲ್ಲದೆ[೩೯] ಅಲ್ಲಿ ಚಿನ್ನದ ಬಳಕೆ ಇತ್ತೆಂಬುದಾಗಿ ನಂಬಿದ್ದಾರೆ. ಅಲ್ಲದೆ ಸಿಂಧೂ ಬಯಲಿನಲ್ಲಿ ಹರಪ್ಪ ಮೆಹೆಂಜೋದಾರದೊಂದಿಗೆ ಸಂಪರ್ಕ ಹೊಂದಿತ್ತೆಂಬ ಅಭಿಪ್ರಾಯ ಪಟ್ಟಿದ್ದಾರೆ. ಮಾನ್ವಿ ತಾಲೂಕಿನ ಕಲ್ಲೂರಿನಲ್ಲಿ ತಾಮ್ರದ ಕೊಡಲಿ ಮತ್ತು ಭರ್ಚಿ ದೊರೆತಿವೆ. ವಟಗಲ್‌ನಲ್ಲಿ ಇತ್ತೀಚಿನ ಸಂಶೋಧನೆ ಹಲವು ತಾಮ್ರದ ವಸ್ತುಗಳನ್ನು ಸಂಗ್ರಹಿಸಿಲಾಗಿದೆ.

ಮಹಾಕಾವ್ಯಗಳೊಂದಿಗೆ ರಾಯಚೂರು ಜಿಲ್ಲೆಯು ಸಂಬಂಧ ಹೊಂದಿದ್ದ ಬಗ್ಗೆ ನಂಬಿಕೆಗಳಿವೆ. ಬಬ್ರುವಾಹನನ ರಾಜಧಾನಿಯಾದ ಮಣಿಪುರ, ದೇವದುರ್ಗ ತಾಲೂಕಿನ ಗಬ್ಬೂರ ಎಂಬುದಾಗಿ ಸ್ಥಳೀಯ ಪ್ರತೀತಿ ಇದೆ. ಅಲ್ಲಿಯ ಜನರು ಕಂಬವೊಂದನ್ನು ತೋರಿಸಿ ಅದು "ಧರ್ಮರಾಯನ ಅಶ್ವಮೇಧ" ಕುದುರೆಯನ್ನು ಕಟ್ಟಿಹಾಕಿದ ಕಂಬವೆಂದು ಹೇಳುತ್ತಾರೆ. ಇತಿಹಾಸದ ಕಾಲಕ್ಕೆ

---

೩೭. ಡಾ. ಮೃತ್ಯುಂಜಯ ಹೊರಕೇರಿ, ಡಾ. ಬಸವಲಿಂಗ ಸೊಪ್ಪಿಮಠ(ಸಂ.): ರಾಯಚೂರು ಜಿಲ್ಲಾ ದರ್ಶನ, ಪು-೨೮.

೩೮. ಪುರುಷೋತ್ತಮ ಕೆ.ಎಸ್.: ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಪು-೧೮.

೩೯. ಡಾ. ಅ. ಸುಂದರ: ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ, ಪು-೩೧.

ಮರಳಿದರೆ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಶಾಸನಗಳ ಪಾತ್ರ ಮಹತ್ವದಾಗಿದೆ. ಜಿಲ್ಲೆಯ ಶಾಸನಗಳನ್ನು ಮೊದಲ ಬಾರಿಗೆ ಗಮನಿಸಿದ ಶ್ರೇಯಸ್ಸು "ಕರ್ನಲ್ ಮೆಕೆಂಝಿ"(ಕ್ರಿ.ಶ.೧೭೮೯–೧೮೩೪)ಯವರಿಗೆ ಸಲ್ಲುತ್ತದೆ. ಜಿಲ್ಲೆಯ ಶಾಸನಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ವಹಿಸಿದ ಇನ್ನೊಬ್ಬ ಮಹನೀಯರೆಂದರೆ ಡಾ.ಪಿ.ಬಿ. ದೇಸಾಯಿ. ಹೈದ್ರಾಬಾದ್ ಪುರಾತತ್ವ ಇಲಾಖೆ, ಆಂಧ್ರಪ್ರದೇಶದ ಪುರಾತತ್ವ ಇಲಾಖೆ ಪ್ರಕಟಿಸಿದ ಕೆಲವು ಸಂಪುಟಗಳು ರಾಯಚೂರು ಜಿಲ್ಲೆಗೆ ಸಂಬಂಧಿಸಿವೆ. ಶ್ರೀನಿವಾಸ ರಿತ್ತಿ ಮತ್ತು ಬಾ.ರಾ. ಗೋಪಾಲರು ಲಿಂಗಸೂರು ಮತ್ತು ಮಾನ್ವಿ ತಾಲೂಕುಗಳಲ್ಲಿ ಕ್ಷೇತ್ರಕಾರ್ಯ ಮಾಡಿ ಅವುಗಳ ಮಾಹಿತಿಯನ್ನು ಭಾರತ ಪುರಾತತ್ವ ಇಲಾಖೆಯ ವರದಿಗಳಲ್ಲಿ ಪ್ರಕಟಿಸಿದ್ದಾರೆ.[೪೦]

**ರಾಯಚೂರು ಹೆಸರಿನ ಹಿನ್ನೆಲೆ:** ಪ್ರದೇಶವೊಂದರ ಚರಿತ್ರೆಯಲ್ಲಿ ಆ ಪ್ರದೇಶದ ಹೆಸರಿನ ಹಿನ್ನೆಲೆ, ಐತಿಹ್ಯಗಳು, ಸ್ಥಳೀಯವಾಗಿ ಕರೆಯುವ ಬಗೆಯನ್ನು ಗಮನಿಸಬಹುದಾಗಿದೆ. ರಾಯಚೂರು ಪ್ರದೇಶದ ಹೆಸರು, ಐತಿಹ್ಯ ಮತ್ತು ಹಿನ್ನೆಲೆಗಳಿಗೆ ಶಾಸನಗಳು ಪ್ರಮುಖ ಆಕರಗಳಾಗಿ ಕಂಡುಬರುತ್ತವೆ. ಐತಿಹ್ಯದ ಪ್ರಕಾರ ಮೊಲವೊಂದು ನಾಯಿಯನ್ನು ಅಟ್ಟಿಸಿಕೊಂಡು ಹೋಗಿ ಅದನ್ನು ಹೊಡೆದು ಚೂರು ಮಾಡಿತು. ಆದ್ದರಿಂದ "ನಾಯಿ ಚೂರು" ಎಂದು ಈ ಸ್ಥಳಕ್ಕೆ ಕರೆಯುವುದು ವಾಡಿಕೆಯಾಯಿತೆಂದು ತಿಳಿದುಬರುತ್ತದೆ. ನಂತರದಲ್ಲಿ ರಾಯಚೂರು ಆಗಿರಬೇಕು. ಈ ಪ್ರದೇಶ ಕಲ್ಲುಗುಡ್ಡಗಳಿಂದ ಕೂಡಿದೆ. ಸಣ್ಣ ಪ್ರಮಾಣದ ಕಲ್ಲುಗಳು ಹೇರಳವಾಗಿವೆ. ತೆಲುಗಿನಲ್ಲಿ "ರಾಯಿ" ಎಂದರೆ ಕಲ್ಲುಚೂರು ಎಂದರ್ಥವಾಗುತ್ತದೆ. ತೆಲುಗಿನ ಪ್ರಭಾವದಿಂದ ಈ ಪ್ರದೇಶಕ್ಕೆ ರಾಯಚೂರು ಎಂಬ ಹೆಸರು ಬಂದಿರಬಹುದು[೪೧] ಎಂಬ ಮತ್ತೊಂದು ಅಭಿಪ್ರಾಯವಿದೆ. ಈ ಪ್ರದೇಶದಲ್ಲಿ ದೊರೆತ ಕಲ್ಲಿನ ಆಯುಧಗಳು ತುಂಬ ಚಿಕ್ಕವು. ಸಣ್ಣ ಕಲ್ಲಿನ ಹಾಗೆ ನೀಳವಾದ, ಹರಿತವಾದ ಬದಿಯುಳ್ಳ ಕಲ್ಲಿನ ಚಕ್ಕೆಗಳು ಇಂದಿನ ಕಬ್ಬಿಣದ ಚೂರಿನಂತೆ ಇದ್ದಿರಬೇಕು. ಒಂದು ಬದಿ ಮೊಂಡು ಮಾಡಿದ ಉದ್ದನೆಯ ಚಕ್ಕೆಗಳೂ ಇದ್ದಿರಬೇಕು. ಕಲ್ಲಿನಿಂದ ಸಿದ್ಧಪಡಿಸಿದ ದೊಡ್ಡ ಪ್ರಮಾಣದ ಚೂರಿಯಾಕಾರದ ಕಲ್ಲುಗಳು ಕಂಡುಬಂದ ಹಿನ್ನೆಲೆಯಲ್ಲಿ "ರಾಚೂರು" ರಾಯಚೂರು ಎಂದು ಹೆಸರು ಬಂದಿರಬೇಕೆಂದು[೪೨] ಕೆಲವರು ಊಹಿಸಿದ್ದಾರೆ.

ಕೃಷ್ಣಾ ಮತ್ತು ತುಂಗಭದ್ರ ನದಿಗಳ ಸಂಗಮ ಸ್ಥಳದಲ್ಲಿ ಆದಿಮಾನವ ಬಳಸಿದ ಕೊಡಲಿ, ಭರ್ಚಿಯಾಕಾರದ ಕಲ್ಲಿನ ಚಕ್ಕೆಗಳು ಕಂಡುಬರುತ್ತವೆ. ಅವು ಕಾವೇರಿ ನದಿಯ ಬಯಲುಪ್ರದೇಶವನ್ನು ಬಿಟ್ಟರೆ "ರಾಯಚೂರು ದೋ ಅಬ್" ಪ್ರದೇಶದ ಸಂಗಮದ ಬಯಲುಪ್ರದೇಶದಲ್ಲಿ ವಿಪುಲವಾಗಿವೆ. ಮಹಾರಾಷ್ಟ್ರ ವ್ಯಾಪಾರ ಮಾರ್ಗವೊಂದು, ಕೃಷ್ಣಾ ತುಂಗಭದ್ರ ನದಿಗಳ ನಡುವಿನಿಂದ ಹಾದು

---

೪೦. ಡಾ. ಮೃತ್ಯುಂಜಯ ಹೊರಕೇರಿ, ಡಾ. ಬಸವಲಿಂಗ ಸೊಪ್ಪಿಮಠ(ಸಂ.): ರಾಯಚೂರು ಜಿಲ್ಲಾ ದರ್ಶನ, ಪು–೨೯.

೪೧. ಎಚ್. ತಿಪ್ಪೇರುದ್ರಸ್ವಾಮಿ: ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು–೨೦೧.

೪೨. ಡಾ. ಮೃತ್ಯುಂಜಯ ಹೊರಕೇರಿ, ಡಾ. ಬಸವಲಿಂಗ ಸೊಪ್ಪಿಮಠ(ಸಂ.): ರಾಯಚೂರು ಜಿಲ್ಲಾ ದರ್ಶನ, ಪು–೩೦.

ವಿಜಯನಗರ, ಹರಿಹರ ಮತ್ತು ಮೈಸೂರು ಮೂಲಕ ಕಾವೇರಿ ನದಿ ಬಯಲಿಗೆ ಸಂಪರ್ಕವನ್ನು ಪಡೆದಿರುವುದು ಗಮನಾರ್ಹ ಸಂಗತಿ. ಈ ವ್ಯಾಪಾರಿ ಮಾರ್ಗ ಮಧ್ಯದಲ್ಲಿ ರಾಯಚೂರು ಇದೆ. ಅವರು ತಮ್ಮ ರಕ್ಷಣೆಗಾಗಿ ಇಲ್ಲಿ ಸಿಗುವ ಕೊಡಲಿ, ಭರ್ಚಿಯಾಕಾರದ ಕಲ್ಲಿನ ಚೆಕ್ಕೆಗಳನ್ನು ಬಳಸುತ್ತಿರಬೇಕು. ಚೆಕ್ಕೆ, ಕಲ್ಲಿನ ರಾಶಿ ಇಲ್ಲಿರಬೇಕು. ವ್ಯಾಪಾರಿಗಳು ತೆಲುಗಿನವರೇ ಅಧಿಕ ಸಂಖ್ಯೆಯವರಾಗಿರಬೇಕು. ಹಾಗಾಗಿ ಅವರು ಕಲ್ಲಿನ ಚೆಕ್ಕೆಗಳಿರುವ ಈ ಸ್ಥಳವನ್ನು 'ರಾಚೂರು" ಎಂದು ಕರೆದಿರಬೇಕು.

ಬೇಲೂರು ತಾಲೂಕಿನ ೧೧೬೧ನೇ ಇಸ್ವಿ ಹಾಗೂ ಒಂದನೇ ನರಸಿಂಹನ ಆಳ್ವಿಕೆಗೆ ಸಂಬಂಧಿಸಿದ ಹುಲಿಕೆರೆ ಶಾಸನದಲ್ಲಿ ಹೊಯ್ಸಳ ವಿಷ್ಣುವರ್ಧನ ದೊರೆಯು ಗೆದ್ದುಕೊಂಡ ಸ್ಥಳಗಳಲ್ಲಿ "ರಾಚವೂರು" ಒಂದಾಗಿತ್ತೆಂದು ತಿಳಿಸಲಾಗಿದೆ. ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ೧೧೬೮ನೇ ಇಸ್ವಿ ಹಾಗೂ ಎರಡನೇ ಬಲ್ಲಾಳನ ಕಾಲಕ್ಕೆ ಸಂಬಂಧಿಸಿದ ಹಾಟ್ನಾ ಶಾಸನವು ವಿಷ್ಣುವರ್ಧನನು ಗೆದ್ದುಕೊಂಡ ಕೋಟೆಗಳಲ್ಲಿ "ಪುರ್ಮನರಾಚವೂರ" ಮುಖ್ಯವಾಗಿತ್ತೆಂದು ಹೇಳಲಾಗಿದೆ. ಹಾಸನ ಜಿಲ್ಲೆಯ ಬೇಲೂರು ತಾಲೂಕಿನ ೧೧೮೨ನೇ ಇಸ್ವಿ ಹೊಯ್ಸಳರ ಹಿರೇಹಳ್ಳಿ ಶಾಸನವು "ರಾಚನೂರು" ವಿಷ್ಣುವರ್ಧನನು ಗೆದ್ದುಕೊಂಡ ಸ್ಥಳಗಳಲ್ಲಿ ಒಂದಾಗಿತ್ತೆಂದು ತಿಳಿಸಿದೆ. ಈ ಶಾಸನಗಳಿಂದ "ರಾಚವೂರ" ಈಗಿನ ರಾಯಚೂರು ಆಗಿತ್ತೆಂದು ತಿಳಿದುಬರುತ್ತದೆ. ೧೩ನೇ ಶತಮಾನದಲ್ಲಿ ರಾಚವೂರು ಅಥವಾ ರಾಚನೂರು ಮೊಟಕುಗೊಂಡು ರಾಚೂರು ಎಂದು ಪ್ರಸಿದ್ಧಿಗೆ ಬಂದಿತ್ತು. ಈ ವಿಷಯವು ಕಾಕತೀಯ ದೊರೆ ಎರಡನೇ ಪ್ರತಾಪರುದ್ರನ ಕಾಲದ ರಾಯಚೂರು ಕೋಟೆಯ ಮೇಲೆ ಇರುವ ೧೨೯೪ನೇ ಇಸ್ವಿಯ ಶಾಸನದಿಂದ ಖಚಿತವಾಗಿದೆ. ಈ ಶಾಸನದಲ್ಲಿ ಈ ಸ್ಥಳಕ್ಕೆ "ರಾಚೂರು" ಎಂದು ಕರೆಯಲಾಗಿದೆ. ರಾಚೂರು ಎಂಬ ಹೆಸರು ಈ ಜಿಲ್ಲೆಗೆ ವಿಜಯನಗರ ಕಾಲದಲ್ಲಿಯೂ ಮುಂದುವರಿದಿತ್ತು. ಆಂಧ್ರಪ್ರದೇಶದ ಮೆಹಬೂಬ ನಗರ ಜಿಲ್ಲೆಯ ಅಲಂಪುರದ ಎರಡು ಕನ್ನಡ ಶಾಸನಗಳು ಕೃಷ್ಣದೇವರಾಯನು ತನ್ನ ಉತ್ತರದ ದಿಗ್ವಿಜಯದಲ್ಲಿ "ರಾಚೂರ"ನ್ನು ಗೆದ್ದುಕೊಂಡಿದ್ದನೆಂದು ತಿಳಿಸುತ್ತವೆ. ಈ ಐತಿಹಾಸಿಕ ಹೆಸರು 'ರಾಚೂರು" ಅನೇಕ ಬದಲಾವಣೆಗಳನ್ನು ಹೊಂದಿ "ರಾ" ಮತ್ತು "ಚೂರು"ಗಳ ಮಧ್ಯೆ "ಯ" ಸೇರಿಕೊಂಡು ರಾಯಚೂರಾಗಿ ಮಾರ್ಪಾಡಾಗಿದೆ. "ರಾಯ" ಅಂದರೆ "ರಾಜ" ರಾಯಚೂರು ಅಂದರೆ ರಾಜನ ಊರು ಎಂಬ ಅರ್ಥವನ್ನು ಹೊಂದಿದೆ. ಈ ಸ್ಥಳವು ಬಹಳ ಮುಖ್ಯವಾದ ಊರಾಗಿತ್ತೆಂಬುದು ತಿಳಿದುಬರುತ್ತದೆ. "ಹಿಂದಿ" ಹಾಗೂ "ಉರ್ದು" ಭಾಷೆಯಲ್ಲಿ "ರಾಯ" ಪದಕ್ಕೆ ಸಮನಾದ ಪದವು "ರೈ" ಎಂಬುದಾಗಿದೆ.[೪೩] ಉರ್ದು ಭಾಷೆಯ ಪ್ರಭಾವದಿಂದ ಈ ಸ್ಥಳಕ್ಕೆ 'ರೈಚೂರು' ಹೆಸರು ಬಳಕೆಯಲ್ಲಿ ಬಂದಿರಬಹುದು.

---

೪೩. ಡಾ. ಮೃತ್ಯುಂಜಯ ಹೊರಕೇರಿ, ಡಾ. ಬಸವಲಿಂಗ ಸೊಪ್ಪಿಮಠ(ಸಂ.): ರಾಯಚೂರು ಜಿಲ್ಲಾ ದರ್ಶನ, ಪು-೩೧.

ರಾಯಚೂರಿನ ಇತಿಹಾಸವು ಸುಮಾರು ಕ್ರಿಪೂ. ೨೦೦೦ ವರ್ಷಗಳಷ್ಟು ಪ್ರಾಚೀನವಾಗಿದ್ದು ಹಳೆ ಹಾಗೂ ಹೊಸ ಶಿಲಾಯುಗ ಸಂಸ್ಕೃತಿಗಳನ್ನು ಬೆಳೆಸಿಕೊಂಡು ಬಂದ ಹೆಮ್ಮೆಯನ್ನು ಹೊಂದಿದೆ. ಕೃಷ್ಣಾ ಹಾಗೂ ತುಂಗಭದ್ರಾ ನದಿಗಳ ನಡುವಿನ ಫಲವತ್ತಾದ ಪ್ರದೇಶವಾದ ರಾಯಚೂರು ಜಿಲ್ಲೆ ಅನಾದಿ ಕಾಲದಿಂದಲೂ ಮಾನವನ ವಾಸಸ್ಥಳವಾಗಿತ್ತು. ಭಾರತದ ಶಿಲಾಯುಗ ಸಂಸ್ಕೃತಿಯ ಸಂಶೋಧನೆಯಲ್ಲಿ ಮೊದಲಿಗರಾದ ಬ್ರೂಸ್‌ಫೂಟ್" ಎಂಬುವವರು ರಾಯಚೂರು ಜಿಲ್ಲೆಯಲ್ಲಿ ಅನೇಕ ಹೊಸ ಶಿಲಾಯುಗ ಸಂಸ್ಕೃತಿಯ ಸ್ಥಳಗಳನ್ನು ಕ್ರಿ.ಶ. ೧೮೮೦ರ ಸುಮಾರಿಗೆ ಕಂಡುಹಿಡಿದಿದ್ದಾರೆ.[೪೪] ಅಲ್ಲದೇ ಅನೇಕ ಪಳೆಯುಳಿಕೆಗಳನ್ನು ಸಂಗ್ರಹಿಸಿದ್ದಾರೆ.

೧೯೦೪ರಲ್ಲಿನ ಅದನ್ನು ಮದ್ರಾಸ್ ಸರಕಾರವು ಖರೀದಿಸಿ ಅಲ್ಲಿಯ ಐತಿಹಾಸಿಕ ವಸ್ತುಸಂಗ್ರಹಾಲಯಕ್ಕೆ ಸೇರಿಸಿತ್ತು. ರಾಯಚೂರು ಜಿಲ್ಲೆಯಲ್ಲಿ ಶಿಲಾಯುಗ ಸಂಸ್ಕೃತಿಯನ್ನು ದೇವದುರ್ಗ, ಲಿಂಗಸೂಗೂರಿನ ಪಿಕ್ಕಿಹಾಳ, ಮಾನ್ವಿಯ ಬಯಲು ಮರ್ಚೆಡ ಹಾಗೂ ಸಿಂಧನೂರು, ತಾಲೂಕುಗಳಲ್ಲಿ ಗುರುತಿಸಲಾಗಿದೆ. ರಾಯಚೂರು ಜಿಲ್ಲೆಯ ಇತಿಹಾಸವು ಮೌರ್ಯರ ಕಾಲದಿಂದ ಪ್ರಾರಂಭವಾಗುತ್ತದೆ. ರಾಯಚೂರು "ನಂದರ" ಆಳ್ವಿಕೆಗೂ ಒಳಪಟ್ಟಿತ್ತೆಂದು ಹೇಳಲಾಗಿದೆ. ಈ ಜಿಲ್ಲೆಯಲ್ಲಿ ಅಶೋಕನ ಶಾಸನಗಳು ಲಿಂಗಸೂಗೂರ ತಾಲೂಕಿನ ಮಸ್ಕಿಯಲ್ಲಿ ದೊರೆತಿವೆ. ಕ್ರಿ.ಶ. ೧೯೧೫ರಲ್ಲಿ ಬೇಡನ್ ಎಂಬ ಇಂಜನಿಯರರು ಮಸ್ಕಿಯ ಶಾಸನವನ್ನು ಶೋಧಿಸಿದ್ದಾರೆ. "ದೇವನಾಂಪ್ರಿಯ" ಅಶೋಕನ ಹೆಸರನ್ನು ಹೊಂದಿದ ಮಸ್ಕಿ ಶಾಸನವು ವಿಶೇಷ ಮಹತ್ವವನ್ನು ಪಡೆದಿದೆ.[೪೫] ಕ್ರಿ.ಶ. ೫ನೇ ಶತಮಾನದಲ್ಲಿ ರಾಯಚೂರು ಜಿಲ್ಲೆ ಬನವಾಸಿಯ ಕದಂಬರ ಆಡಳಿತಕ್ಕೆ ಒಳಪಟ್ಟಿತ್ತೆಂದು ಶಾಸನಗಳಿಂದ ತಿಳಿದುಬಂದಿದೆ. ಕರಡಿಕಲ್ ಶಾಸನವು ಮುದಗಲ್ ಹಾಗೂ ಕರಡಿಕಲ್ಲುಗಳು ಕದಂಬರ ಆಡಳಿತಕ್ಕೆ ಒಳಪಟ್ಟಿದ್ದನ್ನು ತಿಳಿಸುತ್ತದೆ.

ಬಾದಾಮಿಯ ಚಾಲುಕ್ಯರು ರಾಯಚೂರು ಜಿಲ್ಲೆಯ ಪ್ರದೇಶಗಳಲ್ಲಿ ಆಡಳಿತವನ್ನು ನಡೆಸಿದ್ದರು. ಐಹೊಳೆ ಶಾಸನವು ಎರಡನೇ ಪುಲಿಕೇಶಿಯು ಪಲ್ಲವರನ್ನು ಸೋಲಿಸಿ ರಾಯಚೂರನ್ನು ವಶಪಡಿಸಿಕೊಂಡಿದ್ದನೆಂದು ತಿಳಿಸಿದೆ. ಬಾದಾಮಿಯ ಚಾಲುಕ್ಯರ ನಂತರ ಮಳಖೇಡದ ರಾಷ್ಟ್ರಕೂಟರು ಕರ್ನಾಟಕದಲ್ಲಿ ಸಾರ್ವಭೌಮ ದೊರೆಗಳಾದ ಅಧಿಕಾರಕ್ಕೆ ಬಂದರು. ಅಮೋಘವರ್ಷನು ರಾಷ್ಟ್ರಕೂಟರ ಪ್ರಸಿದ್ಧ ದೊರೆ. ಇವನ ಆಶ್ರಯದಲ್ಲಿ ಶ್ರೀವಿಜಯ ಎಂಬ ಕವಿಯು ಪ್ರಸಿದ್ಧವಾದ "ಕವಿರಾಜಮಾರ್ಗ" ಎಂಬ ಗ್ರಂಥವನ್ನು ರಚಿಸಿದ್ದನು.[೪೬] ಈ ಗ್ರಂಥದಲ್ಲಿ ಹಿಂದಿನ ರಾಯಚೂರು ಜಿಲ್ಲೆಗೆ ಸೇರಿದ್ದ ಕೊಪ್ಪಳವನ್ನು "ಕೊಪಣ ಮಹಾನಗರ" ಎಂದು ವರ್ಣಿಸಿದೆ.

ಕ್ರಿ.ಶ. ೯೭೩ರ ಸುಮಾರಿಗೆ ರಾಷ್ಟ್ರಕೂಟದ ಕೊನೆಯ ಅರಸನಾದ ಎರಡನೇ ಕರ್ಕನನ್ನು ಸೋಲಿಸಿ ಚಾಲುಕ್ಯ ಎರಡನೇ ತೈಲಪನು ಕಲ್ಯಾಣದಲ್ಲಿ ತನ್ನ ಸಾರ್ವಭೌಮ ಅಧಿಕಾರವನ್ನು

---

೪೪. ಪುರುಷೋತ್ತಮ ಕೆ.ಎಸ್: ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಪು–೨೮.

೪೫. ಡಾ. ಅ. ಸುಂದರ: ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ, ಪು–೩೫ .

೪೬. ಪ್ರೊ. ಷೇಕ್ ಅಲಿ(ಸಂ.): ಕರ್ನಾಟಕ ಚರಿತ್ರೆ(ಸಂಪುಟ–೪), ಪು–೨೮೦.

ಸ್ಥಾಪಿಸಿದನು. ಕಲ್ಯಾಣದ ಚಾಲುಕ್ಯರ ಅನೇಕ ಶಾಸನಗಳು ರಾಯಚೂರು ಜಿಲ್ಲೆಯಲ್ಲಿ ದೊರೆತಿವೆ. ಎರಡನೇ ಜಯಸಿಂಹನ ಎರಡು ಶಾಸನಗಳು ಮಸ್ಕಿಯಲ್ಲಿ ದೊರೆತಿವೆ. ಸೋಮೇಶ್ವರನ ಶಾಸನವು ಮಾನ್ವಿಯಲ್ಲಿ, ಕಲ್ಯಾಣದ ಚಾಲುಕ್ಯರ ಪ್ರಸಿದ್ಧ ಅರಸನಾದ ಆರನೇ ವಿಕ್ರಮಾದಿತ್ಯನ ಶಾಸನಗಳು ರಾಯಚೂರು ಜಿಲ್ಲೆಯ ಅನೇಕ ಕಡೆಗಳಲ್ಲಿ ದೊರೆಕಿವೆ.

ಕಲ್ಯಾಣದ ಚಾಲುಕ್ಯರ ಕೊನೆಯ ಅರಸನಾದ ೩ನೇ ತೈಲಪನನ್ನು ಕಾಕತೀಯ ಪ್ರೋಲನು ಸೆರೆ ಹಿಡಿದಿದ್ದಾಗ ಎರಡನೇ ಬಿಜ್ಜಳನು ಕಲ್ಯಾಣವನ್ನು ಕೈವಶ ಮಾಡಿಕೊಂಡಿದ್ದನು. ಬಿಜ್ಜಳನು ಕಲಚೂರಿ ರಾಜ್ಯದ ಪ್ರಸಿದ್ಧ ದೊರೆ. ಇವನು ಸಹ ರಾಯಚೂರು ಜಿಲ್ಲೆಯನ್ನು ಆಳಿದ್ದನು. ಇವನ ೩ ಶಾಸನಗಳು ಜಿಲ್ಲೆಯಲ್ಲಿ ದೊರೆತಿವೆ. ದೇವಗಿರಿಯ ಯಾದವರು ಸಹ ರಾಯಚೂರನ್ನು ಆಳಿದ್ದರೆಂದು ಶಾಸನಗಳಿಂದ ಗೊತ್ತಾಗಿದೆ. ಯಾದವ ಅರಸನಾದ ಸಿಂಘಣನ ನಾಲ್ಕು ಶಾಸನಗಳು[೪೭] ರಾಯಚೂರು ಜಿಲ್ಲೆಯಲ್ಲಿ ಕಂಡುಬಂದಿದೆ. ರಾಯಚೂರು ಜಿಲ್ಲೆಯ ಇತಿಹಾಸದ ಮುಖ್ಯ ಘಟನೆ ಎಂದರೆ ಅದು ವರಂಗಲ್‌ದ ಕಾಕತೀಯರ ಆಡಳಿತಕ್ಕೆ ಒಳಪಟ್ಟಿದ್ದು. ಕಾಕತೀಯ ಅರಸ ಎರಡನೇ ಪ್ರತಾಪರುದ್ರನ ಕಾಲಕ್ಕೆ ಸಂಬಂಧಿಸಿದ ಕ್ರಿ.ಶ.೧೨೯೪ನೇ ವರ್ಷದ ಶಾಸನವು ರಾಯಚೂರಿನ ಕೋಟೆಯ ಮೇಲೆ ದೊರತಿದೆ. ಈ ಶಾಸನವು ರಾಯಚೂರು ಕೋಟೆಯನ್ನು ಇವನು ನಿರ್ಮಿಸಿದನೆಂದು ತಿಳಿಸುತ್ತದೆ. ರಾಯಚೂರು ಇತಿಹಾಸದಲ್ಲಿ ಇನ್ನೊಂದು ಮುಖ್ಯ ಘಟನೆ ಎಂದರೆ ವಿಜಯನಗರ ಸಾಮ್ರಾಜ್ಯದ ಆಡಳಿತ, ವಿಜಯನಗರ ಹಾಗೂ ಬಹಮನಿ ಅರಸರು ಫಲವತ್ತಾದ ರಾಯಚೂರು ಪ್ರದೇಶದ ಆಧಿಪತ್ಯಕ್ಕಾಗಿ ಅನೇಕ ಯುದ್ಧಗಳನ್ನು ಮಾಡಿದರು. ಕ್ರಿ.ಶ. ೧೫೨೦ರಲ್ಲಿ ವಿಜಯನಗರದ ಪ್ರಸಿದ್ಧ ಅರಸನಾದ ಕೃಷ್ಣದೇವರಾಯನು ಇಸ್ಮಾಯಿಲ್ ಆದಿಲ್ ಶಾಹನನ್ನು ಸೋಲಿಸಿ[೪೮] ರಾಯಚೂರು ಕೋಟೆಯನ್ನು ವಶಪಡಿಸಿಕೊಂಡಿದ್ದನು. ಕೃಷ್ಣದೇವರಾಯನ ಆಡಳಿತದ ನಂತರ ರಾಯಚೂರು ಪ್ರದೇಶವು ಮತ್ತೆ ಬಿಜಾಪುರ ಸುಲ್ತಾನರ ವಶಕ್ಕೆ ಬಂದಿತ್ತು. ಮುಂದೆ ಬಿಜಾಪುರ ಹಾಗೂ ಗೋಲ್ಕೊಂಡ ರಾಜ್ಯಗಳು ಮೊಘಲರ ವಶವಾಗಿದ್ದಾಗ ರಾಯಚೂರು ಸಹ ಅವರ ಅಧಿಕಾರಕ್ಕೆ ಸೇರಿತ್ತು. ಮೊಘಲರ ಸುಬೇದಾರನಾದ ಅಸಫ್‌ಶಾಹ ನಿಜಾಮ ಉಲ್‌ಮುಲ್ಕನು ೧೭೨೪ರಲ್ಲಿ ಹೈದ್ರಾಬಾದನಲ್ಲಿ ತನ್ನ ಸ್ವತಂತ್ರ ರಾಜ್ಯ ಸ್ಥಾಪಿಸಿದ್ದನು. ಈ ಅಸಫ್‌ಶಾಹಿ ಅರಸುಮನೆತನದ ಅಧಿಕಾರವು ೧೯೪೮ರವರೆಗೆ ಮುಂದುವರಿದಿತ್ತು.

**ರಾಯಚೂರಿನ ಐತಿಹಾಸಿಕ ಸ್ಮಾರಕಗಳು :** ಈ ಮಧ್ಯೆ ರಾಯಚೂರು ಪ್ರದೇಶವು ಕೆಲವು ಕಾಲ ಟಿಪ್ಪುಸುಲ್ತಾನನ ವಶವಾಗಿತ್ತು. ೧೭೯೯ರಲ್ಲಿ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನು ಸೋತು ಮರಣ ಹೊಂದಿದನು. ಮೈಸೂರು ರಾಜ್ಯದ ಅನೇಕ ಭಾಗಗಳನ್ನು ಬ್ರಿಟಿಷರು ತಮ್ಮ ವಶಕ್ಕೆ ತೆಗೆದುಕೊಂಡಿದ್ದರು. ಅಸಫ್‌ಶಾಹಿ ಮನೆತನದ ಐದನೇ ನಿಜಾಮನಾದ ಅಫಜಲ ಉದ್ದೌಲನು ದಕ್ಷ ಅರಸನಾಗಿದ್ದನು. ಈ ನಿಜಾಮ ಹಾಗೂ ಇವನ ಪ್ರಧಾನ

---

೪೭. ಎಚ್. ತಿಪ್ಪೇರುದ್ರಸ್ವಾಮಿ: ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು-೨೦೧.
೪೮. ಪ್ರೊ. ಷೇಕ್ ಅಲಿ(ಸಂ.): ಕರ್ನಾಟಕ ಚರಿತ್ರೆ(ಸಂಪುಟ-೪), ಪು-೨೮೦.

ಮಂತ್ರಿಯಾಗಿದ್ದ ಮೊದಲನೇ ಸಾಲಾರಜಂಗ್ ಇವರು ಬ್ರಿಟಿಷರ ಮಿತ್ರರಾಗಿದ್ದು ಅವರೊಂದಿಗೆ ಒಳ್ಳೆಯ ಸಂಬಂಧವನ್ನು ಹೊಂದಿದ್ದರು.

೧೮೫೭ರ ಸಿಪಾಯಿ ದಂಗೆಯ ಕಾಲದಲ್ಲಿ ಬ್ರಿಟಿಷರಿಗೆ ಸಹಾಯ ಸಲ್ಲಿಸಿದ್ದರು. ಅದಕ್ಕೆ ಪ್ರತಿಯಾಗಿ ಬ್ರಿಟಿಷರು ೧೮೫೮ರ ಒಪ್ಪಂದದ ಪ್ರಕಾರ ಉಸ್ಮಾನಾಬಾದ್ ಹಾಗೂ "ರಾಯಚೂರು ದೋ ಆಬ್ ಪ್ರದೇಶವನ್ನು ನಿಜಾಮರಿಗೆ ಬಿಟ್ಟುಕೊಟ್ಟರು". ಹೀಗೆ ರಾಯಚೂರು ಪ್ರದೇಶವು ಹೈದರಾಬಾದ್ ನಿಜಾಮರ ಆಡಳಿತಕ್ಕೆ ಒಳಪಟ್ಟಿತು. ರಾಯಚೂರು ಜಿಲ್ಲೆಯಲ್ಲಿ ಕೊಪ್ಪಳವು ಸಾತಂತ್ರ್ಯ ಸಂಗ್ರಾಮದ ಕೇಂದ್ರವಾಗಿತ್ತು.[೪೯] ೧೮೫೭ರ ಸಿಪಾಯಿ ದಂಗೆಯ ಮೊದಲೇ ಬ್ರಿಟಿಷರ ವಿರುದ್ಧ ಸಾತಂತ್ರ್ಯ ಚಳುವಳಿಯ ಮೊದಲನೆಯ ಕಿಡಿಯು ಪ್ರಾರಂಭವಾದದ್ದು ಕೊಪ್ಪಳದಲ್ಲಿ. ೧೮೧೯ರಲ್ಲಿ ಕೊಪ್ಪಳದ ಪ್ರಸಿದ್ದ ಜಮೀನುದಾರನಾದ ವೀರಪ್ಪನು ಬ್ರಿಟಿಷರ ವಿರುದ್ಧ ದಂಗೆ ಎದ್ದು ಆ ಕೋಟೆಯನ್ನು ವಶ ಮಾಡಿಕೊಂಡಿದ್ದನು. ಕೊಪ್ಪಳವನ್ನು ಪುನಃ ಪಡೆಯಲು ಬ್ರಿಟಿಷರು ಮರಾಟವಾಡಾ ಹಾಗೂ ಸಿಕಂದರಾಬಾದಿನಿಂದ ದೊಡ್ಡ ಸೈನ್ಯವನ್ನೇ ತರಬೇಕಾಗಿತ್ತು. ಬಹಳ ಕಷ್ಟದಿಂದ ವೀರಪ್ಪನನ್ನು ಸೋಲಿಸಿದ್ದರು. ಬ್ರಿಟಿಷರ ಸೈನ್ಯದಲ್ಲಿ ೯ ಜನ ಮರಣ ಹೊಂದಿದ್ದರು. ಹಾಗೂ ೫೧ ಜನರು ಗಾಯಗೊಂಡಿದ್ದರು. ಸಿಪಾಯಿ ದಂಗೆಯ ಪ್ರಬಾವದಿಂದ ೧೮೫೮ರ ಮೇ ತಿಂಗಳು ಮುಂಡರಗಿ ಭೀಮರಾಯ ಹಾಗೂ ಹಮ್ಮಿಗಿ ಕೆಂಚನಗೌಡ ದೇಸಾಯಿ ಬ್ರಿಟಿಷರಿಂದ ಕೊಪ್ಪಳ ಕೋಟೆಯನ್ನು ವಶಪಡಿಸಿಕೊಂಡರು. ಸ್ವಾತಂತ್ರ್ಯ ವೀರರಾದ ಕೊಪ್ಪಳದ ಜನರು ಭೀಮರಾಯನನ್ನು ಸ್ವಾಗತಿಸಿ ಅವನ ಸೈನ್ಯ ಸೇರಿದ್ದರು. ಕೊಪ್ಪಳವನ್ನು ಪುನಃ ಪಡೆದು ಕೊಳ್ಳಲು ಬ್ರಿಟಿಷರು ಧಾರವಾಡ, ಬಳ್ಳಾರಿ ಹಾಗೂ ರಾಯಚೂರು ಜಿಲ್ಲೆಯಿಂದ ಸೈನ್ಯವನ್ನು ಕಳಿಸಿದ್ದರು. ಕೊಪ್ಪಳದ ಭದ್ರ ಹಾಗೂ ಬಲಿಷ್ಠ ಕೋಟೆಯನ್ನು ಒಡೆಯುವುದು ಅಸಾಧ್ಯವಾಗಿತ್ತು. ಭೀಮರಾಯನ ತಲೆಯನ್ನು ತಂದವರಿಗೆ ೫.೦೦೦ ರೂಪಾಯಿ ಕಾಣಿಕೆಯನ್ನು ಕೊಡುವುದಾಗಿ ಬ್ರಿಟಿಷ್ ಸರಕಾರವು ಸಾರಿತ್ತು. ಕೆಳಕೋಟೆಯ ಬಾಗಿಲಿನ ಕಾವಲುಗಾರರು ಬ್ರಿಟಿಷರೊಂದಿಗೆ ಒಳಸಂಚು ಮಾಡಿ ಬಾಗಿಲನ್ನು ತೆರೆದಿದ್ದರಿಂದ ಕೋಟೆಯನ್ನು ವಶಪಡಿಸಿಕೊಳ್ಳುವುದು ಸಾಧ್ಯ ವಾಯಿತು. ಸ್ವಾಭಿಮಾನಿಯಾದ ಹಮ್ಮಿಗಿ ಕೆಂಚನಗೌಡ ದೇಸಾಯಿ ಭೀಮರಾಯರು ವೈರಿಗಳ ಕೈಗೆ ಸಿಗದೆ ತಮ್ಮಷ್ಟಕ್ಕೆ ಗುಂಡು ಹಾಕಿಕೊಂಡು ವೀರಮರಣವನ್ನಪ್ಪಿದರು. ರಾಯಚೂರು ಕರ್ನಾಟಕ ರಾಜ್ಯದ ಪ್ರಸಿದ್ಧ ಜಿಲ್ಲೆಗಳ ಪುನರ್ ವಿಂಗಡಣೆಯಾಗಿ ರಾಯಚೂರು ಜಿಲ್ಲೆಯನ್ನು ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಾಗಿ ವಿಂಗಡಿಸಲಾಗಿದೆ. ಸದ್ಯ ರಾಯಚೂರು ಜಿಲ್ಲೆಯು ರಾಯಚೂರು, ಮಾನ್ವಿ, ಸಿಂಧನೂರು, ಲಿಂಗಸೂರು, ದೇವದುರ್ಗ ಎಂಬ ತಾಲೂಕುಗಳನ್ನು ಒಳಗೊಂಡಿದೆ.[೫೦]

---

೪೯. ಫಾಲಾಕ್ಷಿ: ಕರ್ನಾಟಕ ಇತಿಹಾಸ, ಪು–೧೪೮.

೫೦. ವೆಂಕಟೇಶ ಕುಮಾರ ಕೆ.ಎಚ್: ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ, ಪು–೧೫, ೧೬.

**ಲಲಿತಕಲೆಗಳು**

ಜನಪದ ಕಲೆಗಳ ವಿವರಗಳೆಂದರೆ ಜನಪದ ಜೀವನ ಸಂಸ್ಕೃತಿಗಳ ವಿವರಗಳೇ ಆಗಿವೆ. "ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತ ಮತಿಗಳೆಂದು" ಕವಿರಾಜ ಮಾರ್ಗಕಾರ ಕರೆದಿರುವಂತೆ ಜನಪದ ಸಾಹಿತ್ಯವನ್ನು ಉಳಿಸಿಕೊಟ್ಟ ದುಡಿಯುವ ವರ್ಗವು ಅಕ್ಷರಾಭ್ಯಾಸವಿಲ್ಲದೆ ಅನುಭವದ ಮೂಲಕ ನಿತ್ಯ ಜೀವನದಲ್ಲಿ ಕಂಡುಂಡ ವಸ್ತುಗಳನ್ನೆ ಕಾವ್ಯವೆನಿಸಿದ ಜನಪದ ಸಾಹಿತ್ಯವು ಬಾಯಿಂದ ಬಾಯಿಗೆ ಹರಿದು ಬಂದು ನಮ್ಮ ಸಂಸ್ಕೃತಿಯನ್ನು ಬೆಳೆಸುವ ವಾಹಕಗಳಾಗಿದ್ದಾರೆ.[೫೧]

ರಾಯಚೂರು ಜಿಲ್ಲೆಯು ಶ್ರೀಮಂತವಾದ ಲಲಿತಕಲೆಗಳ ಪರಂಪರೆಯನ್ನು ಹೊಂದಿದ ನಾಡಾಗಿದೆ. ಇಲ್ಲಿಯ ಬಯಲಾಟ, ದೊಡ್ಡಾಟ, ಸಣ್ಣಾಟಗಳು, ಅವುಗಳ ವೇಷಭೂಷಣಗಳು ಇವತ್ತಿಗೂ ಉಳಿದುಕೊಂಡು ಬಂದಿರುವುದು ಈ ಜನರ ಆಸಕ್ತಿಗೆ ಸಾಕ್ಷಿಯಾಗಿದೆ. ಸೂತ್ರದ ಗೊಂಬೆಯಾಟ, ತೊಗಲುಗೊಂಬೆಯಾಟ, ಅವುಗಳನ್ನಾಡಿಸುವ ವಿಧಿ-ವಿಧಾನಗಳು ಕುತೂಹಲಕಾರಿ ಯಾಗಿದೆ. ತೊಗಲುಗೊಂಬೆಯಾಟ ಜನಪದ ಚಿತ್ರಕಲೆಯ ಒಂದು ದೊಡ್ಡ ಭಂಡಾರವೇ ಆಗಿದೆ. ಇದಲ್ಲದೇ ಲಂಬಾಣಿ ನೃತ್ಯ, ಕೋಲಾಟ, ನಂದಿಕೋಲು ಕುಣಿತ, ಹೆಜ್ಜೆ ಕುಣಿತ, ಹುಲಿವೇಷಗಳು, ಗೊರವರ ಕುಣಿತ, ಚೌಡಮ್ಮನ ಕುಣಿತ, ದುರುಗಮುರಗಿ ಕುಣಿತ, ಮುಂತಾದ ಜನಪದ ನೃತ್ಯ ಚಿತ್ರಕಲಾ ಪರಂಪರೆಯನ್ನು ಈ ಪ್ರದೇಶ ಇನ್ನೂ ಕಾಯ್ದುಕೊಂಡು ಬಂದಿದೆ. ಹಾಗೆಯೇ ಶಿಷ್ಟಪದ ಸಾಂಸ್ಕೃತಿಕ ಕಲಾಪರಂಪರೆಯೂ ಬಹುದೊಡ್ಡ ಪ್ರಮಾಣದಲ್ಲಿ ಬೆಳವಣಿಗೆ ಯಾಗಿದೆ. ಕಲಾವಿದ ಶಂಕರಗೌಡ ಬೆಟ್ಟದೂರ ಅವರು ಆ ಕಾಲದಲ್ಲಿಯೇ ಕಲ್ಕತ್ತದ ಶಾಂತಿನಿಕೇತನ ದಲ್ಲಿ ಶಾಸ್ತ್ರೀಯ ಚಿತ್ರಕಲಾ ಅಧ್ಯಯನವನ್ನು ಮಾಡಿ ಮುಂದೆ ದೆಹಲಿಯ ಬಿರ್ಲಾ ಭವನದಲ್ಲಿ ಗಾಂಧೀಜಿಯವರ ಸಮಗ್ರ ಜೀವನಚಿತ್ರಣವನ್ನು ಮತ್ತು ಚೀನಾ ತುನಹಾಂಗ್ ಗವಿಗಳಲ್ಲಿ ಐದು ಹಾಗೂ ಆರನೇ ಶತಮಾನದ ಭಿತ್ತಿಚಿತ್ರಗಳನ್ನು ಪ್ರತಿಮಾಡಿ ಕೊಡಲು ಭಾರತದಿಂದ ಆಯ್ಕೆಯಾಗಿ ಹೋದ ಕಲಾವಿದರಾಗಿದ್ದಾರೆ. ಈ ಕಾರ್ಯವನ್ನು ಮೂರು ತಿಂಗಳಲ್ಲಿ ಪೂರೈಸಿ ವಿಶ್ವದ ಗಮನ ವನ್ನು ಸೆಳೆದಿದ್ದಾರೆ. ರಾಯಚೂರಿನ ಮತ್ತೊಬ್ಬ ಹಿರಿಯ ಕಲಾವಿದ ಹಿರಾಲಾಲ್ ಮಲ್ಖಾರಿ ಅವರು ಸಾಂಪ್ರದಾಯಿಕ ಚಿತ್ರಗಳನ್ನು ಬರೆಯುತ್ತ ಹೊರದೇಶಗಳಲ್ಲಿಯೂ ಬೇಡಿಕೆಯನ್ನು ಗಳಿಸಿ ಕೊಂಡ ಕಲಾವಿದರು. ಇವತ್ತಿಗೂ ಅನೇಕ ದೇವಾಲಯಗಳಲ್ಲಿ ಇವರು ಬಿಡಿಸಿರುವ ಭಿತ್ತಿಚಿತ್ರಗಳು ಅವರ ಕಲಾಸಾಧನೆಯನ್ನು, ಕಲಾಪರಿಣತಿಯನ್ನು ಪ್ರತಿಬಿಂಬಿಸುತ್ತದೆ.[೫೨]

ಸಂಗೀತ ಕ್ಷೇತ್ರದಲ್ಲಿ ಅಂತಾರಾಷ್ಟ್ರೀಯ ಖ್ಯಾತಿಯನ್ನು ಗಳಿಸಿರುವ ಪಂಡಿತ ನರಸಿಂಹಲು ವಡವಾಟಿ ಕ್ಲಾರಿಯೋನೆಟ್‌ದಲ್ಲಿ ದೇಶ-ವಿದೇಶದಲ್ಲಿ ಹೆಸರಾಗಿದ್ದಾರೆ. ಶಾಸ್ತ್ರೀಯ ಸಂಗೀತದ ಮೇರುಪರ್ವತವೆಂದೇ ಪ್ರಖ್ಯಾತಿ ಪಡೆದ ಪಂಡಿತ ಸಿದ್ಧರಾಮ ಜಂಬಲದಿನ್ನಿ ಅವರು ರಾಷ್ಟ್ರಮಟ್ಟದಲ್ಲಿ

---

೫೧. ಡಾ. ಮೃತ್ಯುಂಜಯ ಹೊರಕೇರಿ, ಡಾ. ಬಸವಲಿಂಗ ಸೊಪ್ಪಿಮಠ(ಸಂ.): ರಾಯಚೂರು ಜಿಲ್ಲಾ ದರ್ಶನ, ಪು-೫೮.

೫೨. ವೆಂಕಟೇಶ ಕುಮಾರ ಕೆ.ಎಚ್: ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ, ಪು-೧೭.

ರಾಯಚೂರಿನ ಹೆಸರನ್ನು ಬೆಳಗಿಸಿದ ಮಹಾನುಭಾವರಾಗಿದ್ದಾರೆ. ಹಾರ್ಮೋನಿಯಂ ವಾದ್ಯಗಾರ ಯರಗೇರಾದ ಈಶ್ವರಪ್ಪ, ರಂಗಭೂಮಿ ಹಿನ್ನೆಲೆಯ ಕಲ್ಮಲಾ ನಾರಣಪ್ಪ ಹೀಗೆ ಕಲಾವಿದರ ಸಂಖ್ಯೆ ಹೆಚ್ಚುತ್ತಲೇ ಹೋಗುತ್ತದೆ. ರಾಯಚೂರು ಜಿಲ್ಲೆಯಾದ್ಯಂತ ಸುಗಮ ಸಂಗೀತ ಹಾಗೂ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಜೀವಂತವಾಗಿರಿಸುವಲ್ಲಿ ಪಂಡಿತ ಪಂಚಾಕ್ಷರಿ ಗವಾಯಿಗಳ ಟ್ರಸ್ಟ್ ಹಾಗೂ ಪಂಡಿತ ಸಿದ್ಧರಾಮ ಜಂಬಲದಿನ್ನಿ ಸ್ಮಾರಕ ಟ್ರಸ್ಟ್‌ಗಳು ಅನೇಕ ಕಾರ್ಯಕ್ರಮಗಳ ಮೂಲಕ ರಾಷ್ಟ್ರೀಯ, ಅಂತರರಾಷ್ಟ್ರೀಯ ಕಲಾಸಕ್ತರನ್ನು ಪ್ರಸನ್ನಗೊಳಿಸಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಶಾಂತರಸರದು ದೊಡ್ಡ ಹೆಸರು. ಸಾಹಿತಿಗಳ ದೊಡ್ಡ ಪರಂಪರೆ ಈ ಜಿಲ್ಲೆಗಿದೆ. ಹೀಗೆ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರಕಲೆ ಎಲ್ಲ ಲಲಿತಕಲೆಗಳಲ್ಲಿಯೂ ತನ್ನದೇ ಆದ ಪರಂಪರೆಯನ್ನು ಉಳಿಸಿ ಕೊಂಡು ಬಂದ ಹಿರಿಮೆ ಈ ಜಿಲ್ಲೆಗಿದೆ. ಈ ಪರಂಪರೆ ಪ್ರಾಚೀನ ಕಾಲದಿಂದಲೂ ಉಳಿದು ಕೊಂಡು ಬಂದಿರುವುದಕ್ಕೆ ನಮಗೆ ಪ್ರಾಗೈತಿಹಾಸಿಕ ಕಾಲದ ಮಾನವರ ನೃತ್ಯ ಭಂಗಿಯ ವಿವಿಧ ರೀತಿಯ ಚಿತ್ರ-ಚಿತ್ತಾರಗಳು ರಾಯಚೂರು ಜಿಲ್ಲೆಯಾದ್ಯಂತ ಕಂಡುಬರುತ್ತದೆ. ಹಾಗೆಯೇ ಅನೇಕ ರಾಜರುಗಳ ಆಸಕ್ತಿಯ ಕಾರಣವಾಗಿ ಸುಂದರ ವಿನ್ಯಾಸದ ವಾಸ್ತುಶಿಲ್ಪ, ಕೋಟೆ-ಕೊತ್ತಲುಗಳು, ದೇವಾಲಯದಲ್ಲಿರುವ ವಿವಿಧ ಶೈಲಿಯಲ್ಲಿರುವ ಶಿಲ್ಪಕಲಾಕೃತಿಗಳು ಮತ್ತು ೧೮ನೇ ಶತಮಾನದಲ್ಲಿ ರಚನೆಗೊಂಡು ಅದ್ಭುತ ವಾಸ್ತುವಿನ್ಯಾಸದ ಖಾಜಿನ ಗೌಡರ ಮನೆ ಭಿತ್ತಿಚಿತ್ರಗಳು ಇವತ್ತಿಗೂ ಗಮನ ಸೆಳೆಯುತ್ತವೆ.[೫೨]

**೨.೫. ಕೊಪ್ಪಳ ಜಿಲ್ಲೆ**

ಹೈದರಾಬಾದಿನ ನಿಜಾಮ ಪ್ರಾಂತಕ್ಕೆ ಸೇರಿದ್ದ ಬೀದರ, ಕಲಬುರ್ಗಿ, ರಾಯಚೂರು ಹಾಗೂ ಕೊಪ್ಪಳ ಜಿಲ್ಲೆ, ಬಳ್ಳಾರಿ ಜಿಲ್ಲೆಯನ್ನು ಸೇರಿಸಿ, ಆಡಳಿತಾತ್ಮಕವಾಗಿ ಕಲಬುರ್ಗಿ ವಿಭಾಗ ವೆಂದು ಮಾಡಲಾಗಿದೆ. ಈ ವಿಭಾಗದ ಅಭಿವೃದ್ಧಿಗಾಗಿ ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿಯೊಂದನ್ನು ರಚಿಸಲಾಗಿದ್ದು, ಇದನ್ನು ಸಾಮಾನ್ಯವಾಗಿ ಎಚ್.ಕೆ.ಡಿ.ಬಿ. ಎಂದು ಕರೆಯಲಾಗುತ್ತಿದೆ. ಈ ಪ್ರದೇಶವನ್ನು ಹೈದರಾಬಾದ್ ಕರ್ನಾಟಕ ಎಂದು ಕರೆಯದೆ, ಕಲ್ಯಾಣ ಕರ್ನಾಟಕ ಇಲ್ಲವೆ ಈಶಾನ್ಯ ಕರ್ನಾಟಕವೆಂದು ಕರೆಯಬೇಕೆಂದು ಕೆಲವರು ಆಗ್ರಹಪಡಿಸಿದ್ದಾರೆ. ಹಳೆಯ ನಿಜಾಮ ಪ್ರಾಂತಕ್ಕೆ ಸೇರಿದ್ದ ಮಹಾರಾಷ್ಟ್ರದ ವಿದರ್ಭ ಹಾಗೂ ಆಂಧ್ರದ ತೆಲಂಗಾಣಕ್ಕೆ ದೊರಕಿರುವ ಸಂವಿಧಾನದ ೩೭೧ನೆಯ ಕಲಮಿನ ಸವಲತ್ತುಗಳು ನಮಗೆ ದೊರಕುವವರೆಗೂ ನಾವು ಹೈದರಾಬಾದ್ ಕರ್ನಾಟಕದವರೆಂದು ಗುರುತಿಸಿಕೊಳ್ಳುವುದು, ಕರೆದುಕೊಳ್ಳುವುದು ಅನಿವಾರ್ಯ ವಾಗಿದೆ. ಹೈದರಾಬಾದ್ ಕರ್ನಾಟಕ ಆರ್ಥಿಕ ಮಾತ್ರವಲ್ಲ ರಾಜಕೀಯವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಔದ್ಯೋಗಿಕವಾಗಿ, ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಬಹಳ ಹಿಂದುಳಿದಿದೆ. ನಮ್ಮ ಹಿಂದುಳಿಯುವಿಕೆ ಹೋಗಲಾಡಿಸಲು ಡಾ. ಡಿ. ಎಂ. ನಂಜುಂಡಪ್ಪ ಸಮಿತಿ ರಚಿಸಲಾಗಿತ್ತು.

---

೫೨. ಅದೇ., ಪು-೧೮.

ಅರ್ಥಶಾಸ್ತ್ರಜ್ಞರಾಗಿದ್ದ ಡಾ.ಡಿ.ಎಂ.ನಂಜುಂಡಪ್ಪನವರು ಸಲ್ಲಿಸಿದ ಪ್ರಾದೇಶಿಕ ಅಸಮತೋಲನಾ ನಿವಾರಣಾ ಸಮಿತಿ ವರದಿಯಲ್ಲಿ ತಾಲೂಕುಗಳನ್ನು ಅಭಿವೃದ್ಧಿ ಮಟ್ಟದ ಮಾಪನ ಹಾಗೂ ಅಭಿವೃದ್ಧಿ ಘಟಕವಾಗಿ ಪರಿಗಣಿಸಲಾಗಿದೆ. ಈ ವರದಿಯಲ್ಲಿ ಒಟ್ಟು ೧೭೫ ತಾಲೂಕುಗಳಲ್ಲಿ ೧೧೪ ತಾಲೂಕುಗಳನ್ನು ಹಿಂದುಳಿದಿರುವ ತಾಲೂಕುಗಳೆಂದು ಮತ್ತು ೬೧ ತಾಲೂಕುಗಳನ್ನು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ತಾಲೂಕುಗಳೆಂದು ವರ್ಗೀಕರಿಸಲಾಗಿದೆ. ಈ ವರ್ಗೀಕರಣದ ಪ್ರಕಾರ ಕೊಪ್ಪಳ ಜಿಲ್ಲೆಯ ಗಂಗಾವತಿ, ಕೊಪ್ಪಳ, ಕುಷ್ಟಗಿ ಹಾಗೂ ಯಲಬುರ್ಗಾ ತಾಲೂಕುಗಳು ಅತ್ಯಂತ ಹಿಂದುಳಿದಿರುವ ತಾಲೂಕುಗಳ ಗುಂಪಿಗೆ ಸೇರುತ್ತವೆ.[೫೪]

**ಚರಿತ್ರೆ**

ಕೊಪ್ಪಳದ ಚರಿತ್ರೆ ಪ್ರಾಚೀನವಾದದ್ದು. ಗವಿಮಠದ ಬೆಟ್ಟ ಹಾಗೂ ಮಳೆಮಲ್ಲೇಶ್ವರ ಬೆಟ್ಟದ ಗವಿಗಳಲ್ಲಿ ಆದಿಮಾನವನು ಬಿಡಿಸಿದ ಗುಹಾಚಿತ್ರಗಳಿವೆ. ನಂತರದ ನೂತನ ಶಿಲಾಯುಗದ ಕಲ್ಲಿನ ಆಯುಧಗಳು ದೊರಕಿವೆ. ಇಲ್ಲಿ ದೊರಕಿರುವ ಮಾನವನ ಮೂಳೆಯ ಆಯುಷ್ಯ ನಾಲ್ಕು ಸಾವಿರ ವರ್ಷಗಳದ್ದೆಂದು, ನಾಲ್ಕು ಸಾವಿರ ವರ್ಷಗಳ ಹಿಂದಿನಿಂದ ಇಲ್ಲಿ ಮಾನವನ ವಾಸ್ತವಿತ್ತೆಂದು ತಿಳಿದುಬರುವುದು. ಆ ಕಾಲದ ಮಾನವನ ಶವಸಂಸ್ಕಾರ ಮಾಡಿದ ಅವರ ಆಸ್ಥಿಗಳನ್ನು ಹೂಳಿದ ಕಗ್ಗೋರಿಗಳನ್ನು ಈಗಲೂ ನೋಡಬಹುದು. ಪಾಟಲೀಪುತ್ರದಲ್ಲಿ ಬರಗಾಲ ಬೀಳಲು ಭದ್ರಬಾಹುಭಟ್ಟಾರರು ತಮ್ಮ ಶಿಷ್ಯ ಚಂದ್ರಗುಪ್ತರೊಡನೆ ಕಳ್ಬಪ್ಪು(ಶ್ರವಣಬೆಳಗೊಳ)ವಿಗೆ ಹೋಗುವಾಗ ಈ ಮಾರ್ಗವಾಗಿ ಹೋದನೆಂದು ಆ ಕಾಲದಿಂದ ಇಲ್ಲಿ ಜೈನಧರ್ಮ ಪ್ರಸಾರಗೊಂಡಿತೆಂದು ವದಂತಿ ಇದೆ.

**ಮೌರ್ಯರು:** ಮೌರ್ಯ ಅಶೋಕನ ಕ್ರಿ.ಪೂ. ೨೬೩ರ ಎರಡು ಶಾಸನಗಳು ಬ್ರಾಹ್ಮೀಲಿಪಿ, ಪ್ರಾಕೃತ ಭಾಷೆಯಲ್ಲಿದ್ದು ಒಂದು ಗವಿಮಠದ ಅಡ್ಡಣಗಿ ಗುಂಡಿನ ಅಡಿಯಲ್ಲಿದೆ. ಇನ್ನೊಂದು ಮಳೆಮಲ್ಲೇಶ್ವರ ಬೆಟ್ಟದ ಪಾಲ್ಕಿಗುಂಡಿನ ಅಡಿಯಲ್ಲಿದೆ. ಈ ಶಾಸನಕ್ಕೆ ಹತ್ತುವಾಗ ಎರಡು ಪಾದಗಳಿದ್ದು ಇವು ವರಾಂಗ ಚರಿತ್ರೆಯ ಕರ್ತೃ ಜಟಸಿಂಹ ನಂದಿಯದೆಂದು ಹೇಳುತ್ತಾರೆ. ಈತನ ಕಾಲ ಒಂಬತ್ತನೆಯ ಶತಮಾನ. ಅಶೋಕನು ತನ್ನ ಶಾಸನಗಳಲ್ಲಿ 'ತನ್ನ ಒಳ್ಳೆಯ ನಡತೆಯಿಂದ, ಸಾಧನೆಯಿಂದ ಮಾನವನು ದೇವಮಾನವನಾಗುವನೆಂದು ತಿಳಿಸಿದ್ದಾನೆ. ಬೌದ್ಧ ಸಂಘಕ್ಕೆ ತಾನು ಬಂದು ಒಂದುವರೆ ವರ್ಷವಾಗಿದೆಯೆಂದೂ ಕೂಡ ಈ ಶಾಸನದಲ್ಲಿ ತಿಳಿಸಿದ್ದಾನೆ. ಅಶೋಕನ ಈ ಎರಡೂ ಶಾಸನಗಳಿಂದ ಕೊಪ್ಪಳ ಪ್ರದೇಶ ಮೌರ್ಯ ಸಾಮ್ರಾಜ್ಯ ಕ್ಕೊಳಪಟ್ಟಿತ್ತೆಂದು ತಿಳಿದುಬರುತ್ತದೆ.[೫೫]

**ಶಾತವಾಹನರು** : ಮೌರ್ಯರ ಆಳ್ವಿಕೆಯ ನಂತರ ಶಾತವಾಹನರು ಈ ಪ್ರದೇಶವನ್ನು

೫೪. ಎಚ್. ಎಸ್. ಪಾಟೀಲ : ಕೊಪ್ಪಳ – ದರ್ಶನ ಮಾಲಿಕೆ, ಪು–೦೫

೫೫. ಅದೇ., ಪು–೧೫

ಆಳಿದರು. ಇಲ್ಲಿ ಶಾತವಾಹನರ ಶಾಸನಗಳು ದೊರೆತಿಲ್ಲ. ಆದರೆ ಅವರ ಕಾಲದ ೫೫೫೪ ಬೆಳ್ಳಿ ನಾಣ್ಯಗಳು ಚಿಕ್ಕ ಸಿಂದೋಗಿಯಲ್ಲಿ ದೊರೆತಿವೆ. ಈ ಬೆಳ್ಳಿ ನಾಣ್ಯಗಳನ್ನು ಹುದಿಗಿಟ್ಟ ಪಾತ್ರೆಯ ಮೇಲೆ ಬ್ರಾಹ್ಮೀಲಿಪಿಯ ಪ್ರಾಕೃತ ಭಾಷೆಯಲ್ಲಿ 'ಚಿಂತಿಸ' ಎಂದು ಬರೆದಿದ್ದು 'ಚಿತನ' ಎಂದು ಕನ್ನಡದಲ್ಲಾಗುತ್ತದೆ. ಇವರ ಲಾಂಛನ ಆನೆ, ಆನೆಯ ಆಕರ್ಷಣೀಯ ರೇಖಾಚಿತ್ರವು ಕೋಟೆಯ ಎತ್ತರದ ಗುಂಡಿನಲ್ಲಿ ಕೆತ್ತಿದ ಉಸ್ಮಾನ ತಾಣದಲ್ಲಿದೆ. ಇವರ ಕಾಲದ ಮಡಿಕೆ ಚೂರುಗಳು, ಭಗ್ನಶಿಲಾವಿಗ್ರಹಗಳು ಇಲ್ಲಿ ದೊರಕಿವೆ. ಕೊಪ್ಪಳದಿಂದ ಸನ್ನತಿವರೆಗೆ ಶಾತವಾಹನರ ಕಾಲದ ಈ ಬಗೆಯ ಶಿಲ್ಪಗಳು ದೊರಕುವುದಾಗಿ ಡಾ. ಅ. ಸುಂದರ ಅವರು ಹೇಳುತ್ತಾರೆ.[೫೬]

**ಕದಂಬರು:** ಮಯೂರಶರ್ಮನಾಗಿದ್ದವನು ಮಯೂರವರ್ಮನೆಂದು ಬನವಾಸಿಯಲ್ಲಿ ಕದಂಬ ರಾಜ್ಯವನ್ನು ಸ್ಥಾಪಿಸಿದನು. ಕದಂಬ ಕುಲದ ಮಯೂರವರ್ಮನ ಚಂದ್ರವಳ್ಳಿ(ಚಿತ್ರದುರ್ಗ) ಶಾಸನದಲ್ಲಿ ಅಲ್ಲಿಯ ಶಾಸನವನ್ನು ನಿರ್ಮಿಸಿದವನು ಕುಪಣದ ಲಿಪಿಕಾರ ಚಮನೆಂಬುವನು ಆ ಕಾಲದಲ್ಲಿಯೇ(೪ನೇ ಶತಮಾನ) ಕೊಪ್ಪಳ ವಿದ್ಯಾಕೇಂದ್ರವಾಗಿತ್ತು. ಕದಂಬರ ಆಡಳಿತದ ಮೇರೆಯೊಳಗೆ ಕೊಪ್ಪಳ ಬರುತ್ತಿರುವುದರಿಂದ ಹಾಗೂ ಕುಪಣದ ಚಮನಿಂದ ಕದಂಬರು ಈ ಪ್ರದೇಶವನ್ನು ಆಳುತ್ತಿದ್ದರೆನ್ನಬಹುದು. ಬನವಾಸಿಯಿಂದ ಲಿಂಗಸೂರು ತಾಲೂಕಿನ ಕರಡಕಲ್ಲವರೆಗೆ ಕದಂಬ ರಾಜ್ಯ ವಿಸ್ತಾರಗೊಂಡಿತ್ತು ಎಂಬುದಕ್ಕೆ ಕೊಪ್ಪಳ ಭಾಗದಲ್ಲಿ ಅವರ ಶಾಸನಗಳು ದೊರೆತಿವೆ.[೫೭]

**ಬಾದಾಮಿ ಚಾಲುಕ್ಯರು:** ಕೊಪ್ಪಳಕ್ಕೆ ಹತ್ತಿರದ ಬಾದಾಮಿ ಚಾಲುಕ್ಯರ ರಾಜ್ಯಧಾನಿ. ಈ ವಂಶದ ಇಮ್ಮಡಿ ಪುಲಿಕೇಶಿ 'ದಕ್ಷಿಣಾಪಥೇಶ್ವರ' ಎಂಬ ಬಿರುದನ್ನು ಪಡೆದಿದ್ದನು. ಇವನು ಉತ್ತರಾಪಥದ ಹರ್ಷವರ್ಧನನನ್ನು ನರ್ಮದಾ ನದಿ ತೀರದಲ್ಲಿ ಸೋಲಿಸಿ, ಉತ್ತರದವರೆಗೆ ಕರ್ನಾಟಕದ ಕೀರ್ತಿ ಹಬ್ಬಿಸಿದನು. ಈ ಚಾಲುಕ್ಯ ವಂಶದ ಅರಸನಾದ ವಿಜಯಾದಿತ್ಯ(೬೯೬-೭೭೩)ನ ಕಾಲದ ಶಾಸನ ಕೊಪ್ಪಳ ಜಿಲ್ಲೆಯ ಹಲಗೇರಿಯಲ್ಲಿ ದೊರಕಿದೆ. ಅದರಲ್ಲಿ ವಿಜಯಾದಿತ್ಯನ ಆಳ್ವಿಕೆ ತಿಳಿಸುತ್ತ ಗುತ್ತಿ ಒಡೆಯನಾದ ಗರೋಜ(ಅಂಗರಾಜ)ನೆಂಬುವನು ಕೊಪ್ಪಳದ ಕರಣಂನಾಗಿ ಆಡಳಿತ ಮಾಡುತ್ತಿದ್ದನೆಂದು ಸ್ಪಷ್ಟವಾಗಿ ತಿಳಿಸಿದೆ. ರಾಜ್ಯದ ಆಡಳಿತಾತ್ಮಕ ಹುದ್ದೆ 'ಕರ್ಣಂ' ಬಗ್ಗೆ ಇಲ್ಲಿ ಉಲ್ಲೇಖಗೊಂಡಿರುವುದು ವಿಶೇಷವಾಗಿದೆ. ಬಾದಾಮಿ ಚಾಲುಕ್ಯರು ಗಿರಿದುರ್ಗಗಳ ನಿರ್ಮಾಪಕರಾಗಿದ್ದಾರೆ. ಇವರ ಆಡಳಿತ ಕಾಲದಲ್ಲಿಯೇ ಕೊಪ್ಪಳದ (ಗಿರಿದುರ್ಗ) ಕೋಟೆಗೆ ಅಸ್ತಿಭಾರ ಹಾಕಿರಬೇಕು.[೫೮]

**ರಾಷ್ಟ್ರಕೂಟರು:** ರಾಷ್ಟ್ರಕೂಟ ವಂಶದ ದಂತಿದುರ್ಗನು ಬಾದಾಮಿ ಚಾಲುಕ್ಯರ ಮಾಂಡಳಿಕನಾಗಿದ್ದನು. ಚಾಲುಕ್ಯರ ಕೊನೆಯ ರಾಜನಾದ ಕೀರ್ತಿವರ್ಮನನ್ನು ಸೋಲಿಸಿ, ಕಲಬುರ್ಗಿ ಜಿಲ್ಲೆಯ ಸೇಡಂ ತಾಲೂಕಿನಲ್ಲಿರುವ ಮಳಿಖೇಡ(ಆಗಿನ ಮಾನ್ಯಖೇಟ)ದಲ್ಲಿ ರಾಷ್ಟ್ರಕೂಟರ ರಾಜ್ಯವನ್ನು

---

೫೬. ಎಚ್. ಎಸ್. ಪಾಟೀಲ : ಕೊಪ್ಪಳ – ದರ್ಶನ ಮಾಲಿಕೆ, ಪು–೧೬

೫೭. ಅದೇ., ಪು–೧೭

೫೮. ಅದೇ.

ಸ್ಥಾಪಿಸಿದನು. ಇವರಲ್ಲಿ ಅಮೋಘವರ್ಷ ನೃಪತುಂಗ ಸುಪ್ರಸಿದ್ಧನು. ಈತನ ಆಸ್ಥಾನದಲ್ಲಿದ್ದ ಶ್ರೀ ವಿಜಯನು 'ಕವಿರಾಜಮಾರ್ಗ' ಎಂಬ ಶಾಸ್ತ್ರ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ

*ಕಾವೇರಿಯಿಂದ ಮಾ ಗೋ |*
*ದಾವರಿಮಿರ್ದ ನಾಡಾದ ಕನ್ನಡದೊಳ್*
*ಭಾವಿಸಿದ ಜನಪದಂ ವಸು |*
*ಧಾವಲಯ ವಿಲೀನ ವಿಶದ ವಿಷಯ ವಿಶೇಷಂ*

.......

*ಅದರೊಳಗಂ ಕಿಸುವೊಳಲುವಿ |*
*ದಿತ ಮಹಾಕೋಪಣ ನಗರದಾ ಪುಲಿಗೆರಿಯಾ*
*ಸದಭಿಸ್ತುತಮಪ್ಪೊಂಕುಂ |*
*ದದನಡುವಣ ನಾಡೆ ನಾಡೆ ಕನ್ನಡದ ತಿರುಳ್*

ಈ ಎರಡು ಕಂದಪದ್ಯಗಳಲ್ಲಿ ಪಟ್ಟದಕಲ್ಲು(ಕೆಸುವೊಳಲು), ಕೊಪ್ಪಳ(ಕೋಪಣನಗರ), ಲಕ್ಷ್ಮೇಶ್ವರ(ಪುಲಿಗೆರೆ) ಹಾಗೂ ಒಕ್ಕುಂದ(ಒಂಕುಂದ) ಇವುಗಳ ನಡುವಿನ ಪ್ರದೇಶ ತಿರುಳ್ಗನ್ನಡವಾಗಿತ್ತೆಂದು ಹೇಳಿದ್ದಾನೆ. ಈ ಕಾಲದಲ್ಲಿ ಕೊಪ್ಪಳ 'ವಿಧಿತ ಮಹಾಕೋಪಣನಗರ' ವೆಂದೂ, ತಿರುಳ್ಗನ್ನಡ ನಾಡೆಂದು ಪ್ರಸಿದ್ಧಿಯನ್ನು ಪಡೆದಿತ್ತು. ರಾಷ್ಟ್ರಕೂಟರ ಕೆಲವು ಮಹತ್ವದ ಶಾಸನಗಳು ಕೊಪ್ಪಳದಲ್ಲಿ ದೊರಕಿವೆ. ಆದರೆ ಕರ್ನಾಟಕದಲ್ಲಿ ರಾಷ್ಟ್ರಕೂಟ ದೇವಾಲಯಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಇವರ ನಂತರ ಅಧಿಕಾರದ ಗದ್ದುಗೆ ಏರಿದ ಕಲ್ಯಾಣ ಚಾಲುಕ್ಯರು ಕರ್ನಾಟಕದ ವಾಸ್ತುಶಿಲ್ಪ ಶೈಲಿಗೆ ಹೊಸ ಚೇತನವನ್ನು ತುಂಬಿದರು. ಇವರು ಮೂಲತಃ ಬಾದಾಮಿ ಚಾಲುಕ್ಯ ಶೈಲಿಯನ್ನು ಅನುಸರಿಸಿದರೂ ವಿನೂತನವಾದ ಮಾದರಿಯನ್ನು ಬೆಳೆಸಿದರು. ಇದುವರೆಗೆ ಇದ್ದ ದೇಗುಲಗಳು ಸರಳವಾದ ಅಲಂಕರಣೆಯನ್ನು ಹೊಂದಿದ್ದವು. ಅಲ್ಲದೇ ಇವರು ಬಳಸಿದ ಶಿಲೆ ಒರಟಾದ ಕೆಂಪು ಮರಳು ಶಿಲೆಯಾಗಿದ್ದಿತು. ಕಲ್ಯಾಣ ಚಾಲುಕ್ಯರು ಆರಂಭದಲ್ಲಿ ಕೆಂಪು ಶಿಲೆಯನ್ನು ಬಳಸಿದ್ದರೂ, ನಂತರ ಅದನ್ನು ಬಿಟ್ಟು, ಅತ್ಯಂತ ಸೂಕ್ಷ್ಮವೂ, ನಯವೂ ಆದ ಕ್ಲೋರಟೆಕ್ ಸಿಸ್ಟ್ ಎಂಬ ಹಸಿರು ಮಿಶ್ರಿತ ಕಪ್ಪುಶಿಲೆಯನ್ನು ಬಳಸಿದ್ದರು. ಈ ಶಿಲೆ ದೇಗುಲಗಳ ಸ್ವರೂಪವನ್ನೇ ಬದಲಾಯಿಸಿತು.[೫೯]

**ಕಲಚೂರ್ಯರು:** ಕೊಪ್ಪಳ, ಕುಕ್ಕನೂರು, ಮಾದಿನೂರು ಹಾಗೂ ಇನ್ನಿತರ ಗ್ರಾಮಗಳಲ್ಲಿ ಕಲಚೂರ್ಯರ ಶಾಸನಗಳು ದೊರಕುವುದರಿಂದ ಇವರು ಹಾಗೂ ಇವರ ಮಾಂಡಳಿಕರು ಸೇನಾಪತಿ ಧನ್ನುಗಿ, ರಾಜರಾದ ರಾಯ ಮುರಾರಿ ಸೋವಿದೇವ ಬಿಜ್ಜಳ ಭೂಪಾಲ ಮುಂತಾದವರು ಇಲ್ಲಿ ಓಡಾಡಿದ್ದಾರೆ. ಕಲಚೂರ್ಯರು ಕಲ್ಯಾಣದ ಚಾಲುಕ್ಯರಿಗೆ ಮಹಾಮಂಡಳಾಧೀಶ್ವರರು ಹಾಗೂ ರಕ್ತಸಂಬಂಧಿಗಳು. ಮೂರನೇ ತೈಲಪನು ಕಾಕತೀಯರ ಮೇಲೆ ದಂಡೆತ್ತಿ ಹೋದಾಗ ಕಲ್ಯಾಣದ ಸಿಂಹಾಸನವನ್ನು ೧೧೯೨ರಲ್ಲಿ ಆಕ್ರಮಿಸಿಕೊಂಡನಲ್ಲದೆ, ಕಲಚೂರ್ಯರ ರಾಜ್ಯಾಡಳಿತವನ್ನು

---

೫೯. ಎಚ್. ಎಸ್. ಪಾಟೀಲ : ಕೊಪ್ಪಳ – ದರ್ಶನ ಮಾಲಿಕೆ, ಪು–೧೮

ಆರಂಭಿಸಿದನು. ಕಲಚೂರ್ಯರ ರಾಯ ಮುರಾರಿ ಸೋವಿದೇವನು ಕೊಪ್ಪಳ ತಾಲೂಕಿನ ಮಾದಿನೂರು(ಮೊದಗನೂರು)ದಲ್ಲಿ ರಾಜನಾಗಿದ್ದು, ರಾಜ್ಯಭಾರ ಮಾಡಿದ್ದಾನೆ. ಇವರು ಇಟಗಿ, ಕುಕ್ಕನೂರು, ಮಾದಿನೂರು ದೇವಾಲಯಗಳಿಗೆ ದತ್ತಿದಾನಗಳನ್ನು ಬಿಟ್ಟಿದ್ದಾರೆ. ಇವರು ಕುಕ್ಕನೂರಿನ (ಕುಕ್ಕನೂರು) ಜೇಷ್ಠಾದೇವಿ(ಮಹಾಮಾಯೆ)ಯ ಪರಮಭಕ್ತನಾಗಿರುವುದಕ್ಕೆ ಅಲ್ಲಿಯ ಶಾಸನಗಳು ಸಾಕ್ಷಿಯಾಗಿವೆ. ಕೊಪ್ಪಳ ತಾಲೂಕಿನ ಅಳವಂಡಿ, ಕವಲೂರು ಶಾಸನಗಳು ಇವರ ದೈವಭಕ್ತಿಯನ್ನು ತಿಳಿಸುತ್ತವೆ.[೬೦]

**ಸೇವುಣರು:** ದೇವಗಿರಿಯ ಸೇವುಣರು ಕಲ್ಯಾಣ ಚಾಲುಕ್ಯರ ಮಾಂಡಳಿಕರು, ಕಲ್ಯಾಣ ಚಾಲುಕ್ಯರ ೪ನೇ ಸೋಮೇಶ್ವರನ ಕಾಲದಲ್ಲಿ ಸೇವುಣ ದೊರೆ ೫ನೆಯ ಭಿಲ್ಲಮನು ಸ್ವತಂತ್ರ ರಾಜನೆಂದು ಘೋಷಿಸಿಕೊಂಡನು. ಈ ನಾಡು ದೇವಗಿರಿಯ ಸೇವುಣರ ಆಡಳಿತವನ್ನು ಕಂಡಿತು.

**ನೊಳಂಬರು:** ನೊಳಂಬವಾಡಿಯ ನೊಳಂಬರು ಕೂಡ ಕೊಪ್ಪಳವನ್ನು ಆಳಿದ ಬಗ್ಗೆ ಇತಿಹಾಸದಲ್ಲಿ ದಾಖಲೆಗಳು ದೊರಕುತ್ತವೆ.

**ಶಿಲಾಹಾರರು:** ಕೊಪಣಪುರವರಾಧೀಶ್ವರರೆಂದು ಪ್ರಸಿದ್ಧರಾದ ಶಿಲಾಹಾರರು ಮಹಾರಾಷ್ಟ್ರ, ಗುಜರಾತದವರೆಗೆ ರಾಜ್ಯಭಾರ ಮಾಡಿದ್ದಾರೆ. ಇವರು ಮೂಲತಃ ಕೊಪ್ಪಳದವರಾಗಿದ್ದವರು. ಅಂತೆಯೇ ತಮ್ಮನ್ನು ಕೊಪಣಪುರವರಾಧೀಶ್ವರರೆಂದು ಕರೆದುಕೊಂಡಿದ್ದಾರೆ. ಇವರ ವಂಶದ ಕಂಚಿಗನನ್ನು ಜೀಮೂತವಾಹನನ ವಂಶದವನೆಂದು ಕರೆದಿದ್ದಾರೆ. ಕಂಚಿಗನು ಶಿಲಾಹಾರ ವಂಶದವನೆಂದು ಫ್ಲೀಟ್ ಹೇಳಿದ್ದಾರೆ. ಪ್ರೊ. ಕೀಲಹಾರ್ನ್ ಹಾಗೂ ಕೃಷ್ಣಶಾಸ್ತ್ರಿಗಳವರ ಪ್ರಕಾರ ಶಿಲಾಹಾರರು ೧೧ನೆಯ ಶತಮಾನದಲ್ಲಿ ಕೊಪ್ಪಳ ಪಟ್ಟಣದ ಮುಖ್ಯಸ್ಥರಾಗಿದ್ದರೆಂದು ಅಭಿಪ್ರಾಯ ಪಟ್ಟಿದ್ದಾರೆ.[೬೧]

**ಹೊಸಮಲೆದುರ್ಗದ ಅರಸರು:** ಮುಮ್ಮಡಿ ಸಿಂಗೆನಾಯಕನಿಂದ ಈ ವಂಶ ಆರಂಭಗೊಂಡಿದೆ. ಈತನ ಮಗ ಕಂಪಿಲರಾಯ. ಇವನ ಮಗನೇ ಕುಮ್ಮಟದುರ್ಗದ ಕುಮಾರರಾಮನು. ಈತ ಪರನಾರೀ ಸೋದರ, ಶೀಲಶೌಚಕ್ಕಾಗಿ ಪ್ರಸಿದ್ಧನಾಗಿದ್ದಾನೆ. ಈತನನ್ನು ಕುರಿತು ನಂಜುಂಡಕವಿ, ಪಾಂಚಾಳಗಂಗ ಹಾಗೂ ಮಹಾಲಿಂಗಸ್ವಾಮಿ ಕಾವ್ಯಗಳನ್ನು ರಚಿಸಿದ್ದಾರೆ. ಕರಾವಳಿ ತುಳುಪಾಡ್ದನಗಳಲ್ಲಿ ಈತನನ್ನು ಹಾಡಿ ಹೊಗಳಿದ್ದಾರೆ. ಈತ ರಾಜ್ಯವಾಳಿದ್ದು ಕುಮ್ಮಟದುರ್ಗದಲ್ಲಿ. ಕುಮ್ಮಟದುರ್ಗ ಕೊಪ್ಪಳ ತಾಲೂಕಿನ ಬೂದಗುಂಪಿಗೆ ಹತ್ತಿರದ ಬಿಳೇಬಾವಿ ಹೊಸೂರು ಹತ್ತಿರವಿದೆ. ಇಂಥ ರಾಮನು ಕರ್ನಾಟಕದ ಮಾತ್ರವಲ್ಲ ದಿಲ್ಲಿಯವರೆಗೆ ಪ್ರಸಿದ್ಧನಾಗಿದ್ದಾನೆ. ಜನರು ಅಭಿಮಾನ ಪಡಬೇಕಾದ ದೊರೆ ಕುಮಾರರಾಮನು ಕೊಪ್ಪಳಕ್ಕೆ ಕೋಡು ಮೂಡಿಸಿದ್ದಾನೆ.[೬೨]

**ಗಂಗ ದಂಡಾಧಿಪತಿ:** ಚಾವುಂಡರಾಯನು ಕೊಪ್ಪಳದಲ್ಲಿ ಜೈನಬಸದಿಗಳನ್ನು ಕಟ್ಟಿಸಿದ್ದಾನೆ.

---

೬೦. ಎಚ್. ಎಸ್. ಪಾಟೀಲ : ಕೊಪ್ಪಳ – ದರ್ಶನ ಮಾಲಿಕೆ, ಪು–೧೯
೬೧. ಅದೇ., ಪು–೨೦
೬೨. ಅದೇ.

ಗಂಗ ಮಾರಸಿಂಹನ ಸೋದರಿಯನ್ನು ಕುಕ್ಕನೂರು ಹತ್ತಿರದ ಆಡೂರಿಗೆ ಕೊಟ್ಟ ಬಗ್ಗೆ ಶಾಸನ ಹೇಳುತ್ತದೆ. ಕಂದಸಾಯಿಯು ಕೊಪ್ಪಳಕ್ಕೆ ಬಂದು ಸಲ್ಲೇಖನ ವ್ರತದಿಂದ ಸಮಾಧಿಮರಣ ಹೊಂದಿದ ಬಗ್ಗೆ ಕೊಪ್ಪಳ ಶಾಸನ ತಿಳಿಸುತ್ತದೆ.

**ಹೊಯ್ಸಳರ ಶಾಸನ:** ಅಳವಂಡಿಯಲ್ಲಿ ದೋರರದ್ದು, ಕಾಲಿ ೧೨೦೩, ಶ್ರೀರಂಗನಾಥದೇವರ ಅಂಗಭೋಗಕ್ಕೆ ಬಿಟ್ಟ ದಾನ ಶಾಸನ ಇದರಲ್ಲಿ ಹೊಯ್ಸಳ ಇಮ್ಮಡಿ ಬಲ್ಲಾಳನ ನಿರ್ದೇಶನ ಬರುತ್ತದೆ. ಕೊಪ್ಪಳ ಕೋಟೆಯಲ್ಲಿ ಹೊಯ್ಸಳದ ಶಿಲ್ಪ ದೊರಕುತ್ತದೆ.

**ವಿಜಯನಗರದರಸರು:** ಆನೆಗೊಂದಿ ಹಾಗೂ ಕುಮ್ಮಟದುರ್ಗಗಳ ಅರಸರ ಆಡಳಿತಕ್ಕೊಳಪಟ್ಟ ಕೊಪ್ಪಳ ೧೩೩೬ರಲ್ಲಿ ಹಂಪೆಯಲ್ಲಿ ಆರಂಭಗೊಂಡ ವಿಜಯನಗರದರಸರ ಆಳ್ವಿಕೆಗೆ ಬಂದಿತು. ಈ ಸಾಮ್ರಾಜ್ಯ ೨೩ನೆಯ ಜನವರಿ ೧೫೬೫ರಂದು ಆಲಿಆದಿಲ್‌ಶಾಹಿಗಳ ದಾಳಿಯಿಂದ ಪತನ ಗೊಂಡಿತು. ೧೫೧೩ರ ಗೊಂಡಬಾಳ ಶಾಸನ, ದಿ. ೨೪.೯.೧೯೧೪ರ ಕಿಡದಾಳ ಶಾಸನ, ದಿ. ೨೫.೭.೧೫೨೦ ಗಿಣಿಗೇರಿಗೆ ಸಂಬಂಧಿಸಿದ ಆನೆಗೊಂದಿ ವಿಶ್ವಕರ್ಮ ಮಠದ ತಾಮ್ರಶಾಸನ, ಬಂಡಿ ಹರ್ಲಾಪುರ ಹಾಗೂ ಹುಲಿಗೆಯ ದಾನಶಾಸನಗಳಿಂದ ಕೊಪ್ಪಳ ವಿಜಯನಗರದರಸರ ಆಡಳಿತಕ್ಕೊಳಪಟ್ಟಿತ್ತೆಂದು ತಿಳಿದುಬರುತ್ತದೆ.

**ಬಹಮನಿ ಹಾಗೂ ಆದಿಲ್‌ಶಾಹಿಗಳು:** ಕಲಬುರ್ಗಿಯಲ್ಲಿ ೧೩೪೭ರಲ್ಲಿ ಬಹಮನಿ ರಾಜ್ಯ ಉದಯವಾಯಿತು. ಇವರು ದುರ್ಬಲರಾಗಲು, ಇವರ ಸುಬೇದಾರರು ಸ್ವತಂತ್ರರಾದರು. ಇವರಲ್ಲಿ ಬಿಜಾಪುರದ ಎರಡನೆಯ ಆದಿಲ್‌ಶಾಹನು ಬಲಿಷ್ಠನಾಗಿದ್ದನು. ಆದಿಲ್‌ಶಾಹಿಗಳಿಗೂ ವಿಜಯನಗರದವರಿಗೂ ರಾಯಚೂರು ಹಾಗೂ ಮುದಗಲ್ಲ ಕೋಟೆಗಳಿಗಾಗಿ ಸತತ ಹೋರಾಟ ನಡೆಯಿತು. ಆದಿಲ್‌ಶಾಹಿಗಳಿಂದ ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯ ನಾಶವಾಯಿತು. ಆಗಿನಿಂದ ಕೊಪ್ಪಳ ಇವರ ವಶಕ್ಕೆ ಹೋಯಿತು. ೧೫೮೦ರಿಂದ ೧೬೨೭ರವರೆಗೆ ಆಳಿದ ಎರಡನೆಯ ಇಬ್ರಾಹಿಂಅಲಿ ಆದಿಲ್‌ಶಾಹನು ತನ್ನ ಸೇನಾಪತಿ ಘಾಜಿಖಾನನಿಂದ ೧೬೦೯ರಲ್ಲಿ ಅರಬೌಂಕಿ-ಮಸಜೀದ್ ಕಟ್ಟಿಸಿದನು. ಇದರಂತೆ ಕೊಪ್ಪಳದಲ್ಲಿ ಕೆಲವು ಮಸೀದಿಗಳನ್ನು ಆಗಾಗ ಕಟ್ಟಿಸಿದರು. ಅವುಗಳಲ್ಲಿ ಸೈಲಾನ್ ಪಾದಶಾಹ ದುರ್ಗಾವೂ ಒಂದಾಗಿವೆ.[೬೩]

**ದಿಲ್ಲಿ ಸುಲ್ತಾನರಾದ ಮೊಗಲರು:** ದಿಲ್ಲಿಯ ಸುಲ್ತಾನನಾದ ಔರಂಗಜೇಬನು ದಕ್ಷಿಣದ ದಾಳಿಯಲ್ಲಿ ಬಿಜಾಪುರವನ್ನು ಕೈವಶಪಡಿಸಿಕೊಂಡ ಮೇಲೆ ತನ್ನ ಸೇನಾಪತಿ-ಅಬ್ದುಲ್ ರಹೀಮ್ ಉರ್ಫಾ ೧ನೆಯ ಬಹಬೋಲೊನಿಗೆ ಕೊಪ್ಪಳವನ್ನು ಜಹಗೀರಾಗಿ ನೀಡಿದನು. ಬಹುಲೋಲನು ತನ್ನ ಸಂಬಂಧಿಯಾದ ಹುಸೇನ್ ಮೀಯಾನಿಗೆ ಕೊಟ್ಟು ಬಿಟ್ಟನು. ಆಗಿನಿಂದ ಕೊಪ್ಪಳದ ಮೇಲೆ ಮೊಗಲರ ಆಧಿಪತ್ಯ ಸ್ಥಾಪಿತವಾಯಿತು.

**ಮರಾಠರು:** ಛತ್ರಪತಿ ಶಿವಾಜಿ ಮಹಾರಾಜನ ಆದೇಶದಂತೆ ಆತನ ಸೇನಾಪತಿ ಹಂಬೀರಾಮನು ಕೊಪ್ಪಳದ ಮೇಲೆ ದಾಳಿ ಮಾಡಿದಾಗ ಹುಸೇನಮೀಯಾನಿಗೂ ಹಂಬಿರುವನಿಗೂ

---

೬೩. ಎಚ್. ಎಸ್. ಪಾಟೀಲ : ಕೊಪ್ಪಳ – ದರ್ಶನ ಮಾಲಿಕೆ, ಪು–೨೧

ಯಲಬುರ್ಗಿಯಲ್ಲಿ ಮುಖಾಮುಖಿ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಹುಸೇನ್‌ಮಿಯಾ ಸೋತನು. ಕೊಪ್ಪಳ ಕೋಟೆ ಹಂಬೀರಾವನ ಕೈವಶವಾಯಿತು. ಮರಾಠರ ಆಡಳಿತದಿಂದಾಗಿ ೧೯೩೦-೪೦ರವರೆಗೆ ಕೊಪ್ಪಳ ಜಿಲ್ಲೆಯಲ್ಲಿ ಉರ್ದುವಿನ ದಾಳಿ ಆಗುವವರೆಗೆ ಇಲ್ಲಿಯ ಕಡತಗಳು ಮರಾಠಿಯಲ್ಲಿ, ಮೋಡಿಯಲ್ಲಿವೆ. ವ್ಯಾಪಾರಿಗಳು ತಮ್ಮ ಲೆಕ್ಕಪತ್ರಗಳನ್ನು ಮೋಡಿಲಿಪಿಯಲ್ಲಿ ಬರೆಯುತ್ತಿದ್ದರು. ಕೊಪ್ಪಳ ಕೋಟೆಯ ಭಾಗದಲ್ಲಿ ಭವಾನಿ ಗುಡಿ ಇದೆ. ಕೊಪ್ಪಳ ಕೋಟೆ ಭಾಗದಲ್ಲಿ ಮರಾಠರ ಮನೆತನಗಳು ಈಗಲೂ ಇವೆ. ಇವೆಲ್ಲ ಕೊಪ್ಪಳದಲ್ಲಿ ಮರಾಠರ ಆಡಳಿತದ ಬಗ್ಗೆ ಹೇಳುತ್ತವೆ.[೬೪]

**ಹೈದರಾಬಾದಿನ ಅಸಫ್‌ಜಾಹಿ ನಿಜಾಮರು:** ಮೊಗಲ್ ಬಾದಶಹಾ ಔರಂಗಜೇಬನು ಎರಡನೆಯ ಸಲ ದಕ್ಷಿಣ ದಿಗ್ವಿಜಯಕ್ಕಾಗಿ ತನ್ನ ದಂಡನಾಯಕ ದಿಲೇರ್‌ಖಾನ್‌ನನ್ನು ಕಳುಹಿಸಿಕೊಟ್ಟನು. ಈ ಸಲ ಬಿಜಾಪುರದ ಇಬ್ರಾಹಿಂ ಸಿಕಂದರ ಆಲಿ ಆದಿಲ್‌ಶಾಹನ ದಂಡು ನಾಶವಾಯಿತು. ಈ ಸಂದರ್ಭದಲ್ಲಿ ಆದಿಲ್‌ಶಾಹನ ಮಂತ್ರಿ ಸಿದ್ದೀಕ್ ಮಸೂದನು ಶಿವಾಜಿಯ ಸಹಾಯ ಕೇಳಿದನು. ಆದರೂ ಮೊಗಲ್ ಸೈನ್ಯದ ಹೊಡೆತಕ್ಕೆ ಇವರಾರೂ ನಿಲ್ಲಲಿಲ್ಲ; ಸೋತರು. ಔರಂಗಜೇಬನು ದಖ್ಖನ್ನಿನ ಆಡಳಿತ ನೋಡಿಕೊಳ್ಳಲು ತನ್ನ ನಂಬಿಗಸ್ಥನಾದ ಮೀರ ಕಮರುದ್ದೀನ್ ಖಿಲಿಚ್‌ಖಾನ್ ನಿಜಾಮ್ ಉಲ್‌ಮುಲ್ಕ್‌ನನ್ನು ೧೭೧೩ರಲ್ಲಿ ನೇಮಿಸಿದನು. ದಿಲ್ಲಿಯಲ್ಲಿ ಮೊಗಲರು ದುರ್ಬಲಗೊಳ್ಳುತ್ತಿದ್ದಂತೆ, ನಿಜಾಮನು ಅಸಫಜಹಾ ಬಿರುದಿನೊಂದಿಗೆ ೧೭೨೪ರಲ್ಲಿ ಸ್ವತಂತ್ರ ದೊರೆಯಾಗಿ ಘೋಷಿಸಿಕೊಂಡನು. ಹೈದರಾಬಾದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಇವರು ಹೈದರಾಬಾದಿನ ನಿಜಾಮರೆಂದು ೧೯೪೮, ಸೆಪ್ಟೆಂಬರ್ ೧೭ರವರೆಗೆ ಆಳಿದರು. ಏಳು ಸಂತತಿಯವರು ಆಳ್ವಿಕೆ ಮಾಡಿದರು.

**ಹೈದರ್‌ಅಲಿ-ಟಿಪ್ಪುಸುಲ್ತಾನರು:** ಬಿಜಾಪುರದ ಅಲಿ ಆದಿಲ್‌ಶಾಹಿಗಳು, ಮರಾಠರು, ಮೊಗಲರ ಯುದ್ಧಗಳ ಮಧ್ಯದಲ್ಲಿಯೇ ಹೈದರ್‌ಅಲಿ ಬಹಾದೂರ ಬಂಡಿ ಹಾಗೂ ಕೊಪ್ಪಳ ಕೋಟೆಗಳನ್ನು ವಶಪಡಿಸಿಕೊಂಡು ಆಡಳಿತ ನಡೆಸಿರುವುದಾಗಿ ತಿಳಿದುಬರುತ್ತದೆ. ಇದಕ್ಕೆ ಸಾಕ್ಷಿಯಾಗಿ ಕೊಪ್ಪಳ ಹಾಗೂ ಬಹಾದ್ದೂರ ಬಂಡಿಯಲ್ಲಿ ೧೭೪೬ರಿಂದ ೧೭೮೫ರ ಪರ್ಶಿಯನ್ ಶಾಸನಗಳಿವೆ. ಅಲಿ ಆದಿಲ್‌ಶಾಹಿಗಳು ನಿರ್ಮಿಸಿದ ಮಸೀದಿಗಳನ್ನು ಜೀರ್ಣೋದ್ಧಾರಗೊಳಿಸಿದನು. ಕೋಟೆಯೊಳಗೆ ಸಿಹಿ ನೀರಿನ ಕೆರೆಗಳನ್ನು ನಿರ್ಮಿಸಿದನು. ಊರಿಗೆ ನೀರಿನ ಪೂರೈಕೆ ಮಾಡಿಸಿದನು. ಕೋಟೆಯನ್ನು ಹೈದರ್‌ಅಲಿ ಹಾಗೂ ಟಿಪ್ಪು ಸುಲ್ತಾನರಿಬ್ಬರೂ ಫ್ರೆಂಚ್ ಇಂಜಿನಿಯರಿಂಗ್ ಬಲಪಡಿಸಿದರೆಂದು ಶಾಸನಗಳಿಂದ ತಿಳಿದುಬರುತ್ತವೆ.[೬೫]

ಜೋಗಿ ಬಂಡಿ ಹತ್ತಿರ ಈಗಲೂ ಚಾಂದ್ ಚಾವಡಿ ಇದೆ. ಇಲ್ಲಿಯ ಸುಧಾರಣೆ ಮಾಡಿದವನು ಇವರ ನಂಬಿಗಸ್ಥ ಕಿಲ್ಲೇದಾರ ಮಹಮ್ಮದ್‌ಖಾನ್ ಬಹಲಮಿ(೧೭೪೬). ಈತನು

---
೬೪. ಎಚ್. ಎಸ್. ಪಾಟೀಲ : ಕೊಪ್ಪಳ – ದರ್ಶನ ಮಾಲಿಕೆ, ಪು–೨೩
೬೫. ಅದೇ.

ಬಹಾದ್ದೂರ ಬಂಡಿಯ ಕೋಟೆಯ ಶಾಸನದಲ್ಲಿ ಉಲ್ಲೇಖಗೊಂಡಿದ್ದು, ೧೭೮೫ರ ಶಾಸನದಲ್ಲಿ ಹೇಳಲಾಗಿದೆ. ಟಿಪ್ಪುಸುಲ್ತಾನ್ ಶ್ರೀರಂಗಪಟ್ಟಣದಲ್ಲಿ ಬ್ರಿಟಿಷರೊಡನೆ ಯುದ್ಧ ಮಾಡುತ್ತ ೧೭೯೯ರಲ್ಲಿ ಮಡಿದನು. ಬ್ರಿಟಿಷರಿಗೂ ಹೈದರಾಬಾದಿನ ನಿಜಾಮರಿಗೂ ಆದ ಒಪ್ಪಂದದಂತೆ ಎರಡನೆಯ ನಿಜಾಮ, ನವಾಬ್ ನಿಜಾಮ ಅಲಿಖಾನ್‌ನಿಗೆ(೧೭೬೧-೧೮೦೩) ಕೊಪ್ಪಳವನ್ನು ಒಪ್ಪಿಸಲಾಯಿತು. ಆಗಿನಿಂದ ೧೭ನೆಯ ಸೆಪ್ಟೆಂಬರ್ ೧೯೪೮ರವರೆಗೆ ಅಂದರೆ ಹೈದರಾಬಾದ್ ನಿಜಾಮರ ಆಡಳಿತದಿಂದ ವಿಮೋಚನೆ ಪಡೆಯುವವರೆಗೆ ಕೊಪ್ಪಳ ನಿಜಾಮರ ಆಡಳಿತದಲ್ಲಿತ್ತು.[೬೬]

## ೨.೬. ಬಳ್ಳಾರಿ ಜಿಲ್ಲೆ

ಬಳ್ಳಾರಿ ಜಿಲ್ಲೆಯು ಹೈದರಾಬಾದ್ ಕರ್ನಾಟಕ ಪ್ರದೇಶದ ಪ್ರಮುಖ ಜಿಲ್ಲೆಗಳಲ್ಲಿ ಒಂದಾಗಿದೆ. ಪ್ರಾಕೃತಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಮತ್ತು ಕಲಾತ್ಮಕವಾಗಿ ಈ ಜಿಲ್ಲೆಯು ಸಂಪದ್ಭರಿತವಾಗಿದೆ. ಕನ್ನಡ ನಾಡಿನ ಚರಿತ್ರೆಯಲ್ಲಿ ಸುವರ್ಣಯುಗವೆಂದು ಕರೆಯಲಾಗುವ ವಿಜಯನಗರ ಕಾಲದ ಆಡಳಿತ ಕೇಂದ್ರವಾದ ಹಂಪಿಯು ಬಳ್ಳಾರಿ ಜಿಲ್ಲೆಯಲ್ಲಿದೆ. ವಿಶ್ವಪಾರಂಪರಿಕ ಕಲಾ ನೆಲೆಗಳಲ್ಲಿ ಗುರುತಿಸಲ್ಪಟ್ಟಿರುವ ಹಂಪಿಯು ಭವ್ಯ, ಕಲಾತ್ಮಕ ದೇಗುಲಗಳಿಂದ, ಮೂರ್ತಿಶಿಲ್ಪಗಳಿಂದ ಕಂಗೊಳಿ-ಸುತ್ತಿರುವುದು ಬಳ್ಳಾರಿ ಜಿಲ್ಲೆಯ ಹಿರಿಮೆಯಾಗಿದೆ. ಸಾಂಪ್ರದಾಯಿಕ ಶಿಲ್ಪಕಲೆಯ ಭವ್ಯಯುಗವನ್ನು ಅನಾವರಣಗೊಳಿಸಿದ ವಿಜಯನಗರ ಸಾಮ್ರಾಟರ ಪ್ರಮುಖ ವಾಸ್ತುಕಲೆ ಮತ್ತು ಶಿಲ್ಪಕಲಾ ಕೃತಿಗಳು ಹಂಪಿಯಲ್ಲಿವೆ. ಇಂತಹ ಸಾಂಸ್ಕೃತಿಕ ಮತ್ತು ಕಲಾಹಿನ್ನೆಲೆ ಹೊಂದಿದ ಬಳ್ಳಾರಿ ಜಿಲ್ಲೆಯ ಸಂಕ್ಷಿಪ್ತ ಮಾಹಿತಿಯನ್ನು ಕೆಳಗಿನಂತೆ ಗಮನಿಸಬಹುದು.

ಬಳ್ಳಾರಿ ಜಿಲ್ಲೆಯು ಭೌಗೋಳಿಕವಾಗಿ ಕರ್ನಾಟಕದ ಉತ್ತರ ಮತ್ತು ದಕ್ಷಿಣದ ಮೇರೆಗಳನ್ನು ಪರಿಗಣಿಸಿದರೆ ಮಧ್ಯ ಭಾಗದಲ್ಲಿದೆ. ಈ ಜಿಲ್ಲೆಯ ಪೂರ್ವಕ್ಕೆ ಆಂಧ್ರಪ್ರದೇಶ, ಪಶ್ಚಿಮಕ್ಕೆ ಧಾರವಾಡ ಜಿಲ್ಲೆ, ಉತ್ತರಕ್ಕೆ ರಾಯಚೂರು ಜಿಲ್ಲೆ ಮತ್ತು ದಕ್ಷಿಣಕ್ಕೆ ಚಿತ್ರದುರ್ಗ ಜಿಲ್ಲೆಗಳಿವೆ. ಬ್ರಿಟಿಷರ ಕಾಲದಲ್ಲಿ ಬಳ್ಳಾರಿ ಜಿಲ್ಲೆಯು ಮದ್ರಾಸ್ ಪ್ರಾಂತದ ಆಡಳಿತಕ್ಕೆ ಒಳಪಟ್ಟ ಒಂದು ದೊಡ್ಡ ಜಿಲ್ಲೆಯಾಗಿತ್ತು. ಅಂದಿನ ದಿನಗಳಲ್ಲಿ ಈ ಜಿಲ್ಲೆಯು ಬಳ್ಳಾರಿ, ಹೊಸಪೇಟೆ, ಸಿರುಗುಪ್ಪ, ಸಂಡೂರು, ಆಲೂರು, ಹರಪನಹಳ್ಳಿ, ಕೂಡ್ಲಿಗಿ, ಹಡಗಲಿ, ಆದೋನಿ, ರಾಯದುರ್ಗ ಮತ್ತು ಮಲ್ಲಿಪುರ ಎಂಬ ತಾಲೂಕುಗಳನ್ನು ಒಳಗೊಂಡಿತ್ತು. ಸ್ವಾತಂತ್ರ್ಯನಂತರ ೧೯೫೩ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯ ಸಂದರ್ಭದಲ್ಲಿ ಆಂಧ್ರಪ್ರದೇಶವು ಪ್ರತ್ಯೇಕ ರಾಜ್ಯವಾಗಿ ರೂಪುಗೊಂಡ ನಂತರ ಬಳ್ಳಾರಿ ಜಿಲ್ಲೆಯ ಆದೋನಿ, ರಾಯದುರ್ಗ, ಆಲೂರು ತಾಲೂಕಿನ ಪ್ರದೇಶಗಳು ಆಂಧ್ರಕ್ಕೆ ಸೇರ್ಪಡೆಗೊಂಡವು ಮತ್ತು ಉಳಿದ ತಾಲೂಕುಗಳೊಂದಿಗೆ ಬಳ್ಳಾರಿ ಜಿಲ್ಲೆಯನ್ನು ಮೈಸೂರು ಪ್ರಾಂತಕ್ಕೆ ಸೇರಿಸಲಾಯಿತು. ಇದರಿಂದಾಗಿ ಕರ್ನಾಟಕ ಏಕೀಕರಣ ಇತಿಹಾಸದಲ್ಲಿ ಮೈಸೂರು ಪ್ರಾಂತಕ್ಕೆ ಸೇರಿದ ಮೊದಲ ಪ್ರದೇಶವೆಂದರೆ ಬಳ್ಳಾರಿ ತಾಲೂಕು ಎಂಬ ಹೆಮ್ಮೆಗೆ ಪಾತ್ರವಾಯಿತು. ಇದೀಗ ಬಳ್ಳಾರಿ ಜಿಲ್ಲೆಯು ಬಳ್ಳಾರಿ, ಸಿರುಗುಪ್ಪ, ಸೊಂಡೂರು, ಹೊಸಪೇಟೆ,

---

೬೬. ಎಚ್. ಎಸ್. ಪಾಟೀಲ : ಕೊಪ್ಪಳ – ದರ್ಶನ ಮಾಲಿಕೆ, ಪು–೨೩

ಕೂಡ್ಲಿಗಿ, ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ, ಹರಪನಹಳ್ಳಿ ಎಂಬ ತಾಲೂಕುಗಳನ್ನು ಒಳಗೊಂಡಿದೆ. ಆಡಳಿತದ ಅನುಕೂಲಕ್ಕಾಗಿ ಬಳ್ಳಾರಿ ಮತ್ತು ಹೊಸಪೇಟೆ ಎಂಬ ಎರಡು ಉಪವಿಭಾಗಗಳನ್ನು ಮಾಡಿಕೊಳ್ಳಲಾಗಿದೆ.

ಬಳ್ಳಾರಿ ಜಿಲ್ಲೆಯ ಪೂರ್ವ ಭಾಗವು ಸಮತಟ್ಟಾದ ಭೂಪ್ರದೇಶವನ್ನು ಒಳಗೊಂಡಿದೆ. ಇದು ಹೆಚ್ಚಿನ ಉಷ್ಣವಲಯವಾಗಿದೆ. ಮಳೆಯ ಪ್ರಮಾಣ ತೀರಾ ಕಡಿಮೆ. ಇಲ್ಲಿ ಅರಣ್ಯಗಳಿಲ್ಲ. ಜಿಲ್ಲೆಯ ಪಶ್ಚಿಮ ಭಾಗವು ಸ್ವಲ್ಪಮಟ್ಟಿನ ಗುಡ್ಡಬೆಟ್ಟಗಳು ಮತ್ತು ಅರಣ್ಯಗಳನ್ನು ಒಳಗೊಂಡಿದೆ. ಇಲ್ಲಿ ಸಾಧಾರಣವೆನ್ನುವಷ್ಟು ಮಳೆ ಬೀಳುವುದು. ಜಿಲ್ಲೆಯ ಪೂರ್ವ ಭಾಗಕ್ಕಿಂತ ತಂಪು ವಾತಾವರಣ ಹೊಂದಿದೆ. ತುಂಗಭದ್ರಾ ನದಿಯು ಜಿಲ್ಲೆಯ ಜೀವನದಿಯಾಗಿದೆ. ಇದನ್ನೊಳಗೊಂಡು ಹಗರಿ, ಚಿಕ್ಕಹಗರಿ, ಚಿನ್ನಹಗರಿ ಎಂಬ ಚಿಕ್ಕ ನದಿಗಳು, ನಾರಿಹಳ್ಳ, ಇಟಗಿಹಳ್ಳ, ಊರಹಳ್ಳ, ತಿಪ್ಪಾಪುರಹಳ್ಳ, ಹಿರೇಹಳ್ಳದಂತಹ ಹಳ್ಳಿಗಳು ಅನೇಕ ಕೆರೆಗಳು ಇವೆ. ಬಳ್ಳಾರಿ ಜಿಲ್ಲೆಯು ಬೆಟ್ಟಗುಡ್ಡಗಳನ್ನು ಒಳಗೊಂಡು ಖನಿಜಸಂಪತ್ತಿನಿಂದ ಸಮೃದ್ಧವಾದ ಪ್ರದೇಶವಾಗಿದೆ. ಇಲ್ಲಿ ಕುಮಾರಸ್ವಾಮಿ ಬೆಟ್ಟ, ರಾಯನದುರ್ಗಬೆಟ್ಟ, ಜಂಬುನಾಥಬೆಟ್ಟ, ಸಂಡೂರುಬೆಟ್ಟ, ಸುಗ್ಗಲಮ್ಮದೇವಿ ಬೆಟ್ಟ, ಮಲ್ಲಪ್ಪನಗುಡ್ಡ, ಕಲ್ಲಹಳ್ಳಿಗುಡ್ಡ, ಉಚ್ಚಂಗಿಬೆಟ್ಟ, ನರಸಿಂಹದೇವರಬೆಟ್ಟ, ಕೂಡ್ಲಿಗಿ ಬೆಟ್ಟ, ಗುಡೇಕೋಟೆ ಬೆಟ್ಟ, ದರೋಜಿ ಬೆಟ್ಟ, ಕಂಪ್ಲಿ ಬೆಟ್ಟ, ಕುರುಗೋಡು ಬೆಟ್ಟ, ಬಳ್ಳಾರಿ ಬೆಟ್ಟ, ಹಂಪಿ ಬೆಟ್ಟ ಮುಂತಾದವುಗಳು ಪ್ರಸಿದ್ಧವಾಗಿವೆ.

ಬಳ್ಳಾರಿ ಜಿಲ್ಲೆಯ ಕಲಾಪರಂಪರೆಯು ಪ್ರಾಗೈತಿಹಾಸ ಕಾಲದಿಂದಲೇ ಬೆಳೆದುಬಂದಿದೆ. ಹಂಪಿ, ಹಳಕುಂಡಿ, ಕಪ್ಪಗಲ್ಲು, ಬೆಳಗಲ್ಲು, ಗಾದಿಗನೂರು, ದರೋಜಿ, ನಿಟ್ಟೂರು, ಬಳ್ಳಾರಿ, ಸೊಂಡೂರು, ಕಾಕುಬಾಳು, ಕುಡತಿನಿ, ಗುಡೇಕೋಟೆ, ಕಲ್ಲಹಳ್ಳಿ, ನರಸಿಂಹದೇವರ ಬೆಟ್ಟ, ಕೂಡ್ಲಿಗಿ, ಕಂಪ್ಲಿ, ಸಿಡೇಗಲ್ಲು, ಸಂಗನಕಲ್ಲು ಮುಂತಾದ ಅನೇಕ ಸ್ಥಳಗಳಲ್ಲಿ ಪ್ರಾಗಿತಿಹಾಸಕಾಲದ ಚಿತ್ರಕಲೆ, ಶಿಲಾಯುಧಗಳು, ಪಾತ್ರೆಗಳು, ಇನ್ನಿತರ ವಸ್ತುಗಳು ಕಂಡುಬಂದಿವೆ.

**ಲಲಿತಕಲೆಗಳು**

ಇತಿಹಾಸ ಕಾಲದಲ್ಲಿಯೂ ಜಿಲ್ಲೆಯಲ್ಲಿ ಕಲಾಪರಂಪರೆ ಸಂಪದ್ಭರಿತವಾಗಿ ರೂಪುಗೊಂಡಿತು. ಮೌರ್ಯ, ಶಾತವಾಹನ, ಪಲ್ಲವ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚೂರ್ಯ, ನೊಳಂಬ, ಹೊಯ್ಸಳ, ಸೇವುಣ, ವಿಜಯನಗರ ಅರಸರು ಈ ಪ್ರದೇಶವನ್ನು ಆಳ್ವಿಕೆ ಮಾಡಿದ್ದಾರೆ. ನಂತರದ ದಿನಗಳಲ್ಲಿ ಗುತ್ತಲವಂಶ, ಮಹಾಬಲಿವಂಶ, ಸಿಂಧವಂಶದ ರಾಜರು, ಪಾಂಡ್ಯವಂಶಸ್ಥರು, ಬಾಗಳಿನಾಯಕರು, ಹಂಡೇ ಪಾಳೆಯಗಾರರು, ಗುಡೇಕೋಟೆ, ಜರ್ಮಲಿ ನಾಯಕರು ಮುಂತಾದ ಚಿಕ್ಕಪುಟ್ಟ ಸಂಸ್ಥಾನಿಕರು, ಪಾಳೆಯಗಾರರು, ಸ್ಥಳೀಯ ನಾಯಕರುಗಳು ಈ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿ ಈ ಪ್ರದೇಶವನ್ನು ಕಲಾನೆಲೆಯಾಗಿ ಮಾಡಿದ್ದಾರೆ. ಜಿಲ್ಲೆಯಲ್ಲಿ ಅನೇಕ ಪ್ರಾಚೀನ ದೇವಾಲಯಗಳು ಮತ್ತು ಶಿಲ್ಪಕಲಾ ಕೃತಿಗಳಿವೆ. ಅವುಗಳಲ್ಲಿ

ಹಂಪಿ ಪ್ರದೇಶದ ದೇವಾಲಯಗಳು ಮತ್ತು ಶಿಲ್ಪಗಳು ಪ್ರಖ್ಯಾತವಾಗಿವೆ. ವಿಜಯನಗರ ಸಾಮ್ರಾಟರ ಕಾಲದಲ್ಲಿ ಹಂಪಿ ಪ್ರದೇಶವು ರಾಜಧಾನಿಯಾಗಿತ್ತು. ಹಾಗಾಗಿ ಅನೇಕ ದೇವಾಲಯಗಳು, ಬೃಹತ್‌ಶಿಲ್ಪಗಳು, ಅರಮನೆಗಳು, ಸ್ನಾನಗೃಹಗಳು, ಅಧಿಕಾರಿಗಳ ನಿವಾಸಗಳು, ಸಾರ್ವಜನಿಕ ಕಟ್ಟಡಗಳು, ಸಾಮಾನ್ಯರ ವಸತಿಗಳು, ರಾಜಬೀದಿಗಳು, ಸಾಲುಮಂಟಪಗಳು, ಕೆರೆ, ಕಾಲುವೆ, ಅಣೆಕಟ್ಟೆಗಳು, ಸೇತುವೆಗಳು, ನೀರಿನ ಕೊಳಗಳು, ಕೋಟೆಕೊತ್ತಲಗಳು, ಸುಂದರವಾದ ಕಲಾತ್ಮಕ ಪಾತ್ರೆ, ನಾಣ್ಯಗಳು, ಯುದ್ಧೋಪಕರಣಗಳು, ನಿತ್ಯೋಪಯೋಗಿ ವಸ್ತುಗಳು ಮುಂತಾದ ಅನೇಕ ಕಲಾತ್ಮಕ ಅವಶೇಷಗಳು ಈ ಪ್ರದೇಶದಲ್ಲಿ ಕಂಡುಬಂದಿವೆ. ಸಾಂಪ್ರದಾಯಿಕ ಶಿಲ್ಪಕಲೆ ದೃಷ್ಟಿಯಿಂದ ಹಂಪಿಯು ಒಂದು ಪ್ರಯೋಗಶಾಲೆಯಾಗಿ ಕಂಡುಬರುವುದು.

ಬಳ್ಳಾರಿ ಜಿಲ್ಲೆಯಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಶಿಲ್ಪಕಲಾ ವಿಭಾಗ ೧೯೯೬ರಲ್ಲಿ ಸ್ಥಾಪನೆಯಾಗಿ ಮೂರು ವರ್ಷಗಳ ಸಾಂಪ್ರದಾಯಿಕ ಶಿಲ್ಪಕಲೆಯಲ್ಲಿ ಶಾಸ್ತ್ರೋಕ್ತವಾದ ಶಿಲ್ಪ ಕೆತ್ತನೆಯ ಮೂರ್ತಿಶಿಲ್ಪ, ರಚನಾ ವಿಧಿವಿಧಾನಗಳನ್ನು ೧೯೯೯ರವರೆಗೆ ನೀಡುತ್ತಾ ಬಂದು, ಅನಂತರ ಡಿಪ್ಲೊಮೋ ತರಗತಿಗೆ ಬದಲಾಗಿ ೫ ವರ್ಷಗಳ ಪದವಿ ಕೋರ್ಸನ್ನಾಗಿ ಪರಿವರ್ತಿಸಿ ವಿಭಾಗವನ್ನು ಬಾದಾಮಿಗೆ ವರ್ಗಾಯಿಸಲಾಯಿತು. ರಾಜ್ಯದ ಯಾವುದೇ ವಿಶ್ವವಿದ್ಯಾಲಯದಲ್ಲಿ ಇಲ್ಲದಂತಹ ರೀತಿಯಲ್ಲಿ ಶಾಸ್ತ್ರೀಯ ಹಾಗೂ ಆಧುನಿಕ ಕಲಾ ತರಬೇತಿಯನ್ನು ಮೈಗೂಡಿಸಿಕೊಂಡು ಬೆಳೆಯುತ್ತಿರುವ ಸಂಸ್ಥೆಯಾಗಿದೆ. ಇಲ್ಲಿ ತರಬೇತಿ ಹೊಂದಿದ ಅನೇಕ ವಿದ್ಯಾರ್ಥಿಗಳು ಸ್ವತಂತ್ರ ಉದ್ಯೋಗ ಮಾಡುತ್ತಾ ಶಿಲ್ಪಕಲಾವಿದರಾಗಿ ರಾಜ್ಯ, ರಾಷ್ಟ್ರಮಟ್ಟದ ಮಾನ್ಯತೆ, ಗೌರವ ಹೊಂದಿದ್ದಾರೆ. ಜಿಲ್ಲೆಯ ಸಂಡೂರಿನ ದಿ. ಶ್ರೀ ಎಂ.ವೈ. ಘೋರ್ಪಡೆಯವರು ಸ್ಥಾಪಿಸಿರುವ ಸಂಡೂರು ಕುಶಲ ಕಲಾಕೇಂದ್ರ ಈ ಜಿಲ್ಲೆಯ ವಿಶೇಷ ಕಲಾ ತರಬೇತಿ ಕೇಂದ್ರಗಳಲ್ಲಿ ಒಂದು. ಗ್ರಾಮೀಣ ಪರಿಸರದ ಮಹಿಳೆಯರಿಗಾಗಿ ವಿಶೇಷವಾಗಿ ಬಂಜಾರ(ಲಂಬಾಣಿ) ಜನಾಂಗದ ಮಹಿಳೆಯರ ಕಸೂತಿ ಕಲೆಯು, ಉಡಿಗೆ - ತೊಡುಗೆ ಮುಂತಾದ ವಸ್ತ್ರಗಳಲ್ಲಿ ಕಸೂತಿಯನ್ನು ವಿನ್ಯಾಸಗೊಳಿಸುವ ವಿಶಿಷ್ಟವಾದ ಕಲಾ ತರಬೇತಿ ಪ್ರದರ್ಶನ ಇಲ್ಲಿ ನಡೆಯುತ್ತಿದೆ. ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿ ರಾಷ್ಟ್ರದಲ್ಲಿಯೇ ವಿನೂತನವಾದ ಶಿಲ್ಪವನವನ್ನು ನಿರ್ಮಿಸಲಾಗಿದೆ. ನೈಸರ್ಗಿಕವಾಗಿ ನೆಲೆ ನಿಂತ ಬಂಡೆಕಲ್ಲುಗಳಲ್ಲಿಯೇ ವಿವಿಧ ಪ್ರಾಣಿ, ಸಸ್ತನಿಗಳ ಚಿತ್ರಗಳನ್ನು ಕಲ್ಪಿಸಿ ಕೆತ್ತಿರುವುದು ವಿಶೇಷ. ಜಿಲ್ಲೆಯಲ್ಲಿ ಕಾಣುವ ಬಹುಪ್ರಧಾನವಾದ ಕಲೆಗಳನ್ನು ಕೆಳಗಿನಂತೆ ಪಟ್ಟಿ ಮಾಡಬಹುದು.[೬೭]

**ಜನಪದ ಕಲೆಗಳು**

ಬಯಲಾಟ, ಡಪ್ಪಿನಾಟ, ಜೋಗತಿಮೇಳ, ಸೂತ್ರದ ಗೊಂಬೆಯಾಟ, ವೇಷಗಾರರಾಟ, ನಂದಿಕೋಲು ಕುಣಿತ, ಗೊಂಬೆ ಕುಣಿತ, ಮೊಹರಂ ಹಾಡು, ಕಿನ್ನರ ಜೋಗತಿಗಳು, ಸನಾದಿ ಮೇಳ, ಸವಾಲ್ ಜಬಾಬ್ ಪದಗಳು, ಕೋಲಾಟದ ಹಾಡು, ಭಜನೆಯ ಹಾಡು, ಡೊಳ್ಳಿನ ಕುಣಿತ, ಸೋಬಾನೆ ಹಾಡು, ಸುಡುಗಾಡು ಸಿದ್ದರು, ದುರುಗಮುರುಗಿಯರು, ಬುರ್ರಕಥಾದವರು,

---

೬೭ ಸಂ. ಕೆ. ರವೀಂದ್ರನಾಥ : ಬಳ್ಳಾರಿ ಜಿಲ್ಲಾ ದರ್ಶನ, ಪು-೧೪೯, ೧೫೦

ಲಂಬಾಣಿಯರ ಹಾಡು, ಗೊಂದಲಿಗರು - ಹೀಗೆ ವೃತ್ತಿ ಮತ್ತು ಹವ್ಯಾಸಿ ಕಲಾವಿದರನ್ನೊಳಗೊಂಡ ಅನೇಕ ಪ್ರಕಾರದ ಕಲೆಗಳು ಕಂಡುಬರುತ್ತವೆ.[೬೮]

ಪ್ರತಿಯೊಬ್ಬ ಮನುಷ್ಯನಿಗೂ ಒಂದಲ್ಲ ಒಂದು ಕಲೆ ಇದ್ದೇ ಇರುತ್ತದೆ. ಅದಕ್ಕೆ ವೇದಿಕೆ ಮುಖ್ಯವಾಗಿ ಬೇಕು. ಈ ಜಿಲ್ಲೆಯಲ್ಲಿ ಸುಮಾರು ಜನ ರಂಗಕಲಾವಿದರು, ರಂಗನಟಿಯರು ಇದ್ದಾರೆ. ಉದಾಹರಣೆಗೆ ಏಣಿಗಿಯ ಕೆ. ಖಾಸೀಂಸಾಹೇಬರು, ಮರಿಯಮ್ಮನಹಳ್ಳಿ ನಾಗರತ್ನ, ಸೋಗಿ ನಾಗರತ್ನ, ಕೂಡ್ಲಿಗಿಯ ಪದ್ಮ ಹುಲಿಗೇಶ್, ದಿಲೀಪ್‌ಕುಮಾರ್, ಎಂ.ಪಿ.ಪ್ರಕಾಶ್, ತೋ.ಮ.ಶಂಕ್ರಯ್ಯ, ಹೆಚ್.ಎಂ.ಕೊಟ್ರಯ್ಯ, ನಾಗರಾಜ ಶೆಟ್ಟಿ, ಬಳ್ಳಾರಿ ಸುಭದ್ರಮ್ಮ ಮನ್ಸೂರ್ - ಇತ್ಯಾದಿ ನೂರಾರು ಜನರು ಕಲೆಗೆ ಶ್ರಮಿಸಿದವರು ಇದ್ದಾರೆ.

ಯಡ್ರಮ್ಮನಹಳ್ಳಿ ಭರಮಪ್ಪನಂತಹ ತೊಗಲುಗೊಂಬೆಯಾಟ ಕಲಾವಿದ, ಕಿಳ್ಳಿಕ್ಯಾತರು ಇದ್ದಾರೆ. ನಾಟಕ ಕಲಾವಿದರಷ್ಟೇ ಅಲ್ಲದೆ ಅನೇಕ ಬರಹಗಾರರು ಅನೇಕ ಸಾಹಿತ್ಯ ಕೃತಿಗಳನ್ನು ರಚಿಸಿ ಬಳ್ಳಾರಿ ಜಿಲ್ಲೆ ಒಂದು ಮಾದರಿ ಜಿಲ್ಲೆ ಎಂದು ಹೇಳುವಲ್ಲಿ ಯಶಸ್ವಿಯಾಗಿದೆ. ಸ್ವಾತಂತ್ರ್ಯ ಹೋರಾಟಗಾರರು ಜೋಳದರಾಶಿ ದೊಡ್ಡನಗೌಡ, ಉತ್ತಂಗಿ ಚನ್ನಪ್ಪ, ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿ, ಕುಂ.ವೀರಭದ್ರಪ್ಪ, ಎಂ.ಪಿ.ಪ್ರಕಾಶ್, ಹುರುಕಡ್ಲಿ ಶಿವಕುಮಾರ, ಮೇಟಿ ಕೊಟ್ರಪ್ಪ, ಗುರುಮೂರ್ತಿ ಪೆಂಡಕೂರರಂತಹ ಬರಹಗಾರರ ಜೊತೆಗೆ ಸಂಶೋಧಕ ಡಾ.ಕೆ. ರವೀಂದ್ರನಾಥ ಬಳ್ಳಾರಿ ಜಿಲ್ಲೆಯವರೇ. ಈಗ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಹಸ್ತಪ್ರತಿಶಾಸ್ತ್ರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ. ಇನ್ನೂ ಹೆಚ್ಚಿನ ರೀತಿಯಲ್ಲಿ ಸಾಹಿತಿಗಳು, ಕಲಾವಿದರು, ಸಂಗೀತಗಾರರು, ಶಿಲ್ಪಿಗಳು ಇದ್ದಾರೆ. ಇಲ್ಲಿ ಪೂರ್ಣ ಪ್ರಮಾಣದ ವಿವರ ಒದಗಿಸಿಲ್ಲ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಅಪೂರ್ವ ಚಿತ್ರಕಲಾವಿದ ಕೆ.ಕೆ.ಮಕಾಳಿ, ಸಂಡೂರಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಎ.ವೃಷಭೇಂದ್ರಾಚಾರ್, ಚಿಗಟೇರಿಯ ಚಿತ್ರಕಲಾವಿದ ಹೆಚ್.ಮಾನಪ್ಪ ಮತ್ತು ಕನ್ನಡ ವಿಶ್ವವಿದ್ಯಾಲಯದಲ್ಲಿ ದೃಶ್ಯಕಲಾ ಮತ್ತು ಶಿಲ್ಪಕಲಾ ವಿಭಾಗದಲ್ಲಿ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿರುವ ಡಾ. ಶಿವಾನಂದ ಬಂಟನೂರು, ಡಾ. ಕೃಷ್ಣೇಗೌಡ, ಡಾ. ಮೋಹನ ಪಂಚಾಳ, ಶಿಲ್ಪಿಗಳಾದ ಉದಯಕುಮಾರ, ಮಲ್ಲಿಕಾರ್ಜುನ ಮಹಾಮುನಿ, ವಿಭಾಗದ ವಿದ್ಯಾರ್ಥಿಗಳಿಗೆ ಚಿತ್ರ-ಶಿಲ್ಪಕಲೆಗಳ ತರಬೇತಿ ನೀಡುತ್ತಿದ್ದಾರೆ ಹಾಗೂ ಅನೇಕ ಚಿತ್ರ ಹಾಗೂ ಶಿಲ್ಪ ಶಿಬಿರಗಳನ್ನು ನಡೆಸಿಕೊಂಡು ಬಂದಿದ್ದಾರೆ.

ಸಂಡೂರಿನ ನಾಡೋಜ ವಿ.ಟಿ. ಕಾಳೆಯವರು ಎಂ.ವೈ. ಘೋರ್ಪಡೆಯವರ ಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿ, ಗದುಗಿನ ವಿಜಯ ಕಲಾಮಂದಿರದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದಾರೆ. ಎಂ.ಇ. ಗುರು ಬಳ್ಳಾರಿ ಜಿಲ್ಲೆಯವರು ಸುಪ್ರಸಿದ್ಧ ರೇಖಾಚಿತ್ರ ಕಲಾವಿದರು. ಟಿ. ವಿರುಪಾಕ್ಷಪ್ಪ, ಹೂವಿನಹಡಗಲಿಯ ಮೊದಲನೇ ಕಲಾ ಶಿಕ್ಷಕರು. ಇವರ ವಿದ್ಯಾರ್ಥಿಗಳು

೬೮. ಸಂ. ಕೆ. ರವೀಂದ್ರನಾಥ : ಬಳ್ಳಾರಿ ಜಿಲ್ಲಾ ದರ್ಶನ, ಪು–೧೪೧

ಅನೇಕ ಜನ ಕಲಾವಿದರಾಗಿದ್ದಾರೆ. ಮರಿಯಪ್ಪ ಗುಳೆಜ್ಜೆ ಇವರು ಚಿತ್ರಕಲೆಯಲ್ಲಿ ಪದವಿ ಪಡೆದು ಕಲಾ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಬೆಂಗಳೂರಿನಲ್ಲಿ ನೆಲೆಸಿ, ಮಕ್ಕಳ ಚಿತ್ರಕಲಾ ಅಕಾಡೆಮಿ ನಡೆಸುತ್ತಿದ್ದಾರೆ. ಬಿ. ಕೊಂಡಾಚಾರ್ಯ ಅವರು ಭಾರತೀಯ ಚಿತ್ರಕಲೆಯಲ್ಲಿ ಅಮೂರ್ತವಾದ ಭಾವನೆಗಳಿಗೂ ಮೂರ್ತ ಸ್ವರೂಪಗಳಿಗೂ, ರಸಭಾವಗಳಿಗೂ, ಆರಾಧ್ಯ ದೈವಗಳಿಗೂ, ಅಕ್ಷರಗಳಿಗೂ, ಶ್ಲೋಕಗಳಿಗು, ಚಿತ್ರ ಬಿಡಿಸಿದವರು. ಕರ್ನಾಟಕದಲ್ಲೇ ಆ ಕುರಿತ ವಿಶೇಷವಾಗಿ ಚಿತ್ರಿಸಿದವರು. ಬಳ್ಳಾರಿಯ ಶ್ರೀ ಕೊಂಡಾಚಾರ್ಯ ಅವರು ಮಾತ್ರ ಎಂದೆನಿಸುತ್ತದೆ. ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೇರಿದ ಈ ಜಿಲ್ಲೆಗಳು ಸದಾ ಬರದಿಂದ ತತ್ತರಿಸುತ್ತಿದ್ದರೂ ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ನಿರಂತರವಾಗಿ ಹಸಿರು ನೀಡುತ್ತವೆ.

**ಧಾರ್ಮಿಕ ಕೇಂದ್ರಗಳು**

ಜಿಲ್ಲೆಯ ಕೊಟ್ಟೂರು ಗುರುಬಸವಸ್ವಾಮಿ ಮಠವು ಅತ್ಯಂತ ಪುರಾತನ ಮಠಗಳಲ್ಲೊಂದಾಗಿದೆ. ಗುರುಬಸವ ರಾಜನು ಜಂಗಮನಾಗಿ ಭಿಕ್ಷಾಟನೆ ಮಾಡುತ್ತ, ಭಕ್ತರ ಕಷ್ಟಗಳನ್ನು ನಿವಾರಿಸಿ, ಅನೇಕ ಪವಾಡಗಳನ್ನು ಮಾಡಿದ ಪವಾಡಪುರುಷನೆಂದು ಪ್ರಸಿದ್ಧಿ ಮೆರೆದಿದ್ದಾನೆ. ಕೊಟ್ಟೂರಿನಲ್ಲಿ ಗಚ್ಚಿನಮಠ, ಮೂರ್ಕಲ್ ಮಠ, ಕೊಟ್ಟೂರೇಶನ ಮಠಗಳಿವೆ. ಪ್ರತಿ ವರ್ಷವೂ ಅದ್ದೂರಿ ಜಾತ್ರೆ, ಕಾರ್ತಿಕ ಉತ್ಸವವು ನೆರವೇರುವುದು. ಬಳ್ಳಾರಿ ಅಲ್ಲಿಪುರದಲ್ಲಿ ಮಹಾದೇವ ತಾತನವರ ಮಠ ಇದ್ದು, ಭಕ್ತರ ಅಭೀಷ್ಟೆ ಈಡೇರಿಸುವಂತಹ ಕ್ಷೇತ್ರವಾಗಿದೆ. ಇದೇ ತಾತನವರು ಜಿಲ್ಲೆಯ ಮೋರಗೇರಿ-ಹೊಳಗುಂದಿ ನಡುವೆ ಇನ್ನೊಂದು ಮಠವನ್ನು ನಿರ್ಮಿಸಿದ್ದಾರೆ. ಇಲ್ಲಿಯೂ ತಾತನವರ ಭಕ್ತರು ಸೇವೆ ಮಾಡುತ್ತಿದ್ದಾರೆ. ಶ್ರೀ ಸಂಗನಬಸವ ಮಹಾಸ್ವಾಮಿಗಳು ಹೊಸಪೇಟೆಯ ಕೊಟ್ಟೂರುಸ್ವಾಮಿ ಮಠ ಧಾರ್ಮಿಕ ಹಾಗೂ ಅನ್ನ ದಾಸೋಹ ನೀಡಿ ವಿದ್ಯಾರ್ಥಿಗಳಿಗೆ ಶಿಕ್ಷಣದ ದಾಸೋಹಿ ಎನಿಸಿಕೊಂಡಿದ್ದಾರೆ. ಹಗರಿಬೊಮ್ಮನಹಳ್ಳಿಯಲ್ಲಿ ಮತ್ತು ಹೂವಿನಹಡಗಲಿ ತಾಲೂಕಿನ ಹಿರೇಹಡಗಲಿ - ಕೊಳಚಿಯಲ್ಲಿ ಶ್ರೀ ಹಾಲಸ್ವಾಮಿ ಮಠಗಳು ಧಾರ್ಮಿಕ ಕ್ರಿಯೆ ವಿಧಾನವನ್ನು ಭಕ್ತ ಜನರಿಗೆ ನೀಡುತ್ತ, ಶೈಕ್ಷಣಿಕ ಕ್ಷೇತ್ರಕ್ಕೂ ಅಪಾರ ಕೊಡುಗೆ ನೀಡಿದ್ದಾರೆ. ಹೂವಿನಹಡಗಲಿಯ ಶ್ರೀ ಗವಿಸಿದ್ಧೇಶ್ವರ ಮಠವು, ಧಾರ್ಮಿಕ ಪುರಾಣ ಪ್ರವಚನ, ಶಿವಾನುಭವ ಗೋಷ್ಠಿ ನಡೆಸುವ ಮೂಲಕ ಭಕ್ತರಲ್ಲಿ ಜ್ಞಾನವನ್ನು ಉಣಬಡಿಸುತ್ತಿದ್ದಾರೆ. ಲಿಂಗನಾಯ್ಕನಹಳ್ಳಿ ಶ್ರೀಮಠವು ಶೈಕ್ಷಣಿಕ ಧಾರ್ಮಿಕ ಕೇಂದ್ರವಾಗಿ ಚಟುವಟಿಕೆಗಳನ್ನು ನಡೆಸುತ್ತಾ ಬಂದಿದೆ. ಅಡವಿಮಲ್ಲನಕೇರಿ ಮಠ ಮತ್ತು ಪುರದ ಮಠಗಳು ಪ್ರಸಿದ್ಧಿಯನ್ನು ಪಡೆದಿವೆ. ಹೂವಿನಹಡಗಲಿಯಲ್ಲಿ ರಾಜಭಾಗ್ ಸವಾರ್ ಉರುಸು ಹಿಂದೂ-ಮುಸ್ಲಿಂ ಭಾವೈಕ್ಯತೆಯ ಪ್ರತೀಕವಾಗಿ ನಡೆಯುತ್ತಿದೆ. ಗದ್ದಿಕೇರಿ - ನಂದಿಪುರದ ಶ್ರೀ ದೊಡ್ಡ ಬಸವೇಶ್ವರನ ಮಠ ಅತ್ಯಂತ ವಿಶೇಷವಾದ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿದೆ. ಪೂಜ್ಯಶ್ರೀಗಳ ನೇತೃತ್ವದಲ್ಲಿ ಸಾಮೂಹಿಕ ವಿವಾಹ, ದೀಕ್ಷೆ, ಭಜನೆ, ಕೀರ್ತನೆ ಮುಂತಾದ ಧಾರ್ಮಿಕ ಕಾರ್ಯಕ್ರಮಗಳು ಪ್ರತಿವರ್ಷ ನೆರವೇರುತ್ತಿದೆ.

**ಪ್ರಾಚೀನ ದೇವಾಲಯಗಳು**

ಕುರುವತ್ತಿ ಬಸವೇಶ್ವರನ ದೇವಾಲಯದ ವಾಸ್ತುಶಿಲ್ಪ ಅತ್ಯಂತ ಸುಂದರವೂ ಸೂಕ್ಷ್ಮ ಕುಸುರಿಯಿಂದ ಕೂಡಿದೆ. ಕಲ್ಯಾಣ ಚಾಲುಕ್ಯರ ಕಾಲದ ವಾಸ್ತು ದೇವಾಲಯಗಳು ಬಹಳ ಕಂಡುಬರುತ್ತವೆ. ಬಾಗಳಿ ಕಲ್ಲೇಶ್ವರ ದೇವಾಲಯ, ಮಾಗಳದ ನರಸಿಂಹ ದೇವಾಲಯ ಮೈಲಾರದ ಮೈಲಾರಲಿಂಗೇಶ್ವರನ ದೇವಾಲಯ-ಮಹಾದ್ವಾರ, ಗರ್ಭಗುಡಿ ಹಾಗೂ ಪೂಜಾಮೂರ್ತಿ ಬೃಹದಾಕಾರದಲ್ಲಿದೆ. ಹೊಳಲಿನ ಅನಂತಶಯನ ಪ್ರಾಚೀನ ದೇವಾಲಯ ಅತ್ಯಂತ ಬೃಹದಾಕಾರದ್ದು ಮತ್ತು ಅನಂತಶಯನಮೂರ್ತಿ, ಮಲಗಿರುವ ದೃಶ್ಯ, ಆದಿಶೇಷ, ಎಲ್ಲವೂ ಶಿಲ್ಪಿಯ ಜಾಣ್ಮೆಯನ್ನು ತೋರಿಸುವಂತಿದೆ. ಹೂವಿನಹಡಗಲಿಯ ಕೇಶವಸ್ವಾಮಿ ದೇವಸ್ಥಾನ, ಕಲ್ಲೇಶ್ವರ ದೇವಸ್ಥಾನ, ಸೂರ್ಯನ ದೇವಸ್ಥಾನ, ಬೆಣ್ಣೆಕೃಷ್ಣನ ದೇವಸ್ಥಾನ, ಸರಸ್ವತಿ ದೇವಸ್ಥಾನಗಳು ಕಲ್ಯಾಣ ಚಾಲುಕ್ಯರ ಕೊಡುಗೆಗಳಾಗಿವೆ(ಕ್ರಿ.ಶ. ೧೦೭೬-೧೧೨೬). ೬ನೇ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಅನೇಕ ಪ್ರಾಚೀನ ವಾಸ್ತುಶಿಲ್ಪ ದೇವಾಲಯಗಳು ನಿರ್ಮಾಣಗೊಂಡಿವೆ. ಬಳ್ಳಾರಿ ಜಿಲ್ಲೆಯು ಸಾಹಿತ್ಯ; ಶಿಲ್ಪ, ವಾಸ್ತುಶಿಲ್ಪ, ಚಿತ್ರ ಜನಪದ ಕಲೆ ಹೀಗೆ ಅನೇಕ ಪ್ರಕಾರದ ಸಾಂಸ್ಕೃತಿಕ ಸಮುಚ್ಚಯವನ್ನು ಕಟ್ಟಿಕೊಟ್ಟಿದೆ.

**ಶಾಸನಗಳಲ್ಲಿ ಉಲ್ಲೇಖಿತ ಹೈದರಾಬಾದ್ ಕರ್ನಾಟಕ ಪ್ರದೇಶದ ಸಾಂಪ್ರದಾಯಿಕ ಶಿಲ್ಪಕಲಾವಿದರು**

**'ಮಾರೋಜ'**(ಕ್ರಿ.ಶ. ೧೦೬೨): ಹೂವಿನಹಡಗಲಿ ಗ್ರಾಮದ ಪಾಂಡುರಂಗ ದೇವಾಲಯದ ಬಳಿಯ ಶಾಸನವು ಈತನು ಶ್ರೀ ಕಲಿದೇವಸ್ವಾಮಿ ದೇವರ ದೇಗುಲಕ್ಕೆ ಕೆಸರುಕಲ್ಲು ಹಾಕಿದುದಾಗಿ ಹೇಳುತ್ತದೆ. ಅಂದರೆ ಈತನು ಗುಡಿಯ ನಿರ್ಮಾಣಕಾರ್ಯ ಪ್ರಾರಂಭಿಸಿದನು. ಶಾಸನವು ಈತನನ್ನು 'ಕಲ್ಲುಕುಟಿಗ' ಎಂದು ಸಂಬೋಧಿಸುತ್ತದೆ. ಇವನ ಜೊತೆಯಲ್ಲಿ ಗುಡಿಯ ನಿರ್ಮಾಣ ಕಾರ್ಯದಲ್ಲಿ ಕೆಲವು ಕಮ್ಮಾರರೂ ದುಡಿಯುತ್ತಾರೆ. ಕೆಸರುಗಲ್ಲಿಕ್ಕಿದ ಮಾರೋಜನಿಗೆ ಭೂಮಿದಾನ ಬಿಡಲಾಗಿದೆ. ಉಳಿದ ಶಿಲ್ಪಗಳಿಗೆ ತೆರಿಗೆಯಿಂದ ವಿನಾಯಿತಿ ಮಾಡಲಾಗಿದೆ.[೧೯]

**'ಕೇಸವಯ್ಯ'**(ಕ್ರಿ.ಶ. **೧೧ನೇ ಶತಮಾನ**): ಬಳ್ಳಾರಿ ಜಿಲ್ಲೆಯ ಬಾಗಳಿ ಗ್ರಾಮದ ಕಲ್ಲೇಶ್ವರ ಗುಡಿಯ ಗರ್ಭಗೃಹದ ದಕ್ಷಿಣದಲ್ಲಿರುವ ೨ ಸಾಲುಗಳ ಪುಟ್ಟ ಶಾಸನ ಹೇಳುವ ಪ್ರಕಾರ ಶಿಲ್ಪಿ ಕೇಸವಯ್ಯನು ಈ ಗುಡಿಯ ಪಶ್ಚಿಮ ಕಡೆಯ ಭಾಗವನು ಕಟ್ಟಿರುತ್ತಾನೆ. 'ಲಟ್ಟಣದಂಡ' ಎಂದರೇನು ಸ್ಪಷ್ಟವಾಗುವುದಿಲ್ಲ. 'ಶ್ರೀಮತ್ತಕಹಿಸ' ಎಂಬುದು ಬಹಶಃ ಈತನ ಅದಾವುದೋ ಊರಿನ ಹೆಸರು.[೨೦]

**'ಶ್ರೀಕರನಾಗ'**(ಕ್ರಿ.ಶ. **೧೨ನೇ ಶತಮಾನ**): ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಹೊಳಲು ಗ್ರಾಮದ ಅಮೃತೇಶ್ವರ ಗುಡಿಯ ನವರಂಗ ಮಂಟಪದ ಕಂಬದ ಮೇಲಿನ ಶಾಸನವು ಈತನನ್ನು ಬಹಳವಾಗಿ ಮೆಚ್ಚಿದೆ. ಇದೇ ಗುಡಿಯ ಇವೇ ನಾಲ್ಕು ಕಂಬಗಳು ಈತನ ಕೆಲಸ. ಶಾಸನವು ***"ಸಮಸ್ತ ಶಿವಪಾದ ಶೇಖರ, ಕಲಿಯುಗ ವಿಶ್ವಕರ್ಮ, ಚೌಷಷ್ಠಿ ಕಲಾವಿದ, ಪ್ರವೀಣ,***

---

೧೯. ಡಾ. ಕೆ. ಎಸ್. ಕುಮಾರಸ್ವಾಮಿ : ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು–೨೭
೨೦. ಅದೇ.

**ಪ್ರಸಾದ ವಿಶಾರದ; ನಾಗರ, ಕಳಿಂಗ, ಆಂದ್ರ, ದ್ರಾವಿಡ, ವೇಸರ, ಚತುರ್ಜಾತಿ ಪ್ರಸಾದ ನಿರ್ಮಿತ ಸೂತ್ರಧಾರಿ"** ಎಂದು ಹೊಗಳಿವೆ. **'ಪದ್ಮಜನಚ್ಛಾತ್ರ'** ಎಂದಿದೆ. ಅಂದರೆ ಈತ ೬೪ ಕಲಾವಿದ್ಯೆಗಳಲ್ಲಿ ನಿಷ್ಣಾತ. ಅನೇಕ ದೇವಸ್ಥಾನಗಳನ್ನು ನಿರ್ಮಾಣ ಮಾಡಿದ. ಬೇರೆ ಬೇರೆ ಆಂಧ್ರ, ತಮಿಳುನಾಡು, ಕೇರಳ, ಉತ್ತರ ಭಾರತ ಶೈಲಿಯ ಗುಡಿ ನಿರ್ಮಾಣವನ್ನು ಬಲ್ಲವನಾಗಿದ್ದ ಹಾಗೂ ಈತ ಪದ್ಮಾಜನ ಎಂಬ ಸಂಘದ ಸದಸ್ಯ ಅಥವಾ ಪದ್ಮೋಜ ಎಂಬ ಶಿಲ್ಪಿಯ ಶಿಷ್ಯ. ಈತನು ಬೋಕೋಜನ ಸುಪುತ್ರ ಹಾಗೂ ಬಮ್ಮೋಜನ ಮೊಮ್ಮಗ.[೭೧]

**'ಬಡಗಿ ಲಿಂಗೋಜನು'**: ಕ್ರಿ.ಶ. ೧೪೮೦/೧೫೧೫ರಲ್ಲಿ ಜಗಳೂರು ತಾಲೂಕಿನ ನಿಬಗೂರಿನಲ್ಲಿ ಆಂಜನೇಯ ಗುಡಿಯನ್ನು ಕಟ್ಟುತ್ತಾನೆ. ಗೌಡನು ಇವನಿಗೆ "ಅರವತ್ತು ಒಕ್ಕಲು ಮಾನ್ಯ"ವನ್ನು ಕೊಡುತ್ತಾನೆ ಎಂದು ಉಲ್ಲೇಖಗೊಂಡಿದೆ.[೭೨]

**'ಬಸವ'**: ಬಹುಶಃ ಈತನ ಕಾಲ ಸು. ೧೫೪೫. ಕಲ್ಲುಕುಟಿಗ ಎಂದು ಸಂಬೋಧಿಸಲಾಗಿದೆ. ತಾನು ಮಂಟಪವನ್ನು ಮಾಡಿರುವುದಾಗಿ ಹೇಳಿಕೊಂಡಿರುತ್ತಾನೆ. ಹಂಪಿಯ ಮತಂಗ ಪರ್ವತದ ವಾಯವ್ಯದಲ್ಲಿರುವ, ವಿರೂಪಾಕ್ಷ ಪೇಟೆಯ ಕೊನೆಯಲ್ಲಿರುವ ನಂದಿ ಮಂಟಪವೇ(ಅಲ್ಲೇ ಈ ಶಾಸನವೂ ಲಭ್ಯವಿದೆ) ಈತನ ಕೃತಿ ಆಗಿದೆ.[೭೩]

**'ರಾಜ'(ಕ್ರಿ.ಶ. ೧೬೨೦)**: ರಾಯಚೂರು ನಗರದಲ್ಲಿರುವ ಕೋಟೆಯೊಳಗಿನ ಜಾಮಿ ಮಸೀದಿಯಲ್ಲಿರುವ ಪರ್ಷಿಯನ್ ಭಾಷೆಯಲ್ಲಿರುವ ಶಾಸನ ಈತನನ್ನು ಹೆಸರಿಸುತ್ತದೆ. ಎರಡನೇ ಇಬ್ರಾಹಿಂ ಆದಿಲ್‌ಷಾ ಆಳ್ವಿಕೆಯಲ್ಲಿ ರಾಜ ಎಂಬ ಶಿಲ್ಪಿಯು ಈ ಶಾಸನವಿರುವ ಅದೇ ಜಾಮಿ ಮಸೀದಿಯ ನಿರ್ಮಾಣ ಕಾರ್ಯ ಮಾಡುತ್ತಾನೆ. ಇಬ್ರಾಹಿಮ್ಮನ ಸೇವಕನಾದ ಮಲ್ಲಿಕ್ ಅಬ್ದುಲ್ ಮಹಮ್ಮದನು ಇದನ್ನು ಕಟ್ಟಿಸುತ್ತಾನೆ.[೭೪]

**'ಯಲ್ಲೋಜ'(ಕ್ರಿ.ಶ. ೧೬೫೭)**: ಈತನ ಉಲ್ಲೇಖವಿರುವ ರಾಯಚೂರು ತಾಲೂಕಿನ ಗುಂಜಹಳ್ಳಿಯ ಕೇಶವಗುಡಿಯ ಗೋಡೆಯಲ್ಲಿರುವ ಶಾಸನವು ಇವನು ಆದಿಕೇಶವ ಗುಡಿಯನ್ನು ನಿರ್ಮಾಣ ಮಾಡಿದ ಶಿಲ್ಪಿ ಎಂದು ಹೇಳುತ್ತದೆ. ಅದು ಮೊದಲ ಮರದ ಗುಡಿಯಾಗಿದ್ದು, ಅದನ್ನು ಬಿಚ್ಚಿ ತೆಗೆದು ಈಗ ಇರುವ ಕಲ್ಲಿನ ಗುಡಿಯನ್ನು ಕಟ್ಟಿದುದಾಗಿ ತಿಳಿಯುತ್ತದೆ. ಬಹುಶಃ ಈತ ಅದೇ ಗ್ರಾಮದವನಿರಬಹುದು. ಈತನ ವೃತ್ತಿಯಲ್ಲಿ ಬಡಗಿ. ಬಹುಶಃ 'ಕಾಸೆವೆಂಕಟ್ಟಿಯ' ಎನ್ನುವವನ ಜೊತೆಯಲ್ಲಿ ಈ ಗುಡಿಗಾಗಿ ತುಂಬ ಶ್ರಮವಹಿಸಿ ದುಡಿಯುತ್ತಾನೆ. ಇವನದೇ ಆದ ಕೆಲಸ ಶಿಲ್ಪಿಗಳ ಒಂದು ತಂಡವೇ ಇತ್ತು. ಈ ತಂಡ ಗುಡಿಯ ನಿರ್ಮಾಣದಲ್ಲಿ ವಹಿಸಿದ ಕಷ್ಟವನ್ನು ನೋಡಿದ ಜನರು ಚಕ್ಕುಬಂದಿ ಹಾಕಿ ಎರೆ ಹೊಲವನ್ನು ಮಾನ್ಯ ಮಾಡಿಕೊಡುತ್ತಾರೆ.[೭೫]

---

೭೧. ಡಾ. ಕೆ. ಎಸ್. ಕುಮಾರಸ್ವಾಮಿ : ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು-೩೨, ೩೩

೭೨. ಅದೇ. ಪು-೩೬

೭೩. ಅದೇ.

೭೪. ಅದೇ.

೭೫. ಅದೇ., ಪು-೩೬, ೩೭

**'ರುದ್ರೋಲಿಂಗೋಜ'(ಕ್ರಿಶ. ೧೬೪೯)**: ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ಗ್ರಾಮದ ನದಿತೀರದ ಆಂಜನೇಯ ಗುಡಿ ಶಾಸನ ಹೇಳುವ ಪ್ರಕಾರ ಹೊಳೆಯ ಕಡೆಯ ಬಾಗಿಲ ಹತ್ತಿರದ 'ಬುರುಜ'ನ್ನು ರುದ್ರೋಜ ಕಟ್ಟಿಸಿದ ಮತ್ತು ಇದನ್ನು ಸಾಹೇಬರ ಬುರುಜು ಎಂದು ಹೆಸರಿಸಿದೆ. ಬಹುಶಃ ಈತನ ಹೆಸರಿನ ಮೇಲೆ 'ಓಜ' ಎಂಬ ಉಪನಾಮ ಹತ್ತಿರುವುದರಿಂದ ಈತ ತಾನೇ ಆ ಬುರುಜನ್ನು ಕೈಮುಟ್ಟಿ ಕಟ್ಟಿದ ಶಿಲ್ಪಿಯೂ ಆಗಿರುತ್ತಾನೆ.[೭೬]

**'ಬಸವಯ್ಯ'**: ಕ್ರಿಶ. ೧೬೧ರ ಕಾಲದ ಈತನ ಕಾರ್ಯಕ್ಷೇತ್ರ ಜಗಳೂರು ತಾಲೂಕು ಸಿದ್ಧವ್ವನಹಳ್ಳಿಯ ಆಂಜನೇಯ ದೇವಸ್ಥಾನವನ್ನು ಕಟ್ಟಿಸಿದ. ಅಯ್ಯಗಾರ್‍ರು ಇವನಿಗೆ '೧ ಗಳದ' ಹೊಲವನ್ನು ಮಾನ್ಯ ಮಾಡುತ್ತಾರೆ. ಶಾಸನವು ಈ ಬಸವಯ್ಯನನ್ನು **'ಪಂಚಾಲಕುಲ'**ದವನು ಎಂದು ಗುರುತಿಸುತ್ತದೆ.[೭೭]

**'ರಾಯಣ್ಣ'(ಕ್ರಿಶ. ೧೭ನೇ ಶತಮಾನ)**: ಬಳ್ಳಾರಿ ಜಿಲ್ಲೆಯ ಕಂಚುಗಾರಬಳಗಲು ಗ್ರಾಮದಲ್ಲಿ ರಾಯಣ್ಣನು ಗುಡಿಯನ್ನು ಕಟ್ಟಿದುದಾಗಿ ಹೇಳಿಕೊಂಡಿರುತ್ತಾನೆ. ಈತನು ರಾಮಣ್ಣನ ಮಗ ಹಾಗೂ ತನ್ನನ್ನು ಕಲ್ಲುಕುಟಿಗ ಎಂದು ಹೇಳಿಕೊಂಡಿರುತ್ತಾನೆ. ಈತ ಕಟ್ಟಿದ ದೇವಸ್ಥಾನ ಯಾವುದೆಂದು ಗೊತ್ತಾಗುವುದಿಲ್ಲ. ಈತನಿಗೆ ಭೂಮಿದಾನ ಲಭ್ಯವಾಗಿದೆ.[೭೮]

**'ಹಂಪಾಚಾರಿ–ಚನ್ನಚಾರಿ–ಧರ್ಮಾಂಬುಧಿ'(ಕ್ರಿ.ಶ. ೧೦೪೫)**: ಈ ಮೂವರೂ ಕ್ರಮವಾಗಿ ಅಜ್ಜ, ಮಗ, ಮತ್ತು ಮೊಮ್ಮಗ. ಇವರು ಬಳ್ಳಾರಿ ಜಿಲ್ಲೆಯ ಕುಮಾರಸ್ವಾಮಿ ಬೆಟ್ಟದ ಕುಮಾರಸ್ವಾಮಿ ಗುಡಿಯ ಲಿಂಗದ ಪೀಠದ ಶಾಸನದಲ್ಲಿ ನಮೂದಿತರಾಗಿದ್ದಾರೆ. ಇವರು ಇಲ್ಲಿ ನವಿಲನ್ನು ಪ್ರತಿಷ್ಠೆ ಮಾಡಿರುವುದಾಗಿ ಹೇಳಲಾಗಿದೆ. ಇವರನ್ನು ಅಕ್ಕಸಾಲಿಗಳು ಎಂದು ಕರೆದಿರುವುದರಿಂದ ನವಿಲನ್ನು ಪ್ರತಿಷ್ಠೆ ಮಾಡಿರುವ ಇವರು ಇದನ್ನು ರೂಪಿಸಿದವರು ಎಂದರೆ ತಪ್ಪಾಗಲಾರದು.[೭೯]

**'ಅಯ್ಯಣ್ಣ'(ಕ್ರಿ.ಶ. ೧೨ನೇ ಶತಮಾನ)**: ಬಳ್ಳಾರಿ ಜಿಲ್ಲೆಯ ಬಾಗಳಿ ಗ್ರಾಮ ಕಲ್ಲೇಶ್ವರ ಗುಡಿ ನೈಋತ್ಯ ದಿಕ್ಕಿನ ಅಧಿಷ್ಠಾನದಲ್ಲಿ ಈತನ ಉಲ್ಲೇಖ ಉಂಟು. ಈ ಶಾಸನದಲ್ಲಿ ಈತನನ್ನು ಶಿಲ್ಪಿ ಎಂದು ಹೇಳಿಲ್ಲ. ಶಿಲ್ಪಿ ಎಂದೆನ್ನಲು ಸೂಕ್ತ ಸುಳಿವು ಸಿಗುತ್ತಿಲ್ಲ. ಆದರೆ ಸಂಪುಟದ ಸಂಪಾದಕರು ಶಿಲ್ಪಿ ಅಯ್ಯಣ್ಣನ ಹೊಗಳಿಕೆ ಇದೆ ಎಂದು ಹೇಳಿರುತ್ತಾರೆ. ಆದರೆ ಅಲ್ಲೇ ಇರುವ ಇನ್ನೊಂದು ಶಾಸನದಲ್ಲಿ 'ಸರಸ್ವತಿ ವಿಗ್ರಹ ಮಾಡಿಸಿದ' ಎಂದಿರುವುದರಿಂದ ಈ ಅಯ್ಯಣ್ಣನೇ ಆ ವಿಗ್ರಹದ ಶಿಲ್ಪಿ ಎಂದು ಮಾತ್ರ ಊಹಿಸಬಹುದು. ಅಲ್ಲೇ ಬರುವ ಸು. ೮ ಸಣ್ಣ ಶಾಸನಗಳನ್ನು ಕೊರೆದವನು ಈ ಅಯ್ಯಣನಿರಬಹುದು.[೮೦]

---

೭೬. ಡಾ. ಕೆ. ಎಸ್. ಕುಮಾರಸ್ವಾಮಿ : ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು–೩೭
೭೭. ಅದೇ.
೭೮. ಅದೇ.
೭೯. ಅದೇ., ಪು–೪೯
೮೦. ಅದೇ., ಪು–೮೫

**'ಮುಚ್ಚೋಜ'(ಕ್ರಿ.ಶ. ೧೦೪೫)**: ಬಳ್ಳಾರಿ ಜಿಲ್ಲೆಯ ಮೊರಿಗೇರಿ ಗ್ರಾಮದ ಉದ್ದಿ ಬಸವಣ್ಣನ ಗುಡಿಯಲ್ಲಿರುವ ಶಾಸನದ ಕಂಡರಣೆಕಾರ. ಇವನು ಅಗ್ಗಳೋಜನ ಮಗ. ತನ್ನನ್ನು ರೂವಾರಿ ಎಂದು ಕರೆದುಕೊಂಡಿರುತ್ತಾನೆ. ಶಾಸನದ ನಡುವೆ ಇವನು ಖಂಡಸ್ಫುಟಿತವೇ ಮೊದಲಾದ ದೇವಸ್ಥಾನದ ಕೆಲಸವನ್ನು ನಡೆಯಿಸುವ ಈ ರೂವಾರಿಗೆ ಭೂಮಿ ದಾನವನ್ನು ಬಿಡಲಾಗಿದೆ. ಈತನು ಬಹುಶಃ ಈ ಶಾಸನವಿರುವ ಉದ್ದಿ ಬಸವಣ್ಣ ದೇವರ ಗುಡಿಯ ರಿಪೇರಿ ಕೆಲಸವನ್ನು ಮಾಡುವ ವೃತ್ತಿಯವನು.[೮೧]

**'ರಾಚೋಜ'(ಕ್ರಿ.ಶ. ೧೦೫೪)**: ಬಳ್ಳಾರಿ ಜಿಲ್ಲೆಯ ನಂದಿಬೇವೂರು ಗ್ರಾಮ ಆಂಜನೇಯ ಗುಡಿ ಸಮೀಪದ ಶಾಸನ ಈತನ ಕೃತಿ. ತನ್ನ ಕೆಲಸವನ್ನು ಶೀಘ್ರಲಿಖಿತ ಎಂದು ಕರೆದಿರುತ್ತಾನೆ. ಸಾಮಾನ್ಯ ಕಂಡರಣೆಗೂ ಈ ಶೀಘ್ರಲಿಖಿತಕ್ಕೂ ವ್ಯತ್ಯಾಸ ತಿಳಿಯಬೇಕಾಗಿದೆ. ಸದ್ಯಕ್ಕೆ ಇದನ್ನು ಈತನ ವಿಶೇಷ ಕಾರ್ಯವೈಖರಿ, ವೇಗವಾಗಿ ಕೆತ್ತುವವ ಎಂದು ತಿಳಿಯಬಹುದು. ಈತನಿಗೆ ದಾನ ಬಿಟ್ಟಿರುವ ಉಲ್ಲೇಖವಿದೆ. ಶಾಸನದ ಒಡಲೊಳಗೆ ಜಿನಾಲಯ ಕಟ್ಟಿದ ವಿಷಯವಿದೆ. ಸದ್ಯಕ್ಕೆ ಈತನನ್ನು ಆ ಬಸದಿಯ ಕರ್ತೃ ಎಂದು ಹೇಳುವ ಅವಸರ ಬೇಡ. ಈ ಶಾಸನವು ವಾದಣಯ್ಯ ಎಂಬುವನ 'ಬರಪ'.[೮೨]

**'ಪಾಲೋಜ'(ಕಾಲವನ್ನು ಹೇಳಿಲ್ಲ)**: ಈತನು ಕೊಪಪ್ಪ ಜಿಲ್ಲೆಗೆ ಸೇರಿದ, ಹಾಲಿ ಲಂಡನ್ನಿನ ವಿಕ್ಟೋರಿಯ ಆಲ್ಬರ್ಟ್ ವಸ್ತುಸಂಗ್ರಹಾಲಯದಲ್ಲಿರುವ ಜಿನಬಿಂಬದ ಪೀಠದಲ್ಲಿರುವ ಶಾಸನದ ಪ್ರಕಾರ ಸೆಟ್ಟಿಗಳು ಮಾಡಿಸಿದ ಈ ಶಿಲ್ಪವನ್ನು ಮಾಡಿರುತ್ತಾನೆ. ಧರೆಯ ರೂವಾರಿಗಳ ಚಕ್ರವರ್ತಿ ಎಂಬ ವಿಶೇಷಣಗಳಿಂದ ಈತನನ್ನು ಸ್ತುತಿಸಲಾಗಿದೆ.[೮೩]

**'ನೇಮೋಜ'(ಕ್ರಿ.ಶ. ೧೧ನೇ ಶತಮಾನ)**: ಮಾನ್ವಿ ತಾಲೂಕಿನ ಬಲ್ಲಟಗಿ ಗ್ರಾಮದ ಒಂದು ಶಾಸನವು ನೇಮೋಜ ಎಂದು ಶಿಲ್ಪಿಯನ್ನು 'ಸೂತ್ರಧಾರಿ' ಎಂದು ಗುರುತಿಸುತ್ತದೆ. ಈತನಿಗೆ ಭೂಮಿಯನ್ನು ದಾನ ಬಿಡಲಾಗಿದೆ. ಈತ ಶಾಸನ ಕಂಡರಣೆಕಾರನಾಗಿರುವುದರ ಜೊತೆಗೆ ಆ ಶಾಸನ ಲಭ್ಯವಿರುವ ಜಾಗದಲ್ಲಿರುವ ಗಿರಿಜವ್ವನ ಗದ್ದುಗೆಯ ನಿರ್ಮಾಣದಲ್ಲೂ ದುಡಿದಿರಬಹುದು.[೮೪]

**'ಚಾವೋಜ'(ಕ್ರಿ.ಶ. ೧೧೮೫)**: ಹಡಗಲಿ ತಾಲೂಕಿನ ಕೋಟನಕಲ್ಲು ಗ್ರಾಮದಲ್ಲಿ ಒಂದು ಶಾಸನವನ್ನು ಮಾಡುತ್ತಾನೆ. ಇವನು ಸೂರಿಲ್ಲಿಯ ಎಂಬ ಊರಿನವನಿರಬೇಕು. ಇಂದೋಜ ಎನ್ನುವವನ 'ಪುತ್ರ', 'ನೊರೆಪ್ಪದಿಂಬರ ತೊತ್ತು' ಎಂಬ ಮಾತಿನ ಅರ್ಥ ಒಂದನೂರು ಇಪ್ಪತ್ತು ಮಂದಿ(?)ಗಳ ದಾಸ ಎಂದು. ಅಲ್ಲಿಯೇ ಬರುವ 'ಸರಸ್ವತಿ ದೇವಿಯ ವರಪ್ರಸಾದ' ಅಂದರೆ ಸರಸ್ವತಿಗಣ ಎಂಬ ಸಂಘಕ್ಕೆ ಸೇರಿದವನೆಂದು ತಿಳಿಯುತ್ತದೆ. ನೂರಿಪ್ಪತ್ತೆಂಟು ಮಂದಿ ಮತ್ತು

---

೮೧. ಡಾ. ಕೆ. ಎಸ್. ಕುಮಾರಸ್ವಾಮಿ : ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು-೯೫

೮೨. ಅದೇ., ಪು-೯೬

೮೩. ಅದೇ., ಪು-೮೮

೮೪. ಅದೇ., ಪು-೧೦೨

ಸರಸ್ವತಿಗಣ ಎಂಬುದನ್ನು ಸಮೀಕರಿಸಲು ಸಾಧ್ಯವಾಗುವುದಾದರೆ ಒಂದನೂರ ಇಪ್ಪತ್ತೆಂಟು ಸದಸ್ಯರನ್ನು ಒಳಗೊಂಡ ಸರಸ್ವತಿಗಣ ಎಂಬ ಪಂಚಾಳರ ಸಂಘಕ್ಕೆ ಈ ಚಾವೋಜನು ವಿಧೇಯನಾಗಿದ್ದನು ಎಂದು ಯೋಚಿಸಬಹುದು? ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೧ರ ಸಂಪಾದಕರು ಇವನ ಕಾಲ ೧೨೬೨ ಎಂದು ಹೇಳಿದ್ದಾರೆ.[೮೫]

**'ಧರಣೋಜ'**: ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕು ಹಂಪಿಯಲ್ಲಿ ಕೂಡ ಈತ ಒಂದು ಶಾಸನವನ್ನು ಮಾಡಿರುವುದು ಗಮನಾರ್ಹ. ಅಂದರೆ ಹರಿಹರದಿಂದ ಹಂಪೆಗೆ ಪ್ರಯಾಣ ಮಾಡಿದ್ದನೆಂದು ಊಹಿಸಬಹುದು. "ಹರಿಹರ ಧರಣೋಜನ ಬರಹ" ಎಂಬುದಾಗಿ ಸ್ಪಷ್ಟವಾಗಿ ಹೇಳಲಾಗಿದೆ. ಈ ಶಾಸನದ ಕಾಲವನ್ನು ಹೇಳಿರುವುದಿಲ್ಲ. ಆದರೆ 'ಹರಿಹರ' ಎಂಬ ಈ ಶಿಲ್ಪಿಯ ಸ್ಪಷ್ಟವಾದ ಮಾತುಗಳಿಂದ ಈ ಶಾಸನ ಸುಮಾರು ಕ್ರಿ.ಶ. ೧೪೩೦ ಎಂದೂ, ಹರಿಹರ ನಗರದವನೆಂದೂ ಹರಿಹರೇಶ್ವರ ದೇವರ ಭಕ್ತನೆಂದೂ ಸ್ಪಷ್ಟವಾಗುತ್ತದೆ. ಮೊದಲಿನ ಎರಡು ಶಾಸನಗಳನ್ನು ಮಾಡಿದ ಮೇಲೆ ಈ ಹಂಪಿಯ ಶಾಸನವನ್ನು ಮಾಡಿರಬೇಕು. ಶಾಸನ ಕಂಡರಿಸಲೆಂದೇ ಇಷ್ಟು ದೂರ ಬಂದಿದ್ದನೋ ಅಥವಾ ತೀರ್ಥಯಾತ್ರೆಗೆಂದು ಬಂದಿದ್ದನೋ. ಅಂತೂ ಬಂದಿದ್ದನು. ಮೇಲಾಗಿ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೩ರ ಸಂಪಾದಕರು ಇವನ ಕಾಲವನ್ನು ೧೪೧೦ ಎಂದು ನಮೂದಿಸಿರುತ್ತಾರೆ.[೮೬]

**'ಚಿಕ್ಕಕರೆಯ'**: ಇವನು ಬೊಮ್ಮೋಜನ ಮಗ. ನಾಗಣಾಚಾರಿಯು 'ವಿದ್ಯಾನಗರಿ' (ಹಂಪೆ)ಯವನು ಎಂದು ಗೊತ್ತಾಗುತ್ತದೆ. ಸಂಕೋಜನು ತನ್ನನು 'ಅಕ್ಕಸಾಲಿ' ಎಂದು ತಿಳಿಸುತ್ತಾನೆ. ಚಿಕ್ಕಣ್ಣನು ನುಂಡೆಹಳ್ಳಿ ಎಂಬ ಗ್ರಾಮದವನು. "ಸೊಂನರಿ ಚಿಕ್ಕಣ್ಣ" ಎಂಬುದು ಇವನ ಪೂರ್ಣ ಹೆಸರು. ಇಲ್ಲಿ ಸೊನ್ನರಿ ಎಂದರೆ ಸುವರ್ಣಕಾರ ಎಂದು ಅರ್ಥ.[೮೭]

**'ಮಾರಮರಸ', 'ಯತಾಚಾರಿ', 'ಗಲ್ಲೋಜ'**: ಈ ಮೂವರು ಕ್ರಮವಾಗಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ, ರಾಯದುರ್ಗ, ಹರಪನಹಳ್ಳಿಗಳಲ್ಲಿ ಒಂದೊಂದು ಶಾಸನವನ್ನು ಮಾಡುತ್ತಾರೆ. ಮಾರಮರಸನು ತಾನೇ ಹೇಳಿಕೊಂಡು ತಾನೇ ಬರೆಯುತ್ತಾನೆ. ಆದರೆ ಕಂಡರಿಸಿದವನೇ? ಸಂದಿಗ್ಧ.[೮೮]

**'ನಾಗೋಜ'**: ಗುಲ್ಬರ್ಗಾ ಜಿಲ್ಲೆಯ ನಾಗಾಯಿ ಶಾಸನವು ಇವನ ಕೃತಿ. ಶಾಸನವು ಇವನನ್ನು 'ಕಲ್ಲುಟಿಗ', 'ಕಂಡರಣ ವಿದ್ಯಾಧಿರಾಜ' ಎಂಬುದಾಗಿ ಮೆಚ್ಚುತ್ತದೆ. ಇಲ್ಲಿ ಕಂಡರಣೆಯನ್ನು ಒಂದು ವಿದ್ಯೆಯೆಂದು ಪರಿಗಣಿಸಲಾಗಿದೆ. ಅಂದರೆ ನಾಗೋಜನು ಶಿಲಾಶಾಸನ ಕೆತ್ತುವ ವಿದ್ಯೆಗೆ ಅಧಿರಾಜನಾಗಿದ್ದನು. ಚೆನ್ನಾಗಿ ಬಲ್ಲವನಾಗಿದ್ದನು ಎಂದು ಊಹಿಸಬಹುದು. "ಕಳಾಸೂತ್ರಧಾರ"

---

೮೫. ಡಾ. ಕೆ. ಎಸ್. ಕುಮಾರಸ್ವಾಮಿ : ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು-೧೧೬
೮೬. ಅದೇ., ಪು-೧೨೮
೮೭. ಅದೇ., ಪು-೧೩೪
೮೮. ಅದೇ.

ಎಂದು ಕೂಡ ಪ್ರಶಂಸಿಸಿದೆ. ಬಹುಶಃ ಇವನ ಪ್ರದೇಶದಲ್ಲಿ ಅಧಿಕಾರಿಯಾಗಿದ್ದಿರಬಹುದಾದ ನಾರಣಯ್ಯನಾಯಕ ಎನ್ನುವವನ ಆಶ್ರಯದಲ್ಲಿದ್ದನು ಎಂದು ತಿಳಿಯಬಹುದು. "ನಾರಣಯ್ಯನಾಯಕ ಶ್ರೀಪಾದ ಪದ್ಮೋಪಜೀವಿತ ಭ್ರಮರ" ಎಂಬುದಕ್ಕೆ ಇದೇ ಅರ್ಥವೆಂದು ಭಾವಿಸುತ್ತೇನೆ.[೫೯]

**'ನಾಗಿದೇವ-ನಾಗದೇವ':** ಈ ಶಿಲ್ಪಿಯು ವಿಜಯನಗರದ ಹರಿಹರ ಮಹಾರಾಯನ ೧೩೩೬, ೧೩೪೪ ಮತ್ತು ೧೩೭೦, ೧೩೮೮, ೧೩೯೪ರಲ್ಲಿ ೫ ಸಂಸ್ಕೃತ ತಾಮ್ರ ಶಾಸನಗಳನ್ನು ಕೆತ್ತುತ್ತಾನೆ. ಮೂರು ಕಡೆ ಈತನ ಹೆಸರಿನ ಹಿಂದೆ 'ತ್ವಷ್ಟ' ಉಪನಾಮವಿದೆ. ಪ್ರತಿಸಾರಿಯೂ 'ಶಿಲ್ಪಿನಾ' ಎಂದು ಹೇಳಿಕೊಂಡಿದ್ದಾನೆ. ಈ ಐದು ಜನ ನಾಗಿದೇವರು ಒಬ್ಬನೇ ಆಗಿದ್ದಾನೆಂದು ಅಡಿಯಲ್ಲೂ ಮತ್ತೆರಡನ್ನು ಬುಕ್ಕರಾಯನ ಆಳ್ವಿಕೆಯಲ್ಲೂ ಮಾಡುತ್ತಾನೆ. ಎಲ್ಲ ಶಾಸನದಲ್ಲಿಯೂ "ಶಾಸನಾಚಾರ್ಯವರ್ಯೇಣ ನಾಗಿದೇವನ ಶಿಲ್ಪಿನಾ" ಎಂದು ಬರುತ್ತದೆ.[೬೦]

**'ವಿಶ್ವಕರ್ಮಲು':** ಈತನು ೧೩೫೪ರಲ್ಲಿ ವಿಜಯನಗರದ ಬುಕ್ಕರಾಯನ ಆಳ್ವಿಕೆಯಲ್ಲಿ ತೆಲುಗು ಭಾಷೆಯಲ್ಲಿ ಒಂದು ಶಾಸನ ಮಾಡಿದ್ದಾನೆ. ಬೇರೆ ತಾಮ್ರಶಾಸನಗಳ ಶಿಲ್ಪಿಗಳ ವೈಯಕ್ತಿಕ ಹೆಸರುಗಳೊಂದಿಗೆ ಬರುವ 'ತ್ವಷ್ಟ' ಎಂಬ ಪರಿಭಾಷೆಯು 'ವಿಶ್ವಕರ್ಮ' ಎಂಬ ವ್ಯಕ್ತಿನಾಮದ ಜೊತೆಯಲ್ಲಿ ಬಾರದೆ ಇರುವುದು ಗಮನಾರ್ಹ. ವಿಶ್ವಕರ್ಮ ಮತ್ತು ತ್ವಷ್ಟ ಎರಡೂ ಹೆಚ್ಚು ಕಡಿಮೆ ಒಂದೇ ರೀತಿಯ ವೃತ್ತಿಸೂಚಕ ಪದಗಳಾಗಿದ್ದು, ಅಧಿಕಾರಗಳಾಗಿದ್ದು, ಒಂದರ ಜೊತೆಯಲ್ಲಿ ಮತ್ತೊಂದು ಬರುವುದು ದ್ವಿರುಕ್ತಿಯಾಗುತ್ತದೆಂಬ ಕಾರಣಕ್ಕಾಗಿ ಬಂದಿಲ್ಲವಾಗಿರಬಹುದು ಅಥವಾ ಮತ್ತಾವುದೋ ಸಾಂಸ್ಕೃತಿಕ ಹಿನ್ನೆಲೆಯಿದ್ದರೂ ಇರಬಹುದು. ಮತ್ತೊಂದು ವಿಷಯವೇನೆಂದರೆ ಗಂಗರ ಕಾಲದಲ್ಲಿ ಕ್ರಿ.ಶ. ೪೨೫ರಿಂದ ೯೦೪ರವರೆಗೆ 'ವಿಶ್ವಕರ್ಮಾಚಾರ್ಯ'ವೆಂಬುದು ಅರಮನೆಯ ಅಧಿಕಾರವಾಗಿದ್ದು, ಮುಂದೆ ವಿಜಯನಗರ ಕಾಲದಲ್ಲಿ 'ತ್ವಷ್ಟ' ಎಂಬುದು ಅದಕ್ಕೆ ಸಮಾನವೇ ಆದ ಒಂದು ಅಧಿಕಾರವಾಗಿದ್ದಿರಬಹುದು. ವಿಜಯನಗರದ ಕೆಲವು ತಾಮ್ರ ಶಾಸನಶಿಲ್ಪಿಗಳ ಹೆಸರಿನ ಹಿಂದೆ 'ತ್ವಷ್ಟ' ಬರುವುದಿಲ್ಲವಾದ್ದರಿಂದ ಇದು ಅಧಿಕಾರವಲ್ಲದೆಯೂ ಇರಬಹುದು.[೬೧]

**'ವೀರಾಚಾರಿ'(೧೩೯೪(?) ೯೯):** ಈತನು ಬುಕ್ಕಭೂಪತಿಯ ಕಾಲದಲ್ಲಿ ೨ ಶಾಸನಗಳನ್ನು ಮಾಡುತ್ತಾನೆ. ಇವು ಐದು ವರ್ಷಗಳ ಅಂತರದಲ್ಲಿ ರಚನೆಯಾಗಿವೆ. ಎರಡೂ ತೆಲುಗು ಭಾಷೆಯಲ್ಲಿವೆ ಮತ್ತು ಪಾವಗಡ ತಾಲೂಕಿನಲ್ಲಿಯೇ ಸಿಕ್ಕರುತ್ತವೆ. ಒಂದರಲ್ಲಿ ಈತ 'ಕಂಸಾಲ', 'ವೀರಾಚಾರ್ರಿ' ಎಂದುಕೊಂಡಿದ್ದಾನೆ. ಅಂದರೆ ಕಂಚುಗಾರನು ಎಂದು ಸಹಜವಾಗಿಯೇ ಒಪ್ಪಬಹುದು.[೬೨]

**'ಶಿಂಗಾಚಾರಿ', 'ಶಂಕರಯ್ಯ', 'ವೀರಭದ್ರಾಚಾರಿ':** ಈ ಮೂವರು ಕ್ರಮವಾಗಿ ಕ್ರಿ.ಶ. ೧೪೦೪,

---

೫೯. ಡಾ. ಕೆ. ಎಸ್. ಕುಮಾರಸ್ವಾಮಿ : ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು-೧೩೬

೬೦. ಅದೇ., ಪು-೧೪೩

೬೧. ಅದೇ.

೬೨. ಅದೇ.

೧೪೧೫ ಮತ್ತು ೧೪೧೭ರಲ್ಲಿ ವಿಜಯನಗರದ ಬುಕ್ಕಭೂಪತಿ ಮತ್ತು ಪ್ರತಾಪದೇವರಾಯರ ಆಳ್ವಿಕೆಯಲ್ಲಿ ತಲಾ ಒಂದೊಂದು ಶಾಸನವನ್ನು ಕಟ್ಟಿದ್ದಾರೆ.[೯೩]

**'ಮಲ್ಲಣು'**: ೧೪೪೭ರ ಶಾಸನವೊಂದು ಮತ್ತೊಬ್ಬ ಮಲ್ಲಣಾಚಾರ್ಯನ ಮಗ 'ಮಲ್ಲಣನು' ಶಾಸನವನ್ನು ಬರೆದುದಾಗಿ ಹೇಳುತ್ತದೆ. ಇವನನ್ನು ವಂಶವೃಕ್ಷದಲ್ಲಿ ಎಲ್ಲಿ ಸೇರಿಸಬೇಕೆಂದು ಗೊತ್ತಾಗುವುದಿಲ್ಲ. ಈ ರೀತಿಯದು ಇದೊಂದೇ ಶಾಸನವಾಗಿದ್ದರಿಂದ ಈತನನ್ನು ಪ್ರತ್ಯೇಕ ವ್ಯಕ್ತಿ ಎಂದು ಪರಿಗಣಿಸುವುದು ಕಷ್ಟವಾಗುತ್ತದೆ. ಈತನೇ ಬಹುಶಃ ಕ್ರಿ.ಶ. ೧೫೦೬ ಮತ್ತು ೧೫೧೧ರಲ್ಲಿ ಮತ್ತೆ ಎರಡು ಶಾಸನಗಳನ್ನು ಮಾಡಿದ್ದಾನೆಂದು ತಿಳಿಯಬಹುದು. ಆದರೆ ಈ ಎರಡು ಶಾಸನಗಳಲ್ಲಿ ಬರುವ ಮಲ್ಲಣಾಚಾರ್ಯನು ತಂದೆಯನ್ನು ಹೆಸರಿಸಿರುವುದಿಲ್ಲ.[೯೪]

**'ವೀರಣಾಚಾರ್ಯ'**(೧೫೧೧–೧೫೩೯): ಮಲ್ಲಣಾಚಾರ್ಯನ ಮಗ ಇವನು. ಈ ವಂಶಾವಳಿಯಲ್ಲಿ ಈತ ಅತ್ಯಂತ ಪ್ರಬಲನಾದ ವ್ಯಕ್ತಿ. ಈತ ೧೭ ಶಾಸನಗಳನ್ನು ಉತ್ಕೀರ್ಣಿಸಿದ್ದಾನೆ. ***ಈ ವ್ಯಕ್ತಿ ತನ್ನ ವಂಶದಲ್ಲಿಯೇ ಅತಿ ಹೆಚ್ಚು ಸಂಖ್ಯೆಯಲ್ಲಿ ಶಾಸನವನ್ನು ಕೊರೆದಿದ್ದಾನೆಂದಷ್ಟೇ ಅಲ್ಲ ಬಹುಶಃ ಇಡೀ ಕರ್ನಾಟಕದ ಸಹಸ್ರಾರು ವರ್ಷಗಳ ಇತಿಹಾಸದಲ್ಲಿ ತಾಮ್ರ ಮತ್ತು ಶಿಲಾಶಾಸನದ ಕಂಡರಣೆಕಾರ ಶಿಲ್ಪಿಗಳ ಸಂದೋಹದಲ್ಲಿಯೇ ಈತನಷ್ಟು ಗಾತ್ರದಲ್ಲಿ ಕೆಲಸ ಮಾಡಿರುವ ಶಿಲ್ಪಿ ಇಲ್ಲ.***– ಈತನು ತನ್ನ ಅಧಿಕಾರದಲ್ಲಿ ಹೇಗೆ ದಕ್ಷನಾಗಿದ್ದನೋ, ಹಾಗೆಯೇ ಸಂಸಾರದಲ್ಲಿಯೂ ಈತನದು ದೊಡ್ಡ ಸಂಸಾರ. ಇವನಿಗೆ ನಾಲ್ಕು ಜನ ಮಕ್ಕಳಿದ್ದಂತೆ ತೋರುತ್ತದೆ. ಈ ಮಕ್ಕಳಲ್ಲಿ ಮೊದಲನೆಯವನು ಕೊನೆಯವನು ಎಂದು ಅನುಕ್ರಮವನ್ನು ಗುರುತಿಸುವುದು ಸಾಧ್ಯವಾಗುತ್ತಿಲ್ಲ. ೧೫೧೧ರಿಂದ ೧೫೩೯; ಸರಿಯಾಗಿ ೨೮ ವರ್ಷಗಳು ಈತ ಪ್ರಭುತ್ವದ ಸೇವೆಯಲ್ಲಿದ್ದಂತೆ ತಿಳಿಯುತ್ತದೆ. ಈತನ ೩ ಶಾಸನಗಳಿಗೆ ಕಾಲವನ್ನು ಗುರುತಿಸಿಲ್ಲ. ಆನುವಂಶಿಕವಾಗಿ ಬಂದ ತಾನು ತ್ವಷ್ಟ ಎಂಬ ಪರಿಕಲ್ಪನೆಯನ್ನೂ, ತನ್ನ ತಂದೆಯನ್ನೂ "ಮಲ್ಲಣಾತ್ಮಜಃ ತ್ವಷ್ಟ ಶ್ರೀವೀರಣಾಚಾರ್ಯೋ ವ್ಯಲಿಖ ತಾತ್ರ ಶಾಸನಂ" ಎಂಬುದಾಗಿ ನೆನಪು ಮಾಡುವುದನ್ನು ಮಾತ್ರ ಮರೆಯುವುದಿಲ್ಲ. ಮೊದಲಿನ ೯ ಶಾಸನಗಳನ್ನು ಕೃಷ್ಣದೇವಮಹಾರಾಯನ ಹೆಸರಿನಲ್ಲಿಯೂ, ಅನಂತರದ ೭ನ್ನು ಅಚ್ಯುತೇಂದ್ರ ಮಹಾರಾಯನ ಹೆಸರಿನಲ್ಲಿಯೂ ಮಾಡಿಕೊಡುತ್ತಾನೆ. ಈತನ ಎಲ್ಲ ಶಾಸನಗಳೂ ಸಂಸ್ಕೃತದಲ್ಲಿವೆ. ಈತನ ಒಂದು ವಿಶೇಷವೇನೆಂದರೆ ಇವನು ಇಷ್ಟೊಂದು ಶಾಸನಗಳನ್ನು ರಚನೆ ಮಾಡಿದರೂ ಎಲ್ಲಿಯೂ ತಾನು ಸಂಭಾವನೆಯನ್ನು ಪಡೆದಿರುವುದಿಲ್ಲ. ಜನ ಸಂತೋಷದಿಂದ ಕೊಟ್ಟಿದ್ದನ್ನು ಮಾತ್ರ ತೆಗೆದುಕೊಳ್ಳುತ್ತಿದ್ದನೋ ಏನೋ. ಆದ್ದರಿಂದಲೇ ಇವನು ಜನಾನುರಾಯಾಗಿದ್ದಿರಬೇಕು. ಅಥವಾ ಇವನ ಮುತ್ತಜ್ಜನ, ಅಪ್ಪನ ಕಾಲದಿಂದಲೂ ಅರಸು ಮನೆತನದಲ್ಲಿ ದುಡಿದಿದ್ದರಾದ್ದರಿಂದ ಮನೆಯ ಕಡೆ ಸುಭಿಕ್ಷವಾಗಿದ್ದಿರಲಿಕ್ಕೂ ಸಾಕು ಅಥವಾ ಆಗಿನ ಆಳ್ವಿಕೆ ಈತನಿಗೆ ಬೇರೆ ಸಂಭಾವನೆಯನ್ನು ಗೊತ್ತು ಮಾಡಿದ್ದಿರಬಹುದು. ಈತನು

———

೯೩. ಡಾ. ಕೆ. ಎಸ್. ಕುಮಾರಸ್ವಾಮಿ : ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು–೧೪೩
೯೪. ಅದೇ., ಪು–೧೪೫

ವಿಜಯನಗರದ ಬಹು ಪ್ರಖ್ಯಾತ ರಾಜನಾದ ಕೃಷ್ಣದೇವರಾಯನ ಆಶ್ರಯದಲ್ಲಿದ್ದವನು ಎಂಬುದನ್ನು ನೆನಪಿಡಬೇಕು. ಈತನು ಉಚ್ಚ್ರಾಯ ಸ್ಥಿತಿಯಲ್ಲಿದ್ದರೂ ಹೆಮ್ಮೆ ಎನ್ನಬಹುದಾದ ಬಿರುದಾವಳಿಯನ್ನು ಕೂಡ ಹೇಳಿಕೊಳ್ಳುವುದಿಲ್ಲ. ಇವನ ಭಾಷೆ ಸ್ಖಾಲಿತ್ಯರಹಿತವಾಗಿದೆ. ಈತ ಒಳ್ಳೆಯ ವಿದ್ವಾಂಸನಿದ್ದಿರಬೇಕು. ಮತ್ತೊಂದು ವಿಷಯವೇನೆಂದರೆ ಈತನ ಎಲ್ಲ ಶಾಸನಗಳಲ್ಲಿಯೂ ಕೃಷ್ಣದೇವ ಮಹಾರಾಯನ ಸಭಾಪತಿಯು ಈ ಶಾಸನಗಳನ್ನು ಮೃದುವಾಗಿ ಹೇಳಲಾಗಿ ಈ ವೀರಣಾಚಾರ್ಯನು ಅವನ್ನು ತಾಮ್ರದ ಫಲಕಗಳ ಮೇಲೆ ಬರೆಯುತ್ತಾ ಹೋಗುತ್ತಾನೆ. ಆದರೆ ಈ ಯಾವ ಶಾಸನಗಳಲ್ಲಿಯೂ ಈ ಸಭಾಪತಿಯನ್ನು ಹೆಸರಿಸಿರುವುದಿಲ್ಲ. ಇವನಿಗೆ ಮಲ್ಲಣಾಚಾರ್ಯ, ಅಪ್ಪಯಾಚಾರ್ಯ, ವೀರಣಾಚಾರ್ಯ, ಗಣಪಯಾಚಾರ್ಯ ಎಂದು ನಾಲ್ವರು ಮಕ್ಕಳು. ಈ ಎಲ್ಲರೂ ತಮ್ಮನ್ನು ವೀರಣಾಚಾರ್ಯನ ಮಕ್ಕಳು ಎಂದೆಂದು ಹೇಳಿದ್ದಾರೆ.[೯೫]

ಈ ನಾಲ್ವರಲ್ಲಿ ಮೊದಲು **'ಮಲ್ಲಣಾಚಾರ್ಯ'**ನನ್ನು ಪರಿಚಯ ಮಾಡಿಕೊಳ್ಳೋಣ. ಈತ ೧೫೧೨, ೧೫೧೩, ೧೫೧೫ರಲ್ಲಿ ಕ್ರಮವಾಗಿ ಮೂರು ಶಾಸನಗಳನ್ನು ಕೊರೆಯುತ್ತಾನೆ. ಒಂದು ಕಡೆ ಮಾತ್ರ ತ್ವಷ್ಟಾ ಎಂಬುದನ್ನು ಹೇಳುತ್ತಾನೆ. ಈತನು ಪ್ರತಿಸಾರಿಯೂ ಒಂದೊಂದೇ 'ವೃತ್ತಿ'ಯನ್ನು ಸಂಭಾವನೆ ಪಡೆಯುತ್ತಾನೆ. ಎಲ್ಲ ಕೃತಿಗಳೂ ಸಂಸ್ಕೃತದಲ್ಲಿವೆ.[೯೬]

**'ಅಪ್ಪಣಾಚಾರ್ಯನು'**: ೧೫೨೪ರಲ್ಲಿ ಒಂದೇ ಒಂದು ಶಾಸನವನ್ನು ಮಾಡಿರುತ್ತಾನೆ. ಎರಡನೇ ಪ್ರಸಿದ್ಧ ವೀರಣಾಚಾರ್ಯನ ಮಗನೋ ಅಥವಾ ಅದೇ ವಂಶಕ್ಕೆ ಸೇರಿದ ಮೂರನೆಯ ವೀರಣಾಚಾರ್ಯನ ಮಗನೋ ಇರಬೇಕು. ಇವನ ಕೃತಿಯೂ ಸಂಸ್ಕೃತದಲ್ಲಿದೆ. 'ಅಪ್ಪಯಾಚಾರ್ಯನು ತನ್ನನ್ನು ವೀರಣಾಚಾರ್ಯನ ಮಗನೆಂದು ಹೇಳಿಕೊಂಡು ಕ್ರಿ.ಶ. ೧೫೨೪ರಲ್ಲಿ ಒಂದೇ ಒಂದು ತಾಮ್ರಶಾಸನವನ್ನು ಮಾಡಿಕೊಟ್ಟಿದ್ದಾನೆ. ಈತನನ್ನು ಪ್ರಸಿದ್ಧನಾದ ವೀರಣಾಚಾರ್ಯನ ಮಗನೆಂದೇ ಭಾವಿಸಬೇಕಾಗುತ್ತದೆ.[೯೭]

**'ವೀರಣಾಚಾರ್ಯ'**: ಈತನನ್ನು ಮೂರನೆಯ ವೀರಣಾಚಾರ್ಯನೆಂದು ಇಟ್ಟುಕೊಳ್ಳೋಣ. ಈತನ ವಿಷಯದಲ್ಲಿ ಒಂದು ಸಮಸ್ಯೆಯೇನೆಂದರೆ, ವೀರಣಾತ್ಮಜ ವೀರಣಾಚಾರ್ಯ ಎಂದು ತನ್ನ ೪ ಶಾಸನಗಳಲ್ಲಿ ಹೇಳಿಕೊಂಡಿದ್ದಾನೆ. ಆದ್ದರಿಂದ ದೃಢವಾಗಿ ಈತನು(ಅಕ್ಷರ ಸ್ಖಾಲಿತ್ಯವಾಗಿರ ಬಹುದೆಂಬ ಶಂಕೆ ಇಲ್ಲದೆ) ತನ್ನ ತಂದೆಯ ಹೆಸರನ್ನು ಇಟ್ಟುಕೊಂಡಿದ್ದಾನೆಂದು ಹೇಳಬಹುದು. ಇವನು ಕ್ರಿ.ಶ. ೧೫೩೪, ೪೩, ೫೮, ೬೧ರಲ್ಲಿ ಕ್ರಮವಾಗಿ ಶಾಸನ ಕೊರದಿದ್ದಾನೆ. ಎಲ್ಲ ಈತನ ಕೃತಿಗಳೂ ಸಂಸ್ಕೃತದಲ್ಲಿವೆ. ಈತನೂ ತ್ವಷ್ಟ ಎಂದು ಹೇಳುವುದನ್ನು ಮರೆಯುವುದಿಲ್ಲ.[೯೮]

ನಾಲ್ಕನೆಯದಾಗಿ **'ಗಣಪಯಾಚಾರ್ಯ'**ನೆನ್ನುವವನು ಕ್ರಿ.ಶ. ೧೪೬೭, ೧೫೫೧, ೭೧, ೭೫, ೭೬ರಲ್ಲಿ ಐದು ಶಾಸನಗಳನ್ನು ಮಾಡುತ್ತಾನೆ. ಒಂದು ಕಡೆ ತಂದೆಯ ಹೆಸರನ್ನು ಹೇಳಿಕೊಳ್ಳುವುದಿಲ್ಲ.

---

೯೫. ಡಾ. ಕೆ. ಎಸ್. ಕುಮಾರಸ್ವಾಮಿ : ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು-೧೪೫, ೧೪೬

೯೬. ಅದೇ., ಪು-೧೪೬

೯೭. ಅದೇ.

೯೮. ಅದೇ.

ಎರಡು ಕಡೆ ತನ್ನ ತಂದೆ ವೀರಯ್ಯ ಎಂದೂ, ಎರಡು ಕಡೆ ವೀರಣಾಚಾರ್ಯನ ಮಗನೆಂದೂ ಹೇಳಿಕೊಂಡಿದ್ದಾನೆ. ಆದ್ದರಿಂದ ಈ ಇಬ್ಬರು ಬೇರೆ ಬೇರೆ ಗಣಪಯಾಚಾರ್ಯರಿದ್ದಿರಲಿಕ್ಕೂ ಸಾಕು. ಆದರೂ ಉಳಿದೆರಡೆಡೆ ತಾನು ವೀರಣಾಚಾರ್ಯನ ಮಗನೆಂದು ಹೇಳಿಕೊಂಡಿರುವುದರಿಂದ ಒಟ್ಟು ವಂಶವೃಕ್ಷಕ್ಕೇನೂ ಬಾಧೆ ಬರುವುದಿಲ್ಲ. ಈತನ ಎಲ್ಲ ಕೃತಿಗಳೂ ಸಂಸ್ಕೃತದಲ್ಲಿವೆ.[೯೯]

**'ಶಣಮ':** ಈತನ ಕಾಲ ೧೬೧೨. ಈತನನ್ನು ನಾನು ಇತ್ತೀಚಿನ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟದಲ್ಲಿ ಗುರುತಿಸಿರುತ್ತೇನೆ. ತನ್ನನ್ನು ಗಣಪಯನ ಮಗನೂ, ವೀರಣನ ಅನುಜ ತಮ್ಮನೂ ಆಗಿರುವುದಾಗಿ ಹೇಳಿಕೊಂಡಿರುತ್ತಾನೆ. 'ಮಲ್ಲಣಾಚಾರ್ಯ'ನನ್ನು ಏಕೆ ಹೆಸರಿಸುತ್ತಾನೋ ತಿಳಿಯದು. ಶಣಮ ತಾಮ್ರ ಶಾಸನಾಚಾರ್ಯ. ಈತನ ಜೊತೆ ಶಾಸನ ಬರೆದವನು ಮಹಾಶ್ವೇತಾಂಬರ ಕವಿ. ತನ್ನನ್ನು 'ತ್ವಷ್ಟ' ಎಂದು ಹೇಳಿಕೊಂಡಿಲ್ಲ ಹಾಗೂ ದಾನ ಪಡೆದ ವಿಷಯವಿಲ್ಲ. ಕಾಲ ದೃಷ್ಟಿಯಿಂದ ಈತನನ್ನು ವೀರಣನ ಅನುಜ ಎಂದರೆ ವೀರಣನ ತಮ್ಮ ಎಂದು ತಿಳಿಯಬಹುದು.[೧೦೦]

ಈ ಮೇಲಿನ ಗಣಪಯಾಚಾರ್ಯನಿಗೆ **'ವೀರಣ ಮಹಾಚಾರ್ಯ'** ಎಂಬ ಮಗನೂ, ಕಾಮಯ ಎಂಬ ಮೊಮ್ಮಗನೂ ಇರುವುದು ಬಹುಮುಖ್ಯ. ವೀರಣ ಮಹಾಚಾರ್ಯನು ೧೫೮೭ರಲ್ಲಿ ೧೫೮೯ರಲ್ಲಿ ಒಟ್ಟು ಮೂರು ಶಾಸನಗಳನ್ನು ಸಂಸ್ಕೃತದಲ್ಲಿ ಮಾಡಿದ್ದಾನೆ. ಮೂರು ಶಾಸನಗಳೂ ವಿಜಯನಗರದ ವೆಂಕಟಪತಿರಾಯನ ಹೆಸರಿನಲ್ಲಿವೆ. ಈ ವೀರಣ ಮಹಾಚಾರ್ಯನು ತಾನು ಗಣಪಯಾಚಾರ್ಯನ ಮಗನೆಂಬುದನ್ನು ಸ್ಪಷ್ಟವಾಗಿ ಹೇಳಿದ್ದಾನೆ.[೧೦೧]

ಈ ವೀರಣಾಚಾರ್ಯನ ಮಗ **'ಕಾಮಯ'**(೧೬೪೫). ಈತನ ವಿಶೇಷವೇನೆಂದರೆ ತಾನು ನೇರವಾಗಿ ತನ್ನ ತಾತನನ್ನು ನೆನಪು ಮಾಡುತ್ತಾನೆ. "ಶ್ರೀ ಗಣಪಯಾರ್ಯ ಪೌತ್ರಮಣಿ" ಎಂದೆನ್ನುತ್ತಾನೆ. ಈತನ ತಾಮ್ರಶಾಸನದ ಕೃತಿಯು ಸಂಸ್ಕೃತದಲ್ಲಿದೆ. ಈತನದು ಇದು ಒಂದೇ ಶಾಸನ. 'ತ್ವಷ್ಟ' ಎಂದು ಹೇಳಿಕೊಂಡಿಲ್ಲ. ಈತನ ನಂತರದ ಬೆಳವಣಿಗೆ ಏನು ತಿಳಿಯುವುದಿಲ್ಲ.[೧೦೨]

---

೯೯. ಡಾ. ಕೆ. ಎಸ್. ಕುಮಾರಸ್ವಾಮಿ : ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ, ಪು-೧೪೬

೧೦೦. ಅದೇ.

೧೦೧. ಅದೇ.

೧೦೨. ಅದೇ.

## ಅಧ್ಯಾಯ : ಮೂರು

# ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು

"ಲಲಿತಕಲೆಗಳು ಎಂದರೆ ಚಿತ್ರ, ಶಿಲ್ಪ, ಸಂಗೀತ, ನೃತ್ಯ ಹಾಗೂ ಸಾಹಿತ್ಯಗಳನ್ನು ಒಳಗೊಂಡಿರುತ್ತವೆ. ಈ ಲಲಿತಕಲೆಗಳು ಒಂದಕ್ಕೊಂದು ಪೂರಕ; ಪ್ರೇರಕ. ಕಲಾವಿದ ಅಥವಾ ಶಿಲ್ಪಿ ಅನ್ನಿಸಿಕೊಳ್ಳುವಂತಾಗಲು ಬಹುದೊಡ್ಡ ಸಾಧನೆ ಮಾಡಬೇಕು. ಕಲ್ಲು ವಿಗ್ರಹವಾಗಬೇಕಾದರೆ ಸಾಕಷ್ಟು ಸುತ್ತಿಗೆ ಉಳಿ ಏಟು ತಿನ್ನಲೇಬೇಕು. ಈ ರೀತಿ ಸಿದ್ಧವಾದ ವಿಗ್ರಹ ನಿತ್ಯ ಪೂಜೆ ಪಡೆದುಕೊಂಡು ಪ್ರಸಿದ್ಧಿಯಾಗಬೇಕಾದರೂ ಹಲವು ಬಗೆಯ ಸಾಧನೆಗಳು ಅತ್ಯಾವಶ್ಯಕ. ವಿಗ್ರಹ ಮಾಡುವನು ಪಾಲಿಸಬೇಕಾದ ನಿಯಮಗಳು, ಮಾಡಿದ ನಂತರ ಸೂಕ್ತವಾದ ಸ್ಥಳದಲ್ಲಿ ಸ್ಥಾಪಿಸುವಾಗ ಅನುಸರಿಸಬೇಕಾಗಿರುವ ಮತ್ತು ಆಚರಿಸ–ಬೇಕಾಗಿರುವ ಪದ್ಧತಿಗಳು, ಸ್ಥಾಪಿಸಿದುದನ್ನು ವಿವಿಧ ರೀತಿಯ ಅರ್ಚನೆ, ಅಲಂಕಾರ, ಪ್ರಪತ್ತಿಗಳ ಸಮರ್ಪಣೆ ಕ್ರಮ. ಸತ್ಕರ್ಮ ಸೌಂದರ್ಯಾಭಿರುಚಿ ಯಾರಿಗೆ ಇರುತ್ತದೆಯೋ ಅವರು ಮಾತ್ರ ಕಲೋನ್ನತಿಗೆ ಕಾಣ್ಕೆ ಸಲ್ಲಿಸಬಲ್ಲರು. ಸೌಂದರ್ಯ ಹೊರಮುಖದಲ್ಲಿ ಅಥವಾ ಒಳಮುಖದಲ್ಲಿ ಇರಬಹುದು. ಇಲ್ಲವೇ ಅವನ ಕಲಾಕೃತಿಯಲ್ಲಿರಬಹುದು. ಅದರಿಂದಾಗುವ ಆನಂದ ಮಾತ್ರ ಅನುಭವಸಿದ್ಧವಾದದ್ದು; ಶಬ್ದಗಳಿಗೆ ಅತೀತವಾದದ್ದು. ಆ ಆನಂದ ಸಂಗೀತಾಭಿರುಚಿ, ಸಾಹಿತ್ಯಾಭಿರುಚಿ, ಚಿತ್ರಾಭಿರುಚಿ, ಶಿಲ್ಪಾಭಿರುಚಿ, ನೃತ್ಯಾಭಿರುಚಿ ಇವುಗಳಲ್ಲಿ ಯಾವುದಾದರಲ್ಲೊಂದರಲ್ಲಿರಬಹುದು. ಅದು ಅವರವರ ಮನಃಸ್ಥಿತಿಯನ್ನವಲಂಬಿಸಿರುತ್ತದೆ. ಕಲಾಭಿರುಚಿ ಒಂದಿದ್ದರೇ ಸಾಲದು, ಪ್ರೋತ್ಸಾಹ ಕೊಡುವ ಗುಣವು ಇರಬೇಕು. ಹಾಗಿದ್ದಾಗ ಮಾತ್ರವೇ ಕಲೆ ಬೆಳೆಯುತ್ತದೆ. ಕಲೆಯೊಡನೆ ಕಲಾವಿದನು ಬೆಳೆಯುತ್ತಾನೆ. ಕಲೆ ಬೆಳವಣಿಗೆ ಎಂದರೇ ಕಲಾವಿದನ ಬೆಳವಣಿಗೆ ಎಂದರ್ಥವಾಗುವಂತೆ, ಕಲಾವಿದರ ಬೆಳವಣಿಗೆಯೆಂದರೆ ಕಲೆಯ ಅಭಿವೃದ್ಧಿಯೇ."[೧]

ಕಲಾವಿದನಾಗಬಹುದು. ಆದರೆ ಕಲೆಯನ್ನು ಸಿದ್ಧಿಸಿಕೊಳ್ಳುವುದು ಬಲುಕಷ್ಟ. ಕಲಾಸಿದ್ಧಿಯಾಗು ವುದಕ್ಕೆ ಅಪಾರವಾದ ಪರಿಶ್ರಮ ಅಗತ್ಯ. ನಲಿವಿಗಿಂತ ನೋವೇ ಅಧಿಕ. 'ಭಕ್ತಿಯೆಂಬುದು

---

೧. ಎಲ್. ಶಿವಲಿಂಗಪ್ಪ: ಶಕಪುರುಷ ಸಿದ್ಧಲಿಂಗ ಸ್ವಾಮಿಗಳು, ಪು–೧೬೧, ೧೬೨.

ಮಾಡಬಾರದು, ಹೋಗುತ್ತ ಕೊಯ್ಯವುದು ಬರುತ್ತ ಕೊಯ್ಯವುದು ಗರಗಸದಂತೆ' ಎಂಬ ಬಸವಣ್ಣನವರ ವಚನದಂತೆ ಕಲೆಯನ್ನು ಸಿದ್ಧಿಸಿಕೊಳ್ಳುವಾಗ ಆಗುವ ಮಾನಸಿಕ ಹಾಗೂ ದೈಹಿಕ ಹಿಂಸೆಗಳನ್ನು ಸಹಿಸಬೇಕಾಗುತ್ತದೆ. ಹಾಗೆಯೇ ಸಿದ್ಧಿಸಿಕೊಂಡಾಗ ದೀರ್ಘಕಾಲ ಉಳಿಸಿ, ಬೆಳೆಸಿಕೊಳ್ಳಲು ಸನ್ಮಾರ್ಗ, ಸತ್ಕ್ರಿಯಾಚರಣೆ, ಸದ್ಬುದ್ಧಿಗಳು ತೀರಾ ಅವಶ್ಯಕ. ನಮ್ಮ ಪುರಾಣ ಕಥೆಗಳಲ್ಲಿ ರಾವಣ, ಹಿರಣ್ಯಕಶ್ಯಪ, ಭಸ್ಮಾಸುರ ಮುಂತಾದ ಅಸುರರು ಕಠಿಣವಾದ ತಪಸ್ಸಿನಿಂದಲೇ ಸಿದ್ಧಿ ಪಡೆದುಕೊಂಡು, ನಂತರ ಆ ವರ ಕೊಟ್ಟ ದೇವರಿಗೆ ವಿರೋಧಿಗಳಾಗಿ ನಡೆದುಕೊಂಡಿದ್ದರಿಂದ ಪರಿಣಾಮ ಅವನತಿ ಹೊಂದಿದ ವಿಚಾರ ತಿಳಿಯುತ್ತದೆ. ಆದ್ದರಿಂದ ಕಲಾಸಿದ್ಧಿಯನ್ನು ಪಡೆಯುವುದರೊಂದಿಗೆ ಸಾರ್ಥಕಗೊಳಿಸಿಕೊಳ್ಳುವ ಬುದ್ಧಿ ಗುಣವನ್ನು ಬೆಳೆಸಿಕೊಳ್ಳಬೇಕು"[೨] ಎಂಬ ಹಿರಿಯರ ಅಭಿಪ್ರಾಯ ತುಂಬಾ ಅರ್ಥಗರ್ಭಿತವಾದುದಾಗಿವೆ.

"ಹರಪ್ಪ ಸಂಸ್ಕೃತಿಯ ಅತಿಮುಖ್ಯ ಸಾಧನೆಯೆಂದರೆ, ಕಲೆ ಮತ್ತು ಕುಶಲಕಲೆಗಳ ಕ್ಷೇತ್ರದಲ್ಲಿನ ಅವರ ಸಾಧನೆ. ಏಕೆಂದರೆ, ಭಾರತದಲ್ಲಿ ಪ್ಲಾಸ್ಟಿಕ್ ಕಲೆ ಅಭಿವೃದ್ಧಿ ಹೊಂದಿದ್ದು ಸಿಂಧೂ ಕಾಲದ ಅನಂತರ ಕರಕುಶಲಕಲೆ, ತಂತ್ರಜ್ಞಾನ ಮತ್ತು ಕಲೆಗಳ ಎಲ್ಲೆಗಳನ್ನು ನಿಶ್ಚಿತವಾಗಿ ಗುರುತು ಮಾಡುವುದು ಸಾಧ್ಯವಿಲ್ಲದ ಮಾತು. ಅವು ಒಟ್ಟೊಟ್ಟಿಗೆ ಅಸ್ತಿತ್ವದಲ್ಲಿರುತ್ತವೆ. ಕಲಾವಸ್ತುಗಳ ಸೂಕ್ಷ್ಮ ಅಧ್ಯಯನದಿಂದ ಸಾಮಾಜಿಕ ಮೌಲ್ಯಗಳು ಹಾಗೂ ಧಾರ್ಮಿಕ ನಂಬಿಕೆಗಳನ್ನು ನಾವು ಅರ್ಥ ಮಾಡಿಕೊಳ್ಳಬಹುದು. ಆದರೆ ಪ್ರಬುದ್ಧ ಹರಪ್ಪ ಸಂಸ್ಕೃತಿಯ ಅವಧಿಯಲ್ಲಿನ ಶಿಲ್ಪಗಳು ಕೆಲವೇ ದೊರತಿದ್ದು, ಅವುಗಳಲ್ಲಿ ಬಹುಪಾಲು ಭಗ್ನಗೊಂಡಿವೆ. ಮುಖ್ಯವಾಗಿ ಉತ್ತರ ಮತ್ತು ದಕ್ಷಿಣ ಬಲೂಚಿಸ್ತಾನಗಳಲ್ಲಿದ್ದ ಏಷ್ಯಾದ ಮೊದಲ ಕೃಷಿ ಸಮುದಾಯ ಹರಪ್ಪ ಕಲೆಯ ಮೇಲೆ ಪ್ರಭಾವ ಬೀರಿದೆ. ಪ್ರಾಥಮಿಕ ಸ್ವರೂಪದ ಕಲೆ ಕಂಡುಬರುವ ಪ್ರಮುಖ ಸ್ಥಳಗಳೆಂದರೆ ಉತ್ತರ ಹಾಗೂ ದಕ್ಷಿಣ ಬಲೂಚಿಸ್ತಾನದ ಜಾಬ್, ಕುಲ್ಲಿ, ಮೇಹಿ ಪ್ರದೇಶಗಳಲ್ಲಿ ಈ ಎರಡೂ ಸಂಸ್ಕೃತಿ ಗಳೂ ಸ್ವತಂತ್ರವಾಗಿ ಒಂದೇ ರೀತಿಯಲ್ಲಿ ಒಂದೇ ಕಾಲದಲ್ಲಿ ಬೆಳೆದು ಬಂದರೂ ಕೊನೆಯಲ್ಲಿ ಪ್ರಚಲಿತವಾಗಿ ಉಳಿದಿದ್ದು ಹರಪ್ಪ ಕಲೆ. ಈ ಪ್ರಾಥಮಿಕ ಸ್ವರೂಪದಿಂದ ಪ್ರಭಾವಿತವಾಗಿದ್ದರೂ ಸಹ ತದನಂತರದಲ್ಲಿ ಅದು ಒಂದು ಸ್ವತಂತ್ರ ಕಲಾಪ್ರಕಾರವಾಗಿ ಬೆಳೆಯಿತು. ಕಲಾವಸ್ತುಗಳನ್ನು ಸಿದ್ಧಪಡಿಸಲು ಅವರು ಬಳಸುತ್ತಿದ್ದ ಕಚ್ಚಾ ಪದಾರ್ಥಗಳೆಂದರೆ ಲೋಹ, ತಾಮ್ರ, ಕಂಚು, ಕಲ್ಲು, ಮರ, ಜೇಡಿಮಣ್ಣು ಹಾಗೂ ಟೆರಾಕೋಟ, ಆ ಅವಧಿಯ ಲೋಹಶಿಲ್ಪಗಳನ್ನು ಅಥವಾ ವಸ್ತುಗಳನ್ನು ಅವರು ಅಚ್ಚುಗಳ ಮೂಲಕ ತಯಾರಿಸಿ, ಅದಕ್ಕೆ ನುಣುಪು ನೀಡುತ್ತಿದ್ದರು. ಶಿವಪ್ಪ ಶಿಲ್ಪಗಳನ್ನು ಅಚ್ಚುಗಳ ಸಹಾಯದಿಂದ ಹಾಗೂ ಕೈಗೆಲಸದಿಂದ ತಯಾರಿಸುತ್ತಿದ್ದರು. ಕೆಲವೊಮ್ಮೆ ಎರಡೂ ವಿಧಾನಗಳನ್ನು ಅಳವಡಿಸಿಕೊಂಡು ತಯಾರಿಸುತ್ತಿದ್ದರು. ಆದರೆ ದುರದೃಷ್ಟವಶಾತ್, ಉತ್ಖನನದ ಸಮಯದಲ್ಲಿ ತೆಗೆದ ಬಹುಪಾಲು ಶಿಲ್ಪಗಳು ಊನಗೊಂಡಿವೆ. ಇಲ್ಲವೆ ತುಂಡು ತುಂಡಾಗಿವೆ. ಬಹುಪಾಲು ಶಿಲ್ಪಗಳು ಮತಶ್ರದ್ಧೆಯ ಮೂರ್ತಿಗಳಾಗಿರುವಂತೆ ಕಂಡುಬರುತ್ತವೆ.

---

೨. ಎಲ್. ಶಿವಲಿಂಗಪ್ಪ: ಶಕಪುರುಷ ಸಿದ್ಧಲಿಂಗ ಸ್ವಾಮಿಗಳು, ಪು-೧೬೨.

ಸಾಮಾನ್ಯವಾಗಿ ಬಳಸುತ್ತಿದ್ದ ಕಲ್ಲುಗಳೆಂದರೆ ಮೇರಶಿಲೆ, ಸುಣ್ಣಕಲ್ಲು, ಹಾಲುಗಲ್ಲು ಮುಂತಾದವುಗಳು. ಅವುಗಳಲ್ಲಿ ಗಮನ ಸೆಳೆಯುವ ಶಿಲ್ಪಗಳೆಂದರೆ, ಗಡ್ಡವಿರುವ ಮುಖ ಹಾಗೂ ಭುಜಗಳಿರುವ ಶಿಲ್ಪಗಳು ಮತ್ತು ಕೂದಲನ್ನು ಗಂಟು ಹಾಕಿರುವ ಅಥವಾ ಹೆಣೆದ ಉದ್ದ ಜಡೆಯಿರುವ, ಬಗ್ಗಿ ಕುಳಿತಿರುವ ಅಥವಾ ಮೊಣಕಾಲೂರಿ ಕುಳಿತಿರುವ ಎರಡು ಸಣ್ಣ ಶಿಲ್ಪಗಳೂ ದೊರೆತಿವೆ. ಮನುಷ್ಯರ ಕೆತ್ತನೆ ಚಿತ್ರಗಳಿಗೆ ಹೋಲಿಸಿದರೆ, ಪ್ರಾಣಿಗಳ ಕೆತ್ತನೆಗಳು ಅಪರೂಪವೇ.[೩]

ಹರಪ್ಪದಲ್ಲಿ ತಲೆ ಮತ್ತು ಕೈ ಕಾಲುಗಳನ್ನು ಜೋಡಿಸಲು ಅನುಕೂಲವಾಗುವಂತೆ ಗೂಳಿ ಹಾಗೂ ಅದರಲ್ಲಿ ಜೋಡಿಸುವ ಒಳಬೆಣೆ ಇರುವ ಕಲ್ಲು ಆಕೃತಿಗಳೂ ದೊರೆತಿವೆ. ಉತ್ತಮ ಮಾದರಿಯಲ್ಲಿ ಈ ಆಕೃತಿಗಳನ್ನು ತಯಾರಿಸಲಾಗಿದೆ. ಮೊಹೆಂಜೋದಾರೋದಲ್ಲಿ ಮುಖ್ಯವಾಗಿ ಕಂಚಿನ ಅಚ್ಚು ಆಕೃತಿಗಳು ದೊರೆತಿವೆ. ಇಲ್ಲಿಯವರೆಗೂ ದೊರೆತಿರುವುದರಲ್ಲೆಲ್ಲ ನೃತ್ಯಭಂಗಿಯಲ್ಲಿರುವ ಬಾಲೆ ಅತಿ ಮುಖ್ಯವಾದುದು. ಇದು ೧೧.೫ ಸೆಂ. ಮೀ. ಎತ್ತರವಿದೆ. ತಲೆ ಹಿಂದಕ್ಕೆ ಬಾಗಿದ್ದು, ಕಣ್ಣುಗಳು ಕೆಳಗೆ ನೋಡುತ್ತಿವೆ. ಬಲಗೈ ಪೃಷ್ಠದ ಮೇಲಿಟ್ಟು, ಎಡಗೈ ತುಂಬ ಬಳೆಗಳಿದ್ದು, ಇಳಿ ಬಿಡಲಾಗಿದೆ. ಕೊರಳಿನ ಕಂಠೀಹಾರ ಉಳಿದು ವಿಗ್ರಹ ನಗ್ನವಾಗಿದೆ ಮತ್ತು ಕೂದಲನ್ನು ಆಕರ್ಷಕವಾಗಿ ಕಟ್ಟಲಾಗಿದೆ. ಕಂಚಿನ ಪ್ರಾಣಿ ಆಕೃತಿಗಳಲ್ಲಿ ಎಮ್ಮೆ ಮತ್ತು ಟಗರಿನ ಆಕೃತಿಗಳು ಗಮನೀಯ ಆಟದ ಎತ್ತಿನಗಾಡಿಗಳು ಹಾಗೂ ಇತರ ಸಣ್ಣ ಆಟದ ವಸ್ತುಗಳೂ ದೊರೆತಿವೆ.

**ಗಟ್ಟಿ ಜೇಡಿಮಣ್ಣಿನ ಸಣ್ಣ ಪ್ರತಿಮೆಗಳು:** ಜೇಡಿಮಣ್ಣಿನ ಅನೇಕ ಪ್ರತಿಮೆಗಳು ಸಿಕ್ಕಿವೆ. ಅವುಗಳನ್ನು ಆಟದ ವಸ್ತುಗಳನ್ನಾಗಿ ಹಾಗೂ ಉಪಾಸನೆಯ ವಸ್ತುಗಳನ್ನಾಗಿ ಬಳಸುತ್ತಿದ್ದರು. ಈ ಪ್ರತಿಮೆಗಳನ್ನು ಕೈಯಿಂದ ಮಾಡಲಾಗಿದೆ. ಕೆಲವನ್ನು ಒಂದೇ ಅಚ್ಚಿನಲ್ಲಿ ಮಾಡಲಾಗಿದೆ. ಮನುಷ್ಯಾಕೃತಿಗಳು ಪ್ರಾಣಿ ಆಕೃತಿಗಳು ತಮ್ಮದೇ ಆದ ಶೈಲಿ ಮತ್ತು ರೀತಿಯಿಂದ ವಿಶಿಷ್ಟವಾಗಿವೆ. ಗಟ್ಟಿ ಜೇಡಿಮಣ್ಣಿನ ಪ್ರತಿಮೆಗಳಲ್ಲಿ ವಿವಿಧ ಪಕ್ಷಿಗಳು ಹಾಗೂ ಕೋತಿ, ನಾಯಿ, ಕುರಿ ಹಾಗೂ ಜಾನುವಾರುಗಳೂ ಸೇರಿದಂತೆ ಅನೇಕ ಬಗೆಯ ಪ್ರಾಣಿಗಳಿವೆ. ಡುಬ್ಬವಿರುವ ಹಾಗೂ ಇಲ್ಲದಿರುವ ಗೂಳಿಗಳೂ ಕಂಡುಬಂದಿವೆ. ಅವುಗಳನ್ನು ಉತ್ತಮ ರೀತಿಯಲ್ಲಿ ತಯಾರಿಸಲಾಗಿದೆ.[೪] ಅನೇಕ ಸ್ತ್ರೀ–ಪುರುಷರ ಪ್ರತಿಮೆಗಳೂ ದೊರೆತಿವೆ. ಹೆಣ್ಣು ಪ್ರತಿಮೆಗಳಿಗೆ ಅತಿಯಾಗಿ ಒಡವೆಗಳನ್ನು ಬಿಡಿಸಲಾಗಿದ್ದು, ಅಂಗಗಳು ಪ್ರಮುಖವಾಗಿ ಎದ್ದು ಕಾಣುವ ರೀತಿಯಲ್ಲಿ ರಚಿಸಲಾಗಿದೆ. ಇವು ಸ್ತ್ರೀ–ದೇವತೆಯನ್ನು ಪ್ರತಿನಿಧಿಸುವ ಪ್ರತಿಮೆಗಳಿರಬೇಕೆಂದು ಗುರುತಿಸಲಾಗಿದೆ. ಇನ್ನೂ ಕೆಲವು ಸ್ತ್ರೀ ಪ್ರತಿಮೆಗಳಿಗೆ ಅಲಂಕಾರಿಕವಾದ ತಲೆಮುಡಿಗೆ ತೊಡಿಸಿ, ಒಡವೆಗಳನ್ನು ಬಿಡಿಸಲಾಗಿದೆ. ಗಟ್ಟಿ ಜೇಡಿಮಣ್ಣಿನ ಅನೇಕ ಆಟದ ಬಂಡಿಗಳೂ ದೊರೆತಿವೆ.

**ಮೊಹರುಗಳು:** ಇವು ಹರಪ್ಪ ಕಲೆಯ ಅತಿ ಮುಖ್ಯ ಜೀವಂತ ಉದಾಹರಣೆಗಳಾಗಿವೆ. ಇಲ್ಲಿಯವರೆಗೆ ೨೦ಕ್ಕೂ ಹೆಚ್ಚಿನ ಮೊಹರುಗಳು ದೊರೆತಿವೆ. ಈ ಬಹುಪಾಲು ಮೊಹರುಗಳ

---

೩. ಡಾ. ವಿಜಯ ಪೂಣಚ್ಚ ತಂಬಂಡ(ಸಂ.): ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–೪, ಚರಿತ್ರೆ, ಪು–೧೦೮.
೪. ಅದೇ.

ಮೇಲೆ ಸಂಕ್ಷಿಪ್ತವಾದ ಕೆಲವೇ ಮಾತುಗಳಿದ್ದು, ಪ್ರಾಣಿ ಚಿತ್ರವನ್ನು ಕೆತ್ತಲಾಗಿದೆ. ಇದರಲ್ಲಿ ಕಾಣುವ ಸಾಮಾನ್ಯ ಚಿತ್ರವೆಂದರೆ, ಡುಬ್ಬವಿರುವ ಗೂಳಿಯ ಪಾರ್ಶ್ವ ನೋಟ. ಇದನ್ನು ಕುದುರೆಯ ಮೈಯೂ ಒಂದೇ ನೇರ ಕೊಂಬೂ ಇರುವ ಗ್ರೀಕ್ ಪುರಾಣ ಪ್ರಸಿದ್ಧವಾದ ಏಕಶೃಂಗಿಯ ಚಿತ್ರವೆಂದು ಗುರುತಿಸಲಾಗಿದೆ. ಮೊಹರುಗಳ ಮೇಲಿರುವ ಇತರ ಪ್ರಾಣಿಗಳ ಚಿತ್ರಗಳೆಂದರೆ, ಆನೆ, ಕಾಡೆಮ್ಮೆ, ಘೇಂಡಾಮೃಗ, ಹಾಗೂ ಹುಲಿ ಇದನ್ನು ಉತ್ತಮ ರೀತಿಯಲ್ಲಿ ತಯಾರಿಸಿಲಾಗಿದ್ದು, ಪ್ರಾಣಿಗಳ ಚಿತ್ರವನ್ನು ಬಿಡಿಸುವುದರಲ್ಲೂ ಸಾಕಷ್ಟು ನೈಪುಣ್ಯ ಕಾಣುತ್ತದೆ. ಆ ಅವಧಿಯಲ್ಲಿ ದೊರೆತಿರುವ ಚಿನ್ನದ ಗುಂಡುಗಳು ಹಾಗೂ ಒಡವೆಗಳೂ ಸಹ ಆ ಕಾಲದ ಕಲಾತ್ಮಕ ಸಾಧನೆಯ ಸಾಕ್ಷಿಗಳಾಗಿವೆ. ಹರಪ್ಪದವರು ಪ್ರಶಸ್ತ ಹಾಗೂ ಅರೆ ಪ್ರಶಸ್ತ ಕಲ್ಲುಗಳನ್ನು ಬಳಸಿ ಅನೇಕ ಬಗೆಯ ಮಣಿಗಳನ್ನು ತಯಾರಿಸಿದ್ದಾರೆ. ಉದಾಹರಣೆಗೆ ವೈಡೂರ್ಯ, ನೀಲಿ, ಹಸಿರು, ಹವಳಗಲ್ಲು, ಗೋಮೇದಶಿಲ ಮತ್ತು ಮುಂತಾದವುಗಳು. ಚಿನ್ನದಾರೋ ಮತ್ತು ಲೋಥಲ್ ಪಟ್ಟಣಗಳಲ್ಲಿ ಮಣಿ ತಯಾರಿಕರ ಕಾರ್ಯಾಗಾರಗಳು ಇದ್ದವೆಂಬುದಕ್ಕೆ ಸಾಕ್ಷಿ ದೊರೆತಿದೆ. ಹೀಗೆ ಹರಪ್ಪದವರ ಕಲೆ ಸ್ವಾಭಾವಿಕವಾಗಿ ದೊರೆಯುವ ವಸ್ತುಗಳಿಂದ ಮಾಡಿದ ನಿರ್ಮಿತಿಗಳಿಗೆ ಪ್ರಸಿದ್ಧವಾಗಿತ್ತು.[೫]

**ತಂತ್ರಜ್ಞಾನ:** ಸಿಂಧೂ ಸಂಸ್ಕೃತಿಯ ಬೇರೆ ಬೇರೆ ಸ್ಥಳಗಳಲ್ಲಿ ಕುಂಬಾರರು, ಕಲ್ಲು ಕೆಲಸಗಾರರು, ಮೊಹರು ತಯಾರಿಕೆಯ ಕಮ್ಮಾರರಿಂದ ಅನೇಕ ಪರಿಣತ ಕುಶಲಕರ್ಮಿಗಳ ತಂಡಗಳಿದ್ದವೆಂಬುದು ಕಂಡುಬಂದಿದೆ. ಪ್ರಬುದ್ಧ ಹರಪ್ಪದವರ ಕಾಲದಲ್ಲಿ ತಾಮ್ರ ಹಾಗೂ ಕಂಚು ತಂತ್ರಜ್ಞಾನ ಉತ್ತಮ ರೀತಿಯಲ್ಲಿ ಅಭಿವೃದ್ಧಿಗೊಂಡಿತ್ತು. ಚಪ್ಪಟೆ ಕೊಡಲಿ, ಉಳಿ, ಚಾಕು, ಈಟಿಮೊನೆ, ಅಂಬಿನ ತಲೆ ಹಾಗೂ ಸಣ್ಣ ಗರಗಸಗಳಂಥ ಅಗತ್ಯ ಆಯುಧಗಳನ್ನು ಎರಕ ಹೊಯ್ಯುವ ಮೂಲಕ ಅಥವಾ ಉಳಿಯಿಂದ ಕೆತ್ತುವ ಹಾಗೂ ಸುತ್ತಿಗೆಯಿಂದ ಹೊಡೆಯುವ ಮೂಲಕ ತಯಾರಿಸಲಾಗುತ್ತಿತ್ತು. ದೊರೆತಿರುವ ತಾಮ್ರ ಹಾಗೂ ಕಂಚಿನ ಪಾತ್ರೆಗಳಿಂದಲೂ ಸಹ ಆಗಿನ ಕಾಲದವರ ನೈಪುಣ್ಯತೆ ತಿಳಿದುಬರುತ್ತದೆ. ತಾಮ್ರ ಹಾಗೂ ಕಂಚನ್ನು ಎರಕ ಹೊಯ್ದು ವಸ್ತುಗಳನ್ನು ತಯಾರಿಸುತ್ತಿದ್ದರೆಂಬುದನ್ನು ನೋಡಿದಾಗ ಸಿಂಧೂ ಸಂಸ್ಕೃತಿಯ ಕಾಲದಲ್ಲಿದ್ದ ಜನರು ತಂತ್ರಜ್ಞಾನವನ್ನು ಚೆನ್ನಾಗಿ ಅರಿತಿದ್ದರೆಂಬುದನ್ನು ತಿಳಿಯಬಹುದು. ಲೋಹದಷ್ಟೇ ವ್ಯಾಪಕವಾಗಿ ಕಲ್ಲನ್ನೂ ಅವರು ಬಳಸಿದ್ದಾರೆ. ಅದರಲ್ಲಿ ತಯಾರಿಸಿದ ವಸ್ತುಗಳೆಂದರೆ ವಿವಿಧ ರೀತಿಯ ಉದ್ದನೆಯ ಕತ್ತಿಗಳು ಅಲಗುಗಳು, ಸಿಂಧೂ ಕಾಲದ ಮಣ್ಣಿನ ಸಾಮಾನುಗಳಲ್ಲಿ ಬಲೂಚಿಸ್ತಾನದ ಮತ್ತು ಭಾರತದ (ಕುಲಬಂಗನ್) ಸಂಪ್ರದಾಯಗಳ ಮಿಶ್ರಣವನ್ನು ಕಾಣಬಹುದು. ಈ ಕುಲದ ಮಣ್ಣಿನ ಸಾಮಾನು ಸಾದಾ ಸ್ವರೂಪದವು ಬಳಸಿ ಮಾಡಿದವುಗಳಾಗಿವೆ. ಬಹುಪಾಲು ಮಣ್ಣಿನ ಸಾಮಾನುಗಳ ಮೇಲೆ ಕೆಂಬಣ್ಣದ ಉದ್ದ ಪಟ್ಟಿಗಳಿದ್ದು, ಕಪ್ಪು ಬಣ್ಣದಲ್ಲಿ ಅಲಂಕರಿಸಲಾಗಿದೆ. ಸಿಂಧೂ ಕುಲದ ಮಣ್ಣಿನ ಸಾಮಾನುಗಳು ಕೆಂಬಣ್ಣದ ಮೇಲೆ ಕಪ್ಪು ಬಣ್ಣವಿರುವ ಸಾಮಾನುಗಳೆಂದೇ ಪ್ರಸಿದ್ಧಿ. ಅವುಗಳ

---

೫. ಡಾ. ವಿಜಯ ಪೂಣಚ್ಚ ತಂಬಂಡ(ಸಂ.): ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೪, ಚರಿತ್ರೆ, ಪು-೧೦೯.

ಮೇಲೆ ಸಾಮಾನ್ಯವಾಗಿ ಜ್ಯಾಮಿತಿಯ ವಿನ್ಯಾಸಗಳು, ಹಕ್ಕಿಗಳು, ಮೀನು, ಪ್ರಾಣಿಗಳು, ಗಿಡಮರಗಳು, ಆಲದೆಲೆಗಳಂಥ ಪ್ರಾಕೃತಿಕ ಚಿತ್ರಗಳು ಮತ್ತು ಮೀನುಗಳ ಚರ್ಮದ ವಿನ್ಯಾಸ, ಚುಕ್ಕಿಗಳು, ವಿವಿಧ ವಿನ್ಯಾಸದ ವೃತ್ತಗಳು ಮುಂತಾದವುಗಳನ್ನು ಬಿಡಿಸಲಾಗಿದೆ. ಕೆಲವೊಂದು ದಂತ ಕೆತ್ತನೆಗಳೂ ಉತ್ಖನನ ಕಾಲದಲ್ಲಿ ದೊರೆತಿವೆಯೆಂದು ವರದಿಯಾಗಿದೆ. ಇವುಗಳಲ್ಲಿ ಬಾಚಣಿಗೆಗಳು, ಅಳತೆಪಟ್ಟಿ ಹಾಗೂ ಚದುರಂಗದ ಕಾಯಿಗಳೂ ಮುಂತಾದವುಗಳಿವೆ.[೬]

"ಕರ್ನಾಟಕ ಕಲೆಯನ್ನು ಅಧ್ಯಯನ ಮಾಡುವಾಗ ಹಲವಾರು ವಿದ್ವಾಂಸರು ತಮ್ಮದೇ ಆದಂತಹ ಅಧ್ಯಯನದ ಮಾನದಂಡವನ್ನು ಉಪಯೋಗಿಸಿದ್ದಾರೆ. ಕರ್ನಾಟಕದ ಕಲೆಯನ್ನು ಇಡಿಯಾಗಿ, ಬಿಡಿ ಬಿಡಿಯಾಗಿ ವಿಭಿನ್ನ ದೃಷ್ಟಿಕೋನಗಳಿಂದ ನೋಡುವಂತಹ ಪ್ರಯತ್ನಗಳು ಆಗಿವೆ. ಉದಾಹರಣೆಗೆ, ಶಾಸನಗಳನ್ನು ತೆಗೆದುಕೊಂಡಾಗ, ಸಾಮಾನ್ಯವಾಗಿ ಶಾಸನತಜ್ಞರು ಅವುಗಳನ್ನು ಭಾಷೆ, ಸಾಹಿತ್ಯ, ಲಿಪಿ ಮತ್ತು ಶಾಸನದಲ್ಲಿರುವ ವಿಷಯವನ್ನು ಚರ್ಚಿಸುತ್ತಾರೆ. ಇದೇ ಶಾಸನವನ್ನು ಒಬ್ಬ ಇತಿಹಾಸತಜ್ಞ ಅಂದಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ರಾಜಕೀಯ ಚಟುವಟಿಕೆಗಳಿಗೆ ಪೂರಕವಾದಂತೆ ನೋಡುವ ಪ್ರಯತ್ನ ಮಾಡುತ್ತಾನೆ. ಆದರೆ ಅದೇ ಶಾಸನವನ್ನು ಒಬ್ಬ ಕಲಾವಿದ ನೋಡುವ ದೃಷ್ಟಿಯೇ ಬೇರೆ. ಈ ಮೇಲಿನ ಹಿನ್ನೆಲೆಗಳ ಅರಿವಿನಲ್ಲಿ ಶಾಸನವನ್ನು ಕೇವಲ ಅಕ್ಷರಗಳ ಅಥವಾ ಶಬ್ದಗಳ ಜೋಡಣೆ ಅಥವಾ ಒಂದು ಸಮೂಹ ಎಂದು ಪರಿಗಣಿಸದೇ ಅದನ್ನು ಒಂದು ಕಲಾಕೃತಿಯನ್ನಾಗಿ ನೋಡುತ್ತಾನೆ."[೭] ಹೀಗೆ ಕಲಾವಿದನ ದೃಷ್ಟಿಕೋನವು ಇತರರಿಗಿಂತ ಭಿನ್ನವಾದುದು ಮತ್ತು ಸೃಜನಶೀಲವಾದುದಾಗಿದೆ.

ಕಲಾತ್ಮಕ, ಸೃಜನಾತ್ಮಕ, ಇತರರಿಗಿಂತ ಭಿನ್ನತೆಯ ಗುಣಗಳನ್ನು ಹೊಂದಿರುವ ಕಲಾವಿದ ತಾನು ಇಲ್ಲದೇ ಹೋದರೂ, ತನ್ನಿಂದ ಅಭಿವ್ಯಕ್ತಗೊಂಡಿರುವ ಕಲಾಕೃತಿ ತನ್ನ ಮುಂದಿನ ಪೀಳಿಗೆಯವರಿಗೆ ನಿದರ್ಶನಗಳಾಗುವಂತೆ ಮಾಡಿದ್ದು, ಅವು ಇಂದು ನಮ್ಮ ಕಣ್ಮುಂದಿವೆ. ವಿಶೇಷವಾಗಿ ಭಾರತದಲ್ಲಿನ ಅದೆಷ್ಟೋ ಭವ್ಯ ಪರಂಪರೆಯನ್ನು ಮತ್ತು ಕಲಾತ್ಮಕತೆಯನ್ನು ಹೊಂದಿರುವ ದೇವಾಲಯಗಳಲ್ಲಿ ಅತ್ಯಂತ ಪರಿಶ್ರಮವೊಡ್ಡಿ ತಮ್ಮದೇ ಆದ ಚಾಕಚಕ್ಯತೆಯನ್ನು ತೋರಿಸಿದಂತಹ ಅಮೂಲ್ಯ ಕಲಾವಿದರುಗಳ ಹೆಸರುಗಳು ಇಂದು ಎಲ್ಲಿಯೂ ಉಲ್ಲೇಖಗೊಂಡಿಲ್ಲ. ಇದೊಂದು ದೊಡ್ಡ ದುರಂತವೆಂದು ಹೇಳಿದರೆ ತಪ್ಪಾಗಲಾರದು. ರಾಜರ ಆಳ್ವಿಕೆಯ ಅವಧಿಗಳಲ್ಲಿ ತಾವು ಮಾಡಿದ ಪ್ರತಿಯೊಂದು ಯೋಜನೆ, ದೇವಾಲಯ, ಇತ್ಯಾದಿಗಳಲ್ಲೂ ಅವರ ಹೆಸರುಗಳೇ ಎಲ್ಲೆಡೆಯೂ ಉಲ್ಲೇಖಗೊಂಡಿದ್ದು, ನಿಜವಾಗಿಯೂ ಅಲ್ಲಿ ಕಠಿಣ ಪರಿಶ್ರಮಪಡುವ ಕಲಾವಿದರ ಮಾಹಿತಿಗಳೇ ಲಭ್ಯವಿಲ್ಲ. ಆದರೆ ವಿಶೇಷವಾಗಿ ಹೈದರಾಬಾದ್ ಕರ್ನಾಟಕ ಪ್ರದೇಶದ ಬಳ್ಳಾರಿ ಭಾಗದಲ್ಲಿ ಒಬ್ಬ ಶಿಲ್ಪಕಲಾವಿದನ ಕುರಿತಂತೆ ಒಂದು ಶಾಸನದಲ್ಲಿ ಉಲ್ಲೇಖಗೊಂಡಿದೆ. ಕ್ರಿ.ಶ. ೧೨-೧೩ನೇ ಶತಮಾನದ ಅಮೃತೇಶ್ವರ ದೇವಸ್ಥಾನದ ಮುಖಮಂಟಪದ ಕಂಬದ ಮೇಲಿನ ಶಾಸನದಲ್ಲಿ

---

೬. ಡಾ. ವಿಜಯ ಪೂಣಚ್ಚ ತಂಬಂಡ(ಸಂ.): ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೪, ಚರಿತ್ರೆ, ಪು-೧೧೦.

೭. ಡಾ. ಲಕ್ಷ್ಮಣಸಿಂಗ್ ಆರ್. ರಾಥೋಡ್: ಕರ್ನಾಟಕದಲ್ಲಿ ಅನ್ವಯಕಲೆ ಐತಿಹಾಸಿಕ ದೃಷ್ಟಿಕೋನ, ಪು-೨೧೭, ೨೧೮.

"ಶಿವಪಾದಶೇಖರ, **ಕಲಿಯುಗ ವಿಶ್ವಕರ್ಮ**, ಅರವತ್ತನಾಲ್ಕು ಕಲೆಗಳಲ್ಲಿ ಪ್ರವೀಣ, ಅರವತ್ತ ನಾಲ್ಕು ಪ್ರಾಸಾದ ವಿಶಾರದ ಮತ್ತು ನಗರ, ಕಲಿಂಗ, ದ್ರಾವಿಳ(ದ್ರಾವಿಡ) ಮತ್ತು ವೇಸರ ಎಂಬ ನಾಲ್ಕು ವಿಧದ ದೇವಸ್ಥಾನಗಳನ್ನು ಕಟ್ಟುವುದರಲ್ಲಿ ನಿಪುಣನಾದ ಸೂತ್ರಧಾರಿ ಸೋಗೆಯ(ಇಂದಿನ ಹೂವಿನಹಡಗಲಿ ತಾಲೂಕಿನ ಸೋಗೆ ಗ್ರಾಮ) ಪದ್ಮೋಜನ ಶಿಷ್ಯ ಬಮ್ಮೋಜನು ಬೋಕೋಜನ ಮಗನು ಮತ್ತು ಬಮ್ಮೋಜನು ಪ್ರತಿಯೊಂದಕ್ಕೆ ಅಲಂಕಾರ ಸಹಿತ ೨೦ ಗದ್ಯಾಣದಂತೆ ನಾಲ್ಕು ಕಂಬಗಳನ್ನು ೮೦ ಗದ್ಯಾಣಗಳಿಗೆ ಮಾಡಿದನೆಂದು ತಿಳಿಸುತ್ತದೆ."[೮]

ಹೀಗೆ ಅಲ್ಲೊಂದು ಇಲ್ಲೊಂದು ಶಾಸನಗಳಲ್ಲಿ, ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಗೊಂಡ ಸಾಂಪ್ರದಾಯಿಕ ಕಲಾವಿದರ ಮಾಹಿತಿಗಳು ಲಭ್ಯವಿವೆ. ಆದರೆ ಇವು ಒಂದೋ ಎರಡೋ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯವು ಹೈದ್ರಾಬಾದ್ ಕರ್ನಾಟಕದ ಶಿಲ್ಪಕಲಾವಿದರನ್ನು ಪ್ರಮುಖವಾಗಿ ಈ ಪ್ರದೇಶದಲ್ಲಿ ಬರುವಂತಹ ಆರು ಜಿಲ್ಲೆಗಳಲ್ಲಿ ಕಂಡುಬರುವ ಹಿರಿಯ ಇಬ್ಬರು ಶಿಲ್ಪಕಲಾವಿದರು ಗಳನ್ನು ಆಯ್ಕೆ ಮಾಡಿಕೊಂಡು ಕ್ರಮವಾಗಿ ಅವರ ಜೀವನ ಸಾಧನೆ ಮತ್ತು ಕಲಾಸೇವೆಯ ಕುರಿತು ಇಲ್ಲಿ ವಿವರಿಸಲಾಗಿದೆ.

### ೩.೧. ಬೀದರ ಜಿಲ್ಲೆಯ ಶಿಲ್ಪಕಲಾವಿದರು

ಕರ್ನಾಟಕದ ಕಿರೀಟವೆಂದೇ ಕರೆಯುವ ಬೀದರ ಜಿಲ್ಲೆಯಿಂದ ಇಬ್ಬರು ಹಿರಿಯ ಕಲಾವಿದರುಗಳನ್ನು ಆಯ್ದುಕೊಂಡು ಅವರ ಕಲಾಬದುಕಿನ ಕುರಿತು ಅಧ್ಯಯನ ಮಾಡಲಾಗಿದೆ.

೩.೧.೧. ರಾಜಕುಮಾರ ಪಂಚಾಳ

೩.೧.೨. ಲೋಹಶಿಲ್ಪ ಕಲಾವಿದ ಮಹಮ್ಮದ ಮೈಜುದ್ದೀನ್

### ೩.೧.೧. ರಾಜಕುಮಾರ ಪಂಚಾಳ

ಮಹಾಭಾರತದ ಪರ್ವದಲ್ಲಿ ವಿದುರ ಪಟ್ಟಣ ಇತ್ತು ಎಂಬ ಪುರಾತನ ಐತಿಹ್ಯವಿದೆ. ಆ ಪಟ್ಟಣವೇ ಬೀದರ್ ನಾಡು. ಗತವೈಭವದ ಇತಿಹಾಸದಲ್ಲಿ ಸಾಹಿತ್ಯ, ಸಾಮಾಜಿಕ, ಶೈಕ್ಷಣಿಕ, ಶಿಲ್ಪಕಲೆ, ಚಿತ್ರಕಲೆ, ವಾಸ್ತುವಿನ್ಯಾಸಕ್ಕೆ ಪ್ರಸಿದ್ಧಿ ಪಡೆದಿದೆ. ಇಂತಹ ಪರಿಸರದಲ್ಲಿ ಪಾರಂಪರಿಕವಾಗಿ ಸಾಂಪ್ರದಾಯಿಕ ಕಾಷ್ಠಶಿಲ್ಪ,(ಮರ) ಲೋಹಶಿಲ್ಪ, ಗಾರೆಗಚ್ಚು(ಸಿಮೆಂಟ್ ಶಿಲ್ಪ) ಶಿಲ್ಪಕಲಾವಿದರು ಅವಿರತವಾಗಿ ಕಲೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಇವರಲ್ಲಿ ಒಬ್ಬರಾದ ರಾಜಕುಮಾರ್ ಪಂಚಾಳ ಸಾಂಪ್ರದಾಯಕ ಕಾಷ್ಠಶಿಲ್ಪಗಳನ್ನು ಕೆತ್ತುವುದರಲ್ಲಿ ನಿಷ್ಣಾತರಾಗಿದ್ದಾರೆ. ಬೀದರ್ ಜಿಲ್ಲೆಯ ಹಳ್ಳದಕೇರಿಯಲ್ಲಿ ೨೯.೦೮.೧೯೭೭ರಲ್ಲಿ ಇವರ ಜನನವಾಯಿತು. ತಂದೆ ಮೌನಪ್ಪ ಪಂಚಾಳ, ತಾಯಿ ಸರಸ್ವತಿ. ಇವರ ತಂದೆ ಮುರುಕಂದದ ಸಕ್ಕರೆ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದರು.

ಸಾಮಾನ್ಯ ವರ್ಗದವರಲ್ಲಿ ಹುಟ್ಟಿ ಬೆಳೆದ ಕಲಾವಿದ ರಾಜಣ್ಣನವರು ಬಾಲ್ಯದಿಂದಲೇ ಕುಶಲಮತಿಯಾಗಿದ್ದರು ಎಂದು ಕಂಡುಬರುತ್ತದೆ. ತಂದೆ ಕಾರ್ಖಾನೆಯಲ್ಲಿ ಕೆಲಸ ಮಾಡುವಾಗ

೮. ಚನ್ನಬಸಪ್ಪ ಎಸ್. ಪಾಟೀಲ, ವಿನೋದಾ ಪಾಟೀಲ(ಸಂ.): ಬಳ್ಳಾರಿ ಜಿಲ್ಲೆಯ ಶಾಸನಗಳು, ಪು–೪೦.

ಅಲ್ಲಿಯೇ ಚಿಕ್ಕ ಕೋಣೆಯಲ್ಲಿ ಕುಟುಂಬದ ವಸತಿಯಾಗಿತ್ತು. ಆದರೆ ಅವರ ತಂದೆ ಮೋನಪ್ಪನವರು ಮಕ್ಕಳ ಶಿಕ್ಷಣಕ್ಕಾಗಿ ಬೀದರ್‌ನಲ್ಲಿ ಮನೆಯನ್ನು ಮಾಡಿ ಹಳ್ಳದಕೇರಿಯಲ್ಲಿರುವ ಸರ್ಕಾರಿ ಶಾಲೆಯಲ್ಲಿ ವ್ಯಾಸಂಗ ಮಾಡಿಸಿದರು. ನಂತರ ರಾಜಕುಮಾರ್ ಪಂಚಾಳರ ಸಹೋದರ ಮಾವನಾದ ಉಡುಬನಹಳ್ಳಿಯ ಭೀಮರಾವ್ ಪಂಚಾಳರ ಮನೆಯಲ್ಲಿ ವಿದ್ಯಾಭ್ಯಾಸ ಮಾಡಿದರು. ಹಳ್ಳದಕೇರಿ ಸರ್ಕಾರಿ ಪ್ರೌಢಶಾಲೆಯಲ್ಲಿ ಎಸ್.ಎಸ್.ಎಲ್.ಸಿ. ವ್ಯಾಸಂಗ ಮಾಡಿ ಉತ್ತೀರ್ಣರಾದರು. ಬಾಲ್ಯ ದಲ್ಲಿಯೇ ಚಿತ್ರಕಲೆಯ ಬಗ್ಗೆ ಆಸಕ್ತಿ ಮೂಡಿತ್ತು. ಒಂದು ಸಾರಿ ಪಕ್ಕದ ಮನೆಯಲ್ಲಿ ಟಿವಿ ನೋಡುವಾಗ ರಾಮಾಯಣ ಧಾರವಾಹಿಯಲ್ಲಿ ರಾಮನು ಬಿಲ್ಲು ಮುರಿಯುತ್ತಿರುವ ದೃಶ್ಯವನ್ನು ಕಂಡು ಮನೆಗೆ ಬಂದು ಆ ದೃಶ್ಯದ ಚಿತ್ರವನ್ನು ರೇಖಾಚಿತ್ರದಲ್ಲಿ ಬಿಡಿಸಿದ್ದು ಕಂಡುಬರುತ್ತದೆ.

ರಾಜಣ್ಣನವರು ಬಡತನದ ನೋವುಗಳನ್ನು ಅನುಭವಿಸಿದ್ದಾರೆ. ಹಳ್ಳದಕೇರಿಯಲ್ಲಿ ಮುಸ್ಲಿಮರ ಚಹಾದ ಹೋಟೆಲ್‌ನಲ್ಲಿ ಶಾಲೆ ಮುಗಿದ ನಂತರ ಸಾಯಂಕಾಲ ೫ ಗಂಟೆಗೆ ಕಪ್ಪು ಗ್ಲಾಸುಗಳನ್ನು ತೊಳೆದು ಬಂದುದರಿಂದ ತಿಂಗಳಿಗೆ ಅವರು ಕೊಡುವ ಹಣದಲ್ಲಿ ಶಾಲೆಯ ಶುಲ್ಕವನ್ನು ಕಟ್ಟಿ ಶಿಕ್ಷಣ ಕಲಿತಿದ್ದು ಅವರ ಜೀವನದ ಯಶೋಗಾಥೆ. ಇಷ್ಟೇ ಅಲ್ಲ, ತಿಂಗಳ ಸಂಬಳದಿಂದ ಬಂದ ಹಣದಿಂದ ಹಾಲು ಮೊಸರಿನ ಪಾಕೀಟುಗಳನ್ನು ಸೈಕಲಿನ ಮೇಲೆ ಹೋಗಿ ಮನೆ ಮನೆಗೆ ಹಂಚಿ ಅದರಲ್ಲಿ ಬರುವ ಹಣವನ್ನು ಕೂಡ ತನ್ನ ಶಿಕ್ಷಣಕ್ಕೆ ಮತ್ತು ಕುಟುಂಬದ ನಿರ್ವಹಣೆಗೆ ತಂದೆಯವರಿಗೆ ಸಹಾಯ ಮಾಡಿದ್ದು ಅಚ್ಚರಿ ಎನಿಸುತ್ತದೆ.

ಎಸ್.ಎಸ್.ಎಲ್.ಸಿ. ಉತ್ತೀರ್ಣ ಆದ ನಂತರ ಮುಂದೆ ಕಲಿಯಬೇಕೆಂಬ ಆಸೆ ರಾಜಣ್ಣ ನವರಿಗೆ ಇತ್ತು. ಮನೆಯ ಪರಿಸ್ಥಿತಿ ಆರ್ಥಿಕವಾಗಿ ಸುಗಮವಾಗಿರಲಿಲ್ಲ. ಇವರ ಇಚ್ಛೆಗೆ ವಿರುದ್ಧವಾಗಿ ಬಂಧು ಬಳಗದವರು ವಿದ್ಯಾಭ್ಯಾಸ ನಿಲ್ಲಿಸು ನಮ್ಮ ವೃತ್ತಿಯಾದ ಮರ ಕೆತ್ತನೆಯ ಕೆಲಸವನ್ನು ನಡೆಸಿಕೊಂಡು ಕುಟುಂಬ ಸಾಕುವ ಜವಾಬ್ದಾರಿಯನ್ನು ಸೂಚಿಸಿದರು. ಇದರಿಂದ ಬೇಸರಗೊಂಡು ಹತ್ತು ದಿವಸ ಯಾರ ಜೊತೆಗೂ ಮಾತನಾಡದೆ ಊಟವನ್ನು ತ್ಯಜಿಸಿ ಮೌನಕ್ಕೆ ಶರಣಾಗತಿಯಾದನು. ಬಾಲ್ಯದಲ್ಲಿಯೇ ಕಲೆಯನ್ನು ಕಲಿಯಬೇಕೆಂಬ ತವಕವನ್ನು ನೋಡಿ ಅವರ ಸೋದರ ಮಾವನಾದ ಭೀಮರಾವ್ ಪಂಚಾಳರು ನಿನಗೆ ಏನನ್ನು ಅಭ್ಯಾಸ ಮಾಡಬೇಕೆಂಬ ಆಸೆ ಇದೆಯೋ ಅದನ್ನು ಮಾಡು, ನಿನಗೆ ಹಣದ ಸಹಾಯವನ್ನು ನಾನು ಮಾಡುತ್ತೇನೆಂದು ಧೈಯ ತುಂಬಿದರು. ಇದೇ ಅವರ ಜೀವನದ ತಿರುವಿಗೆ ಕಾರಣವಾಯಿತು. ಅಲ್ಲಾಖಾನ್ ಎಂಬ ಚಿತ್ರಕಲಾ ಉಪನ್ಯಾಸಕರು ಬೀದರನಲ್ಲಿರುವ ಡಾ. ಎಸ್. ಎಂ. ಪಂಡಿತ ಚಿತ್ರಕಲಾ ಮಹಾವಿದ್ಯಾಲಯಕ್ಕೆ ಕರೆದುಕೊಂಡು ಹೋಗಿ ಡಿ.ಎಂ.ಸಿ. ಪ್ರಥಮ ವರ್ಷದ ತರಗತಿಗೆ ಪ್ರವೇಶ ಮಾಡಿಸಿದರು. ಇದಕ್ಕೆ ಬೇಕಾಗುವ ಏಳು ನೂರು ರುಪಾಯಿ ಶುಲ್ಕವನ್ನು ಮಾವನವರಾದ ಬೀಮರಾವ್ ಪಂಚಾಳರೇ ಕೊಟ್ಟು ಸಹಾಯ ಮಾಡಿದರು. ಡಿ.ಎಂ.ಸಿ. ಪ್ರಥಮ ಹಾಗೂ ದ್ವಿತಿಯ ತರಗತಿಯಲ್ಲಿ ಉತ್ತೀರ್ಣರಾದರು. ಮುಂದೆ ಆರ್ಟ ಮಾಸ್ಟರ್ ಡಿಪ್ಲೊಮೋ ತರಗತಿಯನ್ನು ಪೂರ್ಣಗೊಳಿಸಿ ಚಿತ್ರಕಲೆಯಲ್ಲಿ ಕಲಾ ಶಿಕ್ಷಣ ಮಾಡಿಕೊಂಡರು. ಒಂದು ಸಣ್ಣ ಬಳಪ(ಚಾಕ್‌ಪೀಸ್)ದಲ್ಲಿ ಶಿಲಾಬಾಲಿಕೆ ಹಾಗೂ

ಸಾಯಿಬಾಬಾ, ಕೋತಿ ಮುಂತಾದ ಪ್ರಾಣಿಗಳ ಶಿಲ್ಪಗಳನ್ನು ಕೆತ್ತಿದರು. ಇದನ್ನು ನೋಡಿ ಅವರ ತಂದೆಯವರಾದ ಮೋನಪ್ಪನವರು ಇದರಲ್ಲಿ ಏಕೆ ಕೆತ್ತುತ್ತಿಯಾ ಇದರ ಬದಲಾಗಿ ಕಟ್ಟಿಗೆಯಲ್ಲಿ ಏಕೆ ಕೆತ್ತಬಾರದು ಎಂದಾಗ ನನಗೆ ಅದಕ್ಕೆ ಬೇಕಾದ ಉಪಕರಣಗಳು ಇಲ್ಲವೆಂದು ಹೇಳಿದರು. ತಂದೆಯು ಮಗನ ಆಸೆಯನ್ನು ಈಡೇರಿಸಲು ಮರ ಕೆತ್ತನೆ ಮಾಡಲು ಬೇಕಾಗುವ ಉಪಕರಣಗಳನ್ನು ತಂದುಕೊಟ್ಟರು. ಆ ಉಪಕರಣಗಳಿಂದ ಪ್ರಪ್ರಥಮವಾಗಿ ಮೌನೇಶ್ವರನ ಮೂರ್ತಿಯನ್ನು ಮರದಲ್ಲಿ ಸುಂದರವಾಗಿ ಕೆತ್ತನೆ ಮಾಡಿದರು. ಅದನ್ನು ಕಂಡು ಮನೆಯವರು ಹಾಗೂ ನೆರೆಹೊರೆಯವರು ತುಂಬಾ ಮೆಚ್ಚುಗೆ ಪಟ್ಟರು. ನಂತರ ಅನೇಕ ವಿಧವಾದ ಮೂರ್ತಿಗಳನ್ನು ರಚನೆ ಮಾಡಲು ಆರಂಭಿಸಿದರು. ಮರಶಿಲ್ಪ ಕಲೆಯಲ್ಲಿ ಸಿದ್ಧಹಸ್ತರಾದರು. ಬಿದರಿನಿಂದ ಆರು ಕಿ.ಮೀ ದೂರದಲ್ಲಿರುವ ಗಂಧದ ಮರ ಕೆತ್ತನೆಯ ಖಾಸಗಿ ಸಂಸ್ಥೆ(ಸ್ಯಾಂಡಲ್‌ವುಡ್ ಕಂಪನಿ)ಯ ಮಾಲೀಕರಾದ ಬಂಡೆಪ್ಪಾ ಗಣೇಶಪೂರ ಅವರಲ್ಲಿ ತಾವು ಕೆತ್ತಿರುವ ಕೆಲವು ಮರಶಿಲ್ಪವನ್ನು ತೋರಿಸಿದರು ಮತ್ತು ಚಿತ್ರಕಲೆಯಲ್ಲಿ ಕಲಾ ಶಿಕ್ಷಣ ಪಡೆದಿರುವ ಬಗ್ಗೆ ಅಂಕಪಟ್ಟಿ ಪ್ರಮಾಣಪತ್ರವನ್ನು ತೋರಿಸಿ ಕೆಲಸ ಕೊಡಲು ಕೇಳಿಕೊಂಡರು. ಇದಕ್ಕೆ ಅವರು ಒಪ್ಪಿಗೆ ನೀಡಿ ತಿಂಗಳಿಗೆ ೯೦೦ ರೂಪಾಯಿಗಳ ಸಂಬಳವನ್ನು ಗೊತ್ತು ಮಾಡಿದರು. ಗಂಧದ ಮರ ಕೆತ್ತನೆ ಕಂಪನಿಯಲ್ಲಿ ಗಣೇಶನ ವಿಗ್ರಹಗಳನ್ನು ಶ್ರೀಗಂಧದ ಮರದಲ್ಲಿ ಸುಂದರವಾಗಿ ಕೆತ್ತನೆ ಮಾಡಿದರು. ಸುಮಾರು ಮೂರು ವರ್ಷಗಳ ಕಾಲ ಸತತವಾಗಿ ಕಂಪನಿಯಲ್ಲಿ ಕೆಲಸ ಮಾಡಿದರು.

ಕಲಾವಿದ ರಾಜಕುಮಾರ ಪಂಚಾಳ ಅವರು ಪ್ರತ್ಯೇಕವಾಗಿ ಮನೆಯಲ್ಲೇ ಮರಶಿಲ್ಪ ಕೆತ್ತನೆಯ ಕಾರ್ಯವನ್ನು ಮಾಡುತ್ತಿದ್ದರು. ರಾಜಣ್ಣನವರ ಗೆಳೆಯರಾದ ರಾಜರೆಡ್ಡಿಯವರು ಪ್ರಥಮಬಾರಿಗೆ ಮನೆಯ ಬಾಗಿಲು ಹಣೆಪಟ್ಟಿಯ ಮೇಲೆ ಮೂರ್ತಿ ಮತ್ತು ನಕ್ಷೆ ವಿನ್ಯಾಸವನ್ನು ಮಾಡಲು ಇವರಿಗೆ ವಹಿಸಿಕೊಟ್ಟರು. ಬಾಗಿಲಿನ ಸುತ್ತಲೂ ಹೂ ಬಳ್ಳಿ ನಕ್ಷಾ ವಿನ್ಯಾಸಗಳು ಸರಪಳಿ ಬಳೆಗಳ ಸುಂದರವಾದ ಕೆತ್ತನೆಯನ್ನು ಮಾಡಿಕೊಟ್ಟರು. ಇದರಿಂದ ಇವರ ಕಲೆ ಸಮಾಜಕ್ಕೆ ಗುರುತಿಸುವಂತೆ ಆಯಿತು. ಹಾವಶೇಟ್ ಎಂಬ ಇಂಜಿನೀಯರ್ ಬಾಗಿಲನ್ನು ನೋಡಿ ಇದು ತುಂಬಾ ಸುಂದರವಾದ ನಕ್ಷೆಯಿಂದ ಕೂಡಿದೆ ಹಾಗೂ ಕಲಾತ್ಮಕವಾಗಿದೆ ಎಂದು ಹೇಳಿ ಅನೇಕ ಮರದ ಬಾಗಿಲು, ಮೂರ್ತಿಗಳನ್ನು ಮಾಡಲು ಪ್ರೇರಣೆಯಾದರು.

ಮರದ ಐದು ಸುಂದರಶಿಲ್ಪಗಳನ್ನು ಮಾಡಲು ಇವರಿಗೆ ಬೇಕಾಗುವ ಸಾಗುವಾನಿ ಕಟ್ಟಿಗೆ ಯನ್ನು ಒದಗಿಸಿಕೊಟ್ಟು ಅದರ ಸಂಬಾವನೆಯನ್ನು ಕೂಡ ನೀಡಿ ಕಲಾಕೃತಿಯನ್ನು ಪಡೆದುಕೊಂಡರು. ದಿನದಿನಕ್ಕೆ ಇವರ ಕಲಾಕೃತಿಗಳು ನಾಡಿನಾದ್ಯಂತ ಬೇಡಿಕೆಯಾಯಿತು. ಮರಶಿಲ್ಪಕಲೆಯಲ್ಲಿ ಅನೇಕ ವಿಧವಾದ ಶೈಲಿಗಳನ್ನು ಬಳಸಿಕೊಂಡು ಕಲಾಕೃತಿ ರಚನೆ ಮಾಡಿದರು. ಕಲಾಕೃತಿಗಳಲ್ಲಿ ಭಾವ ಭಂಗಿ ಪ್ರಮಾಣ ಲಾವಣ್ಯ ವೈಯಾರ ನವರಸಗಳು ಸ್ಫುರಿಸುವಂತೆ ಮರಶಿಲ್ಪವನ್ನು ಕೆತ್ತನೆ ಮಾಡುವುದರಲ್ಲಿ ನಿಷ್ಣಾತರಾದರು ಇದನ್ನು ಗುರುತಿಸಿ ೨೦೦೨ರಲ್ಲಿ ಇಂಜಿನಿಯರ್ ದಿನಾಚರಣೆ ಅಂಗವಾಗಿ ನಡೆಯುವ ಕಾರ್ಯಕ್ರಮದಲ್ಲಿ ಮರಶಿಲ್ಪಿ ರಾಜಕುಮಾರ ಪಂಚಾಳ ಅವರಿಗೆ ಪ್ರಶಸ್ತಿ

ಸನ್ಮಾನಗಳಿಂದ ಗೌರವಿಸಿ ನೆನಪಿನ ಕಾಣಿಕೆ ನೀಡಿದ್ದಾರೆ. ಇವರ ಕಲೆಯನ್ನು ಗುರುತಿಸಿ ಅನೇಕ ದಿನಪತ್ರಿಕೆಗಳು ವಾರಪತ್ರಿಕೆಗಳು ಇವರ ಕಲಾಶೈಲಿ ಮೂರ್ತಿಶಿಲ್ಪದ ವೈಶಿಷ್ಟ್ಯವನ್ನು ಕುರಿತು ಸಾಕಷ್ಟು ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಬೀದರ್ ಜಿಲ್ಲೆಯಲ್ಲಿ ಮರಶಿಲ್ಪಕಲೆಯಲ್ಲಿ ಹೆಸರು ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ.

ಬೀದರ್ ಜಿಲ್ಲೆಯ ಚಳಕಾಪುರದ ಹನುಮಾನ್ ಮಂದಿರದ ಬಾಗಿಲನ್ನು ಮರದಲ್ಲಿ ಕೆತ್ತನೆ ಮಾಡಲಾಗಿದೆ. ಬಾಗಿಲಿನ ಎಡ ಬಲ ಬದಿಯಲ್ಲಿ ರಾಮಾಯಣದ ಸನ್ನಿವೇಶಗಳನ್ನು ರಾಮ, ಲಕ್ಷ್ಮಣ, ಸೀತಾ, ಹನುಮಂತ ಮುಂತಾದ ಅನೇಕ ಶಿಲ್ಪಗಳು ರಚನೆ ಮಾಡಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಬಾಲ್ಕಿಯ ಚನ್ನಬಸವ ಪಟ್ಟದೇವರ ಮಠದಲ್ಲಿ ಶಿಲ್ಪ ಕೆಲಸವನ್ನು ಮಾಡಿದ್ದಾರೆ. ಹಾಗೆಯೇ ಬೀದರನ ಪಾಂಡುರಂಗ ದೇವಸ್ಥಾನ, ಕನ್ನಿಕಾ ಪರಮೇಶ್ವರಿ ದೇವಸ್ಥಾನ, ಜಹಿರಾಬಾದ್, ಮತ್ತು ಬಸವಕಲ್ಯಾಣದ ಅನುಭವ ಮಂಟಪದಲ್ಲಿ ಬೀದರ್‌ನ ಮೌನೇಶ್ವರ ದೇವಸ್ಥಾನ, ಕುಂಬಾರವಾಡ ಹನುಮಾನ್ ಮಂದಿರ ಬೀದರ್, ಮುಂತಾದ ಸ್ಥಳಗಳಲ್ಲಿ ಇವರ ಕಲಾಕೃತಿಗಳು ಕಂಡುಬರುತ್ತವೆ. ರಾಜಕುಮಾರ ಪಂಚಾಳರು ಆರ್ಟ್ ಪಾಯಿಂಟ್ ಅಕಾಡೆಮಿ ಬೀದರ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ.

ಕಲಾವಿದ ರಾಜಕುಮಾರ ಅವರು ಅಸೋಸಿಯೇಷನ್ ಆಫ್ ಕನ್ಸಲ್ಟಿಂಗ್ ಪ್ರಶಸ್ತಿಗೆ ಭಾಜನರಾದರು. ಅಂದಿನ ಸಭೆಯ ಮುಖ್ಯ ಅತಿಥಿಯಾಗಿ ಆಗಮಿಸಿದ ಕ್ಯಾಪ್ಟನ್ ರಾಜರಾವ್ ಬೆಂಗಳೂರು ಇವರು ಪಂಚಾಳರ ಕಲೆಯನ್ನು ಗುರುತಿಸಿ ಕೊಂಡಾಡಿದರು. ಹೈದರಾಬಾದ್ ಮುಂಬಯಿ ತಮಿಳನಾಡುಗಳಿಂದ ಇಂಜಿನಿಯರ್‌ಗಳು ಬಂದು ಇವರ ಕಲಾತ್ಮಕ ಕಲಾಕೃತಿಗಳನ್ನು ಪಡೆದುಕೊಂಡು ಹೋಗಿದ್ದಾರೆ. ಕಟ್ಟಿಗೆ ಮೇಲೆ ಕೈಯಾಡಿಸಿದರೆ ಸಾಕು ಅತ್ಯದ್ಭುತ ಮೂರ್ತಿ, ಚಿತ್ರ ಮೂಡಿ ಬರುತ್ತಿತ್ತು. ಆದರೆ ಇಂದಿನ ಆಧುನಿಕ ಯುಗದಲ್ಲಿ ಯಂತ್ರ ಕೈಯಾಡಿಸಿದರೆ ಸಾಕು ನೀವು ಹೇಳುವ ಚಿತ್ರ ರೆಡಿ. ಕಟ್ಟಿಗೆ ಮೇಲಿನ ಕೆತ್ತನೆ ವೃತ್ತಿಗೆ ಆಧುನಿಕ ಟಚ್ ನೀಡಲು ನೂತನ ಯಂತ್ರ ಆವಿಷ್ಕಾರ ಮಾಡಲಾಗಿದೆ. ಈ ಮೊದಲು ಕಲಾವಿದನ ಸಹಾಯದೊಂದಿಗೆ ಕಟ್ಟಿಗೆ ಮೇಲೆ ಕಲೆ ಕೆತ್ತನೆ ಮಾಡಲಾಗುತ್ತಿತ್ತು. ಇದೀಗ ಕೆತ್ತನೆ ಯಂತ್ರ ಬಂದಿದ್ದು ಅದರಿಂದಲೇ ಹೆಚ್ಚಾಗಿ ಕೆಲಸ ನಡೆಯುತ್ತಿದೆ. ಆದರೆ ಕಲಾವಿದನ ಕೈಯಿಂದ ಮೂಡಿಬಂದತಂತೆ ಯಂತ್ರದಿಂದ ಕೆಲಸ ಆಗುವುದಿಲ್ಲ. ಆದರೂ ಮಾರುಕಟ್ಟೆಯಲ್ಲಿ ಕಲಾವಿದರ ಬೇಡಿಕೆ ಕೊಂಚ ಕಡಿಮೆಯಾಗಿದೆ ಎನ್ನುತ್ತಾರೆ ಎಂದು ರಾಜಕುಮಾರ ಪಂಚಾಳರು ಅಭಿಪ್ರಾಯಪಟ್ಟಿದ್ದಾರೆ.

ಕಟ್ಟಿಗೆ ಮೇಲೆ ಮೂರ್ತಿ ಕೆತ್ತನೆಯ ತರಬೇತಿ ಕೇಂದ್ರ ತೆರೆಯುವ ಉದ್ದೇಶ ಹೊಂದಲಾಗಿದೆ. ಇದಕ್ಕೆ ಸರ್ಕಾರ ಸ್ಪಂದಿಸಿ, ಆರ್ಥಿಕವಾಗಿ ಸಹಕಾರ ನೀಡಿದರೆ ಶೀಘ್ರವೇ ಅನುಷ್ಠಾನಕ್ಕೆ ತರಲಾಗುವುದು. ಕಲೆ ಜೀವಂತವಾಗಿ ಉಳಿಸಿ ಬೆಳೆಸುವ ಜತೆಗೆ ಮುಂದಿನ ಪೀಳಿಗೆಗೆ ಮಹತ್ವವನ್ನು ತಿಳಿಸಿಕೊಡುವ ಉದ್ದೇಶದಿಂದ ತರಬೇತಿ ಕೇಂದ್ರ ಪ್ರಾರಂಭಿಸಲು ಸಂಕಲ್ಪ ಮಾಡಲಾಗಿದೆ.

## ೨. ಲೋಹಶಿಲ್ಪಿ ಮಹಮ್ಮದ್ ಮೈಜುದ್ದೀನ್

ಬೀದರ ಜಿಲ್ಲೆಯು ಬಿದರಿ ಕಲೆಗೆ ವಿಶ್ವವಿಖ್ಯಾತಿ ಪಡೆದಿದೆ. ಇಲ್ಲಿ ಅನೇಕ ಲೋಹಗಳನ್ನು ಬಳಸಿಕೊಂಡು ಸಮ್ಮಿಶ್ರಣ ಮಾಡಿ ಕಲಾಕೃತಿ ನಿರ್ಮಿಸುವ ಅನೇಕ ಮನೆತನಗಳಿವೆ. ಬೀದರ ಕೋಟೆಯ ಮಣ್ಣು ಬಿದರಿ ಕಲೆಗೆ ಪ್ರೇರಣೆಯಿಂದ ಸಾಮಗ್ರಿಯಾಗಿದೆ. ಕಲೆಗೆ ಜಾತಿ, ಮತ, ಕುಲ, ಗೋತ್ರಗಳು ಇಲ್ಲ. ಕಲೆ ಎಲ್ಲಾ ಧರ್ಮೀಯರನ್ನು ಸ್ವಾಗತಿಸಿ ಅಪ್ಪಿಕೊಳ್ಳುತ್ತದೆ. ಯಾವುದೇ ಕಲೆಯು ಯಾವುದೇ ಒಂದು ಧರ್ಮಕ್ಕೆ, ಜಾತಿಗೆ ಸೀಮಿತವಾದುದ್ದಲ್ಲ. ಚಿತ್ರ, ಶಿಲ್ಪ, ಸಂಗೀತ, ಸಾಹಿತ್ಯ, ನೃತ್ಯ, ವಾದ್ಯ ನುಡಿಸುವಿಕೆ, ಕ್ರೀಡೆ, ಜನಪದ ಹಾಡುಗಾರಿಕೆ ಮುಂತಾದ ಯಾವುದೇ ಕಲೆಯು ಪ್ರತಿಭಾವಂತರಿಗೆ ಮತ್ತು ಕಲೆಯಲ್ಲಿ ಆಸಕ್ತಿ ವಹಿಸಿ ಕಲಿತವರಿಗೆ ಮತ್ತು ಉತ್ತಮವಾದ ಕಲಾಗುರು ಶಿಲ್ಪಗುರು ದೊರೆತರೆ ಅವರಲ್ಲಿ ಅಭ್ಯಾಸ ಮಾಡಿದಂತೆ ಕಲೆಯು ಅವರಲ್ಲಿ ವ್ಯಕ್ತವಾಗುತ್ತದೆ.

ಇಂತಹ ಅನೇಕ ಕಲೆಗಳಲ್ಲಿ ಲೋಹಶಿಲ್ಪವನ್ನು ಸಾಂಪ್ರದಾಯಿಕ ಶೈಲಿಯಲ್ಲಿ ನಕ್ಷೆಗಳ ಅನೇಕ ಪ್ರಕಾರಗಳನ್ನು ಬಳಸಿಕೊಂಡು ಕಲಾಕೃತಿ ರಚಿಸಿದವರಲ್ಲಿ ಮಹಮ್ಮದ್ ಮೈಜುದ್ದೀನ್ ರವರೊಬ್ಬರು. ಇವರ ತಂದೆ ಮಹಮ್ಮದ್ ಇಸ್ಮಾಯಿಲ್ ಸಾಮಾನ್ಯ ವರ್ಗದ ಬಡಕುಟುಂಬದಲ್ಲಿ ಬೆಳೆದವರು. ಇವರಿಗೆ ವಾಸ ಮಾಡಲೂ ಒಂದು ಸ್ವಂತ ಚಿಕ್ಕ ಮನೆಯೂ ಆಶ್ರಯಕ್ಕೆ ಇದ್ದಿಲ್ಲ. ಬೀದರ ನಗರದ ಕುಸುಮಗಲ್ಲಿಯಲ್ಲಿ ಇವರು ವಾಸ್ತವ್ಯ ಮಾಡಿಕೊಂಡಿದ್ದರು. ಇವರ ತಂದೆ ಶ್ರಮಜೀವಿ. ಎಷ್ಟು ದುಡಿದರೂ ಇವರಿಗೆ ಆರ್ಥಿಕ ಸ್ಥಿತಿ ಸರಿದೂಗಲಿಲ್ಲ. ಇಂತಹ ಕುಟುಂಬದಲ್ಲಿ ಮಹ್ಮದ ಮೈಜುದ್ದೀನ್‌ರವರು ೧೯೬೭ರಲ್ಲಿ ಜನಿಸಿದರು. ಇವರ ತಾಯಿಯ ಹೆಸರು ಮರಿಯಮ್ಮ ಬೇಗಮ್. ಮೈಜುದ್ದೀನ್‌ರವರಿಗೆ ನಾಲ್ಕು ಜನ ಸಹೋದರ ಹಾಗೂ ಆರು ಜನ ಸಹೋದರಿಯರು. ಹಿರಿಯ ಅಣ್ಣನಾದ ಮಹ್ಮದ್ ಮಹಾರಾಷ್ಟ್ರದಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಲೋಹಶಿಲ್ಪಿ ಮೈಜುದ್ದೀನ್ ಅವರ ತಂದೆ ಕಾಲವಾದ ನಂತರ ಇವರ ತಾಯಿಯವರು ಕುಟುಂಬವನ್ನು ಸಾಗಿಸಲು ಶಾಲಾ ಮಕ್ಕಳಿಗೆ ಮನೆಪಾಠ ಹೇಳಿ ಬಂದ ಹಣದಲ್ಲಿ ಇವರ ಕುಟುಂಬವನ್ನು ಸಾಕಿದ್ದಾರೆ. ಮೈಜುದ್ದೀನ್ ಅವರ ತಾಯಿ ಮನೆಯಲ್ಲಿ ಬಟ್ಟೆ ಹೊಲಿಗೆಯನ್ನು ಮಾಡಿ ಬಂದ ಹಣದಲ್ಲಿ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿದ್ದಾರೆ. ಇದರ ಫಲವಾಗಿ ಮೈಜುದ್ದೀನರು ಟಿ.ಸಿ.ಎಚ್. ಶಿಕ್ಷಕರ ತರಬೇತಿಯನ್ನು ವ್ಯಾಸಂಗ ಮಾಡಿದರು. ಇವರ ತಾಯಿಯೇ ಮಕ್ಕಳಿಗೆ ಶಿಕ್ಷಣ ಕಲಿಯಲು ನೆರವಾದರು.

ಮೈಜುದ್ದೀನ್ ಅವರ ತಮ್ಮಂದಿರು ಬಿದ್ರಿಕಲೆಯನ್ನು ಮಾಡುತ್ತಿದ್ದರಿಂದ ಇವರ ಮೇಲೆ ಲೋಹಶಿಲ್ಪ ಕಲಾಕೃತಿಯನ್ನು ತಯಾರಿಸಬೇಕು. ಅದನ್ನು ಕಲಿಯಬೇಕೆಂಬ ಹಂಬಲವು ಹುಟ್ಟಿ ಕೊಂಡಿತು. ನಂತರ ಅವರ ಸಹಸಹೋದರರ ಆಶ್ರಯದಲ್ಲಿ ಬಿದ್ರಿಕಲೆಯನ್ನು ಕಲಿತರು. ಇವರು ಕುಸುಮಗಲ್ಲಿಯಲ್ಲಿದ್ದ ಸರಕಾರಿ ಪ್ರಾಥಮಿಕ ಶಾಲೆಯಲ್ಲಿ ವ್ಯಾಸಂಗ ಮಾಡಿದರು. ಶಾಲೆಯಲ್ಲಿ ಕ್ರೀಡೆಗಳ ಬಗ್ಗೆ ಆಸಕ್ತಿಯಿದ್ದು, ಆಟಗಳಲ್ಲಿ ಭಾಗವಹಿಸುತ್ತಿದ್ದುದು ಕಂಡುಬರುತ್ತದೆ. ಕಬಡ್ಡಿ, ಖೋಖೋ ಮುಂತಾದ ಆಟಗಳಲ್ಲಿ ಆಸಕ್ತಿಯಿದ್ದಿತು. ಕೆಲವಾರು ಕ್ರೀಡೆಗಳಲ್ಲಿ ಭಾಗವಹಿಸಿ, ಬಹುಮಾನಗಳನ್ನು ಪಡೆದುಕೊಂಡಿದ್ದಾರೆ.

ಪ್ರೌಢಶಿಕ್ಷಣ ಕಲಿಯಲು ಆರಂಭಿಸಿದಾಗ ಉಸ್ತಾದ್ ಜಪರುಲ್ಲಾ ಖಾನ್, ಶಿಕ್ಷಕರು ಇವರಿಗೆ ಮಾರ್ಗದರ್ಶಕರಾದರು. ಇವರ ಪ್ರತಿಭೆಯನ್ನು ಗುರುತಿಸಿ, ಚಿತ್ರಕಲೆ, ಪೇಂಟಿಂಗ್ ಮುಂತಾದ ಲಲಿತಕಲೆಗಳಲ್ಲಿರುವ ಆಸಕ್ತಿ ಗುರುತಿಸಿ, ಡ್ರಾಯಿಂಗ್ ಮತ್ತು ಪೇಂಟಿಂಗ್ ಪರೀಕ್ಷೆ ಬರೆದರು. ಇದರಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದರು. ಮೈಜುದ್ದೀನ್‌ರವರಿಗೆ ಸೋದರ ಮಾವನವರಾದ ಮಹ್ಮದ್ ಷರಿಪ್ ಉದ್ದೀನ್ ಸಾಬ್ ಲೋಹ ಕಲೆಯ ಗುರುಗಳಾಗಿ ದೊರೆತರು. ಇವರು ಬಿದ್ರಿಕಲೆಯ ಉತ್ತಮ ಕಲಾವಿದರಾಗಿದ್ದರಿಂದ ಕಲೆಯನ್ನು ಹೇಗೆ ಅಭ್ಯಾಸ ಮಾಡಿ ಲೋಹ ಕರಗುವಿಕೆ ಮತ್ತು ಮಿಶ್ರಣ ಆಕಾರಗಳ ಪರಿಕಲ್ಪನೆ ಮತ್ತು ಬಣ್ಣವನ್ನು ರೂಪಿಸುವಿಕೆಯ ವಿಧಿ-ವಿಧಾನಗಳನ್ನು ಕಲಿಸಿದರು. ಸಹೋದರ ಮಾವನವರೇ ಲೋಹಶಿಲ್ಪ ಬಿದ್ರಿಕಲೆಯನ್ನು ಕಲಿಸಲು ನೆರವಾದರು ಮತ್ತು ಅದರ ಶೈಲಿಗಳನ್ನು ಪರಿಪೂರ್ಣವಾಗಿ ಹೇಳಿಕೊಟ್ಟು, ಉತ್ತಮ ಲೋಹಶಿಲ್ಪಿಯನ್ನಾಗಿ ರೂಪಿಸಿದ್ದಾರೆ.

ಮಹಮ್ಮದ್ ಮೈಜುದ್ದೀನ್ ಶಾಲೆ ಮುಗಿದ ನಂತರ ಬಿಡುವಿನ ವೇಳೆಯಲ್ಲಿ ಬಿದ್ರಿ ಕೆಲಸವನ್ನು ಬಾಲ್ಯದಿಂದಲೇ ಕಲಿತರು. ಬಿದ್ರಿಯ ಲೋಹ ಶಿಲ್ಪಕಲೆಯಲ್ಲಿ ಮೈಜುದ್ದೀನ್ ಪರಿಣತಿ ಹೊಂದಲು ಇವರ ಸಹೋದರ ಮಾವನವರು ಕಾರಣರಾದರು. ಕಾಲವಶಾತ್ ತಾಯಿ, ತಂದೆ ವಿಧಿವಶರಾದರು. ನಂತರ ಕುಟುಂಬದ ಹೊಣೆ ಇವರ ಮೇಲೆ ಬಿದ್ದಿತು. ಆಗ ಶಿಕ್ಷಣವನ್ನು ಕಲಿಯುತ್ತಲೇ ಬಿದ್ರಿ ಕೆಲಸ ಮಾಡಿ ಬಂದ ಹಣದಲ್ಲಿ ಜೀವನ ನಡೆಸಬೇಕಾದ ಅನಿವಾರ್ಯತೆ ಉಂಟಾಯಿತು. ನಂತರ ಎಸ್.ಎಸ್.ಎಲ್.ಸಿ. ಪಾಸಾಗಿ, ಪಿ.ಯು.ಸಿ. ಶಿಕ್ಷಣವನ್ನು ಮುಂದುವರಿಸಿದರು. ಅದರಲ್ಲಿ ತೇರ್ಗಡೆಯಾಗಿ ಪದವಿ ಶಿಕ್ಷಣ ಪಡೆಯಲು ಬಿ.ಎ. ಪದವಿ ತರಗತಿಗೆ ಪ್ರವೇಶ ಪಡೆದರು. ಆದರೆ ವ್ಯಾಸಂಗ ಮಾಡಲು ಕಾಲಾವಕಾಶ ಸಿಗಲಿಲ್ಲ. ಮನೆತನ ನಡೆಸಲು ಬಿದ್ರಿಕಲೆಯೊಂದೇ ಇವರಿಗೆ ಮಾರ್ಗವಾಗಿ ಉಳಿದಿತ್ತು. ಬಿ.ಎ. ಪದವಿ ಅರ್ಧಕ್ಕೆ ನಿಲ್ಲಿಸಿ, ಲೋಹದ ಮಿಶ್ರಣ ಮಾಡುತ್ತ ಲೋಹ ಕರಗಿಸಿ ಕಲಾಕೃತಿ ತಯಾರಿಸುವಲ್ಲಿ ಮಗ್ನರಾಗುತ್ತಾರೆ. ಆದರೆ ಪದವಿ ಪರೀಕ್ಷೆ ಬರೆದು ಬಿ.ಎ. ಪದವೀಧರನಾಗಬೇಕೆಂಬ ಹಂಬಲ ಇವರಲ್ಲಿ ಕಡಿಮೆಯಾಗಲಿಲ್ಲ. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಬಾಹ್ಯ ಅಭ್ಯರ್ಥಿಯಾಗಿ ಬಿ.ಎ. ಪದವಿ ಪಡೆದುಕೊಂಡರು.

ಪದವಿ ಶಿಕ್ಷಣ ಮುಗಿಯುತ್ತಲೇ ತಮ್ಮ ಸಂಪೂರ್ಣ ಗಮನವನ್ನು ಬಿದ್ರಿ ಕಲೆಯ ಕಡೆಗೆ ಕೊಡಲು ಪ್ರಾರಂಭಿಸಿದರು. ೧೯೯೧ರಲ್ಲಿ ಬಿದ್ರಿ ಕಲೆಯ ಮಳಿಗೆಯನ್ನು(ವರ್ಕ್‌ಶಾಪ್) ಪ್ರಾರಂಭಿಸಿದರು. ಇದಕ್ಕೆ "ಸುಪರ್ಣಾ ಬಿದ್ರಿ ವರ್ಕ್ಸ್" ಎಂದು ನಾಮಕರಣ ಮಾಡಿದರು. ಇದಕ್ಕೆ ಪೂರ್ವದಲ್ಲಿ ಮೈಜುದ್ದೀನ್ ಬೇರೊಬ್ಬರ ಅಂಗಡಿಯಲ್ಲಿ ಲೋಹ ಶಿಲ್ಪಿಗಳಾಗಿ ಕೆಲಸ ಮಾಡುತ್ತಿದ್ದರು. ಆರ್ಥಿಕವಾಗಿ ತುಂಬಾ ಬಡವರಾಗಿದ್ದರು. ತಮ್ಮ ಮನೆಯಲ್ಲಿಯೇ ಲೋಹ ಕೆತ್ತನೆಯ ಕೆಲಸ ಮಾಡಿಕೊಂಡು ಬಂದು ಕಲಾಸಾಮಗ್ರಿಗಳನ್ನು ಬೇರೆಯವರ ಮಳಿಗೆಯಲ್ಲಿ ತಂದು ಮಾರಾಟ ಮಾಡುತ್ತಿದ್ದರು. ಸ್ವಂತ ಮಳಿಗೆ ಇದ್ದಿಲ್ಲ. ನಂತರ ಹೀಗೆ ಸಂಪಾದನೆ ಮಾಡಿ ಸ್ವಂತ ಮಳಿಗೆ ಮಾಡಿಕೊಂಡರು.

ಮೈಜುದ್ದೀನ್ ಅವರು ಬಿದ್ರಿಕಲೆಯಲ್ಲಿ ತುಂಬಾ ಪಾರಂಗತರಾಗಿ ಹೊಸ ಆಯಾಮಗಳನ್ನು ಕಲಾಕೃತಿಗಳಲ್ಲಿ ಸೃಷ್ಟಿಸಿದರು. ಹೊಸ ಹೊಸ ಆವಿಷ್ಕಾರಗಳನ್ನು ಲೋಹ ಕಲೆಗಳಲ್ಲಿ ಕಂಡುಕೊಂಡರು. ವೈವಿಧ್ಯಮಯವಾದ ವಿನ್ಯಾಸ, ನಕ್ಷಪ್ರಕಾರಗಳು ಮತ್ತು ಲೋಹದಲ್ಲಿಯ ಭೇದ–ಪ್ರಭೇದಗಳಿಗೆ ಮಿಶ್ರಣದ ರೂಪ ವಿಧಾನಗಳನ್ನು ತಮ್ಮದೇ ಆದ ಅನುಭವದ ರೀತಿಯಲ್ಲಿ ಪರಿಶೀಲಿಸಿ ಕಲಾಕೃತಿ ರಚನೆ ಮಾಡಿದ್ದೇ ಇವರ ಕಲಾಕೃತಿ ಮೆಚ್ಚುಗೆ ಪಡೆಯಲು ಕಾರಣವಿರಬಹುದು. ಬಿದ್ರಿಕಲೆಯನ್ನು ವ್ಯಾಪಾರಿ ದೃಷ್ಟಿಯಿಂದಲೂ ಇವರು ಅದನ್ನು ಹೇಗೆ ಜನರಿಗೆ ಆಕರ್ಷಣೆಯಾಗಬೇಕು, ಲೋಹಕಲೆಯಾದ ಬಿದ್ರಿ ಕಲೆಯು ಯಾವ ರೀತಿ ಕಾಲಗಳು ಬದಲಾದಂತೆ ಕೆಲವು ಸಾಂದರ್ಭಿಕ ಬದಲಾವಣೆಯನ್ನು ಅಳವಡಿಸಿಕೊಂಡು ವಿನ್ಯಾಸ ಮತ್ತು ನಕ್ಷೆಗಳ ರೂಪರೇಷೆಗಳನ್ನು ಪರಿವರ್ತನೆ ಮಾಡಿ ಜನರ ಬೇಡಿಕೆಗೆ ತಕ್ಕಂತೆ ಕಲಾಕೃತಿ ಮಾದರಿಗಳನ್ನು ರಚನಾತ್ಮಕವಾಗಿ ರೂಪಿಸಿದ್ದು ಒಂದು ವೈಶಿಷ್ಟ್ಯವಾಗಿದೆ.

ಮಹಮದ್ ಮೈಜುದ್ದೀನ್ ಅವರು ತಮ್ಮ ಲೋಹ ಶಿಲ್ಪಕಲಾಕೃತಿ ರಚನಾಕ್ಷೇತ್ರದಲ್ಲಿ ಪ್ರತಿಸ್ಪರ್ಧಿಗಳಿಂದ ಪೈಪೋಟಿ ಎದುರಿಸಬೇಕಾಯಿತು. ಆದರೆ ಧರ್ಮ ಬಿಡಲಿಲ್ಲ. ಎದೆಗುಂದದೇ ಪರಿಶ್ರಮದಿಂದ ಲೋಹಶಿಲ್ಪಕಲೆಯ ಬೆಳವಣಿಗೆಯಲ್ಲಿ ತಮ್ಮನ್ನು ಉನ್ನತ ಶಿಖರಕ್ಕೆ ಏರಿಸಿಕೊಳ್ಳಲು ಬೇಕಾದ ಹಂತಗಳನ್ನು ಬಹು ಜಾಗರೂಕತೆಯಿಂದ ಒಂದರಂತೆ ಒಂದಾಗಿ ಮೆಟ್ಟಿ ನಿಂತರು. ಕೊನೆಗೆ ಬಿದ್ರಿಯ ಲೋಹಶಿಲ್ಪಕಲಾವಿದನಾಗಿ ನಾಡಿನ, ದೇಶದ ಉದ್ದಗಲಕ್ಕೂ ಹೆಸರುವಾಸಿಯಾಗ ಬೇಕೆಂದುಕೊಂಡ ತನ್ನ ಗುರಿಯನ್ನು ಮುಟ್ಟಿದರು ಎಂದು ಹೇಳಬಹುದು. ಶ್ರಮವಿಲ್ಲದೆ ಯಾವ ಶಕ್ತಿಯು ತನ್ನ ಕನಸನ್ನು ನನಸಾಗಿಸಿಕೊಳ್ಳಲಾರ ಎಂಬುದನ್ನು ಸಾಧಿಸಿ ತೋರಿಸಿದ ಕಲಾವಿದರು ಇವರು. ಬಿದ್ರಿ ಕಲೆಯಲ್ಲಿ ತಮ್ಮನ್ನೇ ಸಮರ್ಪಿಸಿಕೊಂಡ ಕಲಾವಿದರಾದ ಮೈಜುದ್ದೀನ್ ಅವರು ಕರ್ನಾಟಕ ಸರ್ಕಾರದ 'ಹ್ಯಾಂಡ್‌ಕ್ರಾಫ್ಟ್ ಡೆವಲೆಪ್‌ಮೆಂಟ್ ಕಾರ್ಪೊರೇಶನ್', ಬೆಂಗಳೂರು ಈ ಮಂಡಳಿಯು ಇವರ ಕಲೆಯ ಅಭಿವೃದ್ಧಿಗಾಗಿ ಧನಸಹಾಯ ನೀಡಿದ್ದು ಸ್ಮರಣೀಯ ಹಾಗೂ ಇವರ ಮುಂದಿನ ಭವಿಷ್ಯದ ಪ್ರಗತಿಪಥಕ್ಕೆ ಸಹಾಯಕವಾಗಿದೆ ಎಂದು ಹೇಳಿದ್ದಾರೆ.

ಮಹಮದ್ ಮೈಜುದ್ದೀನ್ ಅವರು ವಿಶ್ವಮಟ್ಟದಲ್ಲಿ ಬಿದ್ರಿಕಲೆ ಪ್ರಚಾರ ಮಾಡಿದರು. ಬಿದ್ರಿ ಕಲೆಯ ಬೆಳವಣಿಗೆಗಾಗಿ ಪ್ರಚಾರಕ್ಕೆ ಹಲವಾರು ಸ್ಥಳಗಳಲ್ಲಿ ಕಲಾಕೃತಿಗಳ ಪ್ರದರ್ಶನವನ್ನು ಮಾಡಿದ್ದಾರೆ. ದೇಶ–ವಿದೇಶಗಳಲ್ಲಿ ಕರ್ನಾಟಕ ಸರ್ಕಾರದ ಧನಸಹಯೋಗದೊಂದಿಗೆ ಕಲಾಕೃತಿ ಪ್ರದರ್ಶಿಸುವ ಅವಕಾಶ ದೊರೆಯಿತು. ಇದರಿಂದ ವಿದೇಶಗಳಲ್ಲಿಯೂ ಬಿದ್ರಿಕೆಲಯ ಬಗ್ಗೆ ಪರಿಚಯ ಮತ್ತು ತಿಳುವಳಿಕೆ ಮೂಡಿತು. ಪ್ರವಾಸಿಗರು ಬೇರೆ ಬೇರೆ ರಾಜ್ಯಗಳಿಂದ ಬಂದು ಬೀದರ್‌ನ ಲೋಹ ಶಿಲ್ಪಕಲಾ ಕೃತಿಗಳನ್ನು ಕೇಳಿ ಪಡೆದುಕೊಂಡು ಹೋಗುತ್ತಾರೆ.

ಬೀದರ ಮತ್ತು ಬಿದ್ರಿಕಲೆಗೆ ಹೆಸರು ಕೀರ್ತಿ ಪ್ರತಿಷ್ಠೆ ತಂದುಕೊಟ್ಟವರಲ್ಲಿ ಲೋಹಶಿಲ್ಪಿ ಮೈಜುದ್ದೀನ್‌ರವರು ಪ್ರಥಮ ಶ್ರೇಣಿಗರಾಗಿದ್ದಾರೆ. "ಸುಪರ್ಣಾ ಬಿದ್ರಿ ವರ್ಕ್ಸ್ ಹಾಗೂ ತರಬೇತಿ ಕೇಂದ್ರ" ಪ್ರಾರಂಭಿಸಿ, ಕಲಿಯುವ ಪರಂಪರೆಯಾಗಿದೆ. ಇವರ ಮೂಲ ಉದ್ದೇಶವೆಂದರೆ

ನಿರುದ್ಯೋಗಿ ಯುವಕ, ಯುವತಿಯರಿಗೆ ಬಿದ್ರಿಕಲೆ ಒಂದು ಆದರ್ಶ ಜೀವನಕ್ಕೆ ಸಹಕಾರಿಯಾಗುತ್ತದೆ. ಮತ್ತು ಪ್ರಾಚೀನ ಪರಂಪರೆಯುಳ್ಳ ಕಲೆ ಮುಂದುವರಿಸಿಕೊಂಡು ಹೋದಂತೆಯೂ ಆಗುತ್ತದೆ. ಇದರಿಂದ ಅನೇಕ ಹೊಸ ನವ ನವೀನ ಕಲಾಸೃಷ್ಟಿಗೆ ಅವಕಾಶ ಕಲ್ಪಿಸಿದಂತೆ ಆಗುತ್ತದೆ ಎಂಬುದು ಇವರ ಮೂಲ ಉದ್ದೇಶವಾಗಿದೆ.

ನಿರುದ್ಯೋಗಿ ಯುವಕರು ಬ್ಯಾಂಕ್‌ಗಳು, ಸಹಕಾರ ಸಂಘಗಳಿಂದ ಆರ್ಥಿಕ ಸಾಲಸೌಲಭ್ಯ, ಧನಸಹಾಯ ಮುಂತಾದ ಸರಕಾರದ ಸೌಲಭ್ಯಗಳನ್ನು ಪಡೆದುಕೊಂಡು ಸ್ವತಂತ್ರವಾಗಿ ಕಲಾಸೇವೆ ಮಾಡುತ್ತ ಬದುಕಬಹುದೆಂದು ಇವರು ಇಚ್ಚೆಪಟ್ಟಿರುವುದಾಗಿದೆ. ಸ್ವಸಹಾಯ ಗುಂಪುಗಳ ಮೂಲಕ ಕಲಾಕೃತಿ ರಚನೆಯ ಜವಾಬ್ದಾರಿ ಮತ್ತು ವಿಲೇವಾರಿ ಮಾಡಿ ಬಂದ ಹಣವನ್ನು ಸಂಘಗಳ ಮೂಲಕ ವಿನಿಮಯ ಮಾಡಿಕೊಂಡು ಆರ್ಥಿಕ, ಸಾಮಾಜಿಕ, ಕಲಾತ್ಮಕ, ಬದುಕನ್ನು ರೂಪಿಸಿಕೊಳ್ಳ ಬಹುದೆಂದು ಇವರ ಸಂಕೇತವಾಗಿದೆ.

ಬಿದ್ರಿಕಲೆಯಿಂದ ಲೋಹ ಶಿಲ್ಪಕಲಾಕೃತಿಗಳನ್ನು ವಿಶೇಷವಾಗಿ ಹೊಸ ಹೊಸ ಮಾದರಿಯಲ್ಲಿ ರಚಿಸಿ ನಾಡಿಗೆ ಈ ಕಲೆಯ ವೈಶಿಷ್ಟ್ಯವನ್ನು ಪರಿಚಯಿಸುವುದರೊಂದಿಗೆ ಕಲಾವಿದರು ರಚಿಸಿದ ಅನೇಕ ವಿವಿಧ ಮಾದರಿಯ ಕಲಾವಸ್ತುಗಳನ್ನು, ಕಲಾಕೃತಿ ಪ್ರದರ್ಶನ ಮಾಡುವ ಮೂಲಕ ಮಾರಾಟ ಮಾಡಿ ಬಂದ ಹಣದಿಂದ ಕೆಲಸ ಮಾಡುವ ಸ್ಥಳೀಯ ಲೋಹ ಶಿಲ್ಪಕಲಾವಿದರಿಗೆ ವೇತನರೂಪದಲ್ಲಿ ಹಣವನ್ನು ನೀಡಿ ಅವರ ಕುಟುಂಬಗಳನ್ನು ಬೆಳೆಸುವುದು ಇವರ ಇನ್ನೊಂದು ಸದುದ್ದೇಶವಾಗಿದೆ. ಲೋಹ ಶಿಲ್ಪಕಲಾವಿದರಾದ ಮಹಮದ್ ಮೈಜುದ್ದೀನ್ ಇವರ ಆಲೋಚನೆ, ಇಚ್ಛಾಶಕ್ತಿ ಹಾಗೂ ಈ ಕಲೆಯನ್ನು ಉಳಿಸಿಕೊಂಡು ಹೋಗಬೇಕೆನ್ನುವ ಹಂಬಲ ತುಡಿತದ ಪರಿಶ್ರಮದಿಂದ ಇವರ ಇಚ್ಚೆಯಂತೆ ಲೋಹಶಿಲ್ಪವನ್ನೇ ನಂಬಿದ ಅನೇಕ ಕುಟುಂಬಗಳು ಇಂದು ಸುಖವಾಗಿ ಮತ್ತು ನೆಮ್ಮದಿಯಿಂದ ಬದುಕುತ್ತಿವೆ. ತಮ್ಮ ಮಕ್ಕಳ ವಿದ್ಯಾಭ್ಯಾಸ ಮತ್ತು ಅವರ ಕೌಟುಂಬಿಕ ಸಾಮರಸ್ಯವನ್ನು ಕಾಪಾಡುವ ಮೂಲಕ ಆರ್ಥಿಕ ಸದೃಢತೆಯೊಂದಿಗೆ ಕಲೆಯನ್ನು ಉಳಿಸಿ, ಬೆಳೆಸಿ ಸಮಾಜಕ್ಕೆ ಲೋಹಶಿಲ್ಪಗಳ ಕಲಾಕೃತಿಗಳು ಮನೆ ಮನೆಗಳಲ್ಲಿ ಸಂಗ್ರಹವಾಗುವಂತೆ ಮಾಡಿದ್ದಾರೆ. ತಮ್ಮ ಕಲಾನೈಪುಣ್ಯ ವೈಶಿಷ್ಟ್ಯತೆಯನ್ನು ಪಸರಿಸುವಲ್ಲಿ ಲೋಹಶಿಲ್ಪ ಕಲಾವಿದರಾದ ಮಹಮದ್ ಮೈಜುದ್ದೀನ್ ಅವರ ಕಾರ್ಯ ಶ್ಲಾಘನೀಯ.

**ಗೌರವ-ಪುರಸ್ಕಾರಗಳು ಹಾಗೂ ಕಲಾ ಪ್ರದರ್ಶನಗಳು**

ಮಹಮದ್ ಮೈಜುದ್ದೀನ್ ಅವರು ಕಲಾತ್ಮಕ ಸಾಧನೆಗಳನ್ನು ಗುರುತಿಸಿ ಸಂಘ-ಸಂಸ್ಥೆ ಗಳು, ಸರ್ಕಾರವು ಗೌರವಿಸಿ ಪುರಸ್ಕಾರಗಳನ್ನು ನೀಡಿವೆ. ಅಲ್ಲದೆ ಅವರ ಕಲಾಕೃತಿಗಳನ್ನು ಪ್ರದರ್ಶಿಸಲು ಬೇರೆ ಬೇರೆ ರಾಷ್ಟ್ರಗಳು ಆಹ್ವಾನ ನೀಡಿವೆ. ಅವುಗಳಲ್ಲಿ ಮುಖ್ಯವಾಗಿ ಬಹರೇನ್, ಆಮ್ಮಮ್ ರಾಷ್ಟ್ರಗಳಲ್ಲಿ ಪ್ರದರ್ಶನಗೊಂಡು ಆ ರಾಷ್ಟ್ರದ ಜನತೆಯನ್ನು ಬೆರಗುಗೊಳಿಸಿದವು. ಹೀಗೆ ಅನೇಕ ರಾಷ್ಟ್ರಗಳಿಗೂ ಭೇಟಿ ನೀಡಿ ಬಿದ್ರಿಕಲೆಗಳ ಶ್ರೇಯಸ್ಸು ಹೆಚ್ಚಿಸಿದವರಲ್ಲಿ ಅಗ್ರಗಣ್ಯ ರಾಗಿದ್ದಾರೆ.

# ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು



**ಶ್ರೀ ರಾಜಕುಮಾರ ಪಂಚಾಳ**
(ಬೀದರ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಕೆತ್ತನೆಯ ಕಾರ್ಯದಲ್ಲಿ ತೊಡಗಿರುವ ಕಲಾವಿದರು

# ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು



**ಲೋಹಶಿಲ್ಪಿ ಶ್ರೀ ಮಹಮ್ಮದ ಮೈಜುದ್ದೀನ್**
(ಬೀದರ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಡಾ. ಎ.ಪಿ.ಜೆ. ಅಬ್ದುಲ್ ಕಲಾಮ್ ಅವರಿಂದ ರಾಷ್ಟ್ರಪ್ರಶಸ್ತಿ

೧. ಕೇಂದ್ರ ಸರ್ಕಾರದ ಸಣ್ಣ ಕೈಗಾರಿಕಾ ಸಂಸ್ಥೆಯು ೧೯೯೫ರಲ್ಲಿ ಇವರಿಗೆ ಕರ್ನಾಟಕ ಸರ್ಕಾರದ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

೨. ಅಲ್ಲದೆ ೧೯೯೬ರಲ್ಲಿ ಭಾರತ ಸರ್ಕಾರದ ಅಂದಿನ ಚುನಾವಣಾ ಆಯುಕ್ತರಾದ ಶ್ರೀಕೃಷ್ಣ ಮೂರ್ತಿಯವರು ಶ್ರೀಮತಿ ಪ್ರಿಯದರ್ಶಿನಿ ಇಂದಿರಾಗಾಂಧಿ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

೩. ತದನಂತರ ಇನ್ನೂ ಹೆಚ್ಚು ಪ್ರಶಸ್ತಿಗಳು ಇವರ ಬುತ್ತಿಗೆ ಬಂದು ಸೇರಿದವು. ೧೯೯೬ರಲ್ಲಿ ತಮಿಳುನಾಡು ಸರ್ಕಾರದ ರಾಜ್ಯಪಾಲರಾದ ಶ್ರೀ ಭೀಷ್ಮನಾರಾಯಣ ಸಿಂಗ್ ಇವರಿಗೆ ಅಂತರ ರಾಷ್ಟ್ರೀಯ ಎಕ್ಸಲೆನ್ಸಿ ಬಂಗಾರದ ಪದಕ ನೀಡಿ ಗೌರವಿಸಲಾಯಿತು.

೪. ಕರ್ನಾಟಕ ಸರ್ಕಾರವೂ ಕೂಡಾ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

೫. ವಿದೇಶಿಯರೂ ಕೂಡ ತಮ್ಮ ರಾಯಭಾರಿಗಳ ಕಛೇರಿಯ ಹೈಕಮಿಷನರ್ ಮುಖಾಂತರ ಪ್ರಶಸ್ತಿಯನ್ನು ನೀಡಿ ಇವರನ್ನು ಗೌರವಿಸಿದರು. ಅದರಲ್ಲಿ ಮಲೇಶಿಯಾ ಸರ್ಕಾರದ ರಾಯಭಾರಿ ಕಛೇರಿ ಹೈಕಮಿಷನರ್ ಇವರನ್ನು ತಮ್ಮ ಕಛೇರಿಗೆ ಕರೆಸಿ ಸತ್ಕರಿಸಿದರು.

೬. ಅಲ್ಲದೇ ಮುಂದುವರಿದು ನಮ್ಮ ಮೊದಲನೇ ಪ್ರಜೆ ಮಹಾ ವಿಜ್ಞಾನಿ, ವಿಶ್ವಮಾನ್ಯ, ಶ್ರೇಷ್ಠ ವ್ಯಕ್ತಿತ್ವ ಹೊಂದಿದ ಎ.ಪಿ.ಜೆ. ಅಬ್ದುಲ್ ಕಲಾಂ ಅವರು ರಾಷ್ಟ್ರಪ್ರಶಸ್ತಿಯನ್ನು ನೀಡಿ ಗೌರವಿಸಿದ್ದಾರೆ.

೭. ತಮ್ಮ ನಾಡ ಪ್ರತಿಭೆಯನ್ನು ಕಂಡು ಬೀದರ್ ಜಿಲ್ಲಾ ವಾಣಿಜ್ಯ ಸಂಸ್ಥೆ ಇವರನ್ನು ಸತ್ಕರಿಸಿ ಗೌರವಿಸಿರುವುದು ಹೆಮ್ಮೆಯ ಸಂಗತಿಯಾಗಿದೆ.

೮. ಭಾರತ ಸರ್ಕಾರದ ಖಾದಿ ಮತ್ತು ಕೈಗಾರಿಕಾ ಇಲಾಖೆಯು ಇವರಿಗೆ "*Best Bidri work Display*" ಈ ಕಲೆಯನ್ನು ಕಾರ್ಯಗತ ಮಾಡಿಕೊಂಡು ತಮ್ಮ ಉಪಜೀವನ ನಡೆಸಿಲ್ಲವೆನ್ನುವ ಉದ್ದೇಶವಾಗಿತ್ತು. ಪಡೆದುಕೊಂಡು ತಮ್ಮ ಉದ್ಯೋಗವನ್ನು ಮುಂದು–ವರಿಸುವುದು ಆಗಿತ್ತು.

### ೩.೨. ಕಲಬುರ್ಗಿ(ಗುಲಬರ್ಗಾ) ಜಿಲ್ಲೆಯ ಶಿಲ್ಪಕಲಾವಿದರು

ಶಿಲ್ಪಕಲೆ, ಸಾಹಿತ್ಯ, ಸಂಗೀತ, ಚಿತ್ರ, ವಾಸ್ತುಶಿಲ್ಪ ಇವು ಒಂದು ನಾಡಿನ ಜನರ ನಾಗರಿಕತೆ ಮತ್ತು ಸಂಸ್ಕೃತಿಯ ಬೆಳವಣಿಗೆಯನ್ನು ಗುರುತಿಸುತ್ತದೆ. ಬಿಸಿಲುನಾಡು ಎಂದು ಗುರುತಿಸಿಕೊಂಡ ಕಲಬುರ್ಗಿ ಚಿತ್ರ ಶಿಲ್ಪ ಸಾಹಿತ್ಯ ಸಂಗೀತ ಕಲೆಗಳಿಗೆ ಅನೇಕ ಕವಿ ಕಲಾವಿದರನ್ನು ಕೊಡುಗೆಯನ್ನಾಗಿ ನಾಡಿಗೆ ಕೊಟ್ಟಿದೆ. ಹಾಗೆಯೇ ಸಾಂಪ್ರದಾಯಿಕ ಶಿಲ್ಪಕಲೆ ಮತ್ತು ಶಿಲ್ಪಕಲಾವಿದರನ್ನು ಅನೇಕ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಬೆಳಕು ಚೆಲ್ಲುವಂತೆ ಮಾಡಿದೆ. ಯುವಕಲಾವಿದರಿಂದ ಹಿಡಿದು ಪ್ರಾಯದವರು ಸೇರಿದಂತೆ ಸಾಂಪ್ರದಾಯಿಕ ಶಿಲ್ಪವನ್ನು ವೃತ್ತಿಯನ್ನಾಗಿಸಿಕೊಂಡವರು ಕಲಬುರ್ಗಿ ಜಿಲ್ಲೆಯಲ್ಲಿ ಇದ್ದಾರೆ. ಪ್ರಸ್ತುತ ಈ ಜಿಲ್ಲೆಯ ಇಬ್ಬರು ಹಿರಿಯ ಕಲಾವಿದರುಗಳನ್ನು ಮಾತ್ರ ಅಧ್ಯಯನ ಮಾಡಲಾಗಿದೆ.

೩.೨.೧. ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ, ದಿಗ್ಗಾಂವ

೩.೨.೨. ಲೋಹಶಿಲ್ಪಿ ಮಾನಯ್ಯ ಬಡಿಗೇರ

## ೩.೨.೧. ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ ದಿಗ್ಗಾಂವ

ಮಹಾದೇವಪ್ಪ ಎಸ್. ಶಿಲ್ಪಿ ಇವರು ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ದಿಗ್ಗಾಂವ ಎಂಬ ಗ್ರಾಮದಲ್ಲಿ ಕ್ರಿಶ. ೧೯೩೫ರಲ್ಲಿ ಜನಿಸಿದರು. ತಂದೆ ಶಂಭುಲಿಂಗಪ್ಪ, ತಾಯಿ ರಾಚಮ್ಮ. ಈ ದಂಪತಿಗಳಿಗೆ ಐದು ಜನ ಮಕ್ಕಳು. ನಾಲ್ಕನೆಯ ಮಗನಾಗಿ ಜನಿಸಿದ ಮಹಾದೇವಪ್ಪ ಶಿಲ್ಪಿ ಅವರಿಗೆ ಎರಡು ವರ್ಷ ತುಂಬುತ್ತಿದ್ದಂತೆ ತಮ್ಮನಾದ ದೇವೇಂದ್ರಪ್ಪ ತಾಯಿ ಗರ್ಭದಲ್ಲಿರುವಾಗಲೇ ಅವರ ತಂದೆ ತೀರಿಕೊಂಡರು. ಆಗ ಮನೆಯ ಎಲ್ಲಾ ಜವಾಬ್ದಾರಿಯನ್ನು ತಾಯಿಯಾದ ರಾಚಮ್ಮಳೇ ತೆಗೆದುಕೊಂಡಳು. ತಂದೆಯ ಪ್ರೀತಿ ಪೋಷಣೆಯನ್ನು ಕಾಣಲಿಲ್ಲ. ತಾಯಿ ರಾಚಮ್ಮಳೇ ತಂದೆಯಂತೆ ಮಕ್ಕಳ ಪ್ರತಿ ಹಂತದಲ್ಲಿ ಪೋಷಣೆ ಮಾಡಿದಳು. ತಾಯಿಯೂ ಆಗಿ ತಂದೆಯೂ ಆಗಿ ಕಾರ್ಯ ನಿರ್ವಹಿಸಿದರು. ಮಹಾದೇವಪ್ಪನವರಿಗೆ ಆರು ವರ್ಷ ತುಂಬುತ್ತಿದ್ದಂತೆ ತಾಯಿ ಶಾಲೆಗೆ ಸೇರಿಸಿದಳು. ಪ್ರಾಥಮಿಕ ಮಟ್ಟದ ವಿದ್ಯಾಭ್ಯಾಸವನ್ನು ಏಳನೇ ತರಗತಿವರೆಗೆ ತಮ್ಮ ಸ್ವಂತ ಊರು ದಿಗ್ಗಾಂವದಲ್ಲಿಯೇ ಕಲಿತರು. ಆ ಸಮಯದಲ್ಲಿ ಕಲಬುರ್ಗಿಯು ನಿಜಾಮನ ಆಡಳಿತಕ್ಕೆ ಒಳಪಟ್ಟಿತ್ತು. ಶಾಲೆಗಳಲ್ಲಿ ಉರ್ದು ಭಾಷೆಯ ಮುಖಾಂತರ ಶಿಕ್ಷಣ ಕೊಡುತ್ತಿದ್ದರು. ಒಂದು ವಿಷಯ ಮಾತ್ರ ಕನ್ನಡ ಕಲಿಸುತ್ತಿದ್ದರು. ಆದ್ದರಿಂದ ಮಹಾ ದೇವಪ್ಪನವರಿಗೆ ಉರ್ದು ಚೆನ್ನಾಗಿ ಬರುತ್ತದೆ. ಮುಂದೆ ದೇಶ ಸ್ವಾತಂತ್ರ್ಯ ನಂತರ ಕನ್ನಡವನ್ನು ಚೆನ್ನಾಗಿ ಮಾತನಾಡಲು ಬರೆಯಲು ಓದಲು ಕಲಿತರು. ಮಿತ್ರರ ಗೆಳೆತನದಿಂದ ಹಿಂದಿಯೂ ಕೂಡ ಪರಿಚಯವಾಯಿತು. ಈಗ ಹಿಂದಿ, ಉರ್ದು, ಕನ್ನಡ ಓದಲು ಬರೆಯಲು ಮಾತನಾಡಲು ಬಲ್ಲವರಿದ್ದಾರೆ. ತ್ರಿಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡುತ್ತಾರೆ.

ಮಹಾದೇವಪ್ಪನವರು ಪ್ರಾಥಮಿಕ ಶಾಲೆಯಲ್ಲಿ ವಿದ್ಯಾಭ್ಯಾಸದ ಜೊತೆಗೆ ಆಟವಾಡುವ ಆಟಿಕೆಗಳು, ಪ್ರಾಣಿಗಳು, ದೇವತೆಗಳ ಶಿಲ್ಪಗಳನ್ನು ಮಣ್ಣಿನಲ್ಲಿ ರಚಿಸುತ್ತಿದ್ದರು. ಇವರ ಮಣ್ಣಿನ ಶಿಲ್ಪಗಳನ್ನು ಕಂಡು ಸಹಪಾಠಿಗರು ಸಂತೋಷಪಡುತ್ತಾ ಇವರನ್ನು ಸ್ನೇಹಿತರನ್ನಾಗಿ ಮಾಡಿಕೊಂಡರು. ಮನೆಯ ಸುತ್ತಲಿನ ಜನರು ಇವರ ಮಣ್ಣಿನ ಮೂರ್ತಿಗಳನ್ನು ನೋಡಿ ಸಂತೋಷಪಡುತ್ತಿದ್ದರು.

ಬಾಲ್ಯದಲ್ಲಿ ಕೆಲವು ಅವಕಾಶ ಸಿಕ್ಕಾಗ ನಾಟಕದಲ್ಲಿ ಸಣ್ಣಪುಟ್ಟ ಪಾತ್ರಗಳನ್ನ ಮಾಡಿದ್ದಾರೆ. ಪ್ರಾಥಮಿಕ ಶಾಲಾ ಶಿಕ್ಷಣ ಮುಗಿಸಿ ಹದಿನಾರನೇ ವಯಸ್ಸಿನಲ್ಲಿ ಅಕ್ಕಸಾಲಿಗರ ವೃತ್ತಿಯನ್ನು ಕಲಿಯಲು ಹಲಕರಿಟಿ ಗ್ರಾಮಕ್ಕೆ ಸೋದರಮಾವನ ಮನೆಗೆ ಬಂದು ಎರಡು ವರ್ಷಗಳ ಕಾಲ ಅಕ್ಕಸಾಲಿಗ ಕೆಲಸವನ್ನು ಕಲಿತರು. ಇನ್ನೂ ಹೆಚ್ಚಿನ ಕೆಲಸ ಕಲಿಯಲು ಗುಲಬರ್ಗಾದಲ್ಲಿರುವ ಚಿಕ್ಕಪ್ಪನವರ ಬಂಗಾರದ ಅಂಗಡಿಯಲ್ಲಿ ಕೆಲಸವನ್ನು ಪ್ರಾರಂಭಿಸಿದರು. ಅವರ ಚಿಕ್ಕಪ್ಪನವರು ಒಳ್ಳೆಯ ಮಾರ್ಗದರ್ಶನ ಮಾಡಿದರು. ಸುವರ್ಣ ಕೆಲಸದ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡಿದರು. ಕೆಲಸದಲ್ಲಿ ಸೂಕ್ಷ್ಮತೆ, ಕುಸುರಿ ಕೆಲಸ, ಲೋಹವನ್ನು ಕರಗಿಸಿ ಶೋಧಿಸಿ ಶುದ್ಧೀಕರಿಸಿ

ಕೊಂಡು ಆಭರಣ ತಯಾರಿಸುವುದನ್ನು ಕಲಿತರು. ಅದೇ ವೇಳೆಯಲ್ಲಿ ತಮಿಳುನಾಡಿನ ಮುತ್ತಾಚಾರಿ ಯವರು ಗಾಣಗಾಪುರದಲ್ಲಿ ದತ್ತನ ಗೋಪುರ ಹಾಗೂ ದತ್ತಾತ್ರೇಯನ ಮೂರ್ತಿಯನ್ನು ನಿರ್ಮಿಸಲು ಬಂದಿದ್ದರು. ಶಿಲ್ಪಿ ಮುತ್ತಾಚಾರಿಯವರು ಗುಲಬರ್ಗಾದಲ್ಲಿರುವ ಮಹಾದೇವಪ್ಪನವರ ಚಿಕ್ಕಪ್ಪನ ಅಂಗಡಿಗೆ ಆಗಾಗ ಬರುತ್ತಿದ್ದರು. ಆ ಸಮಯದಲ್ಲಿ ಮಹಾದೇವಪ್ಪನವರಿಗೆ ಮುತ್ತಾಚಾರಿ ಯವರ ಪರಿಚಯವಾಯಿತು.

ಒಂದು ದಿವಸ ಮಹಾದೇವಪ್ಪನವರು ಮತ್ತು ಶಿಲ್ಪಿ ಮುತ್ತಾಚಾರಿಯವರು ಶಿಲ್ಪಕಲೆಯ ಬಗ್ಗೆ ಚರ್ಚಿಸುತ್ತಿರುವಾಗ ಶಿಲ್ಪಕಲೆಯನ್ನು ಕಲಿಯಬೇಕೆಂಬ ಹಂಬಲ ಮೂಡಿತು. ಮುತ್ತಾಚಾರಿಯವರ ಶಿಲ್ಪಕಲೆಯ ಪ್ರಭಾವ ಮಹದೇವಪ್ಪನವರಿಗೆ ತಾನೂ ಒಬ್ಬ ಶಿಲ್ಪಿಯಾಗಬೇಕೆನ್ನುವಷ್ಟು ಪರಿಣಾಮ ಉಂಟುಮಾಡಿತು. ಶಿಲ್ಪಿ ಮುತ್ತಾಚಾರಿಯವರು ಮಹಾದೇವಪ್ಪನವರನ್ನು ಗಾಣಗಾಪುರಕ್ಕೆ ಕರೆದು ಕೊಂಡು ಹೋದರು. ಶಿಲ್ಪಿ ಮುತ್ತಾಚಾರಿಯವರನ್ನು ಶಿಲ್ಪಿ ಗುರುಗಳೆಂದು ತಿಳಿದು ಅವರಿಂದ ಶಿಲ್ಪದಲ್ಲಿ ಜೀವಕಳೆ ಯಾವ ರೀತಿ ತರಬೇಕೆಂಬುದನ್ನು ಚೆನ್ನಾಗಿ ಅರಿತರು. ಸಂಬಳವಿಲ್ಲದೇ ಕೆಲಸ ಮಾಡಿ ತೃಪ್ತಿಪಟ್ಟರು. ಅಲ್ಲಿ ಇನ್ನೊಬ್ಬ ಸ್ಥಪತಿ ಸುಪಯಾಚಾರ್ಯರು ಇವರ ಆಸಕ್ತಿಯನ್ನು ಕಂಡು ಚಕಿತರಾಗಿ ಸಂತೋಷಪಟ್ಟರು ಹಾಗೂ ಮಹಾದೇವಪ್ಪನವರಿಗೆ ಶಿಲ್ಪಕಲೆಯ ಬಗ್ಗೆ ಮಾರ್ಗದರ್ಶನ ಮಾಡಿದರು. ಇವರ ಮಾರ್ಗದರ್ಶನದಂತೆ ಎರಡು ವರ್ಷಗಳ ಕಾಲ ಗಾಣಗಾಪುರದಲ್ಲಿ ದತ್ತಾತ್ರೇಯನ ದೇವಸ್ಥಾನದ ಕೆಲಸ ಮಾಡುವುದರ ಮೂಲಕ ಮಹಾದೇವಪ್ಪನವರು ಶಿಲ್ಪ ಕಲೆಯ ತರಬೇತಿ ಪಡೆದರು. ನಂತರ ಸುಪಯಾಚಾರ್ಯರು ಹೆಚ್ಚಿನ ಶಿಲ್ಪಕಲಾ ಅಭ್ಯಾಸಕ್ಕಾಗಿ ಮಹಾದೇವಪ್ಪನವರನ್ನು ಶಿಲ್ಪಿ ಗುರುಗಳಾದ ಸ್ಥಪತಿ ಗಣಪತಿಗಳಿಗೆ ಒಂದು ಪತ್ರ ಬರೆದು ಇವರಿಗೆ ಕೊಟ್ಟು ನೀವು ಈ ಪತ್ರ ತೋರಿಸಿರಿ ಅವರು ನಿಮಗೆ ಶಿಲ್ಪಕಲೆಯನ್ನು ಕಲಿಸುತ್ತಾರೆಂದು ಹೇಳಿದರು.

ಮದ್ರಾಸಿನವರಾದ ಗಣಪತಿ ಸ್ಥಪತಿಯವರು ಆಂಧ್ರ ಸರಕಾರದ ಖಮ್ಮಂ ಜಿಲ್ಲೆಯ ಭದ್ರಾಚಲದಲ್ಲಿ ಒಂದು ಭವ್ಯ ಪ್ರಮಾಣದ ರಾಮಾಲಯ ದೇವಸ್ಥಾನ ನಿರ್ಮಾಣ ಕಾರ್ಯದಲ್ಲಿ ಸುಮಾರು(೫೦೦) ಐದುನೂರು ಜನ ಶಿಲ್ಪಿಗಳು ಅವರ ಮಾರ್ಗದರ್ಶನದಲ್ಲಿ ದೇವಾಲಯದ ಕೆಲಸ ಮಾಡುತ್ತಿದ್ದರು. ಅದೇ ಸಂದರ್ಭದಲ್ಲಿ ಮಹಾದೇವಪ್ಪನವರ ಶಿಲ್ಪಕಲೆಯನ್ನು ಗುರುತಿಸಿ ದೇವಾಲಯ ಕೆಲಸದಲ್ಲಿ ಇವರಿಗೂ ಶಿಲ್ಪಕಲೆಯ ಕೆಲಸ ಮಾಡಲು ಅವಕಾಶ ಕಲ್ಪಿಸಿದರು. ಒಂದು ದಿನದ ಕೆಲಸಕ್ಕೆ ಐದು ರೂಪಾಯಿ ಐವತ್ತು ಪೈಸೆಯಂತೆ ಸಂಭಾವನೆ ನೀಡುತ್ತಿದ್ದರು.

ಮಹಾದೇವಪ್ಪನವರಿಗೆ ಇದು ನನಗೆ ಬಂದ ಸುವರ್ಣಾವಕಾಶ ಎಂದುಕೊಂಡು ತಮ್ಮ ಶಿಲ್ಪಕಲೆಯನ್ನು ಭಕ್ತಿಯಿಂದ ಪ್ರಾರಂಭಿಸಿದರು. ಮಹಾದೇವಪ್ಪನವರಿಗೆ ನಾನು ಈ ಕೆಲಸದಲ್ಲಿ ಎಷ್ಟೇ ಸಮಸ್ಯೆ ಬಂದರೂ ಬಿಡದೇ ಶಿಲ್ಪಕಲೆ ಮಾಡಿದರೆ ಮುಂದೆ ನಾನೊಬ್ಬ ಉತ್ತಮ ಶಿಲ್ಪಿಯಾಗಬಲ್ಲೆ ಎಂದು ಅವರ ಮನಸ್ಸು ಹೇಳತೊಡಗಿತು.

ಮಹಾದೇವಪ್ಪನವರು ಅಂದಿನಿಂದ ದೇವಾಲಯ ನಿರ್ಮಾಣ ಕೆಲಸಕ್ಕೆ ತೊಡಗಿದರು. ಕರ್ನಾಟಕದಿಂದ ಆಯ್ಕೆಯಾದವರು ಇವರೊಬ್ಬರೇ. ಕಟ್ಟಡದಲ್ಲಿಯೇ ಪ್ರಮಾಣ, ನಕ್ಷೆಗಳು,

ರೇಖಾಚಿತ್ರಗಳು ಸ್ತ್ರೀ-ಪುರುಷರ ಪ್ರಮಾಣ, ಕಣ್ಣಿನ ದೃಷ್ಟಿಯ ಲಕ್ಷಣಗಳು, ಆಭರಣ ವಸ್ತ್ರಾಲಂಕಾರ ಇವುಗಳ ಬಗ್ಗೆ ಆಳವಾಗಿ ಅಧ್ಯಯನ ಮಾಡಿದರು. ಸತತವಾಗಿ ಆರು ವರ್ಷಗಳ ಪರ್ಯಂತ ಶಿಲ್ಪಕಲೆಯ ಅಭ್ಯಾಸ ಮುಗಿಸಿದರು. ಮಹಾದೇವಪ್ಪನವರ ತಮ್ಮನಾದ ದೇವೇಂದ್ರಪ್ಪನವರು ಅಣ್ಣನನ್ನು ಊರಿಗೆ ಕರೆದುಕೊಂಡು ಬರಬೇಕೆಂದು ನಿರ್ಧಾರ ಮಾಡಿ ಭದ್ರಾಚಲಕ್ಕೆ ಬಂದು ಮರಳಿ ಊರಿಗೆ ಬರಲು ಆಗ್ರಹಿಸಿದರು. ತಮ್ಮನ ಇಚ್ಛೆಯಂತೆ ಮಹಾದೇವಪ್ಪನವರು ಶಿಲ್ಪಗುರುಗಳಾದ ಗಣಪತಿ ಸ್ಥಪತಿಯವರಲ್ಲಿ ಪ್ರಸ್ತಾಪಿಸಿ ಅವರ ಅನುಮತಿಯ ಆಶೀರ್ವಾದ ತೆಗೆದುಕೊಂಡು ದಿಗ್ಗಾಂವಕ್ಕೆ ಬಂದರು. ಹಿರಿಯ ಮಗನಾದ ಮಹಾದೇವಪ್ಪನವರಿಗೆ ಮದುವೆ ಮಾಡಲು ಯೋಚಿಸಿದರು ಆಗ ಇವರಿಗೆ ಇಪ್ಪತ್ತಾರು ವಸಂತಗಳು ತುಂಬಿದ್ದವು. ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ಕೊರವಾರ ಗ್ರಾಮದ ಶಾಂತಬಾಯಿಯನ್ನು ವಿವಾಹವಾದರು. ನಂತರ ಕೆಲವು ದಿವಸ ತಮ್ಮ ಜೀವನವನ್ನು ದಿಗ್ಗಾಂವದಲ್ಲಿಯೇ ಕಳೆದರು. ಈ ಹಳ್ಳಿಯಲ್ಲಿ ಶಿಲ್ಪಕಲೆಯನ್ನು ಗುರುತಿಸುವ ಜನರು ಬರುವುದು ಹೇಗೆ, ತಮ್ಮ ಶಿಲ್ಪಕಲಾ ಪ್ರತಿಭೆಯನ್ನು ಜನರಿಗೆ ತಿಳಿಸುವುದು ಹೇಗೆ ಎಂದು ಯೋಚಿಸಿ ತಾಲೂಕು ಕೇಂದ್ರವಾದ ಚಿತ್ತಾಪುರಕ್ಕೆ ಬಂದು ನೆಲೆಸಿದರು. ಬಾಡಿಗೆ ಮನೆಯಲ್ಲಿ ಸರಳ ಜೀವನದೊಂದಿಗೆ ತಮ್ಮ ಶಿಲ್ಪ ಕಾರ್ಯವನ್ನು ಪ್ರಾರಂಭಿಸಿದರು. ಕೆಲವು ದಿನಗಳ ನಂತರ ಇವರ ಕಲೆಯನ್ನು ಕಂಡು ಪುರಸಭೆಯ ಸದಸ್ಯರಾದ ವಿಠಲಗೌಡರು ಮಹಾದೇವಪ್ಪನವರಿಗೆ ಅಂಬೇಡ್ಕರ್ ಅವರ ಮೂರ್ತಿಯನ್ನು ಮಾಡಲು ಹೇಳಿದರು. ಮೂರ್ತಿಯನ್ನು ಸುಂದರವಾಗಿ ರಚಿಸಿರುವುದನ್ನು ಕಂಡು ಇವರಿಗೆ ಒಂದು ನಿವೇಶನವನ್ನು ಕೊಟ್ಟರು. ಆ ಸ್ಥಳದಲ್ಲಿ ಮನೆಯನ್ನು ಕಟ್ಟಿಕೊಂಡು ವಾಸ ಮಾಡಿದರು. ಮಹಾದೇವಪ್ಪನವರ ಶಿಲ್ಪಕಲೆಯ ಕೀರ್ತಿ ಜನಸಾಮಾನ್ಯರಿಗೆ ಮುಟ್ಟಿತು. ಪೊಲೀಸ್ ಹುತಾತ್ಮರ ದಿನಾಚರಣೆಗೆ ಪೊಲೀಸ್ ಮೂರ್ತಿಯನ್ನು ಇವರು ಕಲ್ಲಿನಲ್ಲಿ ಕೆತ್ತಿದಾಗ ಪೊಲೀಸ್ ಉನ್ನತ ಮಟ್ಟದ ಅಧಿಕಾರಿ ಎಸ್. ಪಿ. ಕೃಷ್ಣಮೂರ್ತಿಯವರು ಮಹಾದೇವಪ್ಪನವರ ಶಿಲ್ಪಕಲೆಯನ್ನು ಮೆಚ್ಚಿದರು. ಕಲಬುರ್ಗಿಯ ಪೊಲೀಸ್ ಮೈದಾನದಲ್ಲಿ ಮೂರ್ತಿ ಸ್ಥಾಪಿಸಲಾಯಿತು. ಮಹಾದೇವಪ್ಪನವರು ಶಿಲಾಶಿಲ್ಪ, ಮರಶಿಲ್ಪ ಸಿಮೆಂಟ್‌ಶಿಲ್ಪ, ಲೋಹಶಿಲ್ಪದಲ್ಲಿ ತಮ್ಮ ಪ್ರತಿಭೆಯನ್ನು ತೋರಿಸಿದ್ದಾರೆ. ಕಲ್ಲಿನಲ್ಲಿ ಮತ್ತು ಲೋಹದಲ್ಲಿ ಅನೇಕ ಮೂರ್ತಿಗಳನ್ನು ಮಾಡಿ ಸಮಾಜಕ್ಕೆ ಕೊಡುಗೆ ನೀಡಿದ್ದಾರೆ. ಇವರು ಮಾಡಿದ ಮೂರ್ತಿಗಳು ಕಲಬುರ್ಗಿ, ರಾಯಚೂರು ಮತ್ತು ಆಂಧ್ರಪ್ರದೇಶದ ಕೆಲವು ಭಾಗಗಳಲ್ಲಿ ನೋಡಲು ದೊರೆಯುತ್ತವೆ. ಇವರು ಮರಶಿಲ್ಪದಲ್ಲಿ ದೇವತೆಗಳ ಮೂರ್ತಿಗಳು, ಮಠಾಧಿಪತಿಗಳ ಸಿಂಹಾಸನಗಳನ್ನು ನಿರ್ಮಿಸಿದ್ದಾರೆ. ಇವರ ಆರು ಜನ ಮಕ್ಕಳಲ್ಲಿ ನಾಲ್ಕು ಜನ ಗಂಡುಮಕ್ಕಳು ಈ ಶಿಲ್ಪಕಲೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

**ಸನ್ಮಾನ ಮತ್ತು ಪ್ರಶಸ್ತಿ:** ೨೨-೧-೯೮೦ರಲ್ಲಿ ನಂದೂರು ಗುರುಗಳಾದ ಷ. ಬ್ರ. ಸದಾಶಿವಾ ಶಿವಾಚಾರ್ಯರು ಇವರಿಗೆ 'ಶಿಲ್ಪಾಕಲಾ ಪ್ರವೀಣ' ಪ್ರಶಸ್ತಿಯನ್ನು ನೀಡಿ ಸನ್ಮಾನಿಸಿದರು. ೨೮-೧೧-೯೯೮ರಲ್ಲಿ ಫಿರೋಜಬಾದದಲ್ಲಿ ಗುರುನಾಥ ಮಹಾಸ್ವಾಮಿಯವರು ಪುಣ್ಯತಿಥಿಯ ಅಂಗವಾಗಿ ಇವರಿಗೆ 'ಪಂಚ ಶಿಲ್ಪ ವರರತ್ನ' ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಿದರು.

**ಭಾಗವಹಿಸಿದ ಸಭೆ ಹಾಗೂ ಶಿಬಿರಗಳು:** ಕೈಗಾರಿಕಾ ವಸ್ತುಪ್ರದರ್ಶನ ವಾಣಿಜ್ಯಮೇಳ ಕ್ರಿ.ಶ.೧೯೮೭ರಲ್ಲಿ ಕಲಬುರ್ಗಿಯಲ್ಲಿ ನಡೆದಾಗ ಇವರು ಕೃಷ್ಣ ಗ್ರಾಮೀಣ ಬ್ಯಾಂಕಿನ ಪರವಾಗಿ ಕಲಾಮೇಳದಲ್ಲಿ ಪಾಂಡುರಂಗ ರುಕ್ಮಿಣಿ ಮೂರ್ತಿಯನ್ನು ಪ್ರದರ್ಶನಕ್ಕೆ ಇಟ್ಟು ದ್ವಿತೀಯ ಸ್ಥಾನ ಪಡೆದರು. ೧೯೯೦ರಲ್ಲಿ ವಿಜಯದಶಮಿ(ನವರಾತ್ರಿ) ಉತ್ಸವದ ಅಂಗವಾಗಿ ಮೈಸೂರಿನ ಶಿಲ್ಪಕಲಾ ಪ್ರದರ್ಶನದಲ್ಲಿ ಹತ್ತು ಮೂರ್ತಿಗಳನ್ನು ಒಯ್ದು ಪ್ರಥಮ ಸ್ಥಾನ ಪಡೆದುಕೊಂಡರು. ಇವರು ಅನೇಕ ವರ್ಷಗಳಿಂದ ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್ ಮತ್ತು ಕೆನರಾ ಬ್ಯಾಂಕ್‌ಗಳಿಗೆ ಬಂಗಾರವನ್ನು ಪರೀಕ್ಷಿಸುವ ಕೆಲಸ ಮಾಡುತ್ತ ಬಂದಿದ್ದಾರೆ. ರಾಜ್ಯ ಸರ್ಕಾರವು ಇವರ ಕಲೆಯನ್ನು ಮೆಚ್ಚಿಕೊಂಡು ಪ್ರತಿ ತಿಂಗಳಿಗೆ ೨೫೦-೦೦ರೂ ಗೌರವಧನ ಮಂಜೂರು ಮಾಡಿದೆ.

೨೦೦೨ನೇ ಸಾಲಿನಲ್ಲಿ ಇವರು ಶಿಲ್ಪಾಕಲಾ ಅಕಾಡೆಮಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಈಗ ಮಹಾದೇವಪ್ಪನವರು ತಮ್ಮ ಹಿರಿಯ ಮಕ್ಕಳಾದ ಈರಣ್ಣ ಮತ್ತು ಶಂಭುಲಿಂಗ ಎಂಬವರಿಗೆ ತಮ್ಮ ವಿದ್ಯೆಯನ್ನು ಧಾರೆಯೆರೆದಿದ್ದಾರೆ. ಇವರು ತಂದೆಯ ಮಾರ್ಗದರ್ಶನದಂತೆ ಮುನ್ನಡೆಯುತ್ತಾ ಬರುತ್ತಿದ್ದಾರೆ. ಮಹಾದೇವಪ್ಪನವರು ತಮ್ಮ ಮಕ್ಕಳೊಂದಿಗೆ ಇಳಿವಯಸ್ಸಿನಲ್ಲಿಯೂ ಪಾದರಸದಂತೆ ಚುರುಕಾಗಿ ಕಾರ್ಯ ನಿರ್ವಹಿಸುತ್ತಾರೆ. ಅವರ ವ್ಯಕ್ತಿತ್ವ ಇಂದಿನ ಪೀಳಿಗೆಗೆ ಕೈಗನ್ನಡಿಯಾಗಿದೆ. ಚಿತ್ತಾಪುರ ತಾಲೂಕಿನಲ್ಲಿ ಶಿಲ್ಪಕಲಾ ಕೇಂದ್ರ ತಾಣವನ್ನಾಗಿ ಮಾಡಿಕೊಂಡು ಶೆಲ್ಲಿಕೇರಿ ಕಲ್ಲಿನಲ್ಲಿ ಶಿಲ್ಪಕಲೆಯ ಸಿರಿಯನ್ನೇ ವಿಜೃಂಭಣೆಯಿಂದ ನೋಡುಗರ ಕಣ್ಣಿಗೆ ದಿಗ್ಭ್ರಮೆಯಾಗುವಂತೆ ರೂಪಿಸಿದ್ದಾರೆ. ಮಹಾದೇವಪ್ಪನವರ ವ್ಯಕ್ತಿತ್ವ ಇಂದಿನ ಪೀಳಿಗೆಗೆ ಕೈಗನ್ನಡಿಯಾಗಿ ನಿಂತಿದೆ.

**ಪ್ರದರ್ಶನ:** ಮೈಸೂರು ದಸರಾ ಅಕ್ಟೋಬರ್-ನವೆಂಬರ್ ೧೯೯೦, ಕೈಗಾರಿಕಾ ಮತ್ತು ವಾಣಿಜ್ಯ ವಿಭಾಗದ ವತಿಯಿಂದ ಕೈಗಾರಿಕಾ ವಸ್ತು ಪ್ರದರ್ಶನ ಮತ್ತು ವಾಣಿಜ್ಯ ಮೇಳ ಗುಲಬರ್ಗಾ ೩-೨-೧೯೯೬ ರಂದು ನಡೆದ ಪ್ರದರ್ಶನ ಮಾಡಿದ್ದಾರೆ.

**ಸನ್ಮಾನ ಹಾಗೂ ಪ್ರಶಸ್ತಿಗಳು**

೧. ೨೮-೧೨-೧೯೮೪ರಲ್ಲಿ ಶ್ರೀ ವಿಶ್ವಕರ್ಮ ಏಕದಂಡಗಿಮಠ ಯಾದಗೀರ ಸಂಸ್ಥಾನ, ಯಾದಗೀರ ಇವರಿಂದ ಪಂಚಲೋಹ ಶಿಲ್ಪಿ ಪ್ರಶಸ್ತಿ.

೨. ೨೪-೧೨-೧೯೮೮ರಲ್ಲಿ ಡಾ. ಎಸ್.ಎಂ. ಪಂಡಿತರಿಂದ ಸನ್ಮಾನ.

೩. ೧೯೯೨-೯೩ರಲ್ಲಿ ಕರ್ನಾಟಕ ರಾಜ್ಯ ಕನ್ನಡ ಶಕ್ತಿ ಕೇಂದ್ರ ಚಿತ್ತಾಪೂರ ಶಾಖೆ ವತಿಯಿಂದ(ಕನ್ನಡ ರಾಜ್ಯೋತ್ಸವ ಅಂಗವಾಗಿ) ಸನ್ಮಾನ.

೪. ೨೫-೧೨-೧೯೯೮ರಂದು ಶ್ರೀ ಬಾಲಬ್ರಹ್ಮೇಂದ್ರ ಆರಾಧನಾ ಮಹೋತ್ಸವ ಗುಲಬರ್ಗಾ ಶ್ರೀಮಠದ ವತಿಯಿಂದ ಪಂಚ ಶಿಲ್ಪಕಲಾನಿಧಿ ಪ್ರಶಸ್ತಿ.

೫. ೨೭-೦೯-೨೦೦೭ರಲ್ಲಿ ವಚನಗಳ ವಿಚಾರ ವೇದಿಕೆ ಚಿತ್ತಾಪೂರ ಇವರಿಂದ ಬಸವ ಪುರಸ್ಕಾರ ಪ್ರಶಸ್ತಿ.

೬. ೨೦೦೭ರಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಕನ್ನಡ ರಾಜ್ಯೋತ್ಸವ ಸನ್ಮಾನ.

೭. ೨೦೦೬-೨೦೦೭ರಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಸುವರ್ಣ ಕರ್ನಾಟಕ ವರ್ಷದ ನೆನಪಿನ ಗೌರವ ಸನ್ಮಾನ.

**ಸಂಗ್ರಹ:** ದಿ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆ ಗುಲಬರ್ಗಾ ಕಪೀಲ ಮೋಹನ(ಜಿಲ್ಲಾ ಪರಿಷತ್ ಚೆಫ್ ಸೆಕ್ರೆಟರಿ) ಹಾಗೂ ಇನ್ನೂ ಅನೇಕ ಕಡೆ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಭಾಗದಲ್ಲಿ ಕಾಣಬಹುದು.

**ಶಿಷ್ಯಂದಿರು:** ಕಾಳಪ್ಪಾ ಕೋರವಾರ, ಅಮರೇಶ ಸರ್ಜಾಪೂರ, ಆನಂದ ಬಾಬು ಎಂ. ಅಂಬರಖಾನೆ ಮುಂತಾದವರು ಇವರ ಗರಡಿಯಲ್ಲಿ ಕಲಿತು, ಇಂದು ರಾಜ್ಯಮಟ್ಟದಲ್ಲಿ ತಮ್ಮದೇ ಹೆಸರನ್ನು ಗುರುತಿಸಿಕೊಂಡಿದ್ದಾರೆ.

**೩.೨.೨. ಲೋಹಶಿಲ್ಪಿ ಮಾನಯ್ಯ ಬಡಿಗೇರ**

ಕಲಬುರ್ಗಿ ಜಿಲ್ಲೆಯಲ್ಲಿ ಚಿತ್ರ, ಶಿಲ್ಪ, ಸಾಹಿತ್ಯ, ಸಂಗೀತ, ನೃತ್ಯ, ವಾಸ್ತು ಮುಂತಾದ ಅನೇಕ ಕಲೆಗಳಲ್ಲಿ ಪ್ರವೀಣರಾದಂತಹ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಹೆಸರು ಮಾಡಿರುವಂತಹ ಸಾಕಷ್ಟು ಜನ ಕಲಾವಿದರಿದ್ದಾರೆ. ಕನ್ನಡ ವಿಶ್ವವಿದ್ಯಾಲಯದಿಂದ ಉನ್ನತ ಪ್ರಶಸ್ತಿಯಾದ "ನಾಡೋಜ" ಗೌರವ ಪ್ರಶಸ್ತಿಗೆ ಭಾಜನರಾದ ನಾಗಣ್ಣ ಬಡಿಗೇರ ಅವರ ಮಗನಾದ ಮಾನಯ್ಯ ಬಡಿಗೇರ ಅವರು ಮೂಲತಃ ಚಿತ್ರಕಲಾಶಿಕ್ಷಕರಾಗಿ ಕಲಬುರ್ಗಿಯ ಶರಣಬಸವೇಶ್ವರ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಚಿತ್ರಕಲೆಯನ್ನು ಬೋಧನೆ ಮಾಡುತ್ತ ವಿದ್ಯಾರ್ಥಿಗಳಲ್ಲಿ ಕಲಾಸಕ್ತಿಯನ್ನು ತುಂಬಿ ಉತ್ತಮ ಕಲಾಗುರುಗಳೆಂದೆನಿಸಿಕೊಂಡಿದ್ದಾರೆ. ಇಷ್ಟಕ್ಕೆ ಸೀಮಿತವಾಗದೆ, ಹಗಲಿರುಳೆನ್ನದೇ ಬಾಲ್ಯದಲ್ಲಿ ತಂದೆಯಿಂದಲೇ ಮರಶಿಲ್ಪವನ್ನು ಕುಲಕಸುಬನ್ನಾಗಿ ಕಲಿತರು. ಹಂತ ಹಂತವಾಗಿ ಮರಶಿಲ್ಪ, ಲೋಹಶಿಲ್ಪವನ್ನು ತಂದೆಯವರಿಂದ ಕಲಿತು ಹೆಚ್ಚಿನ ತಂತ್ರಗಾರಿಕೆಯನ್ನು ಆವಿಷ್ಕಾರ ಮಾಡಿಕೊಂಡರು.

ಶಿಲ್ಪಿ ಮಾನಯ್ಯ ಬಡಿಗೇರ ಅವರು ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಗೋನಾಳ ಎಸ್.ಡಿ ಗ್ರಾಮದಲ್ಲಿ ದಿನಾಂಕ ೧.೫.೧೯೬೧ರಂದು ಜನಿಸಿದರು. ಪ್ರಾಥಮಿಕ ಶಿಕ್ಷಣ ಮತ್ತು ಪ್ರೌಢಶಿಕ್ಷಣವನ್ನು ಕಲಿಯುವಾಗಲೇ ಮಾನಯ್ಯನವರಿಗೆ ತಂದೆಯವರು ಮಾಡುವ ಮರ, ಶಿಲೆ, ಲೋಹ ಮುಂತಾದ ಕೆಲಸಗಳಲ್ಲಿ ಭಾಗವಹಿಸಿ, ಆಸಕ್ತಿ ವಹಿಸಿ ಕಲೆಯನ್ನು ಕಲಿಯಬೇಕೆಂಬ ಹಂಬಲ ಉಂಟಾಯಿತು. ತಂದೆಯವರ ಮಾರ್ಗದರ್ಶನದಲ್ಲಿ ಅವರ ಅನುಭವಪೂರ್ಣವಾದ ಮರಗಳ ಆಯ್ಕೆ, ಅದನ್ನು ಕೊರೆದು ಅಳತೆ ಮಾಡಿಕೊಳ್ಳುವಿಕೆ ಮತ್ತು ಮರವನ್ನು ನಯವಾಗುವಂತೆ ಮಾಡುವ ವಿಧಾನ, ಉಳಿ, ಬಾಚಿ, ಕೊಡಲಿ, ಸುತ್ತಿಗೆ ಇವುಗಳ ಪರಿಚಯ ಬಾಲ್ಯದಿಂದಲೇ ಕುಟುಂಬದಲ್ಲಿ ದೊರಕಿತು.

ಇವರ ತಂದೆ ನಾಡೋಜ ನಾಗಣ್ಣನವರು ಮನೆಗಳ ಆಯ ಮತ್ತು ವಾಸ್ತುಶಿಲ್ಪಗಳಲ್ಲಿ ಮರದಿಂದ ಗೃಹನಿರ್ಮಾಣಗಳ ಪೂರ್ಣ ಕಾರ್ಯಗಳಲ್ಲಿ ಮಾನಯ್ಯನವರಿಗೆ ಮಾರ್ಗದರ್ಶನ

ಮಾಡಿದ್ದಾರೆ. ಗೃಹನಿರ್ಮಾಣ ಕಾರ್ಯದಲ್ಲಿ ಮೊದಲಿನ ಕಾಲದಲ್ಲಿ ಆರ್.ಸಿ.ಸಿ. ಮನೆಗಳು ಇದ್ದಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಜನರು ಮರದಿಂದ ಕಂಬ, ತೊಲೆ, ಬೋದು, ಬಾಗಿಲು, ಕಿಟಕಿ, ಮುಂತಾದ ಮರಕೆತ್ತನೆಯ ಆಲಂಕಾರಿಕ ಸುಂದರ ಶೈಲಿಯ ಮನೆಗಳನ್ನು ನಿರ್ಮಿಸಿಕೊಳ್ಳಲು ಇಚ್ಛೆಸುತ್ತಿದ್ದರು. ಕಲಬುರ್ಗಿ ಜಿಲ್ಲೆಯಲ್ಲಿ ಇಂತಹ ಮನೆಗಳೂ ಇಂದಿಗೂ ನೋಡಲು ಲಭ್ಯವಾಗುತ್ತವೆ. ಅಂತಹ ಅನೇಕ ಮರಕೆಲಸದಲ್ಲಿ, ಮುಖ್ಯದ್ವಾರಗಳಲ್ಲಿ ಬರುವ ನಕ್ಷೆ ವಿನ್ಯಾಸಗಳನ್ನು ಮಾನಯ್ಯನವರು ತಂದೆಯವರನ್ನೇ ಮೀರಿಸುವಂತೆ ಸೃಜನಶೀಲ ಕಲಾವಿದರಾಗಿ ಕಲಾತ್ಮಕ ಕೃತಿಗಳನ್ನು ರಚನೆ ಮಾಡಿದ್ದಾರೆ.

ಪ್ರೌಢಶಿಕ್ಷಣ ಮುಗಿಸಿದ ನಂತರ ಕಲಬುರ್ಗಿಯಲ್ಲಿ ಆರ್ಟ್ ಮಾಸ್ಟರ್ ಡಿಪ್ಲೊಮಾ ಚಿತ್ರಕಲಾ ಶಿಕ್ಷಕ ತರಬೇತಿಯನ್ನು ಪಡೆದು ಉತ್ತೀರ್ಣರಾಗಿದ್ದಾರೆ ಮತ್ತು ಚಿತ್ರವರ್ಣ ಕಲೆಯಲ್ಲಿ ಬ್ಯಾಚುಲರ್ ಆಫ್ ಫೈನ್ ಆರ್ಟ್ಸ್ ಪದವಿಯನ್ನು ಪಡೆದುಕೊಂಡಿದ್ದಾರೆ. ಕಲಬುರ್ಗಿಯ ದೃಶ್ಯಕಲಾ ಭೀಷ್ಮರಂತಿರುವ ಹಿರಿಯ ಕಲಾವಿದರಾದ ಡಾ. ವಿ. ಜಿ. ಅಂದಾನಿ ಗುರುಗಳಿಂದ ಮತ್ತು ನಾಡೋಜ ಡಾ. ಜೆ. ಎಸ್. ಖಂಡೇರಾವ್ ಗುರುಗಳಿಂದ ಕಲೆಯ ಬಗ್ಗೆ ಅನೇಕ ವಿಧವಾದ ಮಾಧ್ಯಮ ಮತ್ತು ತಂತ್ರಗಾರಿಕೆ ಕೌಶಲ್ಯಗಳನ್ನು ಪಡೆದುಕೊಂಡಿದ್ದಾರೆ. ವೆಂಕಟಪ್ಪ ಪ್ರಶಸ್ತಿ ಭಾಜನರಾದ ಡಾ. ಖಂಡೇರಾವ್ ಗುರುಗಳು ಚಿತ್ರವರ್ಣಗಳ ಬಗ್ಗೆ ಮಾನಯ್ಯನವರಿಗೆ ಗುರುವಾಗಿ ಮಾರ್ಗದರ್ಶನವನ್ನು ಮಾಡಿದ್ದಾರೆ.

**ಶಿಲ್ಪಕಲಾ ಶಿಕ್ಷಣ:** ಇವರು ಶರಣಬಸವೇಶ್ವರ ಸಂಯುಕ್ತ ಪದವಿಪೂರ್ವ ಕಾಲೇಜಿನ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಾ ತಮ್ಮ ಮನೆತನದ ಶಿಲ್ಪಕಲೆಯನ್ನು ಕಲಿತು ಮುಂದುವರಿಸಿ ಕೊಂಡು ಹೋಗಬೇಕೆಂಬ ಬಯಕೆಯಾಗಿತ್ತು. ಶಿಲ್ಪಕಲೆ ಕಲಿಯಲು ಗುಲಬರ್ಗಾದಲ್ಲಿ ಯಾವ ತರಬೇತಿ ಕೇಂದ್ರಗಳು ಇರಲಿಲ್ಲ ಮತ್ತು ಶಿಲ್ಪಕಲಾ ಕಾಲೇಜು ಕೂಡ ಇರಲಿಲ್ಲ ಶಿಲ್ಪಕಲೆ ಕಲಿಯಬೇಕೆಂದರೆ ಇವರಿಗೆ ಶಿಕ್ಷಕ ವೃತ್ತಿ ಇರುವುದರಿಂದ ಬೇರೆ ಕಡೆ ಹೋಗಿ ಕಲಿಯಲು ಆಗುತ್ತಿರಲಿಲ್ಲ. ಹೇಗಾದರೂ ಮಾಡಿ ಶಿಲ್ಪಕಲೆ ಕಲಿಯಬೇಕೆಂಬ ಆಸೆ ಹೆಚ್ಚತೊಡಗಿತು. ಇಂತಹ ಆಸೆ ಪೂರೈಸಿಕೊಳ್ಳಲು ತಮ್ಮ ತಂದೆಯವರಾದ ನಾಗಣ್ಣ ಬಡಿಗೇರ ಅವರನ್ನು ಗುಲಬರ್ಗಾಕ್ಕೆ ಕರೆಸಿಕೊಂಡು ಗುಲಬರ್ಗಾದಲ್ಲಿಯೇ ಶಿಲ್ಪಕಲಾ ಕಾರ್ಯಾಗಾರವನ್ನು ಪ್ರಾರಂಭಿಸಿದರು. ವೃತ್ತಿಯ ಜೊತೆಗೆ ತಮ್ಮ ತಂದೆಯವರ ಶಿಲ್ಪಕಲಾ ಕಾರ್ಯಾಗಾರದಲ್ಲಿ ಅಭ್ಯಾಸ ಪ್ರಾರಂಭಿಸಿದರು. ತಂದೆಯವರಲ್ಲಿದ್ದ ಶಿಲ್ಪಕಲಾ ಪಾಂಡಿತ್ಯವನ್ನು ಕೇಳಿ ಅರಿತು ಪ್ರಾಯೋಗಿಕವಾಗಿ ನಿರೂಪಿಸುತ್ತಾ ಶಿಲ್ಪಕಲಾ ವಿದ್ಯಾರ್ಜನೆಯನ್ನು ಮಾಡತೊಡಗಿದರು. ಈ ರೀತಿಯಾಗಿ ಬಡಿಗೇರ ಅವರು ಬೆಳಗಿನ ಸಮಯ ಮತ್ತು ವಿದ್ಯಾಲಯದ ಸಮಯ ಮುಗಿದ ನಂತರದ ಅವಧಿಯನ್ನು ಶಿಲ್ಪಾಕಲಾರ್ಜನೆ ಯಲ್ಲಿಯೇ ತೊಡಗಿಸಿಕೊಳ್ಳುತ್ತಿದ್ದರು. ಆಗಾಗ ಸ್ಥಳೀಯ ಕೆಲ ಗಣ್ಯ ಕಲಾವಿದರು, ಖ್ಯಾತ ಉದ್ದಿಮೆದಾರರು ಶಿಲ್ಪಕಲಾ ಕಾರ್ಯಾಗಾರಕ್ಕೆ ಬಂದು ನೋಡಿ ಪ್ರಶಂಸೆ ಮಾಡಿ ಹೋಗುತ್ತಿದ್ದರು.

ಲೋಹ ಶಿಲ್ಪಕಲೆಯನ್ನು ಡಾ. ವಿಜಯ ಹಾಗರಗುಂಡಗಿಯವರಿಂದ ಅನುಭವ ಸಿದ್ಧ ಮಾಡಿಕೊಂಡಿರುವುದು ಒಂದು ವಿಶಿಷ್ಟವೇ ಆಗಿದೆ. ಶಿಲ್ಪಿ ಮಾನಯ್ಯನವರು ಕೇವಲ ಚಿತ್ರಕಲಾ ಶಿಕ್ಷಕರಾಗಿರದೆ, ಕಲೆಯ ಎಲ್ಲಾ ಮಜಲುಗಳನ್ನು ಕಲಿತವರಾಗಿದ್ದಾರೆ. ಖ್ಯಾತ ಚಿತ್ರಕಲಾವಿದರಾದ ಮೋಹನ್ ಹೆಚ್. ಸೀತನೂರ ಅವರ ಸಹಕಾರದಿಂದ ಕಲಬುರ್ಗಿಯ ನ್ಯೂ ರಾಘವೇಂದ್ರ ಕಾಲೋನಿಯಲ್ಲಿ "ನಾಡೋಜ ನಾಗಣ್ಣ ಬಡಿಗೇರ ಸ್ಕಲ್ಪರ್ ಗ್ರೂಫ್" ಎಂಬ ಕಾರ್ಯಾಗಾರವನ್ನು ಪ್ರಾರಂಭಿಸಿದರು. ಮಾನಯ್ಯನವರು ಈ ಕಾರ್ಯ ಮಾಡಿದ್ದರಿಂದ ಈ ಕಾರ್ಯಾಗಾರದಲ್ಲಿ ಅನೇಕ ಮರಶಿಲ್ಪಿಗಳು ಮತ್ತು ಲೋಹಶಿಲ್ಪಿಗಳು ಶಿಲ್ಪಕಲೆಯನ್ನು ಕಲಿತು ನಾಡಿನ ಅನೇಕ ಕಲಾಪ್ರದರ್ಶನ ಪ್ರಶಸ್ತಿ ಗೌರವಗಳಿಗೆ ಪಾತ್ರರಾಗಿ ಕಲಾಸೇವೆಯನ್ನು ಮಾಡುತ್ತಿದ್ದಾರೆ. ಶಿಲ್ಪಕಲಾ ಆಸಕ್ತಿಯಿರುವ ವಿದ್ಯಾರ್ಥಿಗಳಿಗೆ ಸುವರ್ಣ ಅವಕಾಶ ಮಾಡಿಕೊಟ್ಟಂತಾಗಿದೆ. ಮಾನಯ್ಯನವರು ತಂದೆಯವರಿಂದ ಕಲಿತ ಶಿಲ್ಪವಿದ್ಯೆಯನ್ನು ಕೇವಲ ತಾವು ಮಾತ್ರ ಪಡೆದುಕೊಳ್ಳದೇ ಮುಂದಿನ ಪೀಳಿಗೆಗಳಿಗಾಗಿ ಉಪಯೋಗವಾಗುವಂತಹ ಕಾರ್ಯವನ್ನು ಮಾಡಿರುವುದು ಶ್ಲಾಘನೀಯ.

ಒಬ್ಬ ಚಿತ್ರಕಲಾವಿದನಾಗಿ ಕಲಾಸೇವೆ ಮಾಡಿಕೊಂಡು ಹೋಗುವುದೇ ಕೆಲವರಿಗೆ ದೊಡ್ಡ ಸಾಧನೆಯಾಗುತ್ತದೆ. ಆದರೆ ಶಿಲ್ಪಿ ಮಾನಯ್ಯನವರು ಚಿತ್ರಕಲಾ ಶಿಕ್ಷಕರಾಗಿ ಮರಗಳಲ್ಲಿ ಅನೇಕ ರೀತಿಯ ನಕ್ಷೆ, ಪಕ್ಷಿ, ಪ್ರಾಣಿ, ಸುಳಿವು ಚಿತ್ತಾರಗಳ ವೈಭವವನ್ನು ಮುಖ್ಯದ್ವಾರಗಳಲ್ಲಿ ಸೆರೆ ಹಿಡಿದಿದ್ದಾರೆ. ಇದು ಕೆತ್ತನೆಯೋ ಅಥವಾ ಮುದ್ರಿತವೋ ಎನ್ನುವಂತೆ ಕಲಾಕೃತಿ ರಚನೆಯಾಗಿರುವುದು ಇವರ ಸಾಧನೆಗೆ ಕೈಗನ್ನಡಿಯಾಗಿದೆ. ಲೋಹಶಿಲ್ಪದಲ್ಲಿ ಮನೆಯ ಪಕ್ಕದಲ್ಲಿ ವರ್ಕ್‌ಶಾಪ್ ಮಾಡಿ ಕೊಂಡು ವಿದ್ಯುತ್ ಒಲೆಗಳು, ದೊಡ್ಡ ದೊಡ್ಡ ವಜ್ರ ಮೂಸಿಗಳು, ಲೋಹ ಮಿಶ್ರಣ ಮಾಡುವ, ಕಾಯಿಸುವ ಮತ್ತು ಪರಿಶೋಧಿಸುವ ಕೆಲಸಗಳು ನೋಡುಗರೂ ಅಚ್ಚರಿಪಡುವಂತಿದೆ. ಮಾನಯ್ಯ ಶಿಲ್ಪಿಗಳು ತಂದೆಯವರಂತೆ ಧರ್ಮ, ನಿಷ್ಠೆ, ಸಂಪ್ರದಾಯ ಶಿಷ್ಟತೆಗಳನ್ನು ಅಳವಡಿಸಿಕೊಂಡವರು. ಇವರ ಶ್ರೀಮತಿಯವರಿಂದ ಹಿಡಿದು ಮಕ್ಕಳು, ಅಳಿಯಂದಿರು ಮನೆಯಲ್ಲಿ, ಶಿಲ್ಪ ಕೆಲಸ ಕಲಿಯಲು ಬಂದ ವಿದ್ಯಾರ್ಥಿಗಳಿಂದ ಇವರ ಮನೆ ಯಾವಾಗಲೂ ಶಿಲ್ಪರಚನೆಯಲ್ಲಿ ನಿರತರಾದು ದರಿಂದ ತುಂಬಿರುತ್ತದೆ. ಹಗಲಿರುಳೆನ್ನದೆ ಮರದಿಂದ ಮಂಟಪ, ಸಿಂಹಾಸನ, ಮಹಾದ್ವಾರ ಪಾಲಿಕೆ, ಪೂಜಾ ಗದ್ದುಗೆಯ ಮಂಟಪ, ಆಲಂಕಾರಿಕ ಮರಶಿಲ್ಪಗಳು ಮನೆಯ ತುಂಬೆಲ್ಲಾ ರಾರಾಜಿಸುತ್ತಿರುತ್ತವೆ. ಮನೆಯ ಗೋಡೆ ಗೋಡೆಗಳಿಗೆ ಮುಖ್ಯದ್ವಾರಗಳು ರಚನೆಯಾಗಿ, ಸಿದ್ಧತೆಯಲ್ಲಿ ರುವುದನ್ನು ಕಾಣಬಹುದು. ಇವರ ಮಹಾದ್ವಾರ, ಗೃಹನಿರ್ಮಾಣದಲ್ಲಿ ಮನೆಯ ಮುಖ್ಯದ್ವಾರ ನೋಡುಗರನ್ನು ಚಕಿತರನ್ನಾಗಿಸುತ್ತವೆ. ನಾಡಿನ ಬೇರೆ ಬೇರೆ ದೂರದ ಊರುಗಳಿಂದ ಬಂದು ಇವರಿಂದ ಕಲಾಕೃತಿ ತಯಾರು ಮಾಡಿಸಿಕೊಂಡು ಹೋಗುತ್ತಾರೆ. ಕರ್ನಾಟಕವೇ ಅಲ್ಲದೇ ಆಂಧ್ರ, ಮಹಾರಾಷ್ಟ್ರ ಮುಂತಾದ ನೆರೆಯ ರಾಜ್ಯಗಳಿಗೂ ಇವರ ಕಲಾಕೃತಿಗಳ ಪರಿಚಯವಿದೆ.

ಚಿತ್ರಕಲಾ ಪ್ರದರ್ಶನ, ಶಿಲ್ಪಕಲಾ ಪ್ರದರ್ಶನ ಮತ್ತು ಅನೇಕ ಕಾರ್ಯಾಗಾರಗಳನ್ನು ನಡೆಸಿಕೊಟ್ಟ ಕೀರ್ತಿ ಇವರಿಗಿದೆ. ಅಲ್ಲದೇ ಅನೇಕ ದೊಡ್ಡ ದೊಡ್ಡ ಕಲಾಶಿಬಿರಗಳಲ್ಲಿಯೂ

ಭಾಗವಹಿಸಿ ಕಲಾಕೃತಿ ರಚನೆ ಮಾಡಿದ್ದಾರೆ. ಇವರು ಅನೇಕ ಶಿಲ್ಪ ಚಿತ್ರಕಲಾ ತರಬೇತಿ ಕಾರ್ಯಾಗಾರಗಳನ್ನು ಕೂಡ ಮಾಡಿದ್ದಾರೆ.

ಶಿಲ್ಪಿ ಮಾನಯ್ಯ ಬಡಿಗೇರ ಅವರು ರಂಗಭೂಮಿ ಹವ್ಯಾಸಿ ಕಲಾವಿದರಾಗಿ ರಂಗಸಜ್ಜಿಕೆಯನ್ನು ಕಂಡವರು. ರಂಗಮಾಧ್ಯಮದಲ್ಲಿ ಇವರ ಸೇವೆ ಅಪಾರವಾದದ್ದು. ತಂದೆಯವರಿಗಿಂತಲೂ ಒಂದು ಹೆಜ್ಜೆ ಮುಂದೆ ಎನ್ನುವಂತೆ ಶಿಲ್ಪಿ ಮಾನಯ್ಯ ಬಡಿಗೇರ ಅವರ ಸಾಧನೆ ಕಂಡುಬರುತ್ತದೆ. ಮಾನಯ್ಯನವರು ಸ್ನೇಹಜೀವಿಗಳು, ಸರಳ ಸಜ್ಜನಿಕೆ ವ್ಯಕ್ತಿ, ಸಮಾಜಿಕ ಧಾರ್ಮಿಕ ಕೆಲಸಗಳಲ್ಲಿಯೂ, ಶಿಕ್ಷಣ ರಂಗ ಕಲಾಸೇವೆ, ಸಮಾಜಸೇವೆ, ಅಪಾರವಾದದ್ದು, ಇವರ ಬಹುಮುಖಿ ವ್ಯಕ್ತಿತ್ವದಲ್ಲಿ ಸರಳತೆ ಕಂಡುಬರುತ್ತದೆ.

**ಪ್ರದರ್ಶನಗಳು**

- ೧೯೮೬-೮೭ರಲ್ಲಿ ಮೈಸೂರು ದಸರಾ ಪ್ರದರ್ಶನ.
- ೧೦ನೇ ರಾಷ್ಟ್ರೀಯ ಕಲಾಮೇಳ, ನವದೆಹಲಿ.
- ೨೦೦೨ರಲ್ಲಿ ರಾಷ್ಟ್ರಪತಿ ಎ.ಪಿ.ಜೆ. ಅಬ್ದುಲ್ ಕಲಾಂ, ಮಾನ್ಯ ಪ್ರಧಾನಮಂತ್ರಿ ಶ್ರೀ ಅಟಲ್ ಬಿಹಾರಿ ವಾಜಪೇಯಿ ಮತ್ತು ಪೂಜ್ಯ ಡಾ. ಶರಣಬಸವಪ್ಪ ಅಪ್ಪಾ ಅವರ ನೇತೃತ್ವದಲ್ಲಿ ಪಾರ್ಲಿಮೆಂಟ್ ಭವನ ಆವರಣದಲ್ಲಿ ಬಸವಣ್ಣನವರ ಮುತ್ತಳಿಯ ಅನಾವರಣ ಕಾರ್ಯಕ್ರಮದ ಜೊತೆಗೆ ವಚನಗಳನ್ನಾಧರಿಸಿದ ವರ್ಣಚಿತ್ರಗಳ ಪ್ರದರ್ಶನ ಏರ್ಪಡಿಸಿದ್ದರು. ಕೊಲಬೇಡವೆಂಬ ವರ್ಣಚಿತ್ರ ಕಲಾಕೃತಿ ಆಯ್ಕೆಗೊಂಡು ಪ್ರದರ್ಶನಗೊಂಡಿತು.

**ಶಿಬಿರಗಳು**

- ೧೯೯೫ರಲ್ಲಿ ವಿಶ್ವವಿಖ್ಯಾತ ವರ್ಣಚಿತ್ರ ಕಲಾವಿದ ಡಾ. ಎಸ್. ಎಂ. ಪಂಡಿತರ ಸ್ಮರಣಾರ್ಥ ಏರ್ಪಡಿಸಿದ ಭಾವಚಿತ್ರ ಶಿಬಿರ, ಕಲಬುರ್ಗಿ.
- ೧೯೯೯ರಲ್ಲಿ ಟೆರ್ರಾಕೋಟ ಶಿಲ್ಪಕಲಾ ಶಿಬಿರ, ಕಲಬುರ್ಗಿ; ಲಲಿತಕಲಾ ಅಕಾಡೆಮಿ, ಪ್ರಾದೇಶಿಕ ಕೇಂದ್ರ, ಚೆನ್ನೈ.
- ೨೦೦೬ರಲ್ಲಿ ಶರಣಬಸವೇಶ್ವರ ಸ್ನಾತಕೋತ್ತರ ಪದವಿ ಮಹಾವಿದ್ಯಾಲಯ ಇವರ ಆಯೋಜಿಸಿದ ಮೈಸೂರು ಶೈಲಿಯ ಸಾಂಪ್ರದಾಯಿಕ ಚಿತ್ರಕಲಾಶಿಬಿರಗಳಲ್ಲಿ ಪಾಲ್ಗೊಂಡಿದ್ದಾರೆ.

**ತರಬೇತಿ ಕಾರ್ಯಾಗಾರ**

- ೨೦೦೪ರಲ್ಲಿ ಗುಲಬರ್ಗಾ ಅಪರ ಆಯುಕ್ತ ಕಛೇರಿಯ ವ್ಯಾಪ್ತಿಯಲ್ಲಿ ಬರುವ ಸರಕಾರಿ ಪ್ರೌಢಶಾಲೆಗಳ ಚಿತ್ರಕಲಾ ಶಿಕ್ಷಕರ ಶೈಕ್ಷಣಿಕ ಸಾಮರ್ಥ್ಯ ಬಲವರ್ಧನೆಗಾಗಿ ಪುನಃಶ್ಚೇತನ

ತರಬೇತಿ ಕಾರ್ಯಾಗಾರದಲ್ಲಿ ಕ್ಲೇ ಮಾಡಲಿಂಗ್ ವಿಷಯದ ಮೇಲೆ ಸಂಪನ್ಮೂಲ ವ್ಯಕ್ತಿಯಾಗಿ ಸೇವೆ, ಗುಲಬರ್ಗಾ.

**ಪ್ರಶಸ್ತಿಗಳು**

- ೧೯೭೮ರಲ್ಲಿ ತೋಟಗಾರಿಕ ಇಲಾಖೆ, ಗುಲಬರ್ಗಾ.
- ೧೯೮೫ರಲ್ಲಿ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲಬರ್ಗಾ ಇವರು ಏರ್ಪಡಿಸಿದ ವಿಭಾಗ ಮಟ್ಟದ ಚಿತ್ರಕಲಾ ಶಿಕ್ಷಕರ ಚಿತ್ರಕಲಾ ಪ್ರದರ್ಶನ;
- ೧೯೮೭ರಲ್ಲಿ ಮೈಸೂರು ದಸರಾ ಪ್ರದರ್ಶನ.

**ಸೇವೆ**

- ರಂಗಮಾಧ್ಯಮ ಹವ್ಯಾಸಿ ನಾಟಕ ಸಂಸ್ಥೆಯ ಸದಸ್ಯ.
- ೨೦೦೫ರಲ್ಲಿ ಹಂಪಿ ಉತ್ಸವ ಮತ್ತು ಮೈಸೂರು ದಸರಾ ಉತ್ಸವದಲ್ಲಿ ರಂಗ ಸಜ್ಜಿಕೆ ಸೇವೆ.
- ೨೦೦೩-೦೪ರಲ್ಲಿ ಜಕಣಾಚಾರಿ ಪ್ರಶಸ್ತಿ ಆಯ್ಕೆ ಸಮಿತಿಯ ಸದಸ್ಯ.
- ಗುಲಬರ್ಗಾ ಜಿಲ್ಲಾ ಮಟ್ಟದ ಚಿತ್ರಕಲಾ ಶಿಕ್ಷಕರ ಸಂಘದ ಉಪಾಧ್ಯಕ್ಷ.
- ೨೦೦೫-೦೮ರವರೆಗೆ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿ ತಮ್ಮ ಸೇವೆಯನ್ನು ಮಾಡಿದ್ದಾರೆ.

**ಸಂಚಾಲಕರಾಗಿ**

- ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಹಾಗೂ ದಿ ಐಡಿಯಲ್ ಫೈನ್ ಆರ್ಟ್ ಇನ್ಸ್‌ಟಿಟ್ಯೂಟ್ ಇವುಗಳ ಸಂಯುಕ್ತ ಆಶ್ರಯದಲ್ಲಿ ನಡೆದ ರಾಷ್ಟ್ರಮಟ್ಟದ ಸಿಮೆಂಟ್ ಶಿಲ್ಪಶಿಬಿರ, ಗುಲಬರ್ಗಾ, ೨೦೦೫.
- ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಹಾಗೂ ಎನ್.ವಿ. ಸಂಸ್ಥೆ ಗುಲಬರ್ಗಾ ಇವರ ಆಶ್ರಯದಲ್ಲಿ ನಡೆದ ಫೈಬರ್ ಶಿಲ್ಪಕಲಾ ಕಾರ್ಯಾಗಾರ, ಗುಲಬರ್ಗಾ, ೨೦೦೫.
- ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಹಾಗೂ ಶರಣಬಸವೇಶ್ವರ ವಿದ್ಯಾವರ್ಧಕ ಸಂಘ, ಗುಲಬರ್ಗಾ, ಇವುಗಳ ಆಶ್ರಯದಲ್ಲಿ ನಡೆದ ಸಾಂಪ್ರದಾಯಿಕ ಶಿಲೆ ಶಿಲ್ಪಕಲಾ ಶಿಬಿರ, ಗುಲಬರ್ಗಾ, ೨೦೦೬.
- ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಹಾಗೂ ರೋಟರಿ ಕ್ಲಬ್ ಆಫ್ ಗುಲಬರ್ಗಾ ಮಿಡ್‌ಟೌನ್ ಗುಲಬರ್ಗಾ ಇವುಗಳ ಆಶ್ರಯದಲ್ಲಿ ನಡದ ಟೆರ್ರಾಕೋಟ ಶಿಬಿರ, ಗುಲಬರ್ಗಾ, ೨೦೦೧.

- ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ೨೦೦೨ರಲ್ಲಿ ಸುರಪುರದಲ್ಲಿ ಏರ್ಪಡಿಸಿದ ಕಾಷ್ಠಶಿಲ್ಪಕಲಾ ಶಿಬಿರದ ಸಹ ಸಂಚಾಲಕರು.
- ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಹಾಗೂ ದಿ ಐಡಿಯಲ್ ಫೈನ್ ಆರ್ಟ್ ಇನ್ಸ್ಟಿಟ್ಯೂಟ್, ಗುಲಬರ್ಗಾ ಇವುಗಳ ಸಂಯುಕ್ತ ಆಶ್ರಯದಲ್ಲಿ ನಡೆದ ಹೈದರಾಬಾದ್ ಕರ್ನಾಟಕದ ಶಿಲ್ಪಕಲೆಯ ಬಗ್ಗೆ ವಿಚಾರ ಸಂಕಿರಣ, ೨೦೦೭.
- ಸುವರ್ಣ ಕರ್ನಾಟಕ ದಿಬ್ಬಣ ಸುರಪುರದಲ್ಲಿ ನಡೆದ ಚಿತ್ರಕಲಾ ಶಿಬಿರದ ಸಹ ಸಂಚಾಲಕರು, ೨೦೦೬.
- ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಹುಲಸೂರ ಗ್ರಾಮದಲ್ಲಿ ನಡೆದ ಸುವರ್ಣ ಕರ್ನಾಟಕ ದಿಬ್ಬಣದ ಅಡಿಯಲ್ಲಿ ಕಾಷ್ಠಶಿಲ್ಪಕಲೆಯ ಪ್ರಾತ್ಯಕ್ಷಿಕೆ ಮತ್ತು ವಿಚಾರ ಸಂಕಿರಣ, ೨೦೦೬.

**ಶಿಲ್ಪಕಲಾಕೃತಿಗಳು**

'ವೀರಭದ್ರ ಎಡ-ಬಲಕ್ಕೆ ದಕ್ಷಬ್ರಹ್ಮ ಮತ್ತು ದ್ರಾಕ್ಷಾಯಣಿ'; 'ಕಾಳಿಕಾದೇವಿ'; 'ಲಕ್ಷ್ಮೀ'; 'ಅಂಬಾಭವಾನಿ(ಮಹಿಷಾಸುರ ಮರ್ದಿನಿ)'; 'ಗಣೇಶ'; ವಿಶ್ವಾರಾಧ್ಯ ಮೂರ್ತಿ', ಎರಡೂವರೆ ಅಡಿ ಎತ್ತರ, ೪೯ ಕಿ.ಗ್ರಾಂ. ತೂಕದ ನಂದಿಯೊಂದಿಗೆ 'ಚತುರ್ಭುಜ ಶಿವ', ಮೂರು ಅಡಿ ೨½ ಅಡಿ ಎತ್ತರ, ೧೩೫ ಕಿ.ಗ್ರಾಂ. ತೂಕದ ಕುಳಿತಿರುವ 'ನಂದಿ', ವಿವಿಧ ಪ್ರಕಾರದ 'ಮುಖ ಲಿಂಗಗಳು'; 'ಅಶ್ವಾರೂಢ ಮಲ್ಲಯ್ಯ', ಮೌನೇಶ್ವರ ಮೂರ್ತಿ, ಪೀಠ, ಪ್ರಭಾವಳಿ ಇದರಲ್ಲಿ ಪಂಚಬ್ರಹ್ಮರು ಕಾಳಿಕಾ ದೇವಿ ಮತ್ತು ವೀರಭದ್ರ ವಿಶ್ವಕರ್ಮ ಮತ್ತು ಗಾಯತ್ರಿ ಕಲ್ಲಿನಾಥ ಶೇಷಮ್ಮ ಮತ್ತು ಶೇಷಪ್ಪ, ಪಂಚ ಋಷಿಗಳು, ಯಕ್ಷರು, ಕೀರ್ತಿ ಮುಖ, ಸಿಂಹ, ಆನೆ, ಮಕರ, ಸಪ್ತಮುಖದ ನಾಗರ ಮತ್ತು ಆಲಂಕಾರಿಕ ನಕ್ಷೆಗಳಿಂದ, ಮೌನೇಶ್ವರ, ಹೂಜಿ ಮತ್ತು ಚಪಗೊಡಲಿ ಮೂರ್ತಿ ನಿರ್ಮಾಣಗೊಂಡಿದೆ. 'ಭಕ್ತಾಂಜನೇಯ', 'ವೆಂಕಟೇಶ್ವರ', 'ಗಿಳಿ', 'ಗೌರಿ', ವಿವಿಧ ರೀತಿಯ 'ಪಂಚಲೋಹದ ಕಲಾಕೃತಿಗಳು' ನಿರ್ಮಾಣಗೊಂಡಿವೆ.

**ಕಾಷ್ಠಶಿಲ್ಪಕಲೆಗೆ ಚಿತ್ರದೊಂದಿಗೆ ನಿರ್ದೇಶನ:** ಚಂದ್ರಶೇಖರ್ ವೈ. ಶಿಲ್ಪಿ ಮತ್ತು ಮಲ್ಲಿಕಾರ್ಜುನ ಕೆ. ಚಿಕನಳ್ಳಿ ಇವರಿಗೆ ಕಲಾತ್ಮಕ ರೀತಿಯ ಮುಖ್ಯ ದ್ವಾರಪೂಜಾ ಬಾಗಿಲು ಮತ್ತು ಮಂಟಪದಲ್ಲಿ, ಉಮಾಮಹೇಶ್ವರ, ಗಣೇಶ, ಅಷ್ಟಲಕ್ಷ್ಮೀ, ಶಿಲಾಬಾಲಿಕೆ, ಬಸವಣ್ಣ, ವೀರಭದ್ರ, ಸಿಂಹ, ಆನೆ, ವಿವಿಧ ಪಕ್ಷಿಗಳು ಮತ್ತು ಕಲಾತ್ಮಕ ನಕ್ಷೆಗಳನ್ನೊಳಗೊಂಡ ವಿವಿಧ ವಿನ್ಯಾಸದ ರೇಖಾಚಿತ್ರಗಳ ಸಂಯೋಜನೆಯೊಂದಿಗೆ ನಿರ್ದೇಶನ.

**ಶಿಷ್ಯಂದಿರು:** ಮಲ್ಲಿಕಾರ್ಜುನ ಕೆ. ಚಿಕನಳ್ಳಿ, ಕಾಷ್ಠಶಿಲ್ಪ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪ್ರಶಸ್ತಿ ವಿಜೇತರು; ಶ್ರೀಶೈಲ ಬಸಣ್ಣ ಬಡಿಗೇರ ಲೋಹಶಿಲ್ಪ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಪ್ರಶಸ್ತಿ ವಿಜೇತರು.

# ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು



**ಶ್ರೀ ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ, ದಿಗ್ಗಾಂವ**
(ಕಲಬುರ್ಗಿ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಶಿಲ್ಪಕೆತ್ತನೆಯಲ್ಲಿ ನಿರತ ಕಲಾವಿದರು




ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪ್ರಶಸ್ತಿ ಪುರಸ್ಕಾರ ಸಮಾರಂಭ - ೨೦೦೬-೦೭

# ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು



**ಲೋಹಶಿಲ್ಪಿ ಶ್ರೀ ಮಾನಯ್ಯ ಬಡಿಗೇರ**
(ಕಲಬುರ್ಗಿ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಕಲಾಕೃತಿ ನಿರ್ಮಿಸುವಲ್ಲಿ ತೊಡಗಿರುವ ಕಲಾವಿದರು

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಶಸ್ತಿ ಪುರಸ್ಕಾರ ಸಮಾರಂಭ

**ನಿರ್ದೇಶನದ ಕಲಾಕೃತಿಗಳ ಸಂಗ್ರಹ:** ಗುಲಬರ್ಗಾದ ಗಣ್ಯರಾದ ಶ್ರೀ ಶಶೀಲ ಜಿ. ನಮೋಷಿ, ಎಂ.ಎಲ್‌ಸಿ., ಆರ್. ಎಸ್. ಹೊಸಗೌಡರು, ಜೆ. ಕೆ. ಮಾಲು, ರಾಘವೇಂದ್ರ ಮೈಲಾಪೂರ, ಲಕ್ಷ್ಮೀಕಾಂತ ಮೈಲಾಪುರ, ಖ್ಯಾತ ಚಿತ್ರಕಲಾವಿದರಾದ ಮೋಹನ ಸೀತನೂರ, ಜಿ.ಕೆ. ಕಮರಡಗಿ, ಚಂದ್ರಕಾಂತ ಘಂಟಿ, ಬಿ.ಜಿ. ಪಾಟೀಲ(ಎಸ್.ಬಿ. ಪಾಟೀಲ), ಗುರು ದಂಡೋತಿ, ವಾಸ್ತುಶಿಲ್ಪಿ ಸಂಪತಕುಮಾರ ಗಿಲ್ಡಾ, ಮಲ್ಲರೆಡ್ಡಿ ಕ್ಲಾಸ್ ಒನ್ ಕಂಟ್ರಾಕ್ಟರ್, ದತ್ತು ಗುತ್ತೇದಾರ, ಜೈನ ಮಂದಿರ ಸರಾಫ ಬಜಾರ, ಗುಲಬರ್ಗಾ, ಲಡ್ಡಾಸೇಠ ಬೆಳಗಾಂವ ಹಾಗೂ ಕರ್ನಾಟಕದ ಅನೇಕ ಸ್ಥಳಗಳಲ್ಲಿ.

**ಲೋಹಶಿಲ್ಪ ಸಂಗ್ರಹ:** ವೆಂಕಟಾಛಲಪತಿ, ಹಿರಿಯ ಕಲಾವಿದರು, ಬೆಂಗಳೂರು, ದಿ. ಎನ್. ಮರಿಶಾಮಾಚಾರ್, ಖ್ಯಾತ ಚಿತ್ರ ಮತ್ತು ಶಿಲ್ಪಕಲಾವಿದರು, ಬೆಂಗಳೂರು; ಖ್ಯಾತ ಉದ್ಯಮಿ ಅಯ್ಯಣ್ಣ, ಮುಂಬೈ; ಡಾ. ಜೆ. ಎಸ್. ಖಂಡೇರಾವ್, ಖ್ಯಾತ ಕಲಾವಿದರು ವರ್ಣಶಿಲ್ಪ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು, ಗುಲಬರ್ಗಾ.

**ಸನ್ಮಾನ:** ೧೯೯೪ರಲ್ಲಿ ಗಣೇಶ ಯುವಕ ಮಂಡಳಿ, ನ್ಯೂ ರಾಘವೇಂದ್ರ ಕಾಲೊನಿ, ಗುಲಬರ್ಗಾ, ೧೯೯೮ರಲ್ಲಿ ರೋಟರಿ ಕ್ಲಬ್ ಆಫ್ ಮಿಡ್‌ಟೌನ್, ಗುಲಬರ್ಗಾ; ೨೦೦೩ರಲ್ಲಿ ಶ್ರೀ ಕೋರಿ ಸಿದ್ಧೇಶ್ವರ ಮೂರ್ತಿ ಪ್ರತಿಷ್ಠಾಪನಾ ಸಮಿತಿ, ಕರುಣೇಶ್ವರ ನಗರ, ಗುಲಬರ್ಗಾ, ನಾಲವಾರ ಶ್ರೀ ತೋಟೇಂದ್ರ ಸ್ವಾಮಿಯವರಿಂದ ಸನ್ಮಾನ ಸ್ವೀಕರಿಸಿದ್ದಾರೆ.

## ೩.೩. ಯಾದಗಿರಿ ಜಿಲ್ಲೆಯ ಶಿಲ್ಪಕಲಾವಿದರು

೩.೩.೧. ಕಲಾವಿದ ಭೀಮಣ್ಣ ಮೋನಪ್ಪ ಕಂಬಾರ

೩.೩.೨. ಬಸಣ್ಣ ಮೋನಪ್ಪ ಬಡಿಗೇರ

### ೩.೩.೧. ಕಲಾವಿದ ಭೀಮಣ್ಣ ಮೋನಪ್ಪ ಕಂಬಾರ

ಕಲಾವಿದ ಭೀಮಣ್ಣ ಮೋನಪ್ಪ ಕಂಬಾರ ಇವರು ಯಾದಗಿರಿ ಜಿಲ್ಲೆಯಿಂದ ಸುಮಾರು ೪೫ ಕಿ.ಮೀ. ಅಂತರವಿರುವ ಸಣ್ಣ ಗ್ರಾಮವಾದ ಗಾಜರಕೋಟದಲ್ಲಿ ದಿನಾಂಕ ೨೧, ೧೯೩೭ರಲ್ಲಿ ಜನಿಸಿದರು. ಇವರ ತಾಯಿ ಕಾಳಮ್ಮ, ತಂದೆ ಮೋನಪ್ಪ ಸುಶಿಕ್ಷಿತರು. ಸಂಪ್ರದಾಯಸ್ಥರು ಹಾಗೂ ದೈವಿ ಭಕ್ತರಾದ ಇವರ ತಂದೆ ಕಂಬಾರಿಕೆ ಮಾಡಿ ಜೀವನ ಸಾಗಿಸುವಂತಹ ಮನೆತನ ವಾಗಿತ್ತು. ಇವರ ಬಾಲ್ಯಜೀವನ ಕಷ್ಟಕರವಾಗಿತ್ತು. ಇವರನ್ನು ಇವರ ತಂದೆಯೇ ಪೋಷಿಸಿ ಬೆಳೆಸಿದರು. .ಇವರ ಇನ್ನೊಬ್ಬ ಅಣ್ಣ ಸಿದ್ದಣ್ಣ. ಐದು ವರ್ಷ ಇರುವ ಇಬ್ಬರು ಗಂಡುಮಕ್ಕಳು ಇಬ್ಬರನ್ನು ಬಿಟ್ಟು ತಾಯಿ ತೀರಿದ ಮೇಲೆ ತಂದೆಯೇ ಪೋಷಿಸಿ ಬೆಳೆಸಿದರು. ಇವರ ತಾಯಿಯ ತವರುಮನೆಯೂ ಅದೇ ಗಾಜರಕೋಟ ಪಕ್ಕದ ಮನೆಯಾಗಿತ್ತು. ಅವರ ಅತ್ತೆ ಮಾವನವರು ಇವರನ್ನು ಪೋಷಿಸಿ ಬೆಳೆಸಿದರೆನ್ನಬಹುದಾಗಿದೆ. ಮೊದಲು ಇವರು ತಾಯಿ ತಂದೆಯರ ಆಸ್ತಿ ಶ್ರೀಮಂತರೆಂದೇ ಹೇಳಬಹುದು. ತಾಯಿ ನಿಧನರಾದ ಮೇಲೆ ತಂದೆ ಸ್ವಲ್ಪ ಆಸ್ತಿ ಮಾರಿ ಜೀವನ ಸಾಗಿಸಿದರು.

ಕೆಲವು ವರ್ಷಗಳನ್ನು ಕಳೆದ ನಂತರ ಭೀಮಣ್ಣ ಸುಮಾರು ಐದು ವರ್ಷ ಇರುವಾಗಲೇ ತಂದೆಯನ್ನು ಕಳೆದುಕೊಂಡ ದುರ್ದೈವಿಗಳು ಎಂದು ಹೇಳಬಹುದಾಗಿದೆ. ಆಗ ಸಂಪೂರ್ಣ ಜವಾಬ್ದಾರಿಯನ್ನು ಅವರ ಸೋದರ ಮಾವ ಮತ್ತು ಅತ್ತೆಯ ಮೇಲೆ ಬಿದ್ದಿತು. ತಂದೆ-ತಾಯಿಯನ್ನು ಕಳೆದುಕೊಂಡ ಅಣ್ಣ ಸಿದ್ದಣ್ಣ ಮತ್ತು ಭೀಮಣ್ಣ ಅನಾಥರಾದಾಗ ಅವರ ಸಂಪೂರ್ಣ ಜವಾಬ್ದಾರಿಯು ಮಾವನರಾದ ಕಾಳಪ್ಪ ಗ್ವಾಡಿ ಮತ್ತು ಅತ್ತೆ ಕಾಳಮ್ಮನವರು ಹೊತ್ತುಕೊಳ್ಳುತ್ತಾರೆ. ಹಾಗಾಗಿ ಇವರ ಪೋಷಣೆಗೆ ಎಂದು ಎಲ್ಲಾ ಆಸ್ತಿ ಮಾರಾಟ ಮಾಡುತ್ತಾರೆ. ಇವರ ಮಾವನಾದ ಕಾಳಪ್ಪನವರು ಲೋಹಶಿಲ್ಪಕಲಾವಿದರಾಗಿ ಅವರು ಅನೇಕ ಕಲಾಕೃತಿಗಳನ್ನು ರಚಿಸುವ ಮೂಲಕ ಅವರು ಹೆಸರು ಮಾಡಿರುವರಾದ್ದರಿಂದ ಅವರ ಮನೆಯಲ್ಲಿ ಬೆಳೆಯುತ್ತಿರುವ ಭೀಮಣ್ಣ ಮತ್ತು ಸಿದ್ದಣ್ಣನನ್ನು ಅವರು ಬೆಳೆಸುತ್ತಾರೆ. ಅವರು ಲೋಹಶಿಲ್ಪದ ಜೊತೆಗೆ ಕಂಬಾರಿಕೆಯನ್ನು ಮಾಡುತ್ತಿದ್ದರು. ಇವರು ಕೂಡ ಅದೇ ಗಾಜರಕೋಟದಲ್ಲಿ ನೆಲೆಸಿರುವುದರಿಂದ ಅವರಿಗೆ ಯಾವುದೇ ತೊಂದರೆಯಾಗದ ಮತ್ತೆ ಬೆಳಸಿ ದೊಡ್ಡವಾರಾಗಿ ಮಾಡಿದ ಕೀರ್ತಿ ಮಾವ ಅತ್ತೆಯವರಿಗೆ ಸಲ್ಲುತ್ತದೆ. ಇವರ ಪರಿಸರವೆಂದರೆ ಈ ಗ್ರಾಮವೇ ಸೂಚಿಸುವಂತೆ ಗಾಜರಕೋಟ ಎಂದರೆ ಗಾಜಿನ ಬಳೆಗಳನ್ನು ತಯಾರಿಸುವ ಕೇಂದ್ರವಾಗಿ ಪ್ರಸಿದ್ಧಿ ಪಡೆದ ಸ್ಥಳವೆಂದೂ ಅಲ್ಲಿಯ ಜನರು ನಂಬಿಕೆಯಾಗಿದೆ. ಗಾಜರ್ ಎಂದರೆ ತೆಲುಗಿನಲ್ಲಿ ಬಳೆಗಳು ಎಂದರ್ಥವನ್ನು ಕೊಡುತ್ತದೆ. ಅಲ್ಲದೆ ಈ ಮೊದಲೆ ವಿವರಿಸಿದಂತೆ ಈ ಗ್ರಾಮವು ಯಾದಗಿರಿ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಿದೆ. ಈ ಯಾದಗಿರಿ ಪ್ರದೇಶವು ವಿವಿಧ ಕಾಲ ಘಟ್ಟಗಳಲ್ಲಿ ಅನೇಕ ಅರಸುಮನೆತನಗಳು ಆಳ್ವಿಕೆಯನ್ನು ನಡೆಸಿದ್ದು ಕಂಡುಬರುತ್ತದೆ. ಅಲ್ಲದೇ ವಿಶೇಷವಾಗಿ ಯಾದವ ಅರಸರು ಈ ಪ್ರದೇಶವನ್ನು ತಮ್ಮ ನೆಚ್ಚಿನ ತಾಣವನ್ನಾಗಿಸಿಕೊಂಡು ಇಲ್ಲಿ ಕೋಟೆಯನ್ನು ಕಟ್ಟಿದ್ದರು. ಅಂದಿನಿಂದ ಈ ಪ್ರದೇಶಕ್ಕೆ ಯಾದವಗಿರಿ ಎಂದು ಕರೆಯಲಾರಂಭಿಸಿದರು. ಈ ಯಾದವಗಿರಿ ಮುಂದೆ ಯಾದಗಿರಿ ಎಂದೇ ಪ್ರಸಿದ್ಧಿ ಪಡೆಯಿತು. ನಂತರದಲ್ಲಿ ಅಂದರೆ ಕ್ರಿ.ಶ. ೧೯೫೦ರ ದಶಕದ ನಂತರ ಈ ಪ್ರದೇಶದ ಕೆಲವು ಭಾಗಗಳು ಸುರಪುರ ನಾಯಕರ ಆಡಳಿತಕ್ಕೆ ಒಳಪಟ್ಟು ಕಲೆ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಪಟ್ಟಂತಹ ವಿಶಿಷ್ಟ ಪ್ರದೇಶಗಳಾಗಿ ರೂಪಗೊಂಡಿವೆ. ಸುರಪುರದ ಅರಸ ಕೇವಲ ರಾಜಕೀಯವಾಗಿ ಆಡಳಿತ ನಡೆಸದೆ ಶಿಲ್ಪಕಲೆ ಸಾಹಿತ್ಯ ಚಿತ್ರಕಲೆ ಸಂಗೀತಗಳಂತಹ ಲಲಿತಕಲೆಗಳಿಗೆ ರಾಜಾಶ್ರಯವನ್ನು ನೀಡಿದ್ದಲ್ಲದೆ, ಸಾಂಸ್ಕೃತಿಕ ಹರಿಕಾರರೆನಿಸಿಕೊಂಡಿದ್ದರು. ನಮ್ಮ ದಕ್ಷಿಣ ಭಾರತದ ಅನೇಕ ಸಣ್ಣ ಪುಟ್ಟ ಸಂಸ್ಥೆಗಳಲ್ಲಿ ಸುರಪುರ ಸಂಸ್ಥಾನಗಳಲ್ಲಿ, ಲಲಿತಕಲೆಗಳಿಗೆ ರಾಜಾಶ್ರಯವನ್ನು ನೀಡಿದ ಸಂಸ್ಥಾನಗಳಲ್ಲಿ ಸುರಪುರವು ಸಾಂಸ್ಕೃತಿಕವಾಗಿ ವಿಶಿಷ್ಟವಾದದ್ದು. ಸಹಜವಾಗಿಯೇ ಈ ಪ್ರದೇಶದುದ್ದಕ್ಕೂ ಸಂಗೀತಗಾರರು, ಚಿತ್ರಕಲಾವಿದರು, ಶಿಲ್ಪಕಲಾವಿದರು ಕಂಡುಬರುತ್ತಾರೆ. ಈ ಮಾತಿಗೆ ಪ್ರಸುತ್ತ ಕಲಾವಿದರು ಭೀಮಣ್ಣ ಕಂಬಾರರು ಹೊರತಾಗಿಲ್ಲ. ಈ ಗ್ರಾಮದಿಂದ ಸುಮಾರು ಎಂಟು ಕಿಲೋ ಮೀಟರ್ ಅಂತರದಲ್ಲಿ ಗುರಮಿಟಕಲ್ ಊರು ಬರುತ್ತದೆ. ಅದರ ನಂತರ ಬರುವುದೇ ಆಂಧ್ರಪ್ರದೇಶದ ಕೊನೆಯ ಭಾಗವಾಗಿದೆ. ಇವರ ಊರಿನಲ್ಲಿ ತೆಲುಗು

ಭಾಷೆಯನ್ನು ಮಾತನಾಡುತ್ತಾರೆ. ಕನ್ನಡ ಜೊತೆಗೆ ತೆಲುಗು ಹೀಗೆ ಅವರ ಪರಿಸರ ವಿಭಿನ್ನವಾಗಿದೆ. ಇವರ ಊರಿನ ಸುತ್ತಲೂ ಕೋಟೆಗೋಡೆಗಳು ಇವೆ. ತೋಪುಗಳು ಕಾಣಸಿಗುತ್ತವೆ. ಕೆಲವೊಂದು ಐತಿಹಾಸಿಕ ದೇವಾಲಯಗಳು ಇವೆ. ಹೀಗೆ ಅವರ ಊರು ಸೂಚಿಸುವಂತೆ ಗಾಜರಕೋಟ ಎಂದರೆ ಬಳೆಗಳ ತಯಾರಿಸುವ ಕೇಂದ್ರವಾಗಿತ್ತು ಎನ್ನುತ್ತಾರೆ. ಅಲ್ಲಿಯ ಜನರು ಮತ್ತು ಮಾವನವರು ಕೂಡ ಲೋಹಶಿಲ್ಪಕಲಾವಿದರು. ಅವರ ಪರಿಸರವೇ ಕಲೆಯಿಂದ ಬಲೆ ಹೆಣೆದಂತೆ ಈ ಊರಿನ ಐತಿಹಾಸಿಕವಾದ ಕಥೆಯನ್ನು ಹೇಳಿರುವರು. ಹೀಗಾಗಿ ಅಲ್ಲಿ ಅವರು ಬೆಳೆದ ಪರಿಸರ ಉತ್ತಮ ರೀತಿಯಿಂದ ಕೂಡಿತ್ತು.

ಸರಿಯಾಗಿ ೧೦ ವರ್ಷ ತುಂಬುತ್ತಿರುವಂತೆ ಇವನಿಗೆ ಕೆಲಸ ಮಾಡುವುದರ ಜೊತೆಗೆ ಶಿಕ್ಷಣ ಕೊಡಿಸಲು ಪ್ರಯತ್ನಿಸಿದರು. ಆದರೆ ಶಿಕ್ಷಣ ಕಲಿಯಲು ಆಸಕ್ತಿ ಇರದ ಕಾರಣ ನಾಲ್ಕನೆಯ ತರಗತಿಯವರೆಗೆ ಕಲಿತಿರುವೆನು ಎನ್ನುತ್ತಾರೆ. ಸಂಸ್ಕೃತವಿದ್ದದ್ದರಿಂದ ತಮಗೆ ಕಲಿಯಲು ಕಷ್ಟವಾಗಿತ್ತು ಎನ್ನುತ್ತಾರೆ. ಭೀಮಣ್ಣ ಇವರ ಮಾವನು ಅವನಿಗೆ ಶಾಲೆ ಕಲಿಯಲು ಆಸಕ್ತಿ ಇಲ್ಲ. ತಮ್ಮ ಕೆಲಸ ಮಾಡಲು ತಯಾರಿ ಮಾಡಿದರಂತೆ. ಅವರ ಮನೆಯಲ್ಲಿಯೂ ಬಡತನ. ಅವರ ಮಗನಿಗೆ ಉತ್ತಮ ಶಿಕ್ಷಣ ಕೊಡಿಸಿದರು. ಅವನು ಆಸಕ್ತಿ ತೋರಿದ. ಅದಕ್ಕೆ ಅವನಿಗೆ ಕಲಿಯಲು ಹಚ್ಚಿಸಿದರು. ಅವನು ಮುಂದೆ ಶಿಕ್ಷಕನಾದನು. ಹೀಗಾಗಿ ಭೀಮಣ್ಣನನ್ನು ಮನೆಯ ಕೆಲಸ ನೀರು ತರುವುದು ಮಣ್ಣು ಸಂಗ್ರಹಿಸುವುದು. ಹೀಗೆ ಸಣ್ಣ ಪುಟ್ಟ ಕೆಲಸಗಳನ್ನು ಮಾಡಲು ಹಚ್ಚಿಸಿದರು. ನಂತರ ಅವರ ಕೈಯಲ್ಲಿ ಮಣ್ಣು ಕಲಿಸಲು ಮಣ್ಣು ಸೋಸುವುದಕ್ಕೆ ಹಚ್ಚಿಸಿದರು. ಆಗ ಊರಿನ ಜನರು "ತಂದೆ-ತಾಯಿಯನ್ನು ಕಳೆದುಕೊಂಡ ಮಕ್ಕಳನ್ನು ಕಾಳಪ್ಪ ಬೆಳೆಸಿ ಕೆಲಸ ಮಾಡಲು ಹಚ್ಚಿದ ನೋಡ್ರಿ" ಎಂದು ಜನರು ಮಾತನಾಡುತ್ತಿದ್ದರಂತೆ. "ಭೀಮ್ಯಾ ಮಾವನ ಕೈಯಲ್ಲಿ ಒಳ್ಳೆಯ ಕೆಲಸ ಕಲಿತು ಶ್ಯಾಣೆ ಆಗ್ಯಾನ ನೋಡ್ರಿ" ಎಂದು ಮಾತನಾಡುತ್ತಿದ್ದರಂತೆ. ಹಳ್ಳಿಯ ಛಾವಡಿಯ ಮೇಲೆ ಕುಳಿತು, ಜನರು ಮಾತನಾಡುತ್ತಿದ್ದರೆಂಬುದನ್ನು ಭೀಮಣ್ಣನವರು ನೆನಪಿಸಿಕೊಂಡು ಹೇಳಿದ ಮಾತಿದು.

ತಮ್ಮ ಬಾಲ್ಯದ ನೆನಪಿನ ಬುತ್ತಿ ಬಿಚ್ಚಿ ಒಂದೊಂದು ನೆನಪು ಮಾಡಿಕೊಳ್ಳುತ್ತಾ ಹೇಳಲು ಪ್ರಾರಂಭಿಸಿದ ಕಂಬಾರರು ತಂದೆ ತಾಯಿಯನ್ನು ಮರೆಯಿಸಿ ಪ್ರೀತಿ ತೋರಿದ ಅತ್ತೆ ಮಾವಂದಿರನ್ನು ಮುಕ್ತಕಂಠದಿಂದ ಸ್ಮರಿಸಿಕೊಂಡು ಕಂಬನಿ ಮಿಡಿದರು. ನಾನು ಒಬ್ಬ ಕಲಾವಿದನಾಗಿ ಉಣಿಸಿ ಬೆಳೆಸಿದ್ದು ಅವರಿಗೆ ಸಲ್ಲುತ್ತದೆ. ಅದರಲ್ಲಿ ನಮ್ಮ ಜೋಪಾನ ಮಾಡಿ ತಮ್ಮ ಮಕ್ಕಳನ್ನು ಬೆಳೆಸಿ ತಮ್ಮ ಮಕ್ಕಳಂತೆ ನಮ್ಮನ್ನೂ ಬೆಳೆಸಿದ ಕೀರ್ತಿ ಅವರಿಗೆ ಸಲ್ಲುತ್ತದೆ.

ಅವರ ಮನೆಯ ಪರಿಸ್ಥಿತಿಯು ತುಂಬಾ ಕಷ್ಟದಲ್ಲಿತ್ತು. ಅವರ ಸ್ವಲ್ಪ ಶಿಲ್ಪಗಳನ್ನು ಮಾಡಿಸುತ್ತಿದ್ದರು. ಎತ್ತಿನ ಕೊರಳಿನ ಸರಗೆಜ್ಜೆಗಳು ಗಂಟೆಗಳು ಮತ್ತು ಮಂಡಿಗಳು ಇವು ಮುಖ್ಯವಾಗಿ ಮಾಡುತ್ತಿದ್ದರು. ಅವರ ಕಲೆಯನ್ನು ಚಿಕ್ಕಂದಿನಿಂದಲೇ ಅರಿತುಕೊಂಡು. ಎಂಟು ವರ್ಷದವನಿರುವಾಗಲೇ ಅವರ ಕೈಕೆಳಗೆ ಕೆಲಸ ಮಾಡತೊಡಗಿದನು.

ದಿನಾಲೂ ಅವರ ಸುತ್ತಲೂ ಇರುವುದರಿಂದ ನನಗೆ ಯಾವುದೇ ರೀತಿಯ ಕಷ್ಟವೆಂದು ಅನಿಸಲಿಲ್ಲವೆನ್ನುತ್ತಾರೆ. ಮೊದಲು ಮುಸ್ಲಿಂ ದೇವರುಗಳನ್ನು ಆ ಭಾಗದಲ್ಲಿ ಹೆಚ್ಚು ಜನ ಮಾಡಿಸುತ್ತಿದ್ದರು. ಅವುಗಳ ಬೇಡಿಕೆಯು ಸಾಕಷ್ಟು ಇತ್ತು. ಮುಸ್ಲಿಂ ಜನಸಂಖ್ಯೆ ಹೆಚ್ಚಿರುವುದರಿಂದ ಅಲ್ಲಿ ಮೊಹರಂ ಬಂದರೆ ಹೊಸ ದೇವರುಗಳನ್ನು ಮಾಡಿಸಲಾಗುತ್ತಿತ್ತು. ಅವುಗಳ ಜೊತೆಗೆ ಕೆಲವೊಂದು ಮಲ್ಲಯ್ಯ, ನಂದಿ ಕುದುರೆಗಳು ಮಾಡಲು ಪ್ರಾರಂಭಿಸಿದರು. ಇವೆಲ್ಲ ಶಿಲ್ಪಗಳನ್ನು ಕಲಿತುಕೊಂಡರು. "ನಾನು ಸುಮಾರು ಹದಿನೈದು ವರ್ಷದಲ್ಲಿ ಕೆಲವೊಂದು ಮಾಹಿತಿಯನ್ನು ತಿಳಿದು ಕೊಂಡು ಅನೇಕ ಶಿಲ್ಪಗಳನ್ನು ತಯಾರಿಸಲು ಪ್ರಾರಂಭಿಸಿದೆನು." ಹೀಗೆ ಭೀಮಣ್ಣ ಕಂಬಾರರು ದಿನಾಲು ಹೊಸ ತಂತ್ರವನ್ನು ಮಾವನವರಿಂದ ಪಡೆದುಕೊಳ್ಳುತ್ತಾ ಮಣ್ಣು ಹದಗೊಳಿಸುವುದರಿಂದ ಮ್ಯಾಣ ತಯಾರಿಸಿಕೊಳ್ಳುವ ವಿಧಾನವನ್ನು ಸಂಪೂರ್ಣವಾಗಿ ಕಲಿತುಕೊಂಡರು. ನಂತರ ಲೋಹ ವನ್ನು ಕಾಯಿಸಿ ಎರಕ ಹೊಯ್ಯುವುದು ಮಾತ್ರ ಕಷ್ಟವಾಯಿತು ಎನ್ನುತ್ತಾರೆ. ಹೀಗೆ ಎಲ್ಲ ಕೆಲಸ ವನ್ನು ೧೮ ವರ್ಷದಲ್ಲಿ ಸಂಪೂರ್ಣವಾಗಿ ತಿಳಿದುಕೊಂಡು ಭೀಮಣ್ಣ ಕಂಬಾರರು ಎಲ್ಲಾ ಜಾನಪದ ಶಿಲ್ಪಗಳನ್ನು ರಚಿಸಿಕೊಡುವಂಥ ತಯಾರಿಯಾದನು" ಎಂದು ಅವರ ಮಾವನು ಊರಿನ ಹಿರಿಯರಿಗೆ ಹೇಳುತ್ತಿದ್ದರಂತೆ.

**ಕಲಾ ಬದುಕು**

ಕಲಾವಿದ ಭೀಮಣ್ಣ ದೊಡ್ಡವರಾದಂತೆ ಅವರ ಮಾವನವರ ಕಲೆಯನ್ನು ಸಂಪೂರ್ಣವಾಗಿ ಕಲಿತುಕೊಂಡರು. ಅವರು ಜಾನಪದ ಶೈಲಿಯ ಶಿಲ್ಪಗಳನ್ನು ಮತ್ತು ಟೊಳ್ಳಾದ ಶಿಲ್ಪಗಳನ್ನು ರಚಿಸಿದ್ದಾರೆ. ಹೊರಗೂ ಕಸರ ಉಳಿಯದಂತೆ ಶಿಲ್ಪ ರಚಿಸಿರುವುದನ್ನು ನೋಡಿದ ಅವರ ಮಾವನವರು ಬಹಳ ಸಂತೋಷದಿಂದ ಊರಿನ ಹಿರಿಯರಿಗೆಲ್ಲ ಹೇಳಿಬಂದಿದ್ದರಂತೆ.

"ನಮ್ಮ ಭೀಮ್ಯಾ ಒಳ್ಳೆ ಲೋಹದ ಶಿಲ್ಪಗಳನ್ನು ತಯಾರಿಸುವಂಗ ಅದ ನೋಡ್ರಿ ನಮ್ಮ ಕೆಲಸ ಬಿಡಿಸ್ಯಾನರಿ ಅವಾ" ಎಂದು ಊರಿನ ಗಣ್ಯರು ಹೇಳುತ್ತಿದ್ದರಂತೆ. ಹಂತ ಹಂತವಾಗಿ ಮಾಧ್ಯಮ ಅರಿತುಕೊಂಡು ಮೊದಲ ವಿಧಾನ, ಎರಡನೆಯ ವಿಧಾನ, ಮೂರನೆಯ ವಿಧಾನ, ನಾಲ್ಕನೆಯ ವಿಧಾನ ಹೀಗೆ ಹಂತ ಹಂತವಾಗಿ ತಿಳಿದುಕೊಂಡು ಭೀಮಣ್ಣ ಮಣ್ಣು ಮಾಧ್ಯಮ, ಮೇಣ ಮಾಧ್ಯಮ, ಲೋಹ ಮಾಧ್ಯಮದ ಎಲ್ಲಾ ತಿರುವುಗಳನ್ನು ಅರಿತುಕೊಂಡರು. ಭೀಮಣ್ಣ ಲೋಹ ಕಾಯಿಸಿ ಕರಗಿಸುವ ವಿಧಾನವನ್ನು ಕಲಿತುಕೊಂಡ. ಸಂಪೂರ್ಣವಾಗಿ ತಾನೇ ಒಂದು ಶಿಲ್ಪ ತಯಾರಿಸಿಕೊಡುವಂತೆ ಅವರ ಮಾವ ಆಜ್ಞಾಪಿಸಿದರಂತೆ. ಅದೇ ತರಹವೇ ಮಣ್ಣು ಹದ ಮಾಡಿಕೊಂಡು ಶಿಲ್ಪ ತಯಾರಿಸಿಕೊಂಡು ಮೇಣದಲ್ಲಿ ತಯಾರಿಸಿ ಹಾಕುವವರೆಗೂ ತಾನೇ ಸ್ವತಃ ತಯಾರಿಸಿದರಂತೆ. "ಆ ಶಿಲ್ಪವನ್ನು ಬಹಳ ಸುಂದರವಾಗಿ ರಚಿಸಿದನು" ಎಂದು ಅವರ ಮಾವನು ಅವನನ್ನು ತಬ್ಬಿಕೊಂಡು ಮುದ್ದಾಡಿದರಂತೆ. ಭೀಮಣ್ಣನಿಗೆ ಮದುವೆ ಮಾಡಲು ಕನ್ನೆಯನ್ನು ಅವರ ಅತ್ತೆ ಮಾವನೇ ಹುಡುಕಾಡಿದರಂತೆ. ಮೂರ್ನಾಲ್ಕು ಊರುಗಳಲ್ಲಿ ನೋಡಿ ಬಂದರಂತೆ. ಕೊನೆಗೆ ಒಂದು ಊರಿನಲ್ಲಿ ಗುಲಬರ್ಗಾದಲ್ಲಿ ಕನ್ನೆಯನ್ನು ನೋಡಿ ಅವರೇ

ಪಾಸು ಮಾಡಿ ಬಂದರಂತೆ. ಕನ್ಯೆಯ ತಂದೆಯ ಹೆಸರು ಪುಂಡಲೀಕರಾವ, ತಾಯಿ ಸೋನು ಬಾಯಿ. ನಾಲ್ಕನೆಯ ಮಗಳಾದ ಪದ್ಮಾವತಿಯನ್ನು ತಾವೇ ನೋಡಿ ಬಂದು ಒಪ್ಪಿಗೆ ಕೂಡ ಕೊಟ್ಟು ಬಂದು ಬಿಟ್ಟಿದ್ದರಂತೆ. ಆಗ ಭೀಮಣ್ಣನಿಗೆ ಹದಿನೆಂಟು ವರ್ಷ ತುಂಬಿದ್ದವಂತೆ. ಮಾಮ ಅತ್ತೆ ನೋಡಿ ಬಂದ ಕನ್ಯೆಯನ್ನು ಸಂತೋಷದಿಂದ ಒಪ್ಪಿಗೆ ಇದೆ ಎಂದು ಹೇಳುವ ಧೈರ್ಯ ಇರಲಿಲ್ಲವಂತೆ.

ಪುಂಡಲೀಕರವರ ಮನೆತನವು ಬಡಿಗೆತನ ಮನೆತನ. ಬಾಗಿಲು ಪಡಸಾಲಿ ಜೋಡಣೆ ಜಾನಪದ ಕಲೆಯ ಶೈಲಿಯಲ್ಲಿ ಅವರು ನಿಸ್ಸೀಮರಾಗಿದ್ದರಂತೆ. ಹಾಗಾಗಿ ಸುಸಂಸ್ಕೃತ ಮನೆತನದ ಮಗಳನ್ನು ಭೀಮಣ್ಣನಿಗೆ ನೋಡಿ ಕನ್ಯೆಯನ್ನು ಭಾವಿ ಹೆಂಡತಿಯಾಗುವವಳನ್ನು ಅವರು ನೋಡಿರಲಿಲ್ಲವಂತೆ, ಹೆಂಡತಿ ಹೇಗಿದ್ದಾಳೆ ಎನ್ನುವುದೂ ಕೂಡ ಲಗ್ನದ ದಿನವೇ ಅಂದರೆ ತಾಳಿ ಕಟ್ಟುವಾಗ ಅವಳ ಮುಖ ನೋಡಿದ್ದು ಎಂದು ಹೇಳಿದರು.

"ಸ್ವಲ್ಪ ದಿನಗಳ ನಂತರ ನಮ್ಮ ಮ್ಯಾಲೆ ನಮ್ಮ ಅತ್ತಿ ದ್ವೇಷ ತೊಂದರೆ ಕೊಡಲು ಪ್ರಾರಂಭಿಸಿದರು. ಅದೇ ಚಿಂತಿಯಲ್ಲಿ ನಮ್ಮ ಮಾವನೂ ನಿಧನರಾದರು. ನಂತರ ಭೀಮಣ್ಣ ಮ್ಯಾಲೆ ಹೆಂಡಿತಿಯ ಮ್ಯಾಲೆ ಸಿಡುಕು ಪ್ರಾರಂಭಿಸಿದರು. ಮಾವನನ್ನು ಕಳೆದುಕೊಂಡು ಭೀಮಣ್ಣನಿಗೆ ಯಾರೂ ಸಹಾಯಕರಿಲ್ಲದಂತಾಯಿತು. ಇವುಗಳ ಮಧ್ಯೆ ತಮ್ಮ ಶಿಲ್ಪಕಲೆಯನ್ನು ಪ್ರಾರಂಭಿಸಿದರು. ಕಷ್ಟದಲ್ಲಿ ಅವರು ಎದೆಗುಂದದೆ ಸ್ವಲ್ಪದಿನ ಬೇರೆಯವರ ಕಡೆ ಕೆಲಸ ಮಾಡಿ ಹೆಂಡತಿಯನ್ನು ಕರೆದುಕೊಂಡು ಬಂದು ಬೇರೆ ಇದ್ದು ತಮ್ಮ ಕೆಲಸದ ಬಗ್ಗೆ ಚಿಂತಿಸುತ್ತಾ ಜೊತೆಗೆ ಎಲ್ಲಾ ಕೆಲಸದ ಭಾಗಿಯಾಗಿ ಅವರು ಕೂಡ ಅನೇಕ ಶಿಲ್ಪಗಳನ್ನು ರಚಿಸುವುದರಲ್ಲಿ ಭಾಗಿಯಾಗಿದ್ದಾರೆ.

**ಭೀಮಣ್ಣ ಕಂಬಾರರ ಕಲಾಶಿಬಿರ ಗೌರವ ಪ್ರಶಸ್ತಿಗಳು**

ಗುಲಬರ್ಗಾದಲ್ಲಿ ಪ್ರಖ್ಯಾತ ಕಲಾವಿದರನ್ನು ಗುರುತಿಸಲಾಗಿದೆ. ಅವರಲ್ಲಿ ಪ್ರಮುಖರು ಶ್ರೀ ಅವಣ್ಣೆಪ್ಪ ಇವರು ಲೋಹಶಿಲ್ಪ ಕಲಾವಿದರು. ಕೊಡೇಕಲ್ ಸುರಪುರ ಲೋಹಶಿಲ್ಪಕಲೆಯಲ್ಲಿ ಖ್ಯಾತಿಯನ್ನು ಪಡೆದಿದ್ದಾರೆ. ಪ್ರಥಮ ಬಾರಿಗೆ ಶಿಲಾ ಶಿಲ್ಪಕಲಾವಿದ ಧನಂಜಯ ಶಿಲ್ಪಗಳು ಪ್ರಮುಖರು. ಇವರಿಗೆ ಶಿಲ್ಪಕಲಾ ಅಕಾಡೆಮಿಯಿಂದ ಜಕಣಾಚಾರಿ ಪ್ರಶಸ್ತಿ ಸಂದಿದೆ. ಬೆಳ್ಳಿ, ತಾಮ್ರ, ಹಿತ್ತಾಳೆ, ಮಾಧ್ಯಮದಲ್ಲಿ ಉಬ್ಬುಶಿಲ್ಪಕಲಾವಿದ ಶ್ರೀನಾಗಣ್ಣ ಪ್ರಮುಖ ಕಲಾವಿದರೆಂದು ಹೇಳಬಹುದು. ನಂತರ ಕಾಷ್ಠ ಶಿಲ್ಪಕಲೆಯಲ್ಲಿ ಪ್ರಮುಖರೆಂದು ಮತ್ತು ಇವರು ರಚಿಸಿದ ಮನೆಯ ಬಾಗಿಲುಗಳು, ದೇವರ ಮನೆಯ ಬಾಗಿಲುಗಳು ಈ ಭಾಗದ ಪ್ರಮುಖ ಕಲೆ ಎನ್ನುವುದನ್ನು ಪರಿಗಣಿಸಿ, ಇವರಿಗೆ ಕನ್ನಡ ವಿಶ್ವವಿದ್ಯಾಲಯ ೨೦೦೫ರಲ್ಲಿ ನಾಡೋಜ ಪದವಿಯನ್ನು ಕೊಟ್ಟು ಗೌರವಿಸಿದೆ. ಚಿತ್ತಾಪೂರದ ಮಹಾದೇವಪ್ಪ ಲೋಹ ಮತ್ತು ಶಿಲ್ಪಕಲಾವಿದ. ಇವರು ಈ ಭಾಗದ ಪ್ರಮುಖ ಶಿಲ್ಪಕಲಾವಿದರೆಂದೇ ಖ್ಯಾತಿ.

ಈ ಪ್ರಥಮ ಶಿಲ್ಪಕಲಾ ಕಾರ್ಯಾಗಾರ ಭೀಮಣ್ಣ ಕಂಬಾರರು ಈವರೆಗೂ ಮೈಸೂರು ಭಾಗದ ಕಲಾತಂತ್ರಗಳನ್ನು ಅವರು ಉತ್ತಮವಾಗಿ ತಮ್ಮ ಕಲಾಕೃತಿಗಳಲ್ಲಿ ಆಂಧ್ರಪ್ರದೇಶದ

ಕೊಲ್ಲೂರು ಎಂಬ ಊರಿನಲ್ಲಿ ಬೀರಲಿಂಗೇಶ್ವರ ದೇವರು ಕುದುರೆಯ ಮೇಲ್ಗಡೆ ಕುಳಿತಿರುವ ಬೀರಲಿಂಗೇಶ್ವರ ದೇವಾಲಯದಲ್ಲಿ ದೇವರು ಪೂಜೆಗೊಳ್ಳುತ್ತಲಿದೆ. ಇದು ಸುಮಾರು ೧೮ ಇಂಚು ಎತ್ತರದ ದೇವರು ಪೀಠ ಮತ್ತು ಕುದುರೆಯ ಮೇಲ್ಗಡೆಗೆ ಕುಳಿತಿರುವ ಈ ದೇವರ ಮೆರವಣಿಗೆ ಬಹಳ ವಿಜೃಂಭಣೆಯಿಂದ ನಡೆಯುತ್ತಲಿದೆ. ಹಿಂದು ದೇವರುಗಳಲ್ಲದೆ ಮುಸ್ಲಿಂ ದೇವರುಗಳನ್ನು ತಯಾರಿಸಿದ ಕೀರ್ತಿ ಕಂಬಾರರಿಗೆ ಸಲ್ಲುತ್ತದೆ. ಇವರ ಕಲಾಕೃತಿಯನ್ನು ನೋಡಿದರೆ ಯಾವುದೇ ಹಿಂದು, ಮುಸ್ಲಿಂ, ಕ್ರೈಸ್ತ ಎನ್ನುವ ಭೇದವಿಲ್ಲ ಎನ್ನುವುದು ಕಂಡುಬರುತ್ತದೆ.

ಇವರು ಮುಸ್ಲಿಂ ಪೀರಾ ದೇವರುಗಳನ್ನು ನಿರ್ಮಿಸಿದ್ದಾರೆ. ಇವರು ನಿರ್ಮಿಸಿ ಕೊಟ್ಟ ಊರು ಕುಪನೂರು ಚಿಂಚೋಳಿ ತಾ. ಜಿ. ಗುಲಬರ್ಗಾ. ಈ ಊರಿಗೆ ಪೀರಾ ಮುಸ್ಲಿಂ ದೇವರುಗಳನ್ನು ತಯಾರಿಸಿಕೊಟ್ಟಿದ್ದಾರೆ. ಪ್ರತಿವರ್ಷ ಈ ಮುಸ್ಲಿಂ ದೇವರ ಉತ್ಸವ ಮೊಹರಂದಲ್ಲಿ ವಿಜೃಂಭಣೆಯಿಂದ ನಡೆಯುತ್ತದೆ. ಇವರ ಕಲಾಕೃತಿಗಳು ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರದ ಗಡಿಭಾಗದಲ್ಲಿ ಪ್ರಮುಖ ದೇವಾಲಯಗಳಿಂದ ಹಿಡಿದು ಪ್ರತಿಯೊಬ್ಬರ ಮನೆಗಳಲ್ಲಿ ಪೂಜೆಗೊಳ್ಳುತ್ತಲಿದೆ. ಆದರೆ ಇವರ ಶಿಲ್ಪಕಲಾ ಕೇಂದ್ರ ಬೇರೆ ಯಾವುದೇ ಪಟ್ಟಣಕ್ಕೆ ವರ್ಗಾಯಿಸದೇ ತಮ್ಮ ಸ್ವತಃ ಊರಾದ ಗಾಜರಕೋಟದಲ್ಲಿ ಇಟ್ಟುಕೊಂಡಿದ್ದಾರೆ. ಈಗಲೂ ತಮ್ಮ ಇಳಿಯ ವಯಸ್ಸಿನಲ್ಲಿ ಶಿಷ್ಯ ವೃಂದದೊಂದಿಗೆ ಲೋಹಶಿಲ್ಪದ ಕಾಯಕದಲ್ಲಿ ನಿರತರಾಗಿದ್ದಾರೆ.

### ೩.೩.೨. ಬಸಣ್ಣ ಮೋನಪ್ಪ ಬಡಿಗೇರ

ಹೈದರಾಬಾದ್ ಕರ್ನಾಟಕದ ಆರು ಜಿಲ್ಲೆಗಳಲ್ಲಿ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಎಸ್.ಡಿ. ಗೋನಾಳ ಗ್ರಾಮದಲ್ಲಿ ಜೂನ್ ೧, ೧೯೩೩ನೇ ಇಸ್ವಿಯಲ್ಲಿ ಹಿರಿಯ ಶಿಲ್ಪಿಗಳಾದ ಬಸಣ್ಣ ಮೋನಪ್ಪ ಬಡಿಗೇರ ಅವರು ಜನಿಸಿದರು. ಇವರಿಗೆ ಬಾಲ್ಯದಿಂದಲೇ ಶಿಲ್ಪಕಲೆಯ ಕಡೆಗೆ ಒಲವು ಮೂಡಿಬರಲು ಕಾರಣವಾಯಿತು. ಮನೆಯ ಮೂಲ ಕೆಲಸವೇ ಮರ ಕೆತ್ತನೆಯ ಕಲೆಯಾಗಿತ್ತು. ಇದರ ಪ್ರಭಾವದಿಂದ ಬಸಣ್ಣ ಚಿಕ್ಕ ವಯಸ್ಸಿನಲ್ಲಿ ಶಾಲಾವ್ಯಾಸಂಗದ ಕಡೆಗೆ ಹೆಚ್ಚು ಗಮನ ಕೊಡದೇ ಮರಕೆತ್ತನೆ ಕೆಲಸದ ಕಡೆಗೆ ಆಸಕ್ತಿ ಕಂಡುಬಂದಿತು. ಇವರು ಶಾಲಾ ಶಿಕ್ಷಣವನ್ನು ಎರಡನೇ ತರಗತಿಯವರೆಗೆ ಓದಿದರು. ಮನೆಯಲ್ಲಿ ಬಡತನ ಮತ್ತು ಆರ್ಥಿಕ ಸಮಸ್ಯೆಗಳು ಇದ್ದುದರಿಂದ ಅವಕಾಶ ಸಿಗಲಿಲ್ಲ. ಆದ್ದರಿಂದ ಮನೆಯ ಮೂಲ ಕೆಲಸವಾದ ಬಡಗಿತನ ಮರಗೆಲಸ, ಮರಕೆತ್ತುವುದನ್ನು ದಿನವೂ ನೋಡುತ್ತಿದರು, ಇದರಿಂದ ಜೀವನ ನಡೆಸಲು ಒಂದು ವೃತ್ತಿ ಅನಿವಾರ್ಯ ಎಂದು ಮರಕೆತ್ತನೆ ಕಾರ್ಯದಲ್ಲಿ ಭಾಗವಹಿಸಿದರು. ಅದರಲ್ಲಿ ಕಲಾತ್ಮಕ ಆಕೃತಿಗಳನ್ನು ನೋಡಿ ಇವರ ಮನಸ್ಸು, ಮರಶಿಲ್ಪದ ಕಲಾಕೃತಿ ಕಡೆಗೆ ಒಲವು ಮೂಡಿತು. ಇವರ ತಂದೆ ಮೋನಪ್ಪನವರ ಮರಕೆಲಸ ಮನೆ ನಿರ್ಮಾಣದಲ್ಲಿ ಬರುವ ಬಾಗಿಲು ಮುಂತಾದ ಕೆಲಸದಲ್ಲಿ ಇವರು ಭಾಗಿಯಾದರು.

ಇವರಿಗೆ ಕಲಾಗುರುಗಳಾಗಿ ನಾಡೋಜ ನಾಗಣ್ಣ ಬಡಿಗೇರ ಅವರು ದೊರೆತದ್ದು ಪೂರ್ವ ಜನ್ಮದ ಸುಕೃತ. ಇವರು ಬಸವಣ್ಣನವರಿಗೆ ಪ್ರೀತಿಯಿಂದ ಮರಗೆಲಸದ ಎಲ್ಲಾ ಸೂತ್ರಗಳನ್ನು

ಹೇಳಿಕೊಟ್ಟರು. ಕೆಲವು ಸಂದರ್ಭಗಳಲ್ಲಿ ನಾಗಣ್ಣನ ಶಿಲ್ಪಿಗಳು ಬಸವಣ್ಣನವರಿಗೆ ಬಂಧುಗಳಾಗಿದ್ದರಿಂದ ಹೇಳುವಾಗ ಕೆಲವೊಂದು ನೇರ, ನಿಷ್ಠುರ, ಮಾರ್ಗದರ್ಶನ ಮಾಡಿದರು. ಅದಕ್ಕೆ ಬೇಸರಗೊಳ್ಳದೆ ಬಸಣ್ಣನವರು ವಿದ್ಯಾಭ್ಯಾಸದಲ್ಲಿ ಬಂಧು-ಬಳಗವೆಂದು ನೋಡದೇ ಮರಗೆತ್ತನೆ ಕೆಲಸದಲ್ಲಿ ಇವರು ನನಗೆ ಗುರುಗಳೆಂದು ಭಾವಿಸಿದರು. ವಿದ್ಯಾಭ್ಯಾಸಕ್ಕಿಂತ ಮರಗೆಲಸ ತುಂಬಾ ಕಠಿಣ ಮತ್ತು ಪರಿಶ್ರಮವೆನಿಸಿತು. ಆದರೂ ತಾನು ಎಷ್ಟೇ ಕಷ್ಟ ಬಂದರೂ ಬಿಡದಂತೆ, ಮನೆ ನಿರ್ಮಾಣ ಕಾರ್ಯದಲ್ಲಿ ಇವರೊಂದಿಗೆ ಕೆಲಸ ಕಲಿಯುತ್ತೇನೆ ಎಂದು ದೃಢನಿರ್ಧಾರ ಮಾಡಿದರು. ಇದೇ ಅವರಿಗೆ ಮುಂದೆ ಒಂದು ದಿನ ಕಲೆಯಲ್ಲಿ ಉತ್ತಮ ಹೆಸರು ಮಾಡಲು ಅನುಕೂಲವಾಯಿತು.

ಇವರು ಹದಿನೈದು ವರ್ಷ ವಯಸ್ಸಿನ ಬಾಲ್ಯದಲ್ಲಿ ಮರಶಿಲ್ಪ ಕಲೆಯಲ್ಲಿ ಪರಿಣತಿ ಪಡೆದರು. ಶಿಲ್ಪಿ ಬಸಣ್ಣನವರು ತಮ್ಮ ಅನುಭವದಲ್ಲಿ ಅನೇಕ ಮರದಿಂದ ಶಿಲ್ಪಕಲಾಕೃತಿಗಳನ್ನು ನಿರ್ಮಿಸಿದರು. ಚದುರಂಗ ಪಡಸಾಲೆ, ಐದು ಮತ್ತು ಏಳು ಅಂಕಣದ ಪಡಸಾಲೆ, ಇದರಲ್ಲಿ ತೊಲೆ, ಬೋದು, ತೋರಣ, ಭಿತ್ತಿ ತೊಲೆ, ಪರಿಕ ಬೋದು, ಖಂಡೆ, ಅಡ್ಡಬೋದು, ಮೊದಕಾನಿ, ಕಮಾನ, ನಾಗಭಂಧ, ಗಡಿಗೆ, ಕಂಬ, ಗದ್ದಿಗೆಕಲ್ಲು ಇವುಗಳಲ್ಲಿ ಪ್ರಾಣಿ-ಪಕ್ಷಿ, ದೇವತೆಗಳು, ಬಳ್ಳಿ, ಎಲೆ, ಹೂ, ಹಣ್ಣು, ಸುಳುವು, ಅನೇಕ ಕಲಾಕೃತಿಯಿಂದ ರಚನೆಗೊಳಿಸಿದ್ದಾರೆ. ಮರದಲ್ಲಿ ನಯವಾದ ಕೆಲಸ ಮಾಡುವುದು ಬಹಳ ಕಷ್ಟದ ಕೆಲಸ. ಮರದಲ್ಲಿ ಬರುವ ಬಿರುಕು, ಎಳೆ, ಸೀಳು, ಇವುಗಳಲ್ಲದೆ, ಗಂಟು ಕಟ್ಟಿ ಇವುಗಳನ್ನು ಸರಿಯಾಗಿ ಅರ್ಥೈಸಿಕೊಂಡು ಶಿಲ್ಪರಚನೆ ಮಾಡಬೇಕಾಗುತ್ತದೆ. ಮತ್ತು ಮರದಲ್ಲಿ ಬರುವ ವಿವಿಧ ಜಾತಿ ಗಿಡಗಳ ಜ್ಞಾನ ಮತ್ತು ಅದರ ಕೆತ್ತುವಿಕೆ ವಿಧಾನವನ್ನು ಚಾಚೂತಪ್ಪದೇ ಲಕ್ಷ್ಯ ಕೊಟ್ಟು ಕೆಲಸ ಮಾಡಬೇಕಾಗುತ್ತದೆ. ಬಸಣ್ಣಶಿಲ್ಪಿಗಳು ಮನೆಯ ತಲೆಬಾಗಿಲು ಅಂದರೆ, ಮುಖ್ಯ ದ್ವಾರದ ಹಣೆಪಟ್ಟಿಗಳಲ್ಲಿ ನಕ್ಷೆ ಮತ್ತು ಚಿತ್ತಾರದ ಕೆತ್ತನೆಯನ್ನು ಮಾಡುವುದರಲ್ಲಿ ಸಿದ್ಧಹಸ್ತರು. ಇದರಲ್ಲಿ ವಿಶೇಷವಾಗಿ ಮುಖ್ಯದ್ವಾರಕ್ಕೆ ಎಡಬಲ ಬದಿಯಲ್ಲಿ ಮೇಲಿನ ಹಣೆಪಟ್ಟಿ ಎರಡೂ ಬದಿಗೆ ಜೋಡು ಕುದುರೆಗಳನ್ನು ಕೆತ್ತಿ ಅಲಂಕರಿಸುವಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ತೋಳುಗಳು, ಹೊಸ್ತಿಲು, ಇವುಗಳಲ್ಲಿ ಬಳ್ಳಿ, ಸುಳಿವು, ಮಾವಿನ ಕಾಯಿ ಸುಳಿವು, ಎಲೆ ಸುಳಿವು, ಟಕೇಲರ ಪಕ್ಷಿ, ಗಿಳಿ, ಹಂಸ, ನವಿಲು, ಕಾಮಧೇನು, ಗಜ, ಪಕ್ಷಿ, ಯಾಳಿ, ವ್ಯಳಿ, ಗಣೆಸು, ಖಳಿ ಆಳ, ಸರಪಳಿ, ಮುಖದುಡುದಾರ, ರುದ್ರಾಕ್ಷಿಮಾಲೆ, ಬಳ್ಳಿಸರ, ಗಡ್ಡಿಸುಳಿವು, ಇನ್ನೂ ಅನೇಕ ಕಲಾತ್ಮಕ ಶಿಲ್ಪಗಳನ್ನು ಮರಕೆತ್ತನೆಯಲ್ಲಿ ವಿನ್ಯಾಸಗೊಳಿಸಿದ್ದಾರೆ. ಇದಲ್ಲದೇ ವಾರದ ಪಲ್ಲಕ್ಕಿ, ತೇರು, ಮಂಟಪವನ್ನು ಮರಶಿಲ್ಪದಲ್ಲಿ ರಚಿಸಿದ ಕೀರ್ತಿಗೆ ಭಾಜನರಾಗಿದ್ದಾರೆ. ಇವರ ಕಲಾಕೃತಿಗಳು ಕಲಬುರ್ಗಿ ಮತ್ತು ರಾಯಚೂರು ಜಿಲ್ಲೆಯಲ್ಲಿ ಅನೇಕ ಊರುಗಳಲ್ಲಿ ನೋಡಲು ಕಾಣಸಿಗುತ್ತವೆ.

ಮರಶಿಲ್ಪಿ ಬಸಣ್ಣನವರ ಕಲಾಕೃತಿಗಳ ವಿವರ ಒಂದೇ ಮರದ ತುಂಡಿನಲ್ಲಿ ರಚಿಸಿದ ಗುಂಬರಿ, ಅನೇಕ ಮರದ ತುಂಡುಗಳಿಂದ ಹೆಣೆದ ಮರದ ಚಂಡಿನಾಕೃತಿ, ಗಾಜಿನ ಸೀಸೆಯಲ್ಲಿ ವ್ಯವಸಾಯಕ್ಕೆ ಸಂಬಂಧಿಸಿದ ಕೃಷಿ ಸಾಮಗ್ರಿಗಳಾದ, ರಂಟೆ, ಕುಂಟೆ, ಕೂರಿಗೆ, ನೇಗಿಲು

ಮುಂತಾದ ಸಾಮಗ್ರಿಗಳನ್ನು ಸೀಸೆಯ ಒಳಗಡೆ ನಿರ್ಮಿಸಿದ್ದು ತುಂಬಾ ಅದ್ಭುತ. ಇವುಗಳನ್ನು ಕಟ್ಟಿಗೆಯಿಂದ ನಿರ್ಮಿಸಿ, ಚಿಕ್ಕ ಕಾಜಿನ ಬಾವಲಿ(ಗಾಜಿನ ಸೀಸದಲ್ಲಿ) ಒಳಗಡೆ ಸೇರಿಸುವುದು ಅದ್ಭುತದ ಕಲೆ ಇವರದಾಗಿದೆ.

ಚಿಕ್ಕ ತೇರು, ಹಗಲ ಕತ್ತರಿ, ಮಂಚ ಮುಂತಾದ ಸಾಮಗ್ರಿಗಳನ್ನು ಗಾಜಿನ ಸೀಸದಲ್ಲಿ ಕಿರುದಾದ ಸೀಸದ ಬಾಯಿಯಲ್ಲಿ ಹೋಗದಂತಹ ವಸ್ತುಗಳನ್ನು ಇದರಲ್ಲಿ ಜೋಡಿಸಿರುವುದು ಆಶ್ಚರ್ಯದ ಕೆಲಸ. ಮರಶಿಲ್ಪದಲ್ಲಿ ತಾಂತ್ರಿಕತೆಯನ್ನು ರಚಿಸಿದ್ದಾರೆ. ಮರದ ತುಂಡುಗಳನ್ನು ಜೋಡಿಸಿ, ವಿವಿಧ ರೀತಿಯ ಹನ್ನೆರಡು ವಿಧದಲ್ಲಿ ಕೆಲಸ ಮಾಡಿದಂತಹ ಯಂತ್ರವನ್ನು ರಚಿಸಿದ್ದಾರೆ. ಈ ಯಂತ್ರಕ್ಕೆ ಒಂದೇ ಬದಿಯಿಂದ ಚಾಲನೆ ಕೊಟ್ಟರ ಹನ್ನೆರಡು ರೀತಿಯ ವಿವಿಧ ಕೆಲಸಗಳು ಪ್ರಾರಂಭಗೊಳ್ಳುತ್ತವೆ. ಮರಶಿಲ್ಪದಲ್ಲಿ ತಂತ್ರ ವೈವಿಧ್ಯತೆಯನ್ನು ಅಳವಡಿಸಿದ್ದಾರೆ.

೧೯೮೫ರಲ್ಲಿ ಸುರಪುರದಲ್ಲಿ ನಡೆದ ಸಗರನಾಡು ದರ್ಶನ ಕಾರ್ಯಕ್ರಮದಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡು ನೋಡುಗರ ಗಮನ ತಣಿಸಿವೆ. ೨೦೦೨ರಲ್ಲಿ ಸುರಪುರದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಇವರು ಆಯೋಜಿಸಿದ ಮರಗೆತ್ತನೆ ಶಿಬಿರದಲ್ಲಿ ಭಾಗವಹಿಸಿ ಜನರ ಮೆಚ್ಚುಗೆ ಪಡೆದಿದ್ದಾರೆ. ಇವರ ಅನೇಕ ಕಲಾಕೃತಿಗಳು ಮನೆ, ದೇವಸ್ಥಾನ ಮತ್ತು ಮಠಗಳಲ್ಲಿ ಸಂಗ್ರಹಿಸಲ್ಪಟ್ಟಿವೆ. ಇವರ ಕಲಾಕೃತಿ ಸಂಗ್ರಹಿಸಿಕೊಂಡಿರುವ ಎಸ್.ಡಿ. ಗೋನಾಳ ಗ್ರಾಮದ ಭೀಮರಾಯಗೌಡರು ನಾಲ್ಕು ಎಕರೆ ಜಮೀನನ್ನು ಕಾಣಿಕೆಯಾಗಿ ನೀಡಿ ಗೌರವಿಸಿದ್ದಾರೆ. ಶಿಲ್ಪಿ ಬಸಣ್ಣನವರ ಕಲಾಸಾಧನೆ ಮೆಚ್ಚಿ, ೧೯೮೩ರಲ್ಲಿ ಕರ್ನಾಟಕ ಸರ್ಕಾರದ ಒಂದು ಉದ್ಯಮವಾಗಿರುವ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮದ ಅಧ್ಯಕ್ಷರಾಗಿದ್ದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಪ್ರಶಂಸೆ ಪತ್ರ ಕಳುಹಿಸಿದ್ದಾರೆ. ೨೦೦೭ರಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಗೌರವ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಹಿರಿಯ ಶಿಲ್ಪಿಗಳಾದ ಬಸಣ್ಣ ಇವರು ಅನೇಕ ಯುವ ಶಿಲ್ಪಿಗಳಿಗೆ ಮಾರ್ಗದರ್ಶನ ಮಾಡಿ ಗುರುಪರಂಪರೆಗೆ ನಾಂದಿ ಹಾಡಿದ್ದಾರೆ. ಇವರ ಮರಶಿಲ್ಪ ಕಲೆಯನ್ನು ಕಲಿತು ಹೆಸರು ಮಾಡಿರುವ ಅನೇಕ ಶಿಲ್ಪಿಗಳಿದ್ದಾರೆ. ಅವರಲ್ಲಿ ಕೆಲವರಾದ ಎಂ. ಪರಪ್ಪ ಶಿಲ್ಪಿ, ಬಡಿಗೇರ ಬಸಣ್ಣ, ಚಂದು ಕಮ್ಮಾರ, ಗಂಗಾಧರ, ಮಲ್ಲಿಕಾರ್ಜುನ ಕೆ. ಚಿಕನಳ್ಳಿ, ಶ್ರೀಶೈಲ ಬಡಿಗೇರ ಮುಂತಾದ ಮರಶಿಲ್ಪ ಕಲಿತ ಶಿಷ್ಯಂದಿರ ವೃಂದವನ್ನು ಬೆಳೆಸಿದ್ದಾರೆ. ಇವರ ಶಿಷ್ಯರು ಮರಶಿಲ್ಪದಲ್ಲಿ ಗುರುವಿನ ಅನುಭವವನ್ನು ಎತ್ತಿತೋರಿಸಿದ್ದಾರೆ. ಇವರು ಕಾಷ್ಠಕಲಾಕ್ಷೇತ್ರಕ್ಕೆ ದೊಡ್ಡ ಕೊಡುಗೆಯನ್ನು ನೀಡಿದ್ದಾರೆ.

**ಬಸಣ್ಣನವರ ಕಲಾಕೃತಿ ಪ್ರದರ್ಶನ:** ೧೯೮೫ರಲ್ಲಿ ಸುರಪುರದಲ್ಲಿ ನಡೆದ ಸಗರನಾಡು ದರ್ಶನ ಕಾರ್ಯಕ್ರಮದಲ್ಲಿ ಕಲಾಕೃತಿಗಳು ಪ್ರದರ್ಶನಗೊಂಡಿವೆ.

**ಕಲಾಶಿಬಿರ:** ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಇವರು ೨೦೦೨ರಲ್ಲಿ ಸುರಪುರ ದಲ್ಲಿ ಆಯೋಜಿತಗೊಂಡ ಮರಗೆತ್ತನೆ ಶಿಬಿರದಲ್ಲಿ ಭಾಗವಹಿಸಿ ಕಲಾಕೃತಿ ನಿರ್ಮಿಸಿದ್ದಾರೆ.

## ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು

### ಶ್ರೀ ಭೀಮಣ್ಣ ಮೋನಪ್ಪ ಕಂಬಾರ

(ಯಾದಗಿರಿ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಕಲಾಕೃತಿ ನಿರ್ಮಿಸುವಲ್ಲಿ ತೊಡಗಿರುವ ಕಲಾವಿದರು




ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪ್ರಶಸ್ತಿ ಪುರಸ್ಕಾರ ಸಮಾರಂಭ - ೨೦೦೬

# ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು



**ಶ್ರೀ ಬಸಣ್ಣ ಮೋನಪ್ಪ ಬಡಿಗೇರ**
(ಯಾದಗಿರಿ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಕಲಾಕೃತಿ ನಿರ್ಮಿಸುವಲ್ಲಿ ತೊಡಗಿರುವ ಕಲಾವಿದರು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವತಿಯಿಂದ ಗೌರವ ಪ್ರಶಸ್ತಿ ಪುರಸ್ಕಾರ ಸಮಾರಂಭ - ೨೦೦೨

**ಕಲಾಕೃತಿ ಸಂಗ್ರಹ**

೧. ಕಲಬುರ್ಗಿ ಶ್ರೀಶರಣಬಸವೇಶ್ವರ ಸಂಸ್ಥಾನ, ಕಲಬುರ್ಗಿ ಇಲ್ಲಿ ಸಂಗ್ರಹವಾಗಿವೆ.

೨. ಬಲವಂತರಾಯ ಗೌಡ ಚಿಕ್ಕನಹಳ್ಳಿ ಇವರ ಮನೆಯಲ್ಲಿ ಮರಶಿಲ್ಪ ಕಲಾಕೃತಿ ಸಂಗ್ರಹವಾಗಿದೆ.

೩. ಪರಮಣ್ಣಗೌಡ ಮಾಲೀಪಾಟೀಲ ಚಿಕ್ಕನಹಳ್ಳಿ ಅಮರಣ್ಣ ಗುಡಿಯಲ್ಲಿ ಕಲಾಕೃತಿ ಸಂಗ್ರಹವಾಗಿದೆ.

೪. ಹಂದ್ರಾಳ ಗ್ರಾಮದಲ್ಲಿ ಮತ್ತು ಅನೇಕ ದೇವಸ್ಥಾನ ಮತ್ತು ಮಠ ಮಂದಿರಗಳಲ್ಲಿ ಕಲಾಕೃತಿ ಸಂಗ್ರಹವಾಗಿವೆ.

**ಪ್ರಶಸ್ತಿ ಪುರಸ್ಕಾರ:** ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಇವರು ಬಸಣ್ಣ ಶಿಲ್ಪಿಯವರಿಗೆ ಗೌರವ ಅಕಾಡೆಮಿ ಪ್ರಶಸ್ತಿಯನ್ನು ೨೦೦೭ರಲ್ಲಿ ನೀಡಿ ಗೌರವಿಸಿದ್ದಾರೆ.

## ೩.೪. ರಾಯಚೂರು ಜಿಲ್ಲೆಯ ಶಿಲ್ಪಕಲಾವಿದರು

೩.೪.೧. ಶ್ರೀ ಪಂಪಣ್ಣ ಆಚಾರಿ ಶಿಲ್ಪಿಗಳು

೩.೪.೨. ಲೋಹಶಿಲ್ಪಿ ಸಿದ್ಧಲಿಂಗ ಆಚಾರಿ

### ೩.೪.೧. ಶ್ರೀ ಪಂಪಣ್ಣ ಆಚಾರಿ ಶಿಲ್ಪಿಗಳು

ಪಂಪಣ್ಣ ಆಚಾರಿಯವರ ತಂದೆ ಮೋನಪ್ಪ, ತಾಯಿ ಕಾಳಮ್ಮ. ವೃತ್ತಿಯಲ್ಲಿ ಬಡಿಗೆತನ, ಕಮ್ಮಾರಿಕೆ. ಊರು ಅಲಬನೂರು ತಾ. ಸಿಂಧನೂರು ಜಿ. ರಾಯಚೂರು ೧-೬-೧೯೩೧ರಲ್ಲಿ ಆಚಾರಿಯವರ ಜನನವಾಯಿತು. ಆಚಾರಿಯವರಿಗೆ ಒಬ್ಬ ಸಹೋದರಿ(ಬಸಮ್ಮ ತಂಗಿ) ಇದ್ದಳು. ಇವರಿಬ್ಬರಿಗೆ ೬ ವರ್ಷ ಇರುವಾಗಲೇ ದುರದೃಷ್ಟವತಾಶ್ ತಮ್ಮ ತಾಯಿಯು ವಿಧಿವಶವಾದರು. ತಾಯಿಯನ್ನು ಕಳೆದುಕೊಂಡ ಇವರು ಆಗ ಮಾವ ಷಣ್ಮುಖಪ್ಪ ಆಚಾರಿ ಸಂಗಾಪುರ ಗ್ರಾಮ. ತಾ. ಮಾನ್ವಿ ಜಿ. ರಾಯಚೂರು. ಇಲ್ಲಿ ಮಾನ್ವಿಯ ಸಂಗಾಪೂರು ಗ್ರಾಮದ ತಮ್ಮ ಮನೆಗೆ ಕರೆತಂದು ಅಲ್ಲಿಯೇ ಉಳಿಸಿಕೊಂಡರು.

ಆಚಾರಿಯವರು ಆಗಾಗ ತಂದೆಯವರನ್ನು ಭೇಟಿಯಾಗಲು ಊರಿಗೆ ಹೋಗಿ ಬರುತ್ತಿದ್ದರು. ಆದರೆ ಬೆಳೆಯುವುದು ಮಾತ್ರ ಷಣ್ಮುಖಪ್ಪ ಆಚಾರಿಯವರ ಮನೆಯಲ್ಲೇ ಇವರ ವಿದ್ಯಾಭ್ಯಾಸ ಕನ್ನಡ ಮಾಧ್ಯಮ ೬ನೇ ತರಗತಿಯವರೆಗೆ ಮಾತ್ರ ಆಗಿದೆ. ಮಾವನವರ ಮನೆಯಲ್ಲಿದ್ದು ಇವರು ದನಗಳಿಗೆ ಮೇವು ತರುವುದು ಮತ್ತು ಹೊಲದ ಕೆಲಸ ಮಾಡುತ್ತಿದ್ದರು. ಇವರು ಬೆಳೆದಂತೆಲ್ಲಾ ಒಕ್ಕಲುತನದಲ್ಲಿ ಬಾಗಿಯಾದರು. ಇದಾದ ನಂತರ ಇವರು ಬೇರೆ ಬಡಿಗೇರರ ಬಳಿ ಕುಂಟೆಗಳನ್ನು ತಯಾರು ಮಾಡಿಸಲು ಹೋದಾಗ "ನೀನು ವಿಶ್ವಕರ್ಮನಾಗಿ ಇಷ್ಟು ಮಾಡಿಕೊಳ್ಳುವುದಕ್ಕೆ ಬರೋದಿಲ್ವಾ" ಎಂದು ಗೇಲಿ ಮಾಡಿ ಮಾತನಾಡಿದರು. ಆ ಕ್ಷಣದಿಂದ ಆಚಾರಿಯವರ ಮನಸ್ಸಿನಲ್ಲಿ ಏನಾದರೊಂದು ಸಾಧಿಸಿ ತೋರಿಸಬೇಕೆಂಬ ಛಲ ಉಂಟಾಯಿತು.

ಇವರಿಗೆ ಸುಮಾರು ೨೦ ವರ್ಷ ಇರಬಹುದು. ಆಗ ಆ ಸಮಯದಲ್ಲಿ ಆಚಾರಿಯವರ ತಂದೆ ಮೋನಪ್ಪ ಆಚಾರಿಯವರು ತೀರಿಕೊಂಡರು. ತಂದೆಯನ್ನು ಕಳೆದುಕೊಂಡ ಇವರ

ಮನಸ್ಸಿನಲ್ಲಿ ತುಂಬ ದುಃಖವಿತ್ತು. ಸ್ವಂತ ಪ್ರಯತ್ನದಿಂದ ಅಲ್ಲಿ ಇಲ್ಲಿ ಸುತ್ತಾಡಿ ಕೆಲಸಗಾರರ ಜೊತೆ ಭೇಟಿಯಾಗಿ ಕೆಲಸವನ್ನು ಸುಮ್ಮನೇ ನೋಡಿಕೊಂಡು ಅದೇ ರೀತಿ ಕೆಲಸ ಮಾಡಬೇಕೆಂದು ಕೊಂಡು ಬಡಿಗೆತನ ಕೆಲಸಕ್ಕೆ ಕೈ ಹಾಕಿದರು. ಕುಂಟೆ ಕೂರಿಗೆ ರೈತಾಪಿ ಕೆಲಸಗಳನ್ನು ರೈತರಿಗೆ ಅನುಕೂಲಕರವಾಗಿ ಕೆಲವು ವರ್ಷಗಳ ಕಾಲ ಪೂರೈಸಿದರು. ಇದಾದ ಮೇಲೆ ಮನೆ ನಿರ್ಮಿಸ ಬೇಕೆಂಬ ಬಯಕೆ ಇಟ್ಟುಕೊಂಡರು. ಆಗ ಸಂಗಾಪೂರ ಗ್ರಾಮದ ಪೊಲೀಸ್ ಪಾಟೀಲ್ ಶರಣಪ್ಪ ಎಂಬುವರ ಮನೆ ಬಹಳ ಸುಂದರವಾಗಿ ಅಚ್ಚುಕಟ್ಟಾಗಿ ಕುಸುರಿ ಕೆಲಸಗಳಿಂದ ನಿರ್ಮಿಸಿ ಜನ ಮೆಚ್ಚುಗೆ ಪಡೆದರು. ಅಲ್ಲಿಂದ ಆಚಾರಿಯವರು ಸ್ವಂತ ಪ್ರಯತ್ನದಿಂದ ಬಡಿಗೆತನದ ಜೊತೆ ಕಮ್ಮಾರಿಕೆಯನ್ನು ಕೂಡ ರೂಢಿಸಿಕೊಂಡರು. ಈ ಎರಡು ಕೆಲಸಗಳ ಜೊತೆಯಲ್ಲಿ ಅಕ್ಕಸಾಲಿಕೆಯ ಅನುಭವದಿಂದ ಇವರು ಬೆಳ್ಳಿಯಲ್ಲಿ ಸಣ್ಣ ಪುಟ್ಟ ಮೂರ್ತಿಗಳನ್ನು ಮಾಡ ತೊಡಗಿದರು. ಆಗ ಅವರಿಗೆ ೨೫ ವರ್ಷ ಆಗಿದ್ದವು. ಅವರಿಗೆ ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕು ಗೋರ್‌ಕಲ್ ಗ್ರಾಮದ ವಿರುಪಣ್ಣ ಬಡಿಗೇರ ಇವರ ಪುತ್ರಿಯಾದ ರಾಮಲಿಂಗಮ್ಮ ಇವರನ್ನು ಕೈ ಹಿಡಿದರು. ಆಗ ಆಚಾರಿಯವರ ಹೊಸಜೀವನ ಪ್ರಾರಂಭವಾಯಿತು. ಅಕ್ಕಸಾಲಿ, ಬಡಿಗೇತನ, ಕಮ್ಮಾರಿಕೆ ಅನುಭವ ಇರುವ ಇವರು ಊರಿನ ಗ್ರಾಮದೇವತೆಯನ್ನು ನಿರ್ಮಿಸಿದರು. ಕಟ್ಟಿಗೆಯಲ್ಲಿ ಕೂಡ ಮೂರ್ತಿಗಳನ್ನು ತಯಾರಿಸಲು ಮುಂದಾದರು. ಇದಾದ ನಂತರ ಸಂಗಾಪೂರ ಗ್ರಾಮದಲ್ಲಿ ಅತ್ಯಂತ ಸುಂದರವಾಗಿ ವೆಂಕಟೇಶ್ವರ ಮೂರ್ತಿಯನ್ನು ಕಲ್ಲಿನಲ್ಲಿ ಮಾಡಿಕೊಡುತ್ತೇನೆಂದು ಗ್ರಾಮಸ್ಥರಿಗೆ ಕೇಳಿಕೊಂಡರು. ಊರಿನ ಹಿರಿಯರು ಈತನ ಮಾತಿಗೆ ಬೆಲೆ ಕೊಡದೆ "ಕಟ್ಟಿಗೆಯಲ್ಲಿ ಮಾಡಿದರೆ ಆಯಿತೆ? ಕಲ್ಲಿನಲ್ಲಿ ನಿನಗೆ ಅನುಭವವಿಲ್ಲವೆಂದು ಮೂರ್ತಿ ನಿರ್ಮಾಣಕ್ಕೆ ಗ್ರಾಮಸ್ಥರು ಒಪ್ಪಲಿಲ್ಲ. ಮೂರ್ತಿಯನ್ನು ಬೇರೆ ಕಡೆಯಿಂದ ತಂದರು. ಅದೇ ವೆಂಕಟೇಶ್ವರ ದೇವಸ್ಥಾನದಲ್ಲಿ ನವಗ್ರಹಗಳನ್ನಾದರೂ ಮಾಡಿಕೊಡುತ್ತೇನೆಂದು ಕೇಳಿದರು. ಗ್ರಾಮಸ್ಥರೆಲ್ಲಾ ಸೇರಿ ಆಚಾರಿಯವರಿಗೆ ಬಂದು ಚಾನ್ಸ್ ಕೊಡೋಣವೆಂದು ತೀರ್ಮಾನಿಸಿದರು. ಆಗ ಕಲ್ಲುಗಳನ್ನು ತರಲು ಬಾಗಲಕೋಟೆ ಜಿಲ್ಲೆಯ ಸಲ್ಲಿಕೇರಿಗೆ ಹೋಗಿ ಕಲ್ಲುಗಳನ್ನು ತಂದು ನವಗ್ರಹಗಳನ್ನು ಹಾಗೂ ಶ್ರೀದೇವಿ ಭೂದೇವಿ ಮತ್ತು ಗಣೇಶನ ಮೂರ್ತಿಯನ್ನು ಅತಿ ಸುಂದರವಾಗಿ ಸೂಕ್ಷ್ಮತೆಯ ಕುಸುರಿ ಕೆಲಸಗಳಿಂದ ತಯಾರಿಸಿದರು. ಈ ಕೆಲಸವನ್ನು ನೋಡಿದ ಗ್ರಾಮಸ್ಥರು ಆಶ್ಚರ್ಯದಿಂದ ತಬ್ಬಿಬ್ಬಾದರು. ಅಲ್ಲಿಂದ ಅವರಿಗೆ ಶುಭಾರಂಭ ಶುರುವಾಯಿತು.

ಕೆಲವು ದಿನಗಳ ನಂತರ ಒಬ್ಬ ಗ್ರಾಮ ಸೇವಕನು ಊರಿಗೆ ಬಂದಾಗ ಮಾನ್ವಿಯ ಶ್ರೀ ಚೌಡೇಶ್ವರಿ ದೇವಸ್ಥಾನಕ್ಕೆ ದೇವಿ ಎದುರಲ್ಲಿ ಒಂದು ಸಿಂಹವನ್ನು ಕಲ್ಲಿನಲ್ಲಿ ತಯಾರಿಸಲು ಹೇಳಿದರು. ಇದಾದ ನಂತರ ಗುರುಜಾಪುರದ ಒಬ್ಬ ಶರಣರ ಮೂರ್ತಿಯನ್ನು ಸಹಾ ಅತಿ ಸುಂದರವಾಗಿ ಎರಡು ಅಡಿಗಳ ಎತ್ತರದಲ್ಲಿ ಕೆತ್ತನೆ ಮಾಡಿದರು. ಅದಾದ ನಂತರ ದೇವದುರ್ಗ ತಾಲೂಕಿನ ಶಂಬುಲಿಂಗಯ್ಯನ ಬೆಟ್ಟಕ್ಕೆ ಸಿಂಹವಾಹಿನಿ ಶ್ರೀ ದೇವಿಯ ಮೂರ್ತಿಯನ್ನು ತಮ್ಮ ಕರ ಕೌಶಲ್ಯದಿಂದ ಆಚಾರಿಯವರು ಕುಸುರಿ ಕೆಲಸಗಳಿಂದ ನಿರ್ಮಿಸಿದರು. ಈ ಕೆಲಸವನ್ನು

ನೋಡಿದ ಜನರು ತಮ್ಮ ಮನಸ್ಸಿನಲ್ಲಿ ಆಚಾರಿಯವರ ಮೇಲೆ ಅಭಿಮಾನ ತಾಳಿದರು. ಒಂದರ ಮೇಲೊಂದು ಮೂರ್ತಿಗಳನ್ನು ಸುತ್ತಮುತ್ತಲಿನ ಗ್ರಾಮಗಳಿಗೆ ಅವರಿಗೆ ಬೇಕಾದ ರೀತಿಯಲ್ಲಿ ತಯಾರಿಸತೊಡಗಿದರು. ಬೇರೆ ಬೇರೆ ತಾಲೂಕುಗಳಲ್ಲಿ ಹಾಗೂ ರಾಜ್ಯಗಳಲ್ಲಿ ಕೂಡ ಇವರು ಹೆಸರುವಾಸಿಯಾದರು. ಆಚಾರಿಯವರಿಗೆ ಒಟ್ಟು ಒಂಬತ್ತು ಜನ ಮಕ್ಕಳು. ೬ ಜನ ಗಂಡು ೩ ಜನ ಹೆಣ್ಣುಮಕ್ಕಳು. ಮನೋಹರ, ವಿರುಪಾಕ್ಷಿ, ಚಂದ್ರಶೇಖರ, ವೆಂಕಣ್ಣ, ಬ್ರಮಯ್ಯ, ಸುರೇಶ, ಮೋನಮ್ಮ, ದ್ರಾಕ್ಷಾಯಿಣಿ, ತೇಜಮ್ಮ. ಆಚಾರಿಯವರ ಮಕ್ಕಳು ಕೂಡ ಇವರ ಕೆಲಸದಲ್ಲಿ ತೊಡಗಿದರು. ಇಬ್ಬರು ಮಕ್ಕಳು ಮನೋಹರ, ವಿರುಪಾಕ್ಷ ಬಡಗೆತನದಲ್ಲಿ, ಇನ್ನುಳಿದ ನಾಲ್ಕು ಜನ ಚಂದ್ರಶೇಖರ್, ವೆಂಕಣ್ಣ, ಬ್ರಮಯ್ಯ, ಸುರೇಶ ತಂದೆಯವರ ಮಾರ್ಗದರ್ಶನದಲ್ಲಿ ಅವರ ಜೊತೆ ಕೈ ಜೋಡಿಸಿದರು. ಆಗ ಮೂರ್ತಿಗಳ ಕೆಲಸವು ಭರದಿಂದ ಸಾಗಿತು. ಹೊರ ರಾಜ್ಯಗಳಲ್ಲಿಯೂ ಕೂಡ ಆಚಾರಿಯವರು ಹೆಸರುವಾಸಿಯಾದರು. ಮೊದಲು ಇವರ ಕೈಯಲ್ಲಿ ಅರಳಿದ ಕಲೆಯು ಅಂತಿಂತದ್ದಲ್ಲ. ಅಕ್ಕಿಯ ಮೇಲೆ ಲವಂಗ, ಕಡಲೇ ಬೇಳೆ ವಿವಿಧ ತರಹದ ಪದಾರ್ಥಗಳ ಮೇಲೆ ವಿವಿಧ ವಿಗ್ರಹಗಳನ್ನು ಮಾಡಿದ್ದಾರೆ. ಇಂತಹ ಕಲೆಯನ್ನು ನೋಡಿದ ಕೆಲವು ಮಾಧ್ಯಮಗಳು ಹಲವಾರು ಸಂಘ ಸಂಸ್ಥೆಗಳಿಂದ ಅವರಿಗೆ ಸನ್ಮಾನ ಸಮಾರಂಭಗಳು ಆಗಿವೆ. ೭ನೇ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿದ ಅವರು ಚಿಕ್ಕಂದಿನಿಂದಲೇ ತಂದೆ ತಾಯಿಯನ್ನು ಕಳೆದುಕೊಂಡು ಬಹಳ ಕಷ್ಟಗಳನ್ನು ಅನುಭವಿಸಿದ ಇವರಿಗೆ ಸನ್ಮಾನ ಸಮಾರಂಭಗಳು ನಡೆದಿವೆ. ಆಚಾರಿಯವರ ಕೆಲಸವನ್ನು ರಾಜ್ಯ ಸರ್ಕಾರವು ಗುರುತಿಸಿ ೨೦೦೬ನೇ ನವೆಂಬರ್ ೧ ಕರ್ನಾಟಕ ರಾಜ್ಯೋತ್ಸವ ದಿನದಂದು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಸನ್ಮಾನಿಸಿದೆ. ಹಲವಾರು ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಿಗೆ ಇವರ ಕಲೆಯ ಪರಿಚಯ ಮಾಡಿಸಿದರು. ಶಾಲಾ ಕಾಲೇಜುಗಳಿಂದ ಹಲವಾರು ಬಾರಿ ಆಚಾರಿಯವರಿಗೆ ಸನ್ಮಾನ ಸಮಾರಂಭಗಳು ನಡೆದಿವೆ.

ಆಚಾರಿಯವರಿಗೆ ಈಗ ೮೦ ವರ್ಷ ವಯಸ್ಸು. ಆದರೂ ಕೂಡ ಇನ್ನೂ ಅವರ ಮಕ್ಕಳ ಜೊತೆಗೆ ಆಗಾಗ ಕೆಲಸದಲ್ಲಿ ಕೈ ಜೋಡಿಸುತ್ತಾರೆ. ಅವರಿಗೆ ೮೦ ತುಂಬಿದರೂ ಇನ್ನು ನವ ಯುವಕರಂತೆ ಓಡಾಡುತ್ತಾರೆ. ಬಡತನದಲ್ಲಿ ಹುಟ್ಟಿ ಬೆಳೆದ ಇವರು ಕಲೆಯೇ ತನ್ನ ಆಸ್ತಿ ಎಂದುಕೊಂಡು ಅದರಲ್ಲಿಯೇ ತನ್ನ ಪತ್ನಿ ಮತ್ತು ಪುತ್ರ ಪುತ್ರಿಯರೊಂದಿಗೆ ಜೀವನ ಸಾಗಿಸುತ್ತಾ ಬಂದವರು. ಇವರು ಯಾವುದೇ ಆಶಾಗೋಪುರವನ್ನು ಕಟ್ಟಿದವರಲ್ಲ. ಆಚಾರಿಯವರ ಮನೆ ಬಹಳ ಚಿಕ್ಕದು. ಮೂರ್ತಿಗಳ ಕೆತ್ತನೆಗೆ ಬಹಳಷ್ಟು ಜಾಗವಿಲ್ಲ. ಸ್ವಲ್ಪ ಜಾಗದಲ್ಲಿಯೇ ಅವರ ಅದ್ಭುತವಾದ ಕಲೆಯನ್ನು ತೋರಿಸಿದರು. ಈ ಒಂದು ಸ್ಥಳಕ್ಕೆ ಬಹಳಷ್ಟು ಸರಕಾರಿ ಅಧಿಕಾರಿಗಳು ಬಂದು ಹೋಗಿದ್ದಾರೆ. ಆದರೂ ಕೂಡ ಇವರಿಗೆ ಯಾವುದೇ ರೀತಿಯ ಸಹಾಯ ಮಾಡಿಲ್ಲ ಕಲೆಯನ್ನೇ ತನ್ನ ಸರ್ವಸ್ವ ಎಂದುಕೊಂಡ ಪಂಪಣ್ಣಾ ಆಚಾರಿ ತನ್ನ ಮಕ್ಕಳಿಗೆ ತನ್ನದೇ ಆದ ಒಳ್ಳೆಯ ಮಾರ್ಗದರ್ಶನ ನೀಡಿ ನನಗಿಂತ ನನ್ನ ಮಕ್ಕಳು ಚನ್ನಾಗಿ ಬೆಳೆಯಲಿ ಎಂಬ

ಮಹದಾಸೆ ಇಟ್ಟು ಕೊಂಡಿದ್ದಾರೆ. ಅವರ ಆಸೆಯಂತೆ, ತಂದೆಯ ಮಾತಿನಂತೆ ಶಿಲ್ಪಕಲೆಯನ್ನೆ ತಮ್ಮ ಜೀವನ ಎಂದುಕೊಂಡು ಪ್ರತಿದಿನ ಶಿಲ್ಪಕಲೆಯ ಕೆತ್ತನೆಯಲ್ಲಿಯೇ ಕಾರ್ಯನಿರತರಾಗಿರುತ್ತಾರೆ. ಆಚಾರಿಯವರ ಸಾಧನೇಅಂತಿಂತದ್ದಲ್ಲ. ಬಾಲ್ಯದಲ್ಲಿಯೇ ತಂದೆ ತಾಯಿಯನ್ನು ಕಳೆದುಕೊಂಡ ಇವರು ಸೋದರಮಾವನ ಮನೆಯಲ್ಲಿ ಬೆಳೆದು ಕೆಲ ದಿನಗಳ ನಂತರ ಒಂದು ಮಾತಿಗಾಗಿ ಏನಾದರೂ ಸಾಧಿಸಬೇಕೆಂದುಕೊಂಡ ಇವರು ಹಳ್ಳಿಯಿಂದ ತಾಲೂಕು, ಜಿಲ್ಲಾ ಹಾಗೂ ರಾಜ್ಯಮಟ್ಟ ಪ್ರಶಸ್ತಿಗೆ ಆಯ್ಕೆಯಾದರು. ಹಳ್ಳಿಯಲ್ಲೇ ಹುಟ್ಟಿ ಹಳ್ಳಿಯಲ್ಲೇ ಬೆಳೆದ ಇವರು ಹಳ್ಳಿಯ ಜೀವನವೇ ಒಳ್ಳೆಯದು ಎಂದು ಒಳ್ಳೆಯ ಗಾಳಿ, ಒಳ್ಳೆಯ ನೀರು, ಒಳ್ಳೆಯ ಪರಿಸರ ಎಂದುಕೊಂಡ ಇವರು ಪೇಟೆ ಜೀವನ ಬಯಸಿಲ್ಲ.

**ಸಿಮೆಂಟಿನ ಮೂರ್ತಿಗಳು:** ಶ್ರೀ ಪಂಪಣ್ಣ ಆಚಾರಿಯವರು ಕಲ್ಲಿನಲ್ಲಿ ಹೇಗೆ ಕೆತ್ತನೆ ಮಾಡುತ್ತಾರೋ ಹಾಗೆಯೇ ಜಗತ್ತು ಬದಲಾದಂತೆ ಸಿಮೆಂಟಿನಿಂದ ಮೂರ್ತಿಗಳನ್ನು ತಯಾರಿಸಲು ಪ್ರಾರಂಭಿಸಿದ್ದಾರೆ. ದುರ್ಗಾದೇವಿ ಮೂರ್ತಿ ಹಾಗೂ ಬಸವಣ್ಣನವರು ಮತ್ತು ಗಣೇಶ ವಿಗ್ರಹಗಳು, ನಂದಿ, ಗೋಪುರದ ಮೇಲಿನ ಮೊಗವೊಂದು ದೇಹ ಎರಡು ಸಿಮೆಂಟಿನ ಬೀದಿ ಕಾಮಣ್ಣರು ವಿಗ್ರಹಗಳನ್ನು ರಚಿಸುತ್ತಾರೆ. ವೀರಭದ್ರ ಮೂರ್ತಿಗಳು, ಹಳ್ಳಿಗಳಲ್ಲಿ ಗುಡಿ ಗೋಪುರಗಳ ಮೇಲಿನ ಚಿತ್ರಗಳನ್ನು ರಚಿಸುತ್ತಾರೆ. ರಾಷ್ಟ್ರೀಯ ನಾಯಕರ ಮೂರ್ತಿಯನ್ನು ಇವರು ಸಿಮೆಂಟಿನಿಂದ ತಯಾರಿಸುತ್ತಾರೆ. ಗಣೇಶ ಮೂರ್ತಿಯನ್ನು ಪ್ರತಿವರ್ಷ ಈ ಭಾಗದಲ್ಲಿ ಇವರು ತಯಾರಿಸುತ್ತಾರೆ. ಮೂರ್ತಿಗೆ ಬಣ್ಣವನ್ನು ಪಿಂಕ್ ಕಲರ್, ಗೋಲ್ಡನ್ ಕಲರ್‌ನಿಂದ ಪೂರ್ಣಗೊಳಿಸಿದ್ದಾರೆ. ಬಸವಣ್ಣ ಮೂರ್ತಿಗಳನ್ನು ಗೋಪುರದ ಮೇಲ್ಚಾವಣಿಯಲ್ಲಿ ಮೂರ್ತಿಯ ಉಬ್ಬು ತಗ್ಗುಗಳನ್ನು ಚಪ್ಪಚೆಯ ಟೂಲ್ಸ್‌ನಿಂದ ಮಾಡಲಾಗಿದೆ.

ಸಿಂಹದ ಮೇಲೆ ಅಂಭಾಭವಾನಿ ಮೂರ್ತಿಯನ್ನು ತಯಾರಿಸಿದ್ದಾರೆ. ಸುಮಾರು ಕಲರ್‌ನಿಂದ ಹದಿನೆಂಟು ಕೈಗಳುಳ್ಳ ದೇವಿ ಸಿಂಹದ ಮೇಲೆ ಸವಾರಿಯನ್ನು ತುಂಬಾ ಭಿನ್ನವಾಗಿ ಮಾಡಿರುತ್ತಾರೆ. ಇವರು ಕೈಗೆ ಹಿಡಿಯಲಾರದಷ್ಟು, ತೆಕ್ಕೆಗೆ ಸಿಗಲಾರದಷ್ಟು ಕೆಲಸವನ್ನು ಈಗಲೂ ಇವರು ಮಾಡುತ್ತಾ ಯಾರ ಸಹಾಯವಿಲ್ಲದೇ ಪ್ರತಿಯೊಂದು ಕೆಲಸ ಕಾರ್ಯಗಳನ್ನು ತಾವೇ ನಿರ್ಮಾಣ ಮಾಡುತ್ತಾರೆ. ಇವರು ಮಾಡಿದ ಎಲ್ಲಾ ಸಿಮೆಂಟಿನ ಮೂರ್ತಿಗಳಿಗೆ ಹಲವಾರು ಬಣ್ಣಗಳನ್ನು ಉಪಯೋಗಿಸಿ ಮತ್ತು ಆಯಿಲ್ ಕಲರ್ ಮಾಧ್ಯಮದಿಂದ ಪೂರ್ಣಗೊಳಿಸಿದ್ದಾರೆ. ಇವರು ಸಾವಿರಾರು ಮೂರ್ತಿಗಳ ರಾಮಾಯಣ ಮತ್ತು ಮಹಾಭಾರತದ ದೃಶ್ಯಗಳನ್ನು ತುಂಬಾ ಅಚ್ಚುಕಟ್ಟಾಗಿ ಪ್ಲಾಸ್ಟರ್ ಆಫ್ ಪ್ಯಾರೀಸ್ ನಿಂದ ತಯಾರಿಸಿದ್ದಾರೆ.

### ಶ್ರೀ ಪಂಪಣ್ಣ ಮಾನಪ್ಪ ಆಚಾರಿ ಶಿಲ್ಪಕಲಾಕೃತಿಗಳ ವಿವರಣೆ

ಕಲಾವಿದ ಪಂಪಣ್ಣ ಮಾನಪ್ಪ ಆಚಾರಿಯವರು ಚಿಕ್ಕಂದಿನಿಂದಲೇ ಬಡತನದಿಂದಾಗಿ ಕಂಬಾರಿಕೆ ಮಾಡುತ್ತಿದ್ದರು. ಅವರು ಸ್ವಂತ ಊರು ಸಿಂಧನೂರು ತಾಲ್ಲೂಕಿನ ಹಲಬನೂರ. ಅವರ ಗುರುಗಳು, ಸಹೋದರ ಮಾವನವರಾದ ಹರಪಣ್ಣ ಆಚಾರಿ, ವೀರಭದ್ರಪ್ಪ ಆಚಾರಿ

ಅವರ ಹೆಸರು ಅವರ ವಿಳಾಸ ಅಕ್ಕಸಾಲಿಗರು(ಬಡಿಗೇರ). ಮೊದಲಿನಿಂದಲು ಅವರು ಗುರುಗಳು ಮೂರ್ತಿಶಿಲ್ಪ ಮಾಡುತ್ತಿದ್ದರು. ಇವರು ೪೦ ವರ್ಷಗಳಿಂದ ಮಾಡುತ್ತಿದ್ದರು. ಅವರು ಕನ್ನಡ ೬ನೇ ತರಗತಿ ಕಲಿತಿದ್ದರು. ಅವರಿಗೆ ಬಹಳಷ್ಟು ಬಡಗಿತನ, ಕಂಬಾರಿಕೆ ಆಸಕ್ತಿ ಇತ್ತು. ಅವರ ಹೆಂಡತಿಯ ಹೆಸರು ರಾಮಲಿಂಗಮ್ಮ. ಅವರ ಮದುವೆ ೨೩-೨೪ ವಯಸ್ಸಿನಲ್ಲಿ ಆಯಿತು. ಅವರಿಗೆ ಮಕ್ಕಳು ೯ ಜನ. ೩ ಜನ ಹೆಣ್ಣುಮಕ್ಕಳು, ೬ ಜನ ಗಂಡುಮಕ್ಕಳು. ಅವರು ರೈತರಾಗಿ ಕೆಲಸ ಮಾಡುತ್ತಿದ್ದಾರೆ. ಮನೋಹರ, ಶೇಕರಪ್ಪ, ವಿರುಪಾಕ್ಷಿ, ಸುರೇಶ ಆಚಾರಿ, ಮೋಹನ, ದ್ರಾಕ್ಷಾಯಿಣಿ ಅವರ ಮಕ್ಕಳು. ಅವರ ಗುರುಗಳು ಅವರು ಮಾಡಿರುವ ಮೂರ್ತಿಗಳನ್ನು ೨೦೦೦ರಿಂದ ೩೦೦೦ವರೆಗೆ ೮೦ ವರ್ಷವಿದ್ದಾಗ ಪ್ರಶಸ್ತಿಗಳು ಲಭಿಸಿದವು. ರಾಯಚೂರ ತಾಲೂಕಿನ ರಾಜ್ಯೋತ್ಸವ ಪ್ರಶಸ್ತಿ, ದೆಹಲಿ ಮತ್ತು ಬೆಂಗಳೂರಲ್ಲಿ ಸನ್ಮಾನಗಳಾಗಿವೆ. ಅವರು ಈಗ ಶಿಲ್ಪಕಲೆಯನ್ನು ಮಾಡುವುದು ಬಿಟ್ಟು ಒಂದು ವರ್ಷವಾಗಿದೆ. ಅವರ ಮನೆಯಲ್ಲಿ ೩೦ ಜನ ಇದ್ದಾರೆ. ಅವರ ಮಗ ಸುರೇಶ ಆಚಾರಿ ಪೇಂಟಿಂಗ್ ಸಿಮೆಂಟ್ ಸಾಬೂನು ವರ್ಕ್ ಕಲ್ಲಿನಲ್ಲಿ ಶಿಲ್ಪಗಳನ್ನು ಮಾಡುತ್ತಾರೆ. ಒಂದು ಗಣೇಶನ ಮೂರ್ತಿ ತಯಾರಿಸಲು ೧೫-೨೦ ಉಳಿಗಳು ಬೇಕು. ಅವರೇ ಉಳಿಗಳನ್ನು ತಯಾರು ಮಾಡುತ್ತಾರೆ. ಕಲ್ಲಿನಲ್ಲಿ, ಸಿಮೆಂಟಿನಲ್ಲಿ, ಕಟ್ಟಿಗೆಯಲ್ಲಿ ಶಿಲ್ಪಗಳನ್ನು ತಯಾರಿಸುತ್ತಾರೆ.

ಉದಾಹರಣೆಗೆ ಸುಭಾಸಚಂದ್ರಬೋಸ, ಸರ್ವಪಲ್ಲಿ ರಾಧಾಕೃಷ್ಣನ್, ಬಸವಣ್ಣ, ಗಣೇಶ, ಮೂರ್ತಿಗಳ ಶಿಲ್ಪಗಳನ್ನು ಮಾಡಿದ್ದಾರೆ. ಅವರು ದೃಶ್ಯ ಶಿಲ್ಪಗಳಿಗೆ ಕೇರೆನ್ನೆ ಹಚ್ಚಲು ಬ್ರಶ್ಮನ್ನು ಬಳಸುತ್ತಾರೆ. ಅದಕ್ಕೆ ಮೇಲೆ ಪಾಲಿಶ್ ಮಾಡುತ್ತಾರೆ. ಒಂದು ಮೂರ್ತಿ ಕೆತ್ತಲು ೨೦ರಿಂದ ೩೦ ದಿನಗಳು ಬೇಕಾಗಬಹುದು. ಡಿಸೈನ್ ವರ್ಕ್ ಮೂರ್ತಿ ಒಂದು ವರ್ಷವಾಗಬಹುದು. ಕಡಲೆಕಾಳು ಗಣಪತಿ ಮಾಡುತ್ತಾರೆ.

**ಶ್ರೀ ಪಂಪಣ್ಣ ಮಾ. ಆಚಾರಿ ಶಿಲ್ಪಿ ಸಂಗಾಪೂರ ಇವರಿಗೆ ಸನ್ಮಾನ ಗೌರವಗಳು**

೧. ೧೯೯೩ರಲ್ಲಿ ಮಾನ್ವಿಯಲ್ಲಿ ಮೌನೇಶ್ವರ ದೇವಸ್ಥಾನ ಕಮಿಟಿಯಿಂದ ಸನ್ಮಾನ ಮಾಡಲಾಯಿತು.

೨. ಭೀಮರಾವ್ ತಹಶೀಲ್ದಾರರು ಅವರು ಇವನ್ನು ಮಾನ್ವಿಯಲ್ಲಿ ಸನ್ಮಾನ ಮಾಡಿದರು.

೩. ೩೦-೧೦-೨೦೦೦ರಲ್ಲಿ ವಾಸವಿ ಕಲ್ಯಾಣ ಮಂಟಪ ಇವರಿಂದ ಮಾನ್ವಿಯಲ್ಲಿ ಸನ್ಮಾನ ಮಾಡಲಾಯಿತು.

೪. ೧-೧೧-೨೦೦೧ರಲ್ಲಿ ಸಿಂಧನೂರಿನಲ್ಲಿ ಸನ್ಮಾನ ಮಾಡಲಾಯಿತು.

೫. ೨-೦೪-೨೦೦೨ರಲ್ಲಿ ಪರಮ ಪೂಜ್ಯ ಪುಟ್ಟರಾಜಗವಾಯಿ ಇವರಿಂದ ಗದಗನಲ್ಲಿ ಸನ್ಮಾನ ಮಾಡಲಾಯಿತು.

೬. ೨೦-೫-೨೦೦೩ ಡಾ. ಪ್ರಭಾಕರ್ ಇವರಿಂದ ಮಾನ್ವಿಯ ವನಿತಾ ನಗರದಲ್ಲಿ ಸನ್ಮಾನ ಮಾಡಲಾಯಿತು.

೭. ೧-೧೧-೨೦೦೩ರಲ್ಲಿ ಪೊಲೀಸ್ ಸಭಾಂಗಣದಲ್ಲಿ ಎನ್.ಎಸ್. ಬೋಜರಾಜ ಇವರಿಂದ ಮಾನ್ವಿಯಲ್ಲಿ ಸನ್ಮಾನ ಮಾಡಲಾಯಿತು.

೮. ೧-೧೧-೨೦೦೪ರಲ್ಲಿ ಕನ್ನಡ ರಾಜ್ಯೋತ್ಸವದ ಅಂಗವಾಗಿ ಕನ್ನಡ ಅಭಿಮಾನಿಗಳಿಂದ ಮಾನ್ವಿಯಲ್ಲಿ ಸನ್ಮಾನ ಮಾಡಲಾಯಿತು.

೯. ಮುಖ್ಯಮಂತ್ರಿ ಧರ್ಮಸಿಂಗ್ ಅವರಿಂದ ರಾಜ್ಯೋತ್ಸವ ಪ್ರಶಸ್ತಿಯನ್ನು ೧-೧೧-೨೦೦೫ರಂದು ಬೆಂಗಳೂರಿನಲ್ಲಿ ನೀಡಲಾಯಿತು.

೧೦. ಚಿಕ್ಕಬಳ್ಳಾಪುರದ ಸುರ್ಯನಾರಾಯಣ ಅರವರು ೪-೧೧-೨೦೦೫ರಲ್ಲಿ ಸನ್ಮಾನಿಸಿದರು.

೧೧. ೩೦-೧೨-೨೦೦೫ರಲ್ಲಿ ಮಾನ್ವಿಯ ಎನ್.ಎಸ್.ಎಸ್.ಗಾಂಧೀಜಿ ಕಾಲೇಜ್‌ನ ತಿಮ್ಮಣ್ಣಶೆಟ್ಟಿ ಸರ್ ಇವರಿಂದ ಸನ್ಮಾನಿಸಲಾಯಿತು.

೧೨. ಪರಮಪೂಜ್ಯ ಸಿದ್ಧರಾಮಜಂಬಲದಿನ್ನಿ, ರಾಯಚೂರು ಇವರಿಂದ ಸನ್ಮಾನ ಮಾಡಲಾಯಿತು.

೧೩. ೨೩-೧-೨೦೦೬ರಲ್ಲಿ ಸಂಯುಕ್ತ ಪದವಿ ಪೂರ್ವ ಕಾಲೇಜು ಮಾನ್ವಿಯಲ್ಲಿ ನರಸಿಂಗ್‌ರಾವ್ ತಹಸೀಲ್ದಾರ ಇವರಿಂದ ಸನ್ಮಾನ ಕಾರ್ಯಕ್ರದಲ್ಲಿ ಸನ್ಮಾನ ಮಾಡಲಾಯಿತು.

೧೪. ೨೬-೧-೨೦೦೬ರಲ್ಲಿ ಸಂಯುಕ್ತ ಪದವಿ ಪೂರ್ವ ಕಾಲೇಜ್ ಆವರಣದಲ್ಲಿ ಗಣರಾಜ್ಯೋತ್ಸವ ಪ್ರಯುಕ್ತ ಅಂಗವಾಗಿ ಕೆ.ಬಸವಂತಪ್ಪ ಪುರಸಭೆ ಅಧ್ಯಕ್ಷರು ಇವರಿಂದ ಸನ್ಮಾನ ಮಾಡಲಾಯಿತು.

೧೫. ೩-೨-೨೦೦೬ರಲ್ಲಿ ತಾವರಗೇರಿ ಮೌನೇಶ್ವರ ದೇವಸ್ಥಾನ ಕಮಿಟಿಯಿಂದ ಸನ್ಮಾನ ಮಾಡಲಾಯಿತು.

೧೬. ೨೩-೭-೨೦೦೬ರಲ್ಲಿ ರಾಯಚೂರು ಜಿಲ್ಲಾ ಪಂಚಾಯತಿಯಲ್ಲಿ ಕ್ರಾಫ್ಟ್ ಹಾಲ್ ಅವರಿಂದ ಸನ್ಮಾನ ಮಾಡಲಾಯಿತು.

೧೭. ೨೯-೩-೨೦೦೭ರಲ್ಲಿ ದಶಮಾನೋತ್ಸವ ಸಮಾರಂಭದಲ್ಲಿ ಹಟೀಕಲ್ ಸನ್ಮಾನ ಮಾಡಲಾಯಿತು.

೧೮. ೨೫-೩-೨೦೦೭ರಲ್ಲಿ ಜಿಲ್ಲಾ ವಿಶ್ವಕರ್ಮ ಸಮಾವೇಶ ಕಾರ್ಯಕ್ರಮ ದೇವದುರ್ಗದಲ್ಲಿ ಸನ್ಮಾನ ಮಾಡಲಾಯಿತು.

೧೯. ೨೨-೧-೨೦೦೭ ಜಿಲ್ಲಾ ಕನ್ನಡ ಸಾಹಿತ್ಯ ಸಮೇಳನ ಮಾನ್ವಿಯಲ್ಲಿ ಸನ್ಮಾನ ಮಾಡಲಾಯಿತು.

೨೦. ೨೫-೩-೨೦೦೭ರಲ್ಲಿ ದೇವದುರ್ಗದಲ್ಲಿ ವಿಶ್ವಕರ್ಮ ಜಾಗೃತಿ ಸಮಾವೇಶದಲ್ಲಿ ಸನ್ಮಾನ ಮಾಡಲಾಯಿತು.

೨೧. ೨೯-೩-೨೦೦೭ರಲ್ಲಿ ಕೊಟ್ನೇಕಲ್‌ನಲ್ಲಿ ದಶಮಾನೋತ್ಸವ ಸಮಾರಂಭದಲ್ಲಿ ಸನ್ಮಾನ ಮಾಡ ಲಾಯಿತು.

೨೨. ೩೦-೪-೨೦೧೧ರಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯವರು ಡಾ. ಬಿ. ಆರ್. ಅಂಬೇಡ್ಕರ್ ಅರವರ ೧೧೯ನೇ ಜನ್ಮದಿನೋತ್ಸವದ ಅಂಗವಾಗಿ ಸಮಿತಿಯ ಮುಖಡಪ್ಪ ಇವರಿಂದ ಸನ್ಮಾನ ಮಾಡಲಾಯಿತು.

೨೩. ೧೬-೮-೨೦೧೧ರಂದು ವಾಲ್ಮೀಕಿ ಜಯಂತಿ ಪ್ರಯುಕ್ತ ಸ್ವಗ್ರಾಮ ಸಂಗಾಪುರದಲ್ಲಿ ಸನ್ಮಾನಿಸ ಲಾಯಿತು.

## ೩.೪.೨. ಲೋಹಶಿಲ್ಪಿ ಶ್ರೀ ಸಿದ್ಧಲಿಂಗ ಆಚಾರಿ

ಕಲಾವಿದನಿಗೆ ದೇಶ, ಭಾಷೆ, ಕಾಲ, ಜಾತಿ ಯಾವ ಮೇರೆಗಳು ಇರುವುದಿಲ್ಲ. ಇವೆಲ್ಲವುಗಳನ್ನು ಮೀರಿದವನೆ ಕಲಾವಿದ. ಯಾವುದೇ ನಾಡಿನಲ್ಲಿ ಹುಟ್ಟಿ ಯಾವುದೇ ನಾಡಿನಲ್ಲಿ ಬೆಳೆದರೂ ಅವನ ಕಲೆ ಮಾತ್ರ ಅವ್ಯಾಹವಾಗಿ ಇರುತ್ತದೆ.

ಸಿದ್ಧಲಿಂಗ ಆಚಾರಿಯವರ ಅಜ್ಜ ಬಳ್ಳಾರಿ ಜಿಲ್ಲಾ ಹರಪನಹಳ್ಳಿ ತಾಲೂಕು ಕೆರೆಗುಡಿಹಳ್ಳಿಯಲ್ಲಿ ಲೋಹ ಶಿಲ್ಪವನ್ನು ಮಾಡುತ್ತಿದ್ದರು. ಒಂದು ದಿನ ರಾಯಚೂರು ಜಿಲ್ಲೆಯ ಜವಳಗೆರಿ ಊರಿನವರು ಬೀರಪ್ಪ ದೇವರ ಹಿತ್ತಾಳೆ ಪ್ರಭಾವಳಿ ಮಾಡಲು ಅಲ್ಲಿಗೆ ಕರೆದುಕೊಂಡು ಹೊದರು. ಅವರು ಅಲ್ಲಿದ್ದು ಪ್ರಭಾವಳಿಯ ಕೆಲಸ ಮಾಡಿದರು. ಅದಾದ ನಂತರ ತನ್ನ ಮೊಮ್ಮಗನಾದ ಸಿದ್ಧಲಿಂಗ ಆಚಾರಿಯವರನ್ನು ಕರೆಸಿಕೊಂಡರು. ೧೯೮೮ರಲ್ಲಿ ಅಜ್ಜ ಮತ್ತು ಮೊಮ್ಮಗ ರಾಯಚೂರು ಜಿಲ್ಲೆಯ ಶಕ್ತಿನಗರ(ದೇವಸೂಗುರಿನಲ್ಲಿ ನೆಲೆಸಿದರು) ಸೂಗೂರೇಶ್ವರ ದೇವಾಲಯದ ಮುಖ್ಯ ದ್ವಾರ ಮತ್ತು ಕದಗಳಿಗೆ ಹಿತ್ತಾಳೆಯ ಲೋಹಲೇಪನ ಕೆಲಸ ಮಾಡಿದರು.

ಲೋಹ ಶಿಲ್ಪಿ ಸಿದ್ಧಲಿಂಗ ಆಚಾರಿಯವರಿಗೆ ಅಜ್ಜನೇ ಶಿಲ್ಪಗುರುಗಳಾದರು ಸಿದ್ಧಲಿಂಗ ಆಚಾರಿಯವರು ನಾಲ್ಕನೇ ತರಗತಿಯವರೆಗೆ ಶಿಕ್ಷಣವನ್ನು ಅರಸಿಕೇರಿಯಲ್ಲಿ ಮಾಡಿದರು. ಎಂಟು ವರ್ಷ ಇದ್ದಾಗಲೆ ತಂದೆ ಮತ್ತು ಅಜ್ಜನವರ ಕೈಯಲ್ಲಿ ಶಿಲ್ಪ ಉಪಕರಣಗಳನ್ನು ಕೊಡುವಲ್ಲಿ ನೆರವಾದರು. ಜವಳಗೇರಿಯಿಂದ ಮಠಮಾರಿಯಲ್ಲಿ ಆಂಜನೇಯ ಮೂರ್ತಿಗೆ ಹಿತ್ತಾಳೆ ಕವಚ ಮಾಡಿದ್ದಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದ್ದರು. ದೇವಸೂಗುರಿನ ಸೂಗೂರೇಶ್ವರ ದೇವಸ್ಥಾನದಲ್ಲಿ ಗರ್ಭಗುಡಿಯ ಬಾಗಿಲಿನ ಬೆಳ್ಳಿ ಲೋಹದ ತಗಡಿನ ನಕ್ಷೆ ಕೆಲಸವನ್ನು ಅಚ್ಚೊತ್ತಿದಂತೆ ಮಾಡಿದ್ದಾರೆ. ಸಿದ್ಧಲಿಂಗ ಆಚಾರಿಯವರು ಮೊಟ್ಟಮೊದಲು ಹಿತ್ತಾಳೆ ಲೋಹದಲ್ಲಿ ಉಬ್ಬುಶಿಲ್ಪ ತಯಾರಿಸಿದರು. ನಂತರ ಮೇಣದಿಂದ ಮೂರ್ತಿಯನ್ನು ತಯಾರಿಸಿಕೊಂಡು ಅದನ್ನು ಒಂದು ವಾರಗಳ ಕಾಲ ನೀರಿನಲ್ಲಿ ಇಟ್ಟು ಗಟ್ಟಿಯಾದ ನಂತರ ಮೇಣದ ಮೂರ್ತಿಗೆ ಜೇಡಿ ಮಣ್ಣನ್ನು ಮೆತ್ತಿ ಬಿಸಿಲಿನಲ್ಲಿ ಒಣಗಿಸಿ ನಂತರ ಬೆಂಕಿ ಕಾಯಿಸಿ ಮೇಣವನ್ನು ಹೊರಗೆ ತೆಗೆಯುತ್ತಿದ್ದರು. ತದನಂತರ ಮಣ್ಣಿನ ಅಚ್ಚಿನಲ್ಲಿ ಲೋಹವನ್ನು ಕಾಯಿಸಿ ಎರಕ ಹಾಕುತ್ತಿದ್ದರು ಸಿದ್ಧಲಿಂಗ ಆಚಾರಿಯವರ ಅಜ್ಜನವರು ಶಿಲಾಶಿಲ್ಪ, ಮರಶಿಲ್ಪ, ಲೋಹಶಿಲ್ಪ ಕೆಲಸ ಮಾಡುತ್ತಿದ್ದರು. ಅಜ್ಜನವರ ಶಿಲ್ಪಕಲೆಯ ಪ್ರಭಾವ ಸಿದ್ಧಲಿಂಗ ಆಚಾರಿಯವರ ಮೇಲೆ ಬೀರಿತ್ತು, ಲೋಹಶಿಲ್ಪಿ ಸಿದ್ಧಲಿಂಗ ಆಚಾರಿಯವರು ಸೂಗೂರೇಶ್ವರ ದೇವಲಾಯದಲ್ಲಿ ಸತತವಾಗಿ ೧೦ ವರ್ಷಗಳ ಕಾಲ ಲೋಹಶಿಲ್ಪದ ಕೆಲಸವನ್ನು ಮಾಡಿದ್ದಾರೆ. ಸೂಗೂರೇಶ್ವರನ ಉತ್ಸವದ ಮೂರುತಿ ಹಾಗೂ ದೇವಸ್ಥಾನದಲ್ಲಿ ಪ್ರತಿಷ್ಠಾಪಿತ ಮೂರ್ತಿಗೆ ಬೆಳ್ಳಿ ಕವಚವನ್ನು ನಿರ್ಮಿಸಿದ್ದಾರೆ. ಸಿದ್ಧಲಿಂಗ ಆಚಾರಿಯವರು ಹಿತ್ತಾಳೆ, ಕಂಚು, ತಾಮ್ರ, ಬೆಳ್ಳಿ–ಬಂಗಾರದ ಲೋಹದಲ್ಲಿ ಆನೇಕ ಉಬ್ಬುಶಿಲ್ಪ ಹಾಗೂ ದುಂಡುಶಿಲ್ಪ ಮತ್ತು ಬೆಳ್ಳಿಯ ಕವಚಗಳು, ಹಿತ್ತಾಳೆ ಕವಚಗಳು, ಚತ್ರ ಚಾಮರ ಉತ್ಸವದ ಪಲ್ಲಕ್ಕಿಗಳು ಮತ್ತು ವ್ಯಕ್ತಿಯ ಬಾವಶಿಲ್ಪಗಳು ಹೀಗೆ ಆನೇಕ ವಿಧದ ಲೋಹಶಿಲ್ಪವನ್ನು ನಿರ್ಮಿಸಿದ್ದಾರೆ.

ಸಿದ್ಧಲಿಂಗ ಆಚಾರಿಯವರು ಲೋಹಶಿಲ್ಪದಲ್ಲಿ ಪಾದರಸ ಎಂಬ ದ್ರವರೂಪಿ ಲೋಹವನ್ನು ಘನೀಕರಿಸಿ ಅದರಲ್ಲಿ ವಿಶ್ವಕರ್ಮನ ವಿಗ್ರಹವನ್ನು ಮಾಡಬೇಕೆಂಬ ಕುತೂಹಲ ಈಗಲೂ ಇದೆ ಎಂದು ಹೇಳುತ್ತಾರೆ. ಆನೇಕ ತಿಂಗಳವರೆಗೆ ದ್ರವರೂಪಿಯಾದ ಪಾದರಸವನ್ನು ಗಟ್ಟಿ ಮಾಡಲು ಪ್ರಯತ್ನಿಸಿದ್ದರು. ಅದು ಸಾಧ್ಯವಾಗಲಿಲ್ಲ ಎಂದು ತಮ್ಮ ಕೊರಗನ್ನು ತಿಳಿಸುತ್ತಾರೆ. ಸಿದ್ಧಲಿಂಗ ಆಚಾರಿಯವರಿಗೆ ಕೆಲಸದ ಒತ್ತಡಗಳು ಬಹಳ ಇರುವಾಗ ಅವರ ತಮ್ಮನಾದ ಮೌನೇಶನನ್ನು ಸಹಾಯಕ್ಕಾಗಿ ಕರೆಸಿಕೊಂಡು ಕೆಲಸ ಮಾಡುತ್ತಾರೆ.

ಲೋಹಶಿಲ್ಪ ಕಲಾವಿದರಾದ ಶ್ರೀನಿವಾಸ ಆಚಾರ್ ಅವರ ಅರ್ಧನಾರೇಶ್ವರಿ ಕಲಾಕೃತಿ ಅರ್ಧ ಭಾಗ ತಾಮ್ರ ಅರ್ಧ ಭಾಗ ಹಿತ್ತಾಳೆಯಿಂದ ನಿರ್ಮಿಸಿರುವ ವಿಗ್ರಹವನ್ನು ನೋಡಿ ಚಕಿತನಾಗನೆಂದು ನೆನಪಿಸಿಕೊಂಡರು. ಇವರದೇ ಆದ ವೀಣಾಪಾನಿ ನನ್ನ ಮೇಲೆ ಪ್ರಭಾವ ಭೀರಿತ್ತು ಎನ್ನುತ್ತಾರೆ. ಇನ್ನೊಬ್ಬ ಲೋಹಶಿಲ್ಪಿ ನೀಲಕಂಠ ಆಚಾರ್ ಅವರ ಮನೆಯಲ್ಲಿ ಇರುವ ಅನಂತಶಯನ ಲೋಹಶಿಲ್ಪ ಮತ್ತು ನಾಟ್ಯಸರಸ್ವತಿಯ ಶಿಲ್ಪ ನನ್ನನ್ನು ಆಕರ್ಷಣೆಗೆ ಒಳಪಡಿಸಿತ್ತು. ಶಿಲ್ಪಿ ನೀಲಕಂಠಾಚಾರಿಯವರ ಬೆರಳಿನ ಉಂಗುರವನ್ನು ನೋಡಿ ಅದೇ ರೀತಿಯ ಉಂಗುರವನ್ನು ಉರಿಗಂನಿಶಿವ ಮುದ್ರೆ ಇರುವ ಉಂಗುರವನ್ನು ನಿರ್ಮಿಸಿದ್ದಾರೆ. ಲೋಹಶಿಲ್ಪಿ ನೀಲಕಂಠಾಚಾರಿ ಯವರ ಪ್ರಭಾವ ನನ್ನ ಶಿಲ್ಪ ಕಲೆಯಲ್ಲಿ ಕಂಡುಬರುತ್ತದೆ ಎಂದು ಹೇಳುತ್ತಾರೆ. ೬–೩–೧೯೭೪ ರಲ್ಲಿ ಜನಿಸಿದ ಸಿದ್ಧಲಿಂಗ ಆಚಾರಿಯವರು ಲೋಹಶಿಲ್ಪದಲ್ಲಿ ವಿಶಿಷ್ಟ ಸಾಧನೆ ಮಾಡಿದ್ದಾರೆ.

**ತಯಾರಿಸಿದ ಲೋಹಶಿಲ್ಪಗಳು**

೧. ತಿಂಥಿಣಿ ಮೌನೇಶ್ವರ ದೇವಸ್ಥಾನದ ಬೆಳ್ಳಿ ಲೋಹದ ಬಾಗಿಲು.

೨. ಕಾಳಬೆಳಗುಂದಿಗಿ ವೀರಭದ್ರೇಶ್ವರ ದೇವಸ್ಥಾನದ ಹಿತ್ತಾಳೆ ದ್ವಾರ ಬಾಗಿಲು ನಿರ್ಮಾಣ.

೩. ಶಕ್ತಿನಗರದ ಸೂಗೂರೇಶ್ವರ ದೇವಸ್ಥಾನದ ಬೆಳ್ಳಿ ಬಾಗಿಲು ಮಾಡಲಾಗಿದೆ.

೪. ಮಾನ್ವಿಯ ಕಲ್ಮಠದ ಹಿತ್ತಾಳೆ ದ್ವಾರ ಬಾಗಿಲನ್ನು ನಿರ್ಮಿಸಿದೆ.

**ತಾಮ್ರ ಲೋಹಶಿಲ್ಪ**

೧. ವೀರಭದ್ರ ದೇವರ ವೀರಗಾಸೆಯಲ್ಲಿ ಕುಣಿಯುವರು ಒಡಪು ಹೇಳುವರು ಷತ್ರ ಹಾಕುವಂತಹವರು ಎದೆಗವಚವನ್ನಾಗಿ ತಾಮ್ರದ ಉಬ್ಬುಶಿಲ್ಪಗಳ ವೀರಭದ್ರದೇವರ ಹಲಗೆಗಳನ್ನು ಸುಮಾರು ನೂರರವರೆಗೆ ನಿರ್ಮಿಸಿ ಕೊಟ್ಟಿದ್ದಾರೆ.

೨. ಮುಸ್ಲಿಮ್ ಆಲಾಹೀ ದೇವರ ಫಲಕಗಳನ್ನು ನಿರ್ಮಿಸಿದ್ದಾರೆ.

೩. ತಾಮ್ರದ ತ್ರಿಶೂಲ ಮತ್ತು ಖಡ್ಗ ಶಸ್ತ್ರಗಳನ್ನು ನಿರ್ಮಿಸಿದ್ದಾರೆ.

**ಬಂಗಾರ ಲೋಹಶಿಲ್ಪ:** ರಾಯಚೂರು ಜಿಲ್ಲೆ ಮಾನ್ವಿಯ ಶ್ರೀಲಕ್ಷ್ಮೀದೇವಿ ದೇವಸ್ಥಾನಕ್ಕೆ ೫೦ ಗ್ರಾಂ ಬಂಗಾರದ ಕೀರಿಟವನ್ನು ಮಾಡಿದ್ದಾರೆ.

# ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು



**ಶ್ರೀ ಪಂಪಣ್ಣ ಆಚಾರಿ ಶಿಲ್ಪಿಗಳು**
(ರಾಯಚೂರು ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಕಲಾವಿದರು ರಾಜ್ಯಪ್ರಶಸ್ತಿ ಪಡೆದ ಸಂದರ್ಭ




ಕರ್ನಾಟಕ ಸರ್ಕಾರ ರಾಜ್ಯ ಪ್ರಶಸ್ತಿ-೨೦೦೫

# ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು



**ಲೋಹಶಿಲ್ಪಿ ಶ್ರೀ ಸಿದ್ಧಲಿಂಗ ಆಚಾರಿ**
(ರಾಯಚೂರು ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಕಲಾಕೃತಿ ನಿರ್ಮಿಸುವಲ್ಲಿ ತೊಡಗಿರುವ ಕಲಾವಿದರು

ಕರ್ನಾಟಕ ಶಿಲ್ಪಕಲಾ ಅಕಾಡೆಮಿ ವತಿಯಿಂದ ಗೌರವ ಪ್ರಶಸ್ತಿ - ೨೦೦೭

**ಬೆಳ್ಳಿ ಉಬ್ಬುಶಿಲ್ಪಗಳು:** ಹೇರ ಎಂಬ ಊರಿನಲ್ಲಿ ಸಿದ್ಧರಾಮೇಶ್ವರ ರಥದ ೪ ಅಡಿ ಛತ್ರವನ್ನು ನಿರ್ಮಿಸಿದ್ದಾರೆ. ದೇವದುರ್ಗ ತಾಲೂಕು ಕೊಪ್ಪೂರು ಗ್ರಾಮದ ನರಸಿಂಹ ಸ್ವಾಮಿಯ ಬೆಳ್ಳಿ ಬಾಗಿಲು ನಿರ್ಮಿಸಿದ್ದಾರೆ. ಹರಪನಹಳ್ಳಿ ತಾಲೂಕು ತಿಮ್ಲಾಪುರ ಗ್ರಾಮದ ವೆಂಕಟೇಶ್ವರಮೂರ್ತಿಗೆ ಬೆಳ್ಳಿ ಕವಚ ತಯಾರಿಸಿದ್ದಾರೆ. ರಾಯಚೂರು ಜಿಲ್ಲೆ ತಿಮ್ಮಾಪುರಕ್ಕೆ ಮಾರಿಕಾಂಬ ದೇವಸ್ಥಾನದ ಬೆಳ್ಳಿ ಕವಚ ತಯಾರಿಸಿದ್ದಾರೆ. ಸುರಪುರದ ಆಂಜನೇಯ ಸ್ವಾಮಿಯ ೬ ಅಡಿ ಎತ್ತರದ ಬೆಳ್ಳಿ ಉಬ್ಬುಶಿಲ್ಪವನ್ನು ತಯಾರಿಸಿದ್ದಾರೆ. ಶಿವಮೊಗ್ಗದ ಹತ್ತಿರ ನಿಮಿಷಾಂಭದೇವಿ ಬೆಳ್ಳಿ ತೊಟ್ಟಿಲನ್ನು ನಿರ್ಮಿಸಿದ್ದಾರೆ. ರಾಯಚೂರು ಜಿಲ್ಲೆಯ ಗಾರ್ಲಾದ್ದಿನ್ನಿ ಬಸವಣ್ಣನ ಬೆಳ್ಳಿಯ ಮುಖವಾಡ ಮಾಡಿದ್ದಾರೆ. ಮಠಮಾರಿ ಗ್ರಾಮದಲ್ಲಿ ವೀರಭದ್ರೇಶ್ವರ ದೇವರ ಬೆಳ್ಳಿಯ ದುಂಡುಶಿಲ್ಪವನ್ನು ನಿರ್ಮಿಸಿದ್ದಾರೆ. ಆಂಧ್ರದ ಆದೋನಿಯಲ್ಲಿ ೮ ಕೆಜಿ ತೂಕದ ಬೆಳ್ಳಿ ಮಂಟಪ ನಿರ್ಮಿಸಿದ್ದಾರೆ. ಆಂಧ್ರದ ಹಿಡ್ಲೂರಿನಲ್ಲಿ ೧೨ ಕೆಜಿ ತೂಕದ ಬೆಳ್ಳಿ ಈಶ್ವರನ ಮುಖ ನಿರ್ಮಿಸಿದ್ದಾರೆ. ದಾವಣಗೆರೆ ಜಿಲ್ಲೆ ಉಕ್ಕಡಗಾತ್ರಿ ಕರಿಬಸವೇಶ್ವರದೇವರ(ಅಜ್ಜಯ್ಯ) ೨೬ ಕೆಜಿ ಬೆಳ್ಳಿಯ ಉತ್ಸವ ಪಲ್ಲಕ್ಕಿಯನ್ನು ಮಾಡಿದ್ದಾರೆ.

### ೩.೫. ಕೊಪ್ಪಳ ಜಿಲ್ಲೆಯ ಶಿಲ್ಪಕಲಾವಿದರು

೩.೫.೧. ಮರಶಿಲ್ಪಿ ನಾರಾಯಣಪ್ಪ

೩.೫.೨. ರಥಶಿಲ್ಪಿ ಮಲ್ಲಪ್ಪ ಬಡಿಗೇರ

### ೩.೫.೧. ಮರಶಿಲ್ಪಿ ನಾರಾಯಣಪ್ಪ

ಕೊಪ್ಪಳ ಜಿಲ್ಲೆಯ ಕಿನ್ನಾಳ ಗ್ರಾಮವು ಒಂದು ಸುಂದರ ಹಾಗೂ ರಮಣೀಯವಾದ ಸ್ಥಳ. ಪ್ರಕೃತಿಯ ಹಕ್ಕಿಗಳ ಕಲರವ, ಮುಂಜಾನೆಯ ಮಂಜು, ಮುಸ್ಸಂಜೆಯ ಸೂರ್ಯಾಸ್ತ, ಗೋಧೂಳಿಯ ಸಮಯದಲ್ಲಿ ಸೂರ್ಯಾಸ್ತದ ದಟ್ಟ ಹಿನ್ನೆಲೆಯಲ್ಲಿ ದನುಕರುಗಳ ಗಂಟೆಗಳ ನಿನಾದ ಕೇಳಿಸುತ್ತದೆ. ಸಾಲು ಸಾಲು ದನಕರುಗಳ ಹಿಂಡಿನ ಮಧ್ಯೆ ಮೇವಿನ ಹೊರೆ ಹೊತ್ತು ಮನೆಯತ್ತ ಹೆಜ್ಜೆ ಹಾಕುವ ರೈತ ಮಹಿಳೆಯರಿದ್ದಾರೆ. ಇದೆಲ್ಲವು ಅಲ್ಲಿನ ಮುಗ್ಧ ಮನಗಳು ಹರಸಿ, ಹಾರೈಸಿ, ದೇಶಿಯ ಮಣ್ಣಲ್ಲಿ ಹುದುಗಿರುವ ಪ್ರತಿಭೆಯನ್ನು ಹೊರತೆಗೆದು ಅವರಿಗೆ ಜೀವನದ ಮಹತ್ವವನ್ನು, ಮೌಲ್ಯವನ್ನು ಅರ್ಥೈಸಿ ಅವರಿಗೆ ಸುಲಲಿತ ಜೀವನದ ಮಹತ್ವವನ್ನು ಮೌಲ್ಯಗಳನ್ನು, ಸಾಧನೆಗೆ ಪರಿಶ್ರಮಕ್ಕೆ ಪ್ರತಿಫಲ ತಂದುಕೊಡುವ ಮಹತ್ವಪೂರ್ಣ ಕಲಾಪ್ರಪಂಚವನ್ನು ಪೂರೈಸುವ ಎಲ್ಲ ಸಾಮರ್ಥ್ಯವನ್ನು ಒದಗಿಸುವ ಶಕ್ತಿಯನ್ನು ಕೊಡುವ ಪುಷ್ಟಿಯನ್ನು ನೀಡಿ ಹಾರೈಸುವ ಶಕ್ತಿ ಕೇಂದ್ರವೆನಿಸಿದೆ. ಕಿನ್ನಾಳ ಗ್ರಾಮದ ಇಂತಹ ಪರಿಸರದಲ್ಲಿ ನಮ್ಮ ಶ್ರೀಯುತ ನಾರಾಯಣಪ್ಪ ಚಿತ್ರಗಾರರು ಜನಿಸುತ್ತಾರೆ.

**ನಾರಾಯಣಪ್ಪ ಚಿತ್ರಗಾರರ ಬಾಲ್ಯಜೀವನ:** ಶ್ರೀಯುತ ಶೀನಪ್ಪ-ಜಯಮ್ಮ ದಂಪತಿಗಳಿಗೆ ಐದನೆಯ ಮಗನಾಗಿ ಡಿಸೆಂಬರ್ ೧೨, ೧೯೪೨ರಲ್ಲಿ ಕಿನ್ನಾಳದ ಗ್ರಾಮದಲ್ಲಿ ಜನಿಸಿದ ಪ್ರತಿಭೆಯೇ

ಶ್ರೀ ನಾರಾಯಣಪ್ಪನವರು. ನಾರಾಯಣಪ್ಪ ಚಿತ್ರಗಾರರನ್ನು ಅಂದಿನ ಮೈಸೂರು ರಾಜ್ಯ ಸರಕಾರ ೧೯೬೦ರಲ್ಲಿ ಕೇಂದ್ರ ಕರಕುಶಲ ಅಭಿವೃದ್ಧಿ ಮಂಡಳಿಯ ಮೂಲಕ ಮೈಸೂರಿಗೆ ಅಹ್ವಾನಿಸುತ್ತಾರೆ. ಹೀಗೆ ಕಿನ್ನಾಳ ಕಲೆಯನ್ನು ಬಾಲ್ಯದಿಂದಲೇ ಮೈಗೂಡಿಸಿಕೊಂಡು ಬಾಲ್ಯದಿಂದಲೇ ಕಲಾಸಿರಿಯನ್ನು ಒಂದು ತಪಸ್ಸು ಎನ್ನುವಂತೆ ಸಾಧಿಸುತ್ತಾರೆ. ಸಂಪ್ರದಾಯಸ್ಥ ಮನೆತನದ ಕಲಾಕುಟುಂಬದಲ್ಲಿ ಜನಿಸಿದ ಇವರು ಕಲಾದೇವಿಯ ಅರಾಧಕರಾಗಿ ಕಲಾಸಿರಿವಂತಿಕೆಯನ್ನು ಗಳಿಸುವ ಎಲ್ಲ ಅಂಶ ಗಳನ್ನು ಬಾಲ್ಯದಿಂದಲೇ ಗ್ರಹಿಸುತ್ತಾರೆ. "ಬೆಳೆವ ಸಿರಿಯನ್ನು ಮೊಳಕೆಯಲ್ಲಿ ಕಾಣು" ಎನ್ನುವಂತೆ ಇವರು ಚಿಕ್ಕಂದಿನಿಂದಲೇ ಕಲಾಪ್ರೌಢಿಮೆಯನ್ನು ತಂದೆ ಶೀನಪ್ಪ ಹಾಗೂ ದೊಡ್ಡ ಅಣ್ಣ ಕೃಷ್ಣಮೂರ್ತಿ ಅವರಲ್ಲಿ ನುರಿತ ಈ ಕಲೆಯನ್ನು ಕರಗತ ಮಾಡಿಕೊಂಡು ಶ್ರೇಷ್ಠ ಮಟ್ಟಕ್ಕೆ ಬೆಳೆಯುವ ಸೂಚನೆ ನೀಡುತ್ತಾರೆ.

ಶೀನಪ್ಪ–ಜಯಮ್ಮ ದಂಪತಿಗಳಿಗೆ ಒಟ್ಟು ಏಳು ಜನ ಮಕ್ಕಳು. ಆರುಜನ ಗಂಡುಮಕ್ಕಳು ಹಾಗೂ ಒಬ್ಬ ಹೆಣ್ಣುಮಗಳು. ಮೊದಲನೆಯ ಮಗನಾಗಿ ಕೃಷ್ಣಮೂರ್ತಿ, ಎರಡನೆಯವರಾಗಿ ದೊಡ್ಡರಂಗಪ್ಪ, ಮೂರನೆಯವರಾಗಿ ಸಣ್ಣರಂಗಪ್ಪ, ನಾಲ್ಕನೆಯವರಾಗಿ ಶ್ರೀಕಾಂತಪ್ಪ, ಐದನೆಯವರಾಗಿ ಜನಿಸುವ ಪುತ್ರ ರತ್ನವೇ ನಮ್ಮ ನಾರಾಯಣಪ್ಪನವರು. ಆರನೆಯವರಾಗಿ ಗೋಪಾಲಪ್ಪ, ಏಳನೆಯವರಾಗಿ ಭಾಗ್ಯವತಿ ಜನಿಸುತ್ತಾರೆ. ತಂದೆ ಮತ್ತು ಅಣ್ಣಂದಿರು ಕಲಿಸಿದ ವಿದ್ಯೆಯಿಂದ ಆನುವಂಶಿಕವಾಗಿ ಬಂದ ಕಲೆಯನ್ನು ಕಲಿತು ಅದರಲ್ಲಿ ಪರಿಣತರಾಗಿ ಹೊಸ ಹೊಸ ಆವಿಷ್ಕಾರ ಗಳನ್ನು ನಡೆಸುತ್ತಾರೆ. ಕಲಾಸಾಮ್ರಾಜ್ಯದಲ್ಲಿ ಮಿನುಗುವ ತಾರೆಯಾಗುವ ಕನಸು ಕಟ್ಟಿಕೊಂಡು ಅತ್ಯಂತ ಶ್ರದ್ಧೆ ಆಸಕ್ತಿಯಿಂದ ಕಲಿಯುತ್ತಾರೆ.

ತಂದೆ ಅಣ್ಣಂದಿರೊಡನೆ ಬಾಲಕ ನಾರಾಯಣಪ್ಪ ಅವರು ಕಿನ್ನಾಳದ ಕಲಾ ಸಿರಿಯ ಸೊಬಗಿನಲ್ಲಿ ಸ್ವಚ್ಛಂದ ವಾತಾವರಣದಲ್ಲಿ ವಿಹರಿಸುತ್ತಾರೆ. ಕಲಾದೇವಿಯ ಆರಾಧಕನಾಗಿ ಮನೆಯಲ್ಲಿ ಎಲ್ಲರ ಪ್ರೀತಿ ಪಾತ್ರನಾಗಿ ಉತ್ತಮ ಸಂಸ್ಕಾರ ಪಡೆದು ಬಾಲ್ಯದಲ್ಲಿಯೇ ಅನೇಕ ಮನಮೋಹಕ ಚಿತ್ರಗಳನ್ನು ರಚಿಸಿ ಹೆಮ್ಮರವಾಗಿ ಬೆಳೆಯುವ ಕುರುಹುಗಳನ್ನು ಹಲವಾರು ಸುಳುಹುಗಳನ್ನು ನೀಡಿ ತಮ್ಮ ಕಲೆಯನ್ನು ಇನ್ನಷ್ಟು ಒರೆಗೆ ಹಚ್ಚುತ್ತಾ ನಾರಾಯಣಪ್ಪ ಬೆಳೆಯುತ್ತಾರೆ.

**ಪರಿಸರ:** ನಾರಾಯಣಪ್ಪ ಚಿತ್ರಗಾರರು ವಂಶಪಾರಂಪರಗತವಾಗಿ ಬಂದ ಕಲೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದರು. ಚಿತ್ರಗಾರ ಮನೆತನದ ಪರಿಸರದ ಮಗನಾಗಿ ನಾರಾಯಣಪ್ಪ ನವರಿಗೆ ಸಹಜವಾಗಿಯೇ ಕಲೆಯಲ್ಲಿ ಅತ್ಯಂತ ಆಸಕ್ತಿ ಇತ್ತು. ಅದಕ್ಕೆ ಅವರು ಬೆಳೆದ ಸಂಸ್ಕೃತ ಮನೆತನ ಮತ್ತು ಕಲಾಭಿರುಚಿ ಇರುವ ರಕ್ತಗತವಾಗಿ ಬಂದ ಕಲೆ, ವಾತಾವರಣ ಇರಬಹುದು. ಹೊರಗಿನ ಭೌಗೋಳಿಕ ಪರಿಸರ ನಾರಾಯಣಪ್ಪನವರ ಕಲಾಕ್ರಿಯೆಗೆ ಪರೋಕ್ಷವಾಗಿ ಪ್ರೇರಣೆ ಒದಗಿಸಿತ್ತು. ಬಣ್ಣ ಕುಂಚಗಳ ಒಡನಾಟದಿಂದ ಕಲಾಕುಸುಮವಾಗಿ ಅರಳುವ ಮನೆಯೊಳಗೆ ಮತ್ತು ಹೊರಗಿನ ಪರಿಸರದ ಪ್ರಭಾವ ಎಳೆಯ ಬಾಲಕ ನಾರಾಣಪ್ಪನವರ ಒಳಗೆ ಇದ್ದ ಪ್ರತಿಭೆ ಚಿಗುರೊಡೆಯಲು ಸಾಧ್ಯವಾಯಿತು. ಹೀಗೆ ಕಿನ್ನಾಳದ ಮುಕ್ತ ವಾತಾವರಣ ರಮ್ಯತೆ ಹಾಗೂ

ಮನೆಯಲ್ಲಿ ದಿನವೂ ನಡೆಯುವ ಕಲಾಯಜ್ಞವನ್ನು ವೀಕ್ಷಿಸುತ್ತಾ ನಾರಾಯಣಪ್ಪನವರು ಕಲಾದೇವಿಯನ್ನು ಆರಾಧಿಸುತ್ತಾ ಕಲೆಯನ್ನು ಮೈಗೂಡಿಸಿಕೊಂಡು ಅದರಲ್ಲಿ ಸಾಧನೆಗೈಯುವ ಸೂಕ್ಷ್ಮ ಸುಳುಹುಗಳನ್ನು ಬಾಲ್ಯದಲ್ಲಿಯೇ ನೀಡುತ್ತಾರೆ. ಹೀಗೆ ನಾರಾಯಣಪ್ಪನವರಲ್ಲಿ ಕಲಾಕುಸುಮ ಅರಳಲು ಸುತ್ತಮುತ್ತಲಿನ ವಾತಾವರಣ ಸಹ ಅವರನ್ನು ಕಲಾಪ್ರಪಂಚದಲ್ಲಿ ಮಿನುಗುವ ಹಾಗೇ ಸಿದ್ಧಗೊಳಿಸಲು ಪ್ರೇರಣೆ ನೀಡಿತು.

**ಶಿಕ್ಷಣ:** ಕಿನ್ನಾಳದ ಈ ಕಲಾಕುಸುಮವು ಪ್ರಾಥಮಿಕ ಶಿಕ್ಷಣವನ್ನು ಕಿನ್ನಾಳದ ಸರಕಾರಿ ಪ್ರಾಥಮಿಕ ಶಾಲೆಯಲ್ಲಿಯೇ ಮುಗಿಸುತ್ತಾರೆ. ಶೀನಪ್ಪನವರ ದೊಡ್ಡ ಸಂಸಾರ ತೂಗಿಸಲು ಭಾರವೆನಿಸಿ ಮಕ್ಕಳಿಗೆ ಹೆಚ್ಚಿನ ವಿದ್ಯಾಭ್ಯಾಸ ನೀಡಲು ಕಷ್ಟವೆನಿಸಿತ್ತು. ಆದರಿಂದ ನಾರಾಯಣಪ್ಪನವರಿಗೆ ಮುಂದಿನ ವಿದ್ಯಾಭ್ಯಾಸಕ್ಕೆ ಅಡೆತಡೆಗಳುಂಟಾದವು. ಹೈಸ್ಕೂಲ್ ಶಿಕ್ಷಣ ಪಡೆದು ಕೊಪ್ಪಳಕ್ಕೆ ಬರಬೇಕಾದ ಅನಿವಾರ್ಯತೆ ಇತ್ತು. ಆದ್ದರಿಂದ  ಮುಂದಿನ ಶಿಕ್ಷಣ ಸಾಧ್ಯವಾಗದೇ ಶಿಕ್ಷಣಕ್ಕೆ ತಿಲಾಂಜಲಿ ಇಟ್ಟು ಕಲಾದೇವಿಯ ಉಪಾಸನಿಗೆ ತೊಡಗಿಸಿಕೊಳ್ಳುತ್ತಾರೆ. ಶಿಕ್ಷಣ ಮುಂದುವರಿಸಲು ಆರ್ಥಿಕ ಸಮಸ್ಯೆಗಳ ಜೊತೆಗೆ ಇವರ ಕಲಾಜೀವನ ಅತ್ಯಂತ ಸೊಗಸಾಗಿ ಸಾಗುತ್ತಾ ಬಂತು. ಇವರು ತಮ್ಮ ತಂದೆ ಹಾಗೂ ಅಣ್ಣಂದಿರುಗಳಿಗೆ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಾ ಊರಿನಿಂದ ಊರಿಗೆ ಹೋಗುತ್ತಾ ಕಲಾಕಾರ್ಯವನ್ನು ನಿರ್ವಹಿಸಬೇಕಾಯಿತು. ಏಕೆಂದರೆ ತಂದೆ ಅಣ್ಣಂದಿರು ಒಪ್ಪಿಕೊಂಡ ಕೆಲಸದ ಸ್ಥಳಗಳಿಗೆ ಹೋಗಿ ಕಾರ್ಯ ನಿರ್ವಹಿಸಬೇಕಾಯಿತು. ಆಗಿನ ಕಾಲದಲ್ಲಿ ಹಳ್ಳಿ ಹಳ್ಳಿಗಳಿಗೆ ಬಸ್ಸಿನ ಸೌಕರ್ಯವಿರಲಿಲ್ಲ. ಕೆಲವೊಂದು ಸಾರಿ ನಡೆದುಕೊಂಡು ಹೋಗಬೇಕಾದ ಅನಿವಾರ್ಯತೆ ಎದುರಾಗುತ್ತಿತ್ತು. ಹೀಗೆ ನಾರಾಯಣಪ್ಪನವರು ಕಷ್ಟ ಸುಖಗಳ ನಡುವೆ ಪುಟಿಕ್ಕಿಟ್ಟ ಚಿನ್ನದಂತೆ ಕಲಾರತ್ನವಾಗಿ ಹೊರಹೊಮ್ಮಿದರು.

**ಕಲಾಸಾಧನೆ:** ಕಿನ್ನಾಳದ ಸಾಂಸ್ಕøತಿಕ ಪರಿಸರದಲ್ಲಿ ಜನಿಸಿದ ನಾರಾಯಣಪ್ಪನವರ ಕುಟುಂಬ ಆನುವಂಶಿಕವಾಗಿ ಬಂದ ಕಲಾಕುಟುಂಬವಾಗಿದ್ದು, ಇಲ್ಲಿ ಸದಾ ಕಲಾ ಚಟುವಟಿಕೆಯ ಕೇಂದ್ರವಾಗಿತ್ತು. ಇಂತಹ ಪರಿಸರದಲ್ಲಿ ನಾರಾಯಣಪ್ಪನವರು ಬಾಲ್ಯದಿಂದಲೂ ಕಲೆಯನ್ನು ಮೈಗೂಡಿಸಿಕೊಂಡು ಕಲಾ ಸಾಧನೆಗಾಗಿ ಹಗಲಿರುಳು ಕಲಾ ತಪಸ್ಸು ಮಾಡುತ್ತಾರೆ. ಕಲಾದೇವಿಯ ಆರಾಧಕರಾಗಿಯೂ ಕಲಾ ಕುಸುಮ ಸೂಸುವ ಗಂಧದ ಪರಿಮಳದಂತೆ ಅವರ ಸಾಧನೆಯ ಕಂಪು ಸುತ್ತಲೂ ಹರಡ ತೊಡಗಿತು. ತಂದೆ ಶೀನಪ್ಪ ಹಾಗೂ ಅಣ್ಣಂದಿರ ಸನ್ಮಾರ್ಗದಲ್ಲಿ ಅವರ ಆರ್ಶೀವಾದದ ಪ್ರಭಾವದಿಂದ ಕಲಾದೇವಿಯನ್ನು ಒಲಿಸಿಕೊಂಡು ತಮ್ಮ ಅಮೋಘ ಕೈಚಳಕದಿಂದ ಮನಮೋಹಕ ಚಿತ್ರಗಳನ್ನು ಬಿಡಿಸುತ್ತಾ ಹಳ್ಳಿಯಿಂದ ಡೆಲ್ಲಿಯವರೆಗೂ ತಮ್ಮ ಕಲಾಪತಾಕೆಯನ್ನು ಹಾರಿಸಿ ಕಿನ್ನಾಳದ ಕಲಾಸಿರಿಯನ್ನು ದೇಶಾದ್ಯಂತ ಅಷ್ಟೇ ಅಲ್ಲದೇ ವಿದೇಶಗಳಲ್ಲಿ ಕೂಡ ನಾನಾ ಕಡೆ ಕಿನ್ನಾಳದ ಕಲೆಯ ಕಂಪು ಹರಡುವಂತೆ ಮಾಡಿದ್ದಾರೆ. ಕಲಾಪ್ರತಿಭೆಯಾಗಿ ನಾರಾಯಣಪ್ಪ ಚಿತ್ರಗಾರ ಅವರ ಸಾಧನೆ ಅಮೋಘ. ಅವರು ನಡೆಸಿದ ಅನೇಕ ಕಲಾಪ್ರದರ್ಶನಗಳು ಹಾಗೂ ಅವರು ರಚಿಸಿದ ಅನೇಕ ಕಲಾ ಕೃತಿಗಳು ಒಂದೊಂದು ವಜ್ರದಂತೆ ಹೊಳೆಯುತ್ತಿವೆ. ಕಲಾಸಕ್ತರನ್ನು ಕೈಬಿಸಿ ಕರೆಯುತ್ತಿವೆ.

**ನಾರಾಯಣಪ್ಪ ಚಿತ್ರಗಾರರ ಕಲಾಕೃತಿಗಳು ಪ್ರದರ್ಶನಗೊಂಡ ಸ್ಥಳಗಳು:** ಪ್ರಥಮ ಬಾರಿಗೆ ೧೯೬೦ರಲ್ಲಿ ಶ್ರೀಯುತರಿಗೆ ಮೈಸೂರಿನಿಂದ ಆಹ್ವಾನ(ನಗರದ ಕೇಂದ್ರ ಕರಕುಶಲಾ ಅಭಿವೃದ್ಧಿ ಮಂಡಳಿ ಮೂಲಕ)ವಿತ್ತು. ೧೯೬೫ರಲ್ಲಿ ಬೆಂಗಳೂರಿನ ವಿಶ್ವೇಶ್ವರಯ್ಯ ಮ್ಯೂಜಿಯಂದಲ್ಲಿ ನಡೆದ ಕಲಾಪ್ರದರ್ಶನದಲ್ಲಿ ಭಾಗವಹಿಸುವಿಕೆ, ೧೯೮೪ರಲ್ಲಿ ಪ್ರಥಮ ವಿಶ್ವಕನ್ನಡ ಸಮ್ಮೇಳನದಲ್ಲಿ ಅಲಂಕರಣೀಯ ಪ್ರಾಕಾರಗಳನ್ನು ರಚಿಸುವ ಪ್ರಾತ್ಯಕ್ಷಿಕೆ ನೀಡಿ ಜನ ಮನ್ನಣೆ ಪಾತ್ರದಾರರು.

**ಕಲಾಕೃತಿಗಳ ಸಂಗ್ರಹ**

- ಇವರ "ಕಲಾತ್ಮಕ ಬುದ್ಧ" ಕಲಾಕೃತಿಯು ಜಪಾನಿನಲ್ಲಿ ರಾರಾಜಿಸುತ್ತಿದೆ.
- ಆಲಂಕಾರಿಕ ಹಣ್ಣುಹಂಪಲುಗಳ ಮಾದರಿಗಳು ಕೂಡ ಜಪಾನಿನಲ್ಲಿ ರಾರಾಜಿಸುತ್ತಿವೆ.
- ಇವರ ವಿಶಿಷ್ಟ ತರಹದ ಅಷ್ಟ ಭುಜಾಕೃತಿಯ ಕಲಾತ್ಮಕ ಟಿಪಾಯಿ-ಟೇಬಲ್‌ಗಳು ಹಾಗೂ ಹಣ್ಣಿನ ಆಲಂಕಾರಿಕ ಕೃತಿಗಳು ಕೂಡ ಅಮೆರಿಕದಲ್ಲಿ ಮತ್ತು ಮುಂತಾದ ವಿದೇಶಗಳಲ್ಲಿ ಸಂಗ್ರಹಗೊಂಡು ಜನಮನ್ನಣೆ ಗಳಿಸಿವೆ. ಕರ್ನಾಟಕದ ಕೀರ್ತಿಯನ್ನು ಗೌರಿಶಂಕರದ ಎತ್ತರಕ್ಕೆ ಕೀರ್ತಿ ಪತಾಕೆಯನ್ನು ಹಾರಿಸಿವೆ. ಇಷ್ಟಲ್ಲದೇ ಇವರು ಅನೇಕ ಕಡೆಗಳಲ್ಲಿ ಕಲಾ ಪ್ರದರ್ಶನ ಹಾಗೂ ಪ್ರಾತ್ಯಕ್ಷಿಕೆ ನೀಡಿದ್ದಾರೆ.

**ಕಲಾಪ್ರದರ್ಶನ ಹಾಗೂ ಪ್ರಾತ್ಯಕ್ಷತೆ**

- ೧-೧೧-೧೯೬೩ರಿಂದ ೪-೧೧-೧೯೬೩ರಲ್ಲಿ ಜೈಪುರ ರಂಗಮಂಚ್‌ನಲ್ಲಿ ಕಲಾ ಪ್ರಾತ್ಯಕ್ಷತೆ ಹಾಗೂ ಕಲಾಪ್ರದರ್ಶನ.
- ೧೧-೫-೧೯೮೮ರಿಂದ ೩೦-೦೫-೧೯೮೮ರವರೆಗೆ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ.
- ಬೆಂಗಳೂರು ಇವರು ಕಿನ್ನಾಳದ ಕಲೆಯ ಬಗ್ಗೆ ನೂರಾಡ್ ಯೋಜನೆಯ ಅಡಿಯಲ್ಲಿ ೨೫ ಜನ ಮಹಿಳೆಯರಿಗೆ ಮಾರ್ಗದರ್ಶನ ನೀಡಿದ್ದಾರೆ.
- ೧-೧೨-೧೯೪೬ರಿಂದ ೭-೧೨-೧೯೮೬ರವರೆಗೆ ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ, ಮಡಿಕೇರಿಯಲ್ಲಿ ನಡೆದ ಕಲಾಶಿಬಿರದಲ್ಲಿ ಭಾಗವಹಿಸುವಿಕೆ.
- ೧೯೯೩-೬ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಕೊಪ್ಪಳದಲ್ಲಿ ಕಲಾಪ್ರದರ್ಶನ.
- ೨೦೦೬ರ ನ್ಯಾಷನಲ್ಲಿ ಮೆರಿಟ್‌ನಲ್ಲಿ ಭಾಗವಹಿಸುವಿಕೆ ಮತ್ತು "ನ್ಯಾಷನಲ್ ಮೆರಿಟ್" ಪ್ರಶಸ್ತಿ ಕಲಾಕೃತಿ ರಚನೆ.
- ೧-೧೦-೨೦೦೬ರಿಂದ ೧೮-೯-೨೦೦೬ ರವರೆಗೆ ಖಜೂರಾಹೋ ಮಧ್ಯಪ್ರದೇಶದಲ್ಲಿ ನಡೆದ ಕಲಾಶಿಬಿರದಲ್ಲಿ ಕಲಾಪ್ರಾತ್ಯಕ್ಷಿಕೆ ಮತ್ತು ನಿರ್ದೇಶನ.
- ೧೨-೧೦-೧೯೯೨ರಿಂದ ೨೯-೧೨-೧೯೯೨ರವರೆಗೆ ಇಂದಿರಾಗಾಂಧಿ ರಾಷ್ಟ್ರೀಯ ಮಾನವ ಸಂಗ್ರಾಹಾಲಯ.

- ಭೂಪಾಲ್‌ದಲ್ಲಿ ಕಲಾ ಪ್ರಾತ್ಯಕ್ಷಿಕೆ ಹಾಗೂ ಕಲಾ ಚಿತ್ರಪ್ರದರ್ಶನ.
- ೧೩-೯೯೨ ಉದಯಪುರ ಶಿಲ್ಪ ಗ್ರಾಮದಲ್ಲಿ ಕಾರ್ಯಾಗಾರ ಮತ್ತು ಕಲಾ ಪ್ರಾತ್ಯಕ್ಷಿಕೆ.
- ೭-೩-೯೯೯ರಿಂದ ೧೪-೦೩-೯೯೯ರ ಸಾಹಿತ್ಯ ಮತ್ತು ರಂಗಭೂಮಿ ಸಂಸ್ಥೆ ಮತ್ತು ಯೋಜನಾ ಕ್ರೀಡಾ ಇಲಾಖೆ ಸಂಯುಕ್ತ ಆಶ್ರಯದಲ್ಲಿ ತರಬೇತಿಯ ನಿರ್ದೇಶಕರಾಗಿ ಭಾಗವಹಿಸುವಿಕೆ.
- ೧-೧೨-೯೯೬ರಿಂದ ೭-೧೨-೯೮೬ರವರೆಗೆ ನಡೆದ ಕರ್ನಾಟಕ ಲಲಿತಕಲಾ ಅಕಾಡೆಮಿ ಶಿಬಿರದಲ್ಲಿ ಕಲಾವಿದರಾಗಿ ಭಾಗವಹಿಸುವಿಕೆ.
- ಚಿತ್ರಕಲಾ ಪರಿಷತ್ತಿಗೆ ರಜತ ಮಹೋತ್ಸವ ಸಂದರ್ಭದಲ್ಲಿ "ಶ್ರೀಯುತ ಕೆ.ಕೆ. ಹೆಬ್ಬಾರ್‌ರವ ನಿರ್ದೇಶನದ" ರಾಷ್ಟ್ರಮಟ್ಟದ ರಾಷ್ಟ್ರ ಕಲಾವಿದರ ಜೊತೆ ಕಲಾಶಿಬಿರದಲ್ಲಿ ಭಾಗವಹಿಸಿ ಕಿನ್ನಾಳದ ಕಲಾಜ್ಯೋತಿಯನ್ನು ರಾಷ್ಟ್ರದ ತುಂಬೆಲ್ಲಾ ಬೆಳಗುವಂತೆ ಮಾಡಿದ್ದು. ಕಿನ್ನಾಳ ಕಲೆಯ ಬಗ್ಗೆ ಶ್ರೀಯುತ ಕೆ.ಕೆ. ಹೆಬ್ಬಾರ ಮೆಚ್ಚಿಗೆ ಸೂಚಿಸಿದ್ದರು.
- ೨೬-೧೨-೨೦೦೩ರಿಂದ ೬-೧-೨೦೦೪ರವರೆಗೆ "ಮಹಾಲಸ ಚಿತ್ರಕಲಾ ಶಾಲಾ" ಮಂಗಳೂರು ಕಲಾಶಾಲೆಯಲ್ಲಿ ೧೨ ದಿನಗಳ ನಡೆದ ಶಿಬಿರದಲ್ಲಿ ನಿರ್ದೇಶಕರಾಗಿ ಭಾಗವಹಿಸುವಿಕೆ.
- ೫-೧-೨೦೦೪ರಿಂದ ೧೪-೦೧-೨೦೦೪ರವರೆಗೆ ಮೈಸೂರಿನ "ಕಲಾನಿಕೇತನ ಸ್ಕೂಲ್ ಆಫ್ ಆರ್ಟ್"ದಲ್ಲಿ ನಡೆದ ಕಲಾ ಶಿಬಿರದಲ್ಲಿ ಪ್ರಾತ್ಯಕ್ಷಿಕೆ ನೀಡಿ ಕಲಾ ನಿರ್ದೇಶಕರಾಗಿ ಭಾಗವಹಿಸುವಿಕೆ.
- ೧೬-೯೮೬ ಸಾರ್ಕ್ ಸಮ್ಮೇಳನದಲ್ಲಿ ಪ್ರಾತ್ಯಕ್ಷಿಕೆ ಮತ್ತು ಕಲಾಪ್ರದರ್ಶನ ವಿವಿಧ ಕಲಾ ಶಾಲೆಗಳಲ್ಲಿ ಕಿನ್ನಾಳ ಕಲೆಯ ಬಗ್ಗೆ ತರಬೇತಿ ಹಾಗೂ ಪ್ರಾತ್ಯಕ್ಷಿಕೆ(ಮಂಗಳೂರು, ಬೆಂಗಳೂರು, ತುಮಕೂರು, ಮೈಸೂರು).
- ೨೦೦೬-೨೦೦೯- ಇಂಧಿರಾಗಾಂಧಿ ರಾಷ್ಟ್ರೀಯ ಮಾನವ ಹಕ್ಕುಗಳ ಸಂಗ್ರಹಾಲಯ, ಮೈಸೂರು. ಕಲಾಕೃತಿಗಳ ಸಂಗ್ರಹ.

ಶ್ರೀ ನಾರಾಯಣಪ್ಪ ಚಿತ್ರಗಾರವರಿಗೆ ಸಂದ ಪ್ರಶಸ್ತಿಗಳು

- ಶ್ರೀ ನಾರಾಯಣಪ್ಪ ಚಿತ್ರಗಾರರಿಗೆ ೨೦೧೦ನೇ ಸಾಲಿನಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಕರ್ನಾಟಕ ಸರ್ಕಾರ ನೀಡಿ ಗೌರವಿಸಿದೆ.
- ಮಿನಿಸ್ಟರಿ ಆಫ್ ಟೆಕ್ಸ್‌ಟೈಲ್ಸ್(ಭಾರತ ಸರಕಾರ) ಅವರಿಂದ ೨೦೦೬ರ "ಸರ್ಟಿಫಿಕೆಟ್ ಆಫ್ ಮೆರಿಟ್-೨೦೦೬" ಪ್ರಶಸ್ತಿ.
- ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ, ನಿಯಮಿತ. ಬೆಂಗಳೂರು(ಕರ್ನಾಟಕ

ಸರ್ಕಾರದ ಉದ್ಯಮ) ಅವರು ನೀಡಿದ ೨೦೦೩ರ "ರಾಜ್ಯ ಪ್ರಶಸ್ತಿ" ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು ಅವರು ೧೯೮೬ರಲ್ಲಿ ನೀಡಿದ "ಗೌರವ ಪ್ರಶಸ್ತಿ".

- ಭಾರತರತ್ನ ಸರ್. ಎಂ. ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಪ್ರತಿಷ್ಠಾನ ಟ್ರಸ್ಟ್(ರಿ.) ಅವರು ಅಖಿಲ ಕರ್ನಾಟಕ ಮಕ್ಕಳ ಸಾಹಿತ್ಯ ಸಂಸ್ಕೃತಿ ತೃತೀಯ ಸಮ್ಮೇಳನದಲ್ಲಿ ೨೫-೦೮-೨೦೦೮ರಲ್ಲಿ 'ವಿಶ್ವಕಲಾರತ್ನ' ಪ್ರಶಸ್ತಿ ನೀಡಿದ್ದಾರೆ.
- ತಾಲೂಕು ಅಭಿವೃದ್ಧಿ ಮಂಡಳಿ ಕೊಪ್ಪಳ ಅವರು ೧೯೭೦ರ ಸಾಲಿನ ಯುವಜನೋತ್ಸವ ಪ್ರಶಸ್ತಿ ನೀಡಿದ್ದಾರೆ.
- ಮಿನಸ್ಟರಿ ಆಫ್ ಕಲರ್(ಭಾರತ ಸರ್ಕಾರ ) ಸೌತ್ ಸೆಂಟ್ರಲ್ ಝೋನ್ ಕಲ್ಚರ್ ಸೆಂಟರ್ ನಾಗಪೂರ ಅವರು ೨೦೦೬ರಲ್ಲಿ ಸ್ಟೇಟ್ ಆವಾರ್ಡ್ ನೀಡಿದ್ದಾರೆ.
- ರಾಯಚೂರು ಜಿಲ್ಲಾ ಗಣರಾಜ್ಯೋತ್ಸವ ಸಮಿತಿಯಿಂದ ೧೯೩೨-೩೩ರಲ್ಲಿ ಸನ್ಮಾನ ಪತ್ರ ನೀಡಿ ಗೌರವಿಸಿದ್ದಾರೆ.
- ೧೯೯೩ ಫೆಬ್ರುವರಿಯಲ್ಲಿ ಕೊಪ್ಪಳದಲ್ಲಿ ಜರುಗಿದ ೬೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಶಸ್ತಿ ಪ್ರತ್ರ ನೀಡಿ ಗೌರವಿಸಿದ್ದಾರೆ.
- ೧೯೮೬ ಡಿಸೆಂಬರ್‌ನಲ್ಲಿ ಮೈಸೂರಿನಲ್ಲಿ ನಡೆದ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ 'ಸನ್ಮಾನ ಪತ್ರ' ನೀಡಿ ಗೌರವಿಸಿದ್ದಾರೆ.
- ೧೯೮೬ರಲ್ಲಿ ಸಾರ್ಕ್ ಸಮ್ಮೇಳನದಲ್ಲಿ ಕಲಾಶಿಬಿರದಲ್ಲಿ ಮೆಚ್ಚುಗೆ ಪತ್ರ, ಅಷ್ಟೆ ಅಲ್ಲದೇ ಅನೇಕ ಕಲಾಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ಅನೇಕ ಕಲಾಶಿಬಿರಗಳಲ್ಲಿ ವಿದ್ಯಾರ್ಥಿಗಳಿಗೆ ಕಿನ್ನಾಳ ಕಲೆಯ ಬಗ್ಗೆ ಮಾಗದರ್ಶನ ಮಾಡಿದ್ದಾರೆ.
- ಮಿನಿಸ್ಟರಿ ಆಫ್ ಕಲ್ಚರಲ್(ಭಾರತ ಸರ್ಕಾರ) ಸೌತ್ ಸೆಂಟ್ರಲ್ ಝೋನ್ ಕಲ್ಚರಲ್ ಸೆಂಟ್ರಲ್ ನಾಗಪುರ ಇಲ್ಲಿ ನಡೆಸಿ ಕಲಾ ಶಿಬಿರದಲ್ಲಿ ಕನ್ನಾಳದ ಕಲೆಯ(೯-೧೦-೨೦೦೬-೧೮-೧೦-೨೦೦೬ರವರೆಗೆ)
- ಕರ್ನಾಟಕ ಲಲಿತಾಕಲಾ ಅಕಾಡೆಮಿ-ಬೆಂಗಳೂರು ೧-೧೨-೧೯೮೬ರಿಂದ ೭-೧೨-೧೯೮೬ರವರೆಗೆ ನಡೆದ ಕಲಾಶಿಬಿರದಲ್ಲಿ ಕಲಾವಿದರಾಗಿ ಭಾಗವಹಿಸಿದ್ದಾರೆ. ಪ್ರಮಾಣ ಪತ್ರ ನೀಡಿದ್ದಾರೆ.
- ಸೌತ್ ಝೋನ್ ಕಲ್ಚರಲ್ ಸೆಂಟರ್ ತಂಜಾವೂರು ೧೯೮೭ರಲ್ಲಿ ಪಾಂಡಿಚೇರಿಯಲ್ಲಿ ಪ್ರಶಸ್ತಿ ನೀಡಿ ಗೌರವಿಸಿದ್ದರು.
- ನಾರಾಯಣಪ್ಪ ಚಿತ್ರಗಾರ ತಯಾರಿಸಿದ ಕಿನ್ನಾಳದ ಚೌಕಿ ೨೪ ಕಾಲು ಮಣೆಗೆ ೨೦೦೩ ಸಾಲಿನ ಕರಕುಶಲ ಅಭಿವೃದ್ಧಿ ನಿಗಮ ಪ್ರಶಸ್ತಿ ನೀಡಿ ಗೌರವಿಸಿದೆ.
- ೩೧-೦೩-೨೦೦೪ರಲ್ಲಿ ಮೈಸೂರಿನ ಶ್ರೀಕಲಾನಿಕೇತನ ಕಲಾಶಾಲೆ ಸುಚಿತ್ರಾ ಕಲಾ

ಗ್ಯಾಲರಿಯಲ್ಲಿ ನಾರಾಯಣಪ್ಪ ಚಿತ್ರಗಾರರ ಕಿನ್ನಾಳ ಚಿತ್ರಕಲಾ ಪ್ರದರ್ಶನ ಏರ್ಪಡಿಸಿತ್ತು.

- ಪ್ರದರ್ಶನದಲ್ಲಿ ಕನ್ನಡ ಸಂಸ್ಕೃತಿ ಇಲಾಖೆಯ ಉಪ ನಿರ್ದೇಶಕ ಮ.ಗು. ಸದಾನಂದಯ್ಯ, ಮಹಾದೇವಶೆಟ್ಟಿ ಭಾಗವಹಿಸಿದರು.
- ಭಾರತ ಸರ್ಕಾರ ಮಿನಿಸ್ಟರಿ ಆಫ್ ಟೆಕ್ಸ್‌ಟೈಲ್ಸ್ ಅವರು ಬೆಂಗಳೂರಿನಲ್ಲಿ ೨೦ನೆಯ ಅಕ್ಟೋಬರ್ ೧೯೯೯ರಿಂದ ೩೦-ಅಕ್ಟೋಬರ್‌ವರೆಗೆ ನಡೆದ ಕಲಾಶಿಬಿರದಲ್ಲಿ ಕಿನ್ನಾಳ ಕಲೆಯ ಬಗ್ಗೆ ನಿರ್ದೇಶಕರಾಗಿ ಕಲಾಸೇವೆ ಮಾಡಿದ್ದಕ್ಕೆ ಪ್ರಮಾಣ ಪತ್ರ ನೀಡಿ ಗೌರವಿಸಿದ್ದಾರೆ.
- ಶ್ರೀ ಕಲಾನಿಕೇತನ ಸ್ಕೂಲ್ ಆಫ್ ಆರ್ಟ್ ಮೈಸೂರು ದಿನಾಂಕ ೫-೧-೨೦೦೪ರಿಂದ ೧೪-೧-೨೦೦೪ರವರೆಗೆ ಯುವ ಕಲಾವಿದರಿಗೆ ಕಿನ್ನಾಳ ಚಿತ್ರಕಲೆಯ ಬಗ್ಗೆ ನಿರ್ದೇಶನ ನೀಡಿ ಉತ್ತಮ ಕಲಾಕೃತಿ ರಚಿಸುವಲ್ಲಿ ಮಾರ್ಗದರ್ಶನ ನೀಡಿದರು. ಕಲಾನಿಕೇತನ ಸ್ಕೂಲ್ ಆಫ್ ಆರ್ಟ್ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮೈಸೂರು ವಿಭಾಗ ಇವರ ಸಹಯೋಗದೊಂದಿಗೆ ಈ ಕಾರ್ಯಕ್ರಮ ಜರುಗಿತು.
- ಹರಿಯಾಣದ ಸೂರಜ್‌ಕುಂಡದಲ್ಲಿ ೧-೨-೧೯೯೧ರಿಂದ ೧೫-೨-೧೯೯೧ರರವರೆಗೆ ಜರುಗಿದ ಕಲಾಮೇಳದ ಶಿಬಿರದಲ್ಲಿ ಭಾಗವಹಿಸಿದರು.
- ಕರ್ನಾಟಕ ಲಲಿತಕಲಾ ಅಕಾಡಮಿಯು ತನ್ನ ಸದಸ್ಯರಿಗಾಗಿ ವಿಶೇಷವಾಗಿ ನಂದಿ ಬೆಟ್ಟದಲ್ಲಿ ಕಲಾಶಿಬಿರ ಏರ್ಪಡಿಸಿತ್ತು. ೨೮-೧೧-೧೯೮೮ರಿಂದ ೨-೧೨-೧೯೮೮ರವರೆಗೆ ಜರುಗಿದ ಕಲಾಶಿಬಿರದಲ್ಲಿ ಅಕಾಡೆಮಿ ಅಧ್ಯಕ್ಷರಾದ ಆರ್.ಎಂ.ಹಡಪದ ಸದಸ್ಯರಾದ ಬಿ.ಎಸ್. ಶೆಣೈ, ಚಿ.ಸು. ಕೃಷ್ಣಶೆಟ್ಟಿ, ಹೆಚ್.ಎನ್.ಸುರೇಶ್, ವಿ.ಬಿ. ಹೀರೆಗೌಡರ್, ಎಂ.ಎಸ್.ಜತ್ತಿ ಹಾಗೂ ಕಿನ್ನಾಳದ ನಾರಾಯಣಪ್ಪ ಚಿತ್ರಗಾರ ಶಿಬಿರದಲ್ಲಿ ಸಾಂಪ್ರದಾಯಿಕ ಶೈಲಿಯ ಚಿತ್ರ ರಚಿಸಿದರು. ಅಷ್ಟ ಭುಜಾಕೃತಿ ಆಕಾರದ ಚಿತ್ರ ತಯಾರಿಸಿ ಕಲಾಸಕ್ತರ ಮೆಚ್ಚುಗೆಗೆ ಪಾತ್ರರಾದರು.
- ಕರ್ನಾಟಕ ಲಲಿತಾ ಕಲಾ ಅಕಾಡೆಮಿ ಅವರು ೧೨-೧೨-೧೯೮೫ರಿಂದ ೧೭-೧೨ ೧೯೮೫ರವರೆಗೆ ನಡೆದ ವಿಶ್ವ ಕನ್ನಡ ಸಮ್ಮೇಳನದಲ್ಲಿ ಗೌರವಿಸಿದರು(ಸನ್ಮಾನ ಪತ್ರ).
- ಕರ್ನಾಟಕ ಚಿತ್ರಕಲಾ ಪರಿಷತ್‌ನ ೨೫ ವರ್ಷ ಬೆಳ್ಳಿ ಹಬ್ಬ ಆಚರಣೆ ಸಂದರ್ಭದಲ್ಲಿ ಕಲಾಶಿಬಿರ ಏರ್ಪಡಿಸಿತ್ತು. ಈ ಕಲಾಶಿಬಿರದ ಅಧ್ಯಕ್ಷತೆಯನ್ನು ಪ್ರಖ್ಯಾತ ಕಲಾವಿದರಾದ ಶ್ರೀ.ಕೆ.ಕೆ. ಹೆಬ್ಬಾರ್ ಅವರು ವಹಿಸಿಕೊಂಡಿದ್ದರು. ಕಲಾಶಿಬಿರದಲ್ಲಿ ಪಾಲ್ಗೊಂಡ ಕಲಾವಿದರುಗಳು.: ಕಾಳಿದಾಸ ಪತ್ತಾರ, ವಿಜಯ ಸಿಂಧೂರ, ಪಿ.ಟಿ.ರೆಡ್ಡಿ, ಸೂರ್ಯಪ್ರಕಾಶ್ ಗೋಪಿನಾಥ್, ಜಿ.ಎಸ್. ಖಂಡೇರಾಮ್, ವಿ.ಜಿ. ಅಂದಾನಿ, ಅವಲೂರ್ ಸಿಂಗ್, ಆದಿಮೂಲಂ, ಪಿ.ವಿ.ಜಾನಕೀರಾಮ್, ಆರ್. ಬಿ. ಭಾಸ್ಕರನ್, ಆರ್.ಎಮ್.ಹಡಪದ, ಬಾಸ್ಕರ್‌ರಾವ್, ಜಿ.ಎಸ್. ಶೆಣೈ, ವಿಶ್ವಂಬರ್, ಮಾಯಾಚಾರ್, ನರಸಿಂಹಾಚಾರ್, ವೆಂಕಟಾಚಲಪತಿ, ಹಾಗೂ ನಾರಾಯಣಪ್ಪ ಚಿತ್ರಗಾರ್, ವಿಜಯ

ಹಾಗರಗುಂಡಗಿ, ಜೋಧ್‌ಸಿಂಗ್, ರಮೇಶ ಬಿಸ್ತ, ಅಮಿತಾಬ್ ಬ್ಯಾನರ್ಜಿ, ಡಿ. ವಾದಿರಾಜ್ ಅವರೊಂದಿಗೆ ಕಲಾಶಿಬಿರದಲ್ಲಿ ಭಾಗವಹಿಸಿದ ಕೀರ್ತಿ ನಮ್ಮ ನಾರಾಯಣಪ್ಪ ಚಿತ್ರಗಾರರಿಗೆ ಸಲ್ಲುತ್ತದೆ.

- ಮಹಾಲಸಾ ಚಿತ್ರಕಲಾಶಾಲೆ ಮಂಗಳೂರು ಕಲಾಶಾಲೆಯ ವಿದ್ಯಾರ್ಥಿಗಳಿಗಾಗಿ ಕಿನ್ನಾಳ ಕಲೆಯ ಕಾರ್ಯಾಗಾರ ದಿ. ೨೬-೧೨-೨೦೦೩ರಿಂದ ೬-೧-೨೦೦೪ರವರೆಗೆ ನಡೆದ ಕಲಾಶಿಬಿರದಲ್ಲಿ ನಿರ್ದೇಶಕರಾಗಿ ಭಾಗವಹಿಸಿ ವಿದ್ಯಾರ್ಥಿಗಳಿಗೆ ಮನಮುಟ್ಟುವಂತೆ ಮಾರ್ಗದರ್ಶನ ನೀಡಿದ್ದಾರೆ. ಮಹಾಲಸಾ ಚಿತ್ರಶಾಲೆಯು ಪ್ರಮಾಣ ಪತ್ರ ನೀಡಿ ಗೌರವಿಸಿದೆ.
- ೧೯೮೬ರಲ್ಲಿ ನಡೆದ ಸಾರ್ಕ್ ಸಮೇಳನದ ಶಿಬಿರದಲ್ಲಿ ಭಾಗವಹಿಸಿ ಮೆಚ್ಚುಗೆ ಪತ್ರ ಪಡೆದಿದ್ದಾರೆ.
- ಜಿಲ್ಲಾಡಳಿತ ತುಮಕೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ಇವರ ಸಹಯೋಗದೊಂದಿಗೆ ವೆಂಕಟಪ್ಪ ಪ್ರಶಸ್ತಿ ವಿಜೇತರಾದ ಕುಂಚಬ್ರಹ್ಮ ದಿ. ಪಿ. ಆರ್. ತಿಪ್ಪೇಸ್ವಾಮಿಯವರ ಸ್ಮರಾಣಾರ್ಥ ಅಖಿಲ ಭಾರತ ಸಾಂಪ್ರದಾಯಿಕ ಚಿತ್ರಕಲಾ ಕಾರ್ಯಾಗಾರ(೧೫-೨-೨೦೦೩ರಿಂದ ೨೪-೨-೨೦೦೩) ರವೀಂದ್ರ ಕಲಾನಿಕೇತನ ಕಾಲೇಜ್ ಆಫ್ ಫೈನ್ ಆರ್ಟ್ಸ್‌ನಲ್ಲಿ ನಡೆದ ಕಲಾಶಿಬಿರದಲ್ಲಿ ಭಾಗವಹಿಸಿ ತಮ್ಮ ಕಿನ್ನಾಳದ ಕಲೆಯಿಂದ ಕಲಾಕಸ್ತರನ್ನು ಮಂತ್ರ ಮುಗ್ಧರನ್ನಾಗಿಸಿದ್ದರು.
- ಬೆಂಗಳೂರು, ಮೈಸೂರಿನಲ್ಲಿ ಇಂದಿರಾಗಾಂಧಿ ರಾಷ್ಟ್ರೀಯ ಮಾನವಹಕ್ಕು ಸಂಗ್ರಹಾಲಯ ದಲ್ಲಿ 'ಮಾಡುಕಲಿ' ಕಾರ್ಯಕ್ರಮದ ಅಡಿಯಲ್ಲಿ ಏರ್ಪಡಿಸಲಾದ ಕಿನ್ನಾಳದ ಕಲೆಯನ್ನು ಕಲಾ ಶಿಬಿರದಲ್ಲಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದ್ದಕ್ಕೆ ಪ್ರಮಾಣ ಪತ್ರ ನೀಡಿ ಗೌರವಿಸಿದ್ದಾರೆ.
- ಸೌತ್ ಇಂಡಿಯನ್ ನಾರ್ತ್ ಆ್ಯಂಡ್ ಕ್ರಾಫ್ಟ್‌ನ ಕಲಾಶಿಬಿರ ಉದಕಮಂಡಲದಲ್ಲಿ ನಡೆಯಿತು. (೧೦-೬-೨೦೦೬ರಿಂದ ೨೦-೬-೨೦೦೬) ಈ ಶಿಬಿರದಲ್ಲಿ ಭಾಗವಹಿಸಿದ ಕೀರ್ತಿ ಶ್ರೀ ನಾರಾಯಣಪ್ಪ ಚಿತ್ರಗಾರ ಅವರಿಗೆ ಸಲ್ಲುತ್ತದೆ.

### ೩.೫.೨. ರಥಶಿಲ್ಪಿ ಮಲ್ಲಪ್ಪ ಬಡಿಗೇರ್

ರಥಶಿಲ್ಪಿ ಮಲ್ಲಪ್ಪ ಬಡಿಗೇರ್ ಅವರ ತಂದೆ ಗಂಗಪ್ಪ ಬಡಿಗೇರ್. ಅವರು ಬಾಗಲಕೋಟೆ ಜಿಲ್ಲೆ ಕುಂದಿರಗಿಯಲ್ಲಿ ಜನಿಸಿದರು. ಮಲ್ಲಪ್ಪನವರು ಬಾಲಕನಿರುವಾಗಲೇ ಅವರ ತಂದೆ ತೀರಿ ಕೊಂಡರು. ಮಲ್ಲಪ್ಪನವರಿಗೆ ಶಿಕ್ಷಣ ಕೊಡಿಸಲು ಯಾರು ಇಲ್ಲಾದಂತಾಯಿತ್ತು ಅಮೀನಗಡದಲ್ಲಿ ಐದನೇ ತರಗತಿಯ ವರೆಗೆ ಓದಿ ಶಿಕ್ಷಣ ನಿಲ್ಲಿಸಬೇಕಾಯಿತ್ತು. ಹದಿನೈದು ವರ್ಷದವರಿದ್ದಾಗ ಹೊಳೆಆಲೂರಿನ ರಥಶಿಲ್ಪಿ ಶಂಕ್ರಪ್ಪನವರ ಮನೆಯಲ್ಲಿ ಇದ್ದುಕೊಂಡು ರಥಶಿಲ್ಪಿವನ್ನು ಕಲಿತರು. ಎಚ್ರಪ್ಪ ಮಳಿಯಪ್ಪ ಬಡಿಗೇರ್ ಶಿಲ್ಪಿಗಳು ಇವರು ರೋಣದಲ್ಲಿ ಇದ್ದರು. ಇವರ ಹತ್ತಿರ ಹೋಗಿ ಮಲ್ಲಪ್ಪನವರು ಶಿಲಾಶಿಲ್ಪ ಹಾಗೂ ರಥಶಿಲ್ಪ ಅಭ್ಯಾಸ ಮಾಡಿದ್ದರು. ಇವರ ಶಿಲಾಶಿಲ್ಪದ ಮೊದಲನೇ ವಿಗ್ರಹ ಹುನಗುಂದದಲ್ಲಿರುವ ಹನುಮಂತ ದೇವರ ಶಿಲಾಮೂರ್ತಿ.

ಮಲ್ಲಪ್ಪ ಬಡಿಗೇರ್ ಅವರು ಕಬ್ಬಿಣದಲ್ಲಿ ಕಮ್ಮಾರಿಕೆ ಕೆಲಸದಲ್ಲಿ ಪಳಗಿದವರು. ಅಜ್ಜನವರ ಕೈಯಲ್ಲಿ ರೈತರಿಗೆ ಚಕ್ಕಡಿಯನ್ನು ಮಾಡಿಕೊಟ್ಟಿದ್ದಾರೆ. ಮರಶಿಲ್ಪದಲ್ಲಿ ಬರುವ ಹಿರೇ ಬಾಚಿಯ ಕೆಲಸದಲ್ಲಿ ಸಿದ್ಧಹಸ್ತರು. ಮೂಲತ ಇವರು ಕುಂದರಗಿಯಲ್ಲಿ ಜನಿಸಿ ಹೊಳೆಆಲೂರಿನಲ್ಲಿ ಕೆಲಸ ಕಲಿತು ಸುಮಾರು ಮೂವತ್ತೈದು ವರ್ಷಗಳ ಹಿಂದೆ ಕೊಪ್ಪಳದ ಗವಿಮಠದ ಶ್ರೀಗಳಾದ ಶ್ರೀ ಶಿವಶಾಂತವೀರಸ್ವಾಮಿಗಳು ರಥಶಿಲ್ಪಿ ಮಲ್ಲಪ್ಪರನ್ನು ಕೊಪ್ಪಳಕ್ಕೆ ಕರೆಸಿಕೊಂಡು ಗವಿಸಿದ್ಧೇಶ್ವರಮಠದ ರಥ ನಿರ್ಮಾಣ ಮಾಡುವಂತೆ ಸೂಚಿಸಿದರು. ಅಲ್ಲದೆ ರಥ ನಿರ್ಮಾಣಕ್ಕೆ ಬೇಕಾಗುವ ಮರ ಮತ್ತು ಸಲಕರಣೆಗಳನ್ನು ಕಲ್ಪಿಸಿಕೊಟ್ಟರು. ಮಲ್ಲಪ್ಪ ಬಡಿಗೇರ್ ಕುಟುಂಬ ಸಮೇತರಾಗಿ ಬಂದು ಮಠದಲ್ಲಿ ನೆಲೆಸಿ ರಥ ನಿರ್ಮಾಣ ಕಾರ್ಯವನ್ನು ಯಶಸ್ವಿಯಾಗಿ ಮುಗಿಸಿದರು. ರಥ ನಿರ್ಮಾಣ ಕಾರ್ಯ ಮುಗಿದ ಮೇಲೆ ಶ್ರೀಗಳ ಹತ್ತಿರ ಹೋಗಿ ಆಶೀರ್ವಾದ ಪಡೆದು ಮರಳಿ ತಮ್ಮ ಊರಿಗೆ ಹೋಗಲು ನಿರ್ಧರಿಸಿದ್ದರು. ಆದರೆ ಶ್ರೀಗಳ ನಿರ್ಧಾರವೇ ಬೇರೆಯಾಗಿತ್ತು. ರಥ ಶಿಲ್ಪಿ ಮಲ್ಲಪ್ಪನವರಿಗೆ ಶ್ರೀಗಳು ನೀನು ಕೊಪ್ಪಳದಲ್ಲಿಯೇ ವಾಸವಾಗಿರುವರು. ನಮ್ಮ ಮಠದ ಹೊಲಗಳು ಬಹಳ ಇವೆ ಅವುಗಳಲ್ಲಿ ನಿನಗೆ ಯಾವುದು ಬೇಕು ಸುತ್ತಾಡಿ ನೋಡಿಕೊಂಡು ಬಂದು ಹೇಳು. ಆ ಹೊಲವನ್ನು ನಿನಗೆ ಕೊಡುತ್ತೇನೆ. ಅಲ್ಲಿಯೇ ಮನೆ ಕಟ್ಟಿಕೊಂಡು ರಥಶಿಲ್ಪದ ಕಾರ್ಯಾಗಾರವನ್ನು ಮಾಡಿಕೊಳ್ಳುವಂತೆ ನೀನು ನಿಮ್ಮ ಊರಿಗೆ ಹೊಗುವುದಾದರು ಏಕೆ? ಇಲ್ಲಿಯೇ ನಿನಗೆ ಆನೇಕ ರಥಗಳ ನಿರ್ಮಾಣ ಕೆಲಸಗಳು ಬರುತ್ತವೆ ಎಂದು ಹೇಳಿದರು. ಆದರೆ ಮಠದ ಭೂಮಿಯನ್ನು ಉಚಿತವಾಗಿ ಸ್ವೀಕರಿಸಲು ಮಲ್ಲಪ್ಪನವರ ಮನಸ್ಸು ಒಪ್ಪಲಿಲ್ಲ. ಕೊನೆಗೆ ಶ್ರೀಗಳ ಮಾತಿನಂತೆ ಕೊಪ್ಪಳದಲ್ಲಿ ಬಾಡಿಗೆ ಮನೆಯಲ್ಲಿ ಇದ್ದು ರಥಶಿಲ್ಪ ಕಾರ್ಯವನ್ನು ಮುಂದುವರಿಸಿದ್ದರು. ಹೀಗೆ ಒಂದು ದಿನ ಮಲ್ಲಪ್ಪನವರು ಶ್ರೀಗಳ ದರ್ಶನಕ್ಕೆ ಹೋದಾಗ ಇವರ ಪ್ರಾಮಾಣಿಕತೆಯನ್ನು ಕಂಡು ನೀನು ಬಾಡಿಗೆ ಮನೆಯಲ್ಲಿ ಏಕಿಯಿರುವೆ ಒಂದು ನಿವೇಶನವನ್ನು ತೆಗೆದುಕೊಂಡು ಮನೆಯನ್ನು ಕಟ್ಟಿಕೋ ಎಂದರು. ಆದರೆ ಮಲ್ಲಪ್ಪನವರು ನಿವೇಶನವನ್ನು ಕೇಳಿದ್ದೇನೆ. ಲಕ್ಷಗಟ್ಟಲೆ ಹಣ ನನ್ನಲ್ಲಿ ಇಲ್ಲ. ಕೇವಲ ೨೩ ಸಾವಿರ ಇದೆ ಎಂದರು. ಆದರೆ ಶ್ರೀಗಳು ಆ ಹಣವನ್ನು ನನಗೆ ಕೊಡು ಎಂದು ಹೇಳಿ ಉಳಿದ ಹಣವನ್ನು ಹಾಕಿ ಶ್ರೀಗಳೇ ಒಂದು ನಿವೇಶವನ್ನು ಮಲ್ಲಪ್ಪನವರಿಗೆ ಖರೀದಿಸಿಕೊಟ್ಟರು. ಶ್ರೀಗಳ ಆಶೀರ್ವಾದದಿಂದ ಮಲ್ಲಪ್ಪ ಕೊಪ್ಪಳದಲ್ಲಿ ಸ್ವಂತ ಮನೆಯನ್ನು ಕಟ್ಟಿ ಮನೆಯ ಉದ್ಘಾಟನೆಗೆ ಪೂಜ್ಯರನ್ನು ಆಶೀರ್ವಾದಿಸಲು ಕರೆದರು. ಶ್ರೀ ಶಾಂತವೀರ ಪೂಜ್ಯರ ಆಶೀರ್ವಾದದಿಂದ ನೂರಾರು ರಥಗಳನ್ನು ನಿರ್ಮಿಸಿ ಗುರುಗಳ ಪ್ರೀತಿಗೆ ಪಾತ್ರರಾಗಿ ಕೊಪ್ಪಳ ಜಿಲ್ಲೆಯಲ್ಲಿ ಅಲ್ಲದೆ ಹೊರ ರಾಜ್ಯಗಳಲ್ಲಿ ರಥಗಳ ನಿರ್ಮಾಣ ಮಾಡಿ ಖ್ಯಾತ ರಥಶಿಲ್ಪಿ ಎನಿಸಿಕೊಂಡಿದ್ದಾರೆ.

ಮಲ್ಲಪ್ಪನವರು ಪ್ರಭಾಕರ, ನಾಗರಾಜ, ಮಗಳು ಸುನಂದ ಈ ಮೂವರು ಮಕ್ಕಳ ವಿವಾಹ ವನ್ನು ಮಾಡಿದ್ದಾರೆ. ಇಬ್ಬರು ಗಂಡುಮಕ್ಕಳು ರಥಶಿಲ್ಪವನ್ನು ಮಾಡುತ್ತಿದ್ದಾರೆ. ರಥದ ರೇಖಾಚಿತ್ರ ಗಳನ್ನು, ಅದರಲ್ಲಿ ಬರುವ ಮೂರ್ತಿ ರೇಖಾಚಿತ್ರಗಳನ್ನು ಗದುಗಿನ ವಿಜಯಕಲಾಮಂದಿರ

ಉಪನ್ಯಾಸಕರಾದ ವಿ.ವೈ. ಬಡಿಗೇರ್ ಅವರು ರಚಿಸಿಕೊಟ್ಟಿದ್ದಾರೆ. ನಂತರ ತಮ್ಮ ಮಕ್ಕಳು ತಾವು ಕೂಡ ರೇಖಾಚಿತ್ರಗಳನ್ನು ಸ್ವತಃ ನಿರ್ಮಿಸಿಕೊಂಡು ರಥದ ಮೂರ್ತಿಗಳನ್ನು ರಚಿಸಿದ್ದಾರೆ. ರಥ ನಿರ್ಮಾಣದಲ್ಲಿ ಬರುವ ಮೂರ್ತಿಗಳ ಚಿತ್ರ ಬೇರೆ ಬೇರೆ ಆಗಿರುತ್ತವೆ. ರಾಮ, ಆಂಜನೇಯ ರಥಗಳಿಗೆ ರಾಮಾಯಣದ ದೃಶ್ಯಗಳನ್ನು ಚಿತ್ರಿಸಿ ರಥದ ಸುತ್ತಲೂ ಕೆತ್ತಲಾಗುತ್ತದೆ. ಬೃಹದಾಕಾರದ ರಥವಾಗಿದ್ದರೆ, ವಿಷ್ಣುವಿನ ದಶಾವತಾರದ ಚಿತ್ರಗಳು ಹಾಗೂ ಭಾಗವತ್ತದ ಕಥೆ ಚಿತ್ರಗಳು, ವಿಷ್ಣು ಧರ್ಮೋತ್ತರ ಪುರಾಣ, ಗರುಡ ಪುರಾಣ, ಮತ್ಸ್ಯ ಪುರಾಣ, ಕಥಾರೂಪಕಗಳನ್ನು ಆಧರಿಸಿ ರಥದಲ್ಲಿ ಕೆತ್ತನೆ ಮಾಡಲಾಗುತ್ತದೆ. ಶೈವದೇವರ ರಥಗಳಲ್ಲಿ ಶಿವನಿಗೆ ಸಂಬಂಧಿಸಿದ ಅವತಾರಗಳು ದ್ವಾದಶ–ಜ್ಯೋತಿರ್ಲಿಂಗಗಳು, ಶಿವಭಕ್ತರ ಕಥೆಗಳನ್ನು ಆಧರಿಸಿ ಮಾರ್ಕಂಡೇಯ ಪುರಾಣ, ಶೈವ ಪುರಾಣ, ಮುಂತಾದವುಗಳಲ್ಲಿನ ಚಿತ್ರಗಳನ್ನು ರಥದಲ್ಲಿ ಕೆತ್ತಲಾಗುತ್ತದೆ. ರಥ ನಿರ್ಮಾಣವಾದ ನಂತರ ಅದಕ್ಕೆ ಪಾಲಿಶ್ ಹಾಕುವ ಕೆಲಸವನ್ನು ಇವರು ಮಾಡುತ್ತಾರೆ.

**ರಥ ನಿರ್ಮಾಣದಲ್ಲಿ ಬಳಸುವ ಮರ:** ಮತ್ತಿ ಮರ, ಹೊನ್ನೆ ಮರ, ತೇಗದ ಮರ, ಬೇವಿನ ಮರಗಳು ಕೂಡ ಬಳಸುತ್ತಾರೆ. ಮಲ್ಲಪ್ಪನವರು ರಥಶಿಲ್ಪಕ್ಕೆ ಬೇಕಾಗುವ ಮರಗಳನ್ನು ದಾಂಡೇಲಿ, ಹಳ್ನಾವರ, ಮುಂಡಗೋಡ, ಕುರವತ್ತಿ, ಮುಂತಾಂದ ಮಲೆನಾಡ ಮರಗಳನ್ನು ತೆಗೆದುಕೊಂಡು ಬಂದು ರಥ ನಿರ್ಮಾಣ ಕೆಲಸಕ್ಕೆ ಬಳಸುತ್ತಾರೆ.

**ಮಲ್ಲಪ್ಪನವರು ನಿರ್ಮಿಸಿದ ರಥಗಳು**

೧. ಶ್ರೀಶೈಲಮಲ್ಲಿಕಾರ್ಜುನ ರಥ

೨. ಹರ್ತೀ ಬಸವೇಶ್ವರ ರಥ

೩. ಹಾಲಕೇರಿ ಅನ್ನದಾನೇಶ್ವರ ರಥ

೪. ಅಣ್ಣಿಗೇರಿ ಅಮೃತೇಶ್ವರ ರಥ

೫. ಕೊಪ್ಪಳದ ಗವಿಸಿದ್ಧೇಶ್ವರ ರಥ, ೫೧ ಅಡಿ ಎತ್ತರ

೬. ಬೇಳೂರು ಬೆಟ್ಟದ ಲಿಂಗೇಶ್ವರ ರಥ, ೨೫ ಅಡಿ ಎತ್ತರ

೭. ಚಿಕ್ಕೇನಕೊಪ್ಪ ಬೇಳಗನೂರ್ ಚನ್ನವೀರಶರಣರ ರಥ, ೨೫ ಅಡಿ ಎತ್ತರ

೮. ಹುಲಿಗಿ–ಹುಲಿಗೇಮ್ಮದೇವಿಯ ರಥ, ೩೧ ಅಡಿ ಎತ್ತರ

೯. ಬೈಲುವದ್ದಿಗೇರಿಯ ಸುಡುಗಾಡಪ್ಪತಾತನ ರಥ, ೩೧ ಅಡಿ ಎತ್ತರ

೧೦. ಗಾದಿಗನೂರು ಗಾದಿಲಿಂಗೇಶ್ವರ ರಥ, ೩೧ ಅಡ ಎತ್ತರ

೧೧. ಹಂಪಿ ವಿರುಪಾಕ್ಷೇಶ್ವರನ ರಥ(ಶಂಕ್ರಪ್ಪನವರ ಸಂಗಡ ಮಾಡಿದ್ದರು)

೧೨. ಬಳ್ಳಾರಿಯ ಅಲ್ಲೀಪುರ ಮಹಾದೇವತಾತನವರ ರಥ, ೩೧ ಅಡಿ ಎತ್ತರ

೧೩. ಕಾಕುಬಾಳು ಶಿವಲಿಂಗೇಶ್ವರ ರಥ, ೩೧ ಅಡಿ ಎತ್ತರ

# ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು



**ಮರಶಿಲ್ಪಿ ಶ್ರೀ ನಾರಾಯಣಪ್ಪ**
(ಕೊಪ್ಪಳ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಕಲಾಕೃತಿ ನಿರ್ಮಿಸುವಲ್ಲಿ ತೊಡಗಿರುವ ಕಲಾವಿದರು

ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ಗೌರವ ಪ್ರಶಸ್ತಿ ಸಮಾರಂಭ - ೨೦೦೩



**ರಥಶಿಲ್ಪಿ ಶ್ರೀ ಮಲ್ಲಪ್ಪ ಬಡಿಗೇರ**
(ಕೊಪ್ಪಳ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಕಲಾಕೃತಿ ನಿರ್ಮಿಸುವಲ್ಲಿ ತೊಡಗಿರುವ ಕಲಾವಿದರು

೧೪. ಉಜ್ಜಲಗುಂಡಿ ವೀರಭದ್ರದೇವರ ರಥ, ೩೧ ಅಡಿ ಎತ್ತರ

೧೫. ಆಂಧ್ರದ ಉರವಕೊಂಡ ಕರಿಬಸವೇಶ್ವರ ರಥ, ೬೧ ಅಡಿ ಎತ್ತರ

೧೬. ಆಂಧ್ರದ ಎಮ್ಮಿಗನೂರು ತಾಲೂಕು, ಕಡಿಮೇಟ್ಲಾ ರಥ, ೪೫ ಅಡಿ ಎತ್ತರ

೧೭. ಆಂಧ್ರದ ಆದೋನಿ ತಾಲೂಕು, ಎಂ.ಗೋನಾಳ್ ರಥ, ೨೫ ಅಡಿ ಎತ್ತರ

ಹೀಗೆ ಮಲ್ಲಪ್ಪನವರು ಹಲವಾರು ರಥಗಳನ್ನು ಮಾಡಿದ ಅನುಭವಿಸಿದ್ಧಿ ರಥಶಿಲ್ಪಿಗಳಾಗಿದ್ದಾರೆ. ಇವರು ರಥ ಮಾಡಿ ಮುಗಿಸಿದ ಮೇಲೆ ರಥ ಪೂಜೆಯಲ್ಲಿ ಇವರಿಗೆ ಉಡುಗೊರೆಯಾಗಿ ಬಟ್ಟೆ ಮತ್ತು ಒಂದು ತೊಲಿ ಬಂಗಾರದ ಉಂಗುರ, ಕೆಲವೊಂದು ಸಾರಿ ಬಂಗಾರದ ಚೈನುಗಳನ್ನು ಕೊಟ್ಟು ಗೌರವಿಸಿದ್ದಾರೆ ಎಂದು ಮಲ್ಲಪ್ಪನವರು ನೆನಪಿಸಿಕೊಳುತ್ತಾರೆ. ಅಷ್ಟೇ ಏಕೆ ನನ್ನ ಮೂರು ಮಕ್ಕಳ ವಿವಾಹವನ್ನು ಮಾಡಿದ್ದರೂ ಒಂದು ತೊಲೆ ಬಂಗಾರ ಕೂಡ ಖರೀದಿ ಮಾಡಿರುವುದಿಲ್ಲ ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಅಂದರೆ ರಥಶಿಲ್ಪಿ ಮಲ್ಲಪ್ಪನವರ ಮೇಲೆ ಸಮಾಜ ಮಠಮಾನ್ಯಗಳು ಗುರು – ಹಿರಿಯರು ಸಾಕಷ್ಟು ಪ್ರೀತಿ ಆದಾರಗಳನ್ನು ಕೊಟ್ಟಿದ್ದಾರೆ ಎಂಬುದಕ್ಕೆ ಮಲ್ಲಪ್ಪನವರ ಜೀವನವೇ ಸಾಕ್ಷಿ.

*"ರಾಜ ರಾಜ್ಯಪೂಜ್ಯತೆ,*
*ವಿಧ್ವಾನ್ ಸರ್ವಪೂಜ್ಯತೆ,"*

– ಭಗವದ್‌ಗೀತೆ

ಎಂಬ ನುಡಿಯಂತೆ ಕಲಾವಿದ ತನ್ನ ಕಲೆ ಯನ್ನು ಪರಿಪೂರ್ಣವಾಗಿ ಕಲಿತು ತನ್ನನ್ನೇ ಆದಕ್ಕೆ ಸಮರ್ಪಿಸಿಕೊಂಡರೆ ಕಲೆಯು ಯಾವತ್ತೂ ಆತನನ್ನು ಕೈಬಿಡಲಾರದು.

**೩.೬. ಬಳ್ಳಾರಿ ಜಿಲ್ಲೆಯ ಶಿಲ್ಪಕಲಾವಿದರು**

೩.೬.೧. ಶಿಲ್ಪಯೋಗಿ ಜಿ.ಬಿ. ಹಂಸನಂದಾಚಾರ್ಯ

೩.೬.೨. ಲೋಹಶಿಲ್ಪಿ ಶಂಕರಾಚಾರ್ಯ

**೩.೬.೧. ಶಿಲ್ಪಯೋಗಿ ಜಿ.ಬಿ. ಹಂಸಾನಂದಾಚಾರ್ಯ**

ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲೂಕಿನ ಇಟ್ಟಗಿ ಗ್ರಾಮದಲ್ಲಿ ೧೦–೧೨–೧೯೪೪ನೇ ಇಸ್ವಿಯಲ್ಲಿ ಇಟ್ಟಗಿ ಗ್ರಾಮದ ಧಾರ್ಮಿಕ ಸಂಪ್ರದಾಯಸ್ತರು ಮತ್ತು ಕಲಾ ಸಂಪ್ರದಾಯಸ್ಥರು ಆದಂತಹ ವಿರುಪಾಕ್ಷಾಚಾರ್ಯ ಮತ್ತು ಸಿದ್ದಮ್ಮ ದಂಪತಿಗಳ ಕುಟುಂಬದಲ್ಲಿ ಇವರ ಜನನವಾಯಿತು. ಇವರ ತಂದೆಯ ತಂದೆ ಅಂದರೆ ಅಜ್ಜನವರಾದಂತಹ ತಿರುಕಪ್ಪಾಚಾರ್ಯ ಮಹಾನ್ ಆಧ್ಯಾತ್ಮಿಕ ಜೀವಿಗಳಾಗಿದ್ದರು. ಅವರ ಜ್ಞಾನನಿಷ್ಠೆ, ಕಲಾವಂತಿಕೆ, ಅವರ ಜೀವನಶೈಲಿ, ಎಲ್ಲವೂ ಹಂಸಾನಂದಾ ಚಾರ್ಯರ ಬಾಲ್ಯಜೀವನದ ಮೇಲೆ ಗಾಢವಾದ ಪ್ರಭಾವ ಬೀರಿದ್ದು, ಇಂದಿನ ಇವರ ಕಲಾಜೀವನಕ್ಕೆ ನಾಂದಿಯಾಗಿದೆ. ಅಲ್ಲದೆ ತಂದೆಯಾದಂತಹ ವಿರುಪಾಕ್ಷಾಚಾರ್ಯರು ಕೂಡ ಉತ್ತಮ ಕಲಾವಿದ ರಾಗಿದ್ದು, ವಂಶಪಾರಂಪರ್ಯವಾಗಿ ಬೆಳೆಸಿಕೊಂಡು ಬಂದಂತಹ ಕಲೆಯನ್ನು ತಮ್ಮ ಮಕ್ಕಳಾದಂತಹ

ಜಿ. ಬಿ. ಹಂಸಾನಂದಾಚಾರ್ಯ ಮತ್ತು ಜಿ.ಬಿ. ಜಿತೇಂದ್ರಚಾರ್ಯ ಮತ್ತು ಜಿ.ಬಿ. ಮೌನೇಶಾಚಾರ್ಯ ಇವರಿಗೆ ಮುಂದುವರಿಸಿಕೊಂಡು ಹೋಗಲು ಅಪಾರವಾದ ಧಾರ್ಮಿಕ ನಂಬಿಕೆಯನ್ನು ಮತ್ತು ಅನನ್ಯವಾದ ಕಲೆಯ ಆಸ್ತಿಯನ್ನು ಬಿಟ್ಟು ಹೋಗಿದ್ದಾರೆ. ಇಂತಹ ಒಂದು ಸಂಪ್ರದಾಯ ಮತ್ತು ಧಾರ್ಮಿಕ ಹಿನ್ನೆಲೆಯಿಂದ ಬೆಳೆದು ಇಂದಿನವರೆಗೂ ತಮ್ಮ ಕಲಾಜೀವನವನ್ನು ಮುಂದುವರಿಸಿಕೊಂಡು ರಾಜ್ಯಾದ್ಯಂತ ತಮ್ಮ ಕಲಾಸಾಧನೆಯಿಂದ ಪ್ರಸಿದ್ಧಿ ಪಡೆದಿರುವ ಸಾತ್ವಿಕ ಶಿಲ್ಪಿಗಳು ಶ್ರೀ ಹಂಸಾನಂದಾಚಾರ್ಯರು.

**ಶಿಲ್ಪಿ ಹಂಸಾನಂದಾಚಾರ್ಯರ ಬಾಲ್ಯಜೀವನ:** ಇವರು ಚಿಕ್ಕಂದಿನಲ್ಲಿದ್ದಾಗ ಅಜ್ಜನ ಮನೆಯಲ್ಲಿ ಬೆಳೆದರು. ಅಜ್ಜ ತೀರಿಹೋದ ನಂತರ ಹೂವಿನಹಡಗಲಿಗೆ ಬಂದು ಅವರ ದೊಡ್ಡಮ್ಮನ ಆಶ್ರಯದಲ್ಲಿ ತಮ್ಮ ಬಾಲ್ಯದ ವಿದ್ಯಾಭ್ಯಾಸ ಮಾಡತೊಡಗಿದರು. ಒಂದು, ಎರಡು, ಮೂರನೇ ತರಗತಿಗಳಲ್ಲಿ ಏನೂ ಕಲಿಯಲು ಆಗಲಿಲ್ಲ. ಒಂದೇ ತರಗತಿಯಲ್ಲಿ ಹಿಂದುಳಿದಿದ್ದಂತಹ ಇವರನ್ನು ಶಿಕ್ಷಕರೊಬ್ಬರು ಗುರ್ತಿಸಿ ಮೂರು, ನಾಲ್ಕನೇ ತರಗತಿಗಳಿಗೆ ಮುಂದೂಡುತ್ತಾ ಬಂದರು. ಐದನೇ ತರಗತಿಗೆ ಸೇರಬೇಕು ಅನ್ನುವಷ್ಟರಲ್ಲಿ ಅಲ್ಲಿಯ ಚಿತ್ರಕಲಾ ಶಿಕ್ಷಕರು ಒಬ್ಬರು ಇವರ ಜಾಣ್ಮೆಯನ್ನು ಗುರುತಿಸಿ ಏಳನೇ ತರಗತಿಗೆ ಸೇರಿಸಿದರು. ಇವರು ಏಳನೇ ತರಗತಿಯನ್ನು ತೇರ್ಗಡೆಯನ್ನು ಹೊಂದಿದರೆ ಚಿತ್ರಕಲಾ ಶಿಕ್ಷಕರಾಗಬೇಕೆಂಬ ಅದಮ್ಯ ಬಯಕೆಯನ್ನು ಹೊಂದಿದ್ದರು. ಆದರೆ ತೀವ್ರ ಅನಾರೋಗ್ಯದ ಕಾರಣದಿಂದಾಗಿ ಏಳನೇ ತರಗತಿಯನ್ನು ತೇರ್ಗಡೆ ಹೊಂದಲಾಗಲಿಲ್ಲ. ಹೀಗೆ ಅವರ ವಿದ್ಯಾಭ್ಯಾಸವು ಕುಂಠಿತವಾಗಿ ಸಮಾಪ್ತಿಯಾಯಿತು. ಹೀಗಾಗಿ ಬಾಲ್ಯದಿಂದಲೇ ಅವರ ಜೀವನ ಸರಿಯಾದ ನೆಲೆ ಕಾಣದೆ ಅತ್ಯಂತ ಶ್ರಮದಾಯಕವಾಗಿ ಅವರ ಕಲಾಜೀವನ ಆರಂಭವಾಯಿತು. ಬಾಲ್ಯದಿಂದಲೇ ತಂದೆಯನ್ನೇ ಗುರುವನ್ನಾಗಿಸಿಕೊಂಡು ಶಿಲ್ಪ ಕಾರ್ಯವನ್ನು ಅಭ್ಯಾಸ ಮಾಡುತ್ತಾ ತಂದೆಯವರ ಜೊತೆಗೆ ಕೆಲಸ ಮಾಡುತ್ತಾ ಶಾಲೆಯ, ಓದು, ವಿದ್ಯೆಗಳನ್ನೆಲ್ಲ ತೊರೆದು ಗುರುಸಂಪ್ರದಾಯದಿಂದ ಬಂದಂತಹ ತಮ್ಮ ಕಲಾನೈಪುಣ್ಯತೆಯಿಂದ ಶಿಲ್ಪಕಲೆಯೊಳಗೆ ಆಳವಾಗಿ ಇಳಿಯುತ್ತಾ ಅದರ ಒಡಗೂಡಿ ತಮ್ಮ ಹಸ್ತ ಕೌಶಲ್ಯವನ್ನು ಪಳಗಿಸಿಕೊಳ್ಳುತ್ತಾ ಬಂದರು.

ಅತ್ಯಂತ ಬಡತನದಿಂದ ಕೂಡಿದ್ದಂತಹ ತಮ್ಮ ಬಾಲ್ಯಜೀವನವನ್ನು ನೆನೆಯುತ್ತಾ ಆಚಾರ್ಯರು ಹೀಗೆ ಹೇಳುತ್ತಾರೆ. ಒಂದು ವೇಳೆ ಇವರು ಒಳ್ಳೆಯ ಶ್ರೀಮಂತ ಕುಟುಂಬದಲ್ಲಿ ಜನಿಸಿದ್ದು, ಎಲ್ಲಾ ಸೌಕರ್ಯಗಳನ್ನು ಹೊಂದಿಕೊಂಡು ಸುಖವಾಗಿ ಜೀವನ ಕಳೆಯುತ್ತಾ ಬಂದಿದ್ದರೆ ಇಂದು ಇಷ್ಟು ಉನ್ನತ ಮಟ್ಟದ ಕಲಾಜ್ಞಾನವನ್ನು ಜೀವನಾನುಭವವನ್ನು ಪಡೆಯಲಾಗುತ್ತಿರಲಿಲ್ಲ. ತಮ್ಮ ಬಾಲ್ಯ ಜೀವನದಲ್ಲಿ ಶಾಲೆಗೆ ಹೋಗುವಾಗ ತಮ್ಮ ಶಾಲೆಯ ಪುಸ್ತಕದ ಜೊತೆಗೆ ದೇವಿಯ ಉಪಾಸನ ಗ್ರಂಥವನ್ನು ಆಕಸ್ಮಿಕವಾಗಿ ತೆಗೆದುಕೊಂಡು ಹೋಗಿದ್ದರು. ಮನೆಯಲ್ಲಿರುವ ಅವರ ತಾಯಿಗೆ ಈ ವಿಷಯ ತಿಳಿದಾಗ ಮಗನನ್ನು ಕರೆದು ಆ ಪುಸ್ತಕದ ಮಹಿಮೆಯನ್ನು ಹೇಗೆ ಸದ್ವಿನಿಯೋಗ ಮಾಡಿಕೊಳ್ಳಬೇಕೆಂದು ತಿಳಿಸುತ್ತಾರೆ.

***"ಪೂಜೆ ಮಾಡಿಯೇ ಓದಬೇಕಿದನ್
ಪೂಜೆಸದಿದನ್ನೋದಬಾರದು
ಪೂಜೆಯೇ ಅಧ್ಯಾಯ ಅಧ್ಯಾಯಗಳ ಭಕ್ತಿಯಲಿ
ಪೂಜಿಸುತ ಓದಿದನು ಆದೊಡೆ ರಾಜನಾಹನು
ದೇವಿದಯದಲಿ ಸೋಜಿಗವೇ ತಾನೇನು ಪರಮೇಶ್ವರಿಯ ಕರುಣಾಗಿ"***

ಎಂದು ಹೀಗೆ ದೇವಿ ಉಪಾಸನೆ ಮಾಡಬೇಕಾದರೆ ಜ್ಞಾನವನ್ನು ಪಡೆಯಬೇಕಾದರೆ, ಶ್ರದ್ಧಾಭಕ್ತಿಯಿಂದ ಪೂಜೆಯನ್ನು ಮಾಡಿದರೆ ಮಾತ್ರ ಸಾಧ್ಯ ಎಂಬುದಾಗಿ ಹೇಳಿದರು. ತಾಯಿಯವರು ಮಾರ್ಗದರ್ಶನ ನೀಡಿದಂತಹ ಪರಿಯನ್ನು ಕಲಾವಿದರಾದಂತಹ ಹಂಸಾನಂದಾಚಾರ್ಯರು ಇಂದಿಗೂ ನೆನೆಯುತ್ತಾ ಅವರ ತಾಯಿಯ ಮಾರ್ಗದರ್ಶನದಂತೆ ಯಾವುದೇ ಕೆಲಸ ಕಾರ್ಯಗಳನ್ನು ಮಾಡಬೇಕಾದರೂ ಸಹ ದಿನದ ಆರಂಭದಲ್ಲಿ ಶ್ರೀ ದೇವಿ ಶಾಂಭವಿಯ ಉಪಾಸನೆ ಇಲ್ಲದೆ ಮುಂದುವರಿಯುವುದಿಲ್ಲ. ಇಂದಿನ ಅವರ ಈ ಉನ್ನತ ಕಲಾಜ್ಞಾನಕ್ಕೆ ಆ ದೇವಿಯ ಅನುಗ್ರಹವೇ ಕಾರಣ ಎಂದು ಹೇಳುತ್ತಾರೆ. ಕಡುಬಡತನದಿಂದ ಕೂಡಿದ್ದಂತಹ ಇವರ ಕುಟುಂಬದಲ್ಲಿ ತಂದೆಯೊಬ್ಬರೆ ದುಡಿದು ಇಡೀ ಅವಿಭಕ್ತ ಕುಟುಂಬವನ್ನು ಸಾಕಿ, ಸಲುಹಿ, ಬಳಲಿ ಬೆಂಡಾಗಿದ್ದಂತಹ ಪರಿಸ್ಥಿತಿಯಲ್ಲಿ ತಂದೆಯವರ ಜೊತೆಗೆ ಎಂಟುವರ್ಷದ ಮಗನಾಗಿದ್ದಾಗಲೆ ತಮ್ಮ ಕಲಾವೃತ್ತಿಯನ್ನು ಆರಂಭಿಸಿಕೊಂಡು ಬಂದಿದ್ದಾರೆ. ಅವರದ್ದು ಬಡಕುಟುಂಬವಾಗಿದ್ದರಿಂದ ಕಷ್ಟಪಟ್ಟು ದುಡಿಯಲೇ ಬೇಕಾದಂತಹ ಪರಿಸ್ಥಿತಿ ಎದುರಾಗಿತ್ತು. ಈಗಿನಂತೆ ಆಗ ಯಂತ್ರೋಪಕರಣಗಳು ಇರಲಿಲ್ಲ, ದೊಡ್ಡ ಮರಗಳನ್ನು ತೆಗೆದುಕೊಂಡು ತುಂಡು ತುಂಡಾಗಿ ಕತ್ತರಿಸಿ ಕೊರೆದು ತಮಗೆ ಬೇಕಾದ ಆಕಾರಕ್ಕೆ ಸಿದ್ಧಪಡಿಸಿ ಕೊಳ್ಳುತ್ತಿದ್ದರು. ಅವರಿಗೆ ಬೇಕಾದಂತಹ ಉಪಕರಣಗಳನ್ನು ತಾವೆ ಸ್ವತಃ ದೊಡ್ಡ ದೊಡ್ಡ ಮರ ಮುಟ್ಟುಗಳಿಂದ ತಯಾರಿಸಿಕೊಳ್ಳಬೇಕಾಗಿತ್ತು. ಹೀಗೆ ಅವರು ಬೆಳೆಯುತ್ತಾ ಬಡಗಿತನ, ಕಮ್ಮಾರಿಕೆ, ಕಂಚು, ಸ್ವರ್ಣಗಾರಿಕೆ ಮತ್ತು ಶಿಲ್ಪಿಕಾರ್ಯ ಹೀಗೆ ಪಂಚಕರ್ಮಗಳಲ್ಲಿಯೂ ತಮ್ಮನ್ನು ತೊಡಗಿಸಿ ಕೊಂಡು ತಮ್ಮ ಹಸ್ತ ಕೌಶಲ್ಯವನ್ನು ಬೆಳೆಸಿಕೊಳ್ಳುತ್ತಾ ತಮ್ಮ ಮುಂದಿನ ಕಲಾಜೀವನದ ಅಸ್ತಿತ್ವಕ್ಕೆ ಬುನಾದಿಯನ್ನು ಹಾಕಿಕೊಳ್ಳುತ್ತಾ ಸಾಗಿಬಂದರು.

**ಕುಟುಂಬ ಜೀವನ:** ಕಲಾವೃತ್ತಿ ಪರರಾದಂತಹ ಇವರಿಗೆ ಕೊಟ್ಟೂರಿನ ಹತ್ತಿರದ ಗ್ರಾಮವಾದ "ಧೂಪದಹಳ್ಳಿ"ಯಲ್ಲಿ ಚಂದ್ರಮತಿ ಎನ್ನುವವರೊಡನೆ ಇವರ ವಿವಾಹಜೀವನ ಆರಂಭಗೊಂಡಿತು. ಸುಗುಣೆಯು, ಸಾತ್ವಿಕಳೂ ಆದಂತಹ ಪತ್ನಿಯೊಡನೆ ಇವರ ವಿವಾಹಜೀವನವು ತೃಪ್ತಿಕರವಾಗಿತ್ತು. ನಂತರ ಜೀವನದಲ್ಲಿ ಸಂಸಾರದ ಭಾರವನ್ನು ನೀಗಿಸುತ್ತಾ ತಮ್ಮ ಕಲಾ ಕಾರ್ಯವನ್ನು ಸ್ವಲ್ಪವೂ ಎಡೆಬಿಡದಂತೆ ಮುಂದುವರಿಸಿಕೊಂಡಿದ್ದರು. ನಂತರದ ಜೀವನದಲ್ಲಿ ಕುಟುಂಬವು ದೊಡ್ಡದಾಗುತ್ತಾ ತಮ್ಮ ಮಕ್ಕಳೆಲ್ಲರಿಗೂ ಕೇವಲ ತಮ್ಮ ಸಂಪ್ರದಾಯಕ್ಕೆ ಬದ್ಧರನ್ನಾಗಿಸಿಕೊಳ್ಳದೆ ಅವರಿಗೆ ಉತ್ತಮ ವಿದ್ಯಾಭ್ಯಾಸವನ್ನು ನೀಡಿದರು. ಹಂಸಾನಂದಾಚಾರ್ಯರ ಮಕ್ಕಳು ಎಲ್ಲರೂ ಆನೇಕ ವಿದ್ಯಾಭ್ಯಾಸ ಮಾಡಿಕೊಂಡಿದ್ದರೂ ತಂದೆಯ ಸಾಂಪ್ರದಾಯಿಕ ಕಲಾವೃತ್ತಿಯನ್ನು ಮುಂದುವರಿಸಿಕೊಂಡು ಬರುವಲ್ಲಿ

ಸಹಾಯ ಮತ್ತು ಪ್ರೋತ್ಸಾಹಕ್ಕೆ ಬಲವಾಗಿ ನಿಂತಿದ್ದಾರೆ. ತಂದೆಯವರ ಯಾವುದೇ ಶಿಲ್ಪಕಲಾ ಕಾರ್ಯವಿದ್ದರೂ ಅವರ ಸಹೋದರರು ಮತ್ತು ಮಕ್ಕಳು ಸೇರಿದಂತೆ ಎಲ್ಲರೂ ಕೂಡಿ ರಥ ನಿರ್ಮಾಣದಂತಹ ಅನೇಕ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸುತ್ತಾ ಬಂದಿದ್ದಾರೆ. ತಾವು ತಮ್ಮ ತಂದೆಯವರ ಕಲಾಸಂಪ್ರದಾಯವನ್ನು ಕಲಾಸಂಸ್ಕೃತಿಯನ್ನು ಉಳಿಸಿಕೊಂಡು ಹೇಗೆ ಬೆಳೆಸಿಕೊಂಡು ಬಂದರೋ ಹಾಗೆಯೇ ತಮ್ಮ ಮಕ್ಕಳೂ ಸಹ ಇದೇ ಸಂಸ್ಕೃತಿಯನ್ನು ಇನ್ನೂ ಉತ್ತಮವಾಗಿ ಮುಂದುವರಿಸಿಕೊಂಡು ಹೋಗುತ್ತಾರೆ ಎಂಬ ಆಶೆಯ ಮತ್ತು ದೃಢವಿಶ್ವಾಸವನ್ನು ಕಲಾವಿದರಾದಂತಹ ಶ್ರೀ ಜಿ.ಬಿ. ಹಂಸಾನಂದಾಚಾರ್ಯರು ವ್ಯಕ್ತಪಡಿಸುತ್ತಾರೆ.

ಇವರ ಮನೆಗೆ ಯಾರಾದರೂ ದೂರವಾಣಿ ಕರೆ ಮಾಡಿದರೆ ಹಂಸಾನಂದಾಚಾರ್ಯರು ಕರೆ ಬಂದವರ ಜೊತೆ ಮಾತನಾಡುವಾಗ "ಓಂ ನಮಃ ಶಿವಾಯ" "ಓಂ ನಮಃ ಶಿವಾಯ" ಎಂಬ ಮಂತ್ರವನ್ನು ಉಚ್ಚಾರ ಮಾಡುವುದರ ಮೂಲಕ ಮುಂದಿನ ಮಾತಿನ ಸಂಭಾಷಣೆಗೆ ತೊಡಗುತ್ತಾರೆ. ಇದು ಅತಿಶಯೋಕ್ತಿಯೇನಲ್ಲ. ಈ ಒಂದು ಆಚಾರ ವಿಚಾರ, ಸತ್ಸಂಗ, ಸದ್ವಿಚಾರದ ಸಂಸ್ಕಾರ, ಕೇಳುಗರ ಮೇಲೆ ಪ್ರಭಾವ ಬೀರುತ್ತದೆ. ತನ್ಮೂಲಕ ಈ ರೀತಿಯ ಸಂಸ್ಕಾರ ರೂಪ ಆದರ್ಶಮಯವಾಗಿದೆ. ಇಂತಹ ಆನೇಕ ವಿಚಾರಗಳಲ್ಲಿ ಸರಳವೂ ನೈಜತೆಯಿಂದಲೂ ಕೂಡಿರುವ ಇವರ ಕಲಾ ನೈತಿಕತೆಯು ಕಲಾವಿದರಿಗೆ ಆದರ್ಶಪ್ರಾಯವಾಗಿದೆ ಎಂದೆನಿಸಿದರೆ ತಪ್ಪಾಗಲಾರದು. ಇವರ ಪತ್ನಿಯವರಾದಂತಹ ಶ್ರೀಮತಿ ಚಂದ್ರಮ್ಮನವರು ಕೂಡ ಪತಿಗೆ ತಕ್ಕ ಸತಿ ಎಂಬತೆ ಮೃದು ಮತ್ತು ಸರಳವಾದ ವಾಕ್‌ಚಾತುರ್ಯವುಳ್ಳವರಾಗಿದ್ದಾರೆ. ಅಲ್ಲದೆ ಇವರು ಬಳ್ಳಾರಿ ಜಿಲ್ಲಾ ವಿಶ್ವಕರ್ಮಸಂಘದ ಉಪಾಧ್ಯಕ್ಷರು ಆಗಿದ್ದುಕೊಂಡು ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ. ಹೀಗೆ ಸಮಯ ಕಳೆದಂತೆಲ್ಲಾ ದಿನದಿಂದ ದಿನಕ್ಕೆ ಇವರ ಜೀವನಮಟ್ಟವು ಸುಧಾರಿಸುತ್ತಾ ಹಂತ ಹಂತವಾಗಿ ಸಾಗುತ್ತಾ ಬಂದಿದೆ.

**ನಾಟಕ ಕಲೆ:** ಹಂಸಾನಂದಾಚಾರ್ಯರು ಕೇವಲ ಶಿಲ್ಪಿ ಮಾತ್ರವಲ್ಲದೆ ಒಬ್ಬ ನಟರೂ ಆಗಿದ್ದಾರೆ. ಶಿವಶರಣೆ ಹೇಮರೆಡ್ಡಿ ಮಲ್ಲಮ್ಮ ನಾಟಕದಲ್ಲಿ ಬರಮರೆಡ್ಡಿ ಪಾತ್ರ ಮಾಡಿದ್ದಾರೆ. ಶ್ರೀ ಗೋಣಿಬಸವೇಶ್ವರ ನಾಟಕ ಹೀಗೆ ಹಲವಾರು ನಾಟಕಗಳಲ್ಲಿ ಪಾತ್ರವನ್ನು ಮಾಡುವ ಮೂಲಕ ಒಬ್ಬ ಉತ್ತಮ ನಟರಾಗಿಯೂ ಸಮಾಜದಲ್ಲಿ ಗುರುತಿಸಿಕೊಂಡಿದ್ದಾರೆ.

ಹಂಸಾನಂದಾಚಾರ್ಯರು ಪಂಚವೃತ್ತಿಗಳಲ್ಲದೆ, ಸಂಗೀತದ ಉಪಕರಣಗಳಾದ ಹಾರ್ಮೋನಿಯಂ, ಪಿಟೀಲು ಇತ್ಯಾದಿ ವಾದ್ಯಗಳನ್ನು ಹೊಸದಾಗಿ ತಯಾರಿಸಿಕೊಡುವುದು ಮತ್ತು ಅವುಗಳನ್ನು ರಿಪೇರಿ ಮಾಡುವುದರಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸ್ವತಃ ಹಾಡುಗಳನ್ನು ಹಾಡುವುದು, ವಾದ್ಯಗಳನ್ನು ನುಡಿಸುವುದು ಇವರ ಹವ್ಯಾಸವಾಗಿದೆ. ಅಷ್ಟೇ ಅಲ್ಲದೆ ಇವರು ಪ್ರತಿ ವರ್ಷ ಮಹಾನವಮಿಯಂದು ದೇವಿ ಗುಡಿಯಲ್ಲಿ ಪುರಾಣವನ್ನು ಓದಿ ಅದರ ಅರ್ಥವಿವರಣೆಯನ್ನು ಜನರಿಗೆ ಬಿಡಿಸಿ ಹೇಳುತ್ತಾರೆ. ಮನೆಯಲ್ಲಿಯೂ ಕೂಡ ತಮ್ಮ ದೈವಾರಾಧನೆ ಪೂಜೆಯಲ್ಲಿ ದೇವಿ ಪುರಾಣವನ್ನು ಉಪಾಸನೆ ಮಾಡುತ್ತಾರೆ. ಇವರು ಜ್ಯೋತಿಷ ಶಾಸ್ತ್ರ, ವಾಸ್ತುಶಾಸ್ತ್ರ ವಿದ್ಯೆಗಳಲ್ಲಿಯೂ

ಕೂಡಾ ನೈಪುಣ್ಯತೆಯನ್ನು ಹೊಂದಿದ್ದಾರೆ. ಇವರ ಅಜ್ಜನವರಾದ ವೀರಭದ್ರಚಾರಿ ಎಂಬ ಕಲಾವಿದರೊಬ್ಬರು ಹೂವಿನಹಡಗಲಿಯ "ಸೋಗಿ"ಯ ರಥ ನಿರ್ಮಾಣ ಕಾರ್ಯದಲ್ಲಿ ಬಾಲಕನಾಗಿದ್ದಂತಹ ಹಂಸಾನಂದಾಚಾರ್ಯರುನ್ನು ತಮ್ಮ ಜೊತೆ ಸೇರಿಸಿಕೊಂಡು ಅವರಿಗೆ ಈ ರಥ ನಿರ್ಮಾಣದ ಕಾರ್ಯದಲ್ಲಿ ಪಳಗುವಂತೆ ಮಾಡಿದರು. ಇವರ ಮಾರ್ಗದರ್ಶನದಲ್ಲಿ ತುಂಬಾ ಚೆನ್ನಾಗಿ ರಥ ನಿರ್ಮಾಣ ಮಾಡುವ ಕಲೆಯನ್ನು ಕರಗತಮಾಡಿಕೊಂಡರು. ಇನ್ನೂ ಅನೇಕ ಶಿಲ್ಪ ಕಾರ್ಯಗಳನ್ನು ಇವರಿಂದಲೆ ಗ್ರಹಿಸಿದ್ದುದಾಗಿದೆ ಎಂದು ಹಂಸಾನಂದಾಚಾರ್ಯರರು ಹೇಳುತ್ತಾರೆ.

"ಆದಾಗ್ಯೂ ನಮ್ಮ ತಂದೆಯವರೇ ನನಗೆ ನಿಜವಾದ ಶಿಲ್ಪಕಲಾಗುರುಗಳು" ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಇನ್ನು ಇವರ ಕಲಾಗ್ರಹಿಕೆಯ ಬಗ್ಗೆ ಗಮನ ಹರಿಸುವುದಾದರೆ ಅವರು ಹೀಗೆ ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ ಕಲೆಯನ್ನು ಕಲಿಯುವುದಕ್ಕೆ ನಿರಂತರವಾಗಿ, "ಕೆಲವಂ ಬಲ್ಲವರಿಂದ ಕೆಲವಂ ಶಾಸ್ತ್ರಗಳಿಂದ, ಕೆಲವಂ ನೋಡಿ, ಕೆಲವಂ ಮಾಡಿ ಕಲಾವಿದನಾದೆ" ಎಂದು ವಿವರಿಸುತ್ತಾರೆ. ಈ ರೀತಿ ಕಲಾವಿದನಾದವನು ಜೀವನದುದ್ದಕ್ಕೂ ಕಲಾಗುಣಗ್ರಹಣವನ್ನು ಅಳವಡಿಸಿಕೊಂಡಿರ ಬೇಕಾಗುತ್ತದೆ. ಕೇವಲ ಓದು ಬರಹದ ವಿದ್ಯಾಭ್ಯಾಸದಿಂದ ಕಲಾನೈಪುಣ್ಯತೆ ಬರಲಾರದು. ಅದು ಅನುಭವಗಳಿಂದಲೇ ಸಾಧ್ಯ ಎಂಬ ಪರಿಕಲ್ಪನೆ ಇವರಲ್ಲಿದೆ.

*"ಸರ್ವಜ್ಞನೆಂಬುವನು ಗರ್ವದಿಂದಾದವನೆ?*
*ಸರ್ವರೊಳ್ ಒಂದೊಂದು ನುಡಿಕಲಿತು*
*ವಿದ್ಯೆಯ ಪರ್ವತವೇ ಆದ ಸರ್ವಜ್ಞ"*

ಎಂದು ಸರ್ವಜ್ಞನ ವಚನವನ್ನೇ ಉದಾಹರಣೆ ನೀಡುತ್ತಾರೆ ಶಿಲ್ಪಯೋಗಿ ಆಚಾರ್ಯರು. ಅದರಂತೆ ಇವರೂ ಕೂಡ ತಮ್ಮ ಆನೇಕ ಜೀವನ ಅನುಭವಗಳ ಸಾರದಿಂದ ತಮ್ಮ ಜ್ಞಾನಭಂಡಾರವನ್ನು ಬೆಳೆಸಿಕೊಳ್ಳುತ್ತಾ ಬಂದಿದ್ದಾರೆ. ತಮ್ಮ ಇಲ್ಲಿಯವರೆಗಿನ ಕಲಾಜೀವನದಲ್ಲಿ ಯಾವುದೇ ಶಿಲ್ಪ ಕಾರ್ಯವನ್ನು ಆರಂಭ ಮಾಡಿದಾಗ್ಯೂ ತಮ್ಮ ಪೂಜ್ಯ ತಂದೆಯವರನ್ನು ಗುರುಗಳೋಪಾದಿಯಲ್ಲಿ ಮನದಲ್ಲಿ ಧ್ಯಾನಿಸಿ ಮಾಡುವುದರಿಂದ ತಮ್ಮ ಎಲ್ಲಾ ಕಾಯಕಗಳು ಸಫಲತೆಯನ್ನು ಕಂಡಿವೆಯೆಂದು ಹೇಳುತ್ತಾರೆ. ಇವರ ಪ್ರಕಾರ ಕಲೆಗಳು ಅನೇಕ ವಿಧವಾಗಿ ಇದ್ದು ಕಲಾ ಸಂದರ್ಭಕ್ಕನುಗುಣವಾಗಿ ಎಲ್ಲವೂ ತೋರಿ ಅಡಗಿ ಹೋಗುವಂತಹ ಕಲೆಗಳಾಗಿವೆ. ಆದರೆ ಶಿಲ್ಪಕಲೆಯು ಎಲ್ಲಾ ಕಲೆಗಳಿಗಿಂತಲೂ ಪ್ರಾಚೀನವಾದುದು ಮತ್ತು ಎಲ್ಲಾ ಕಲೆಗಳಂತೆ "ತೋರಿ ಅಡಗುವ ಕಲೆ ಇದಲ್ಲ, ಅದುವೇ ಶಿಲ್ಪಕಲೆ" ಹೀಗೆ ಶಿಲ್ಪಕಲೆಯು ಕಲೆಗಳಲ್ಲೆಲ್ಲ ಅತ್ಯಂತ ಗಂಭೀರವಾದದ್ದು ಮತ್ತು ಅಷ್ಟೇ ಆಧ್ಯಾತ್ಮಿಕ ರಹಸ್ಯಗಳನ್ನು ಒಳಗೊಂಡಿರುವಂತದ್ದು. ಕಲಾವಿದರಿಗೆ ಜಿ.ಬಿ. ಹಂಸಾನಂದಾಚಾರ್ಯರು ಹೇಳುವಂತೆ ಶಿಲ್ಪಶಾಸ್ತ್ರ, ವಾಸ್ತುಶಾಸ್ತ್ರ, ಜ್ಯೋತಿಷ ಶಾಸ್ತ್ರ, ಕಾಮಶಾಸ್ತ್ರ, ಮತ್ತು ಅಧ್ಯಾತ್ಮಶಾಸ್ತ್ರ ಇವು ಒಂದೇ ಹಸ್ತದಲ್ಲಿನ ಐದು ಬೆರಳುಗಳು ಇದ್ದಂತೆ. ಹೀಗೆ ಅದರೆ ನಡುಬೆರಳು ಶಿಲ್ಪ ಶಾಸ್ತ್ರವಾದರೆ, ತೋರ್‌ಬೆರಳು ವಾಸ್ತುಶಿಲ್ಪವಾಗಿದೆ ಮತ್ತು ಉಂಗುರ ಬೆರಳು ಜ್ಯೋತಿಷ್ಯಾಶಾಸ್ತ್ರವಾದರೆ ಕಿರುಬೆರಳು ಕಾಮಶಾಸ್ತ್ರವಾಗಿಯೂ ಹಾಗೂ ಹಿರಿಯದಾದ ಹೆಬ್ಬೆರಳು ರಹಸ್ಯಮಯವಾದ ಆಧ್ಯಾತ್ಮಿಕ

ಶಾಸ್ತ್ರವೆಂತಲೂ ಇವರು ತಮ್ಮ ಅನುಭವ ಸಿದ್ಧವಾದ ತತ್ವ ವಿಷಯವನ್ನು ನಮ್ಮ ಮುಂದೆ ವ್ಯಕ್ತಪಡಿಸುತ್ತಾರೆ. ನಾಲ್ಕು ಬೆರಳುಗಳು ಸೇರಿ ಒಂದು ಬಲವೆನಿಸಿದರೆ, ಆಧ್ಯಾತ್ಮಿಕ ಶಾಸ್ತ್ರವನ್ನು ಸಾಂಕೇತಿಕವಾಗಿವುಳ್ಳ ಹೆಬ್ಬೆರಳು ಒಂದೇ ಆ ನಾಲ್ಕಕ್ಕೂ ಸಮನಾದ ಬಲವುಳ್ಳದ್ದಾಗಿದೆ. ಹೀಗೆ ಎಲ್ಲಾ ಶಾಸ್ತ್ರಗಳು ಇರುವಂತಹ ಸಹ ಸಂಬಂಧವನ್ನು ತಮ್ಮದೇ ಆದ ರೀತಿಯ ಅನುಭವ ಸಿದ್ಧವಾದ ಮಾತುಗಳಿಂದ ಈ ಒಂದು ತಾತ್ವಿಕ ವಿಷಯವನ್ನು ನಮಗೆ ಸಾದರಪಡಿಸುತ್ತಿದ್ದಾರೆ.

ಇದರಿಂದ ಇವರ ಕಲಾಜ್ಞಾನ ಶಾಸ್ತ್ರ ಅಧ್ಯಯನ, ಅವರ ಒಂದು ಆಧ್ಯಾತ್ಮಿಕ ಅನುಭವಗಳ ಸಾರ, ಸಾತ್ವಿಕತೆ, ಎಷ್ಟು ಉನ್ನತ ಮಟ್ಟದ್ದಾಗಿದೆ ಮತ್ತು ಅಷ್ಟೇ ತರ್ಕಬದ್ಧವಾಗಿಯೂ ಇರುವುದು ನಮಗೆ ಕಂಡುಬರುತ್ತದೆ. ಈ ರೀತಿಯಾಗಿ ಶಿಲ್ಪಕಲೆಯಲ್ಲಿ ಅನುಭವ ಸಿದ್ಧರಾದಂತಹ ಅವರು ಅದರೊಳಗೆ ತಮ್ಮ ತಪಃಶಕ್ತಿಯನ್ನು ಸಿದ್ಧಿಸಿಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಶಿಲ್ಪಿಯಾದವ ಅನುಭವದ ಜೊತೆಗೆ ಅನೇಕ ಶಾಸ್ತ್ರಗ್ರಂಥಗಳನ್ನು ಅಧ್ಯಯನವನ್ನು ಆಳವಾಗಿ ಅಭ್ಯಸಿಸಬೇಕಾಗುತ್ತದೆ. ಈ ಕಾರಣದಿಂದಾಗಿ ಶಿಲ್ಪಿಯಾದವನು ಕಾಯ, ವಾಚಾಃ, ಮನಸ್ಸು ಪರಿಶುದ್ಧನಾಗಿ ತನ್ನ ಶಿಲ್ಪಕಲಾ ಕಾರ್ಯವನ್ನು ಮಾಡಿದರೆ ಮಾತ್ರ ಅದು ಪೂಜೆಗೆ ಯೋಗ್ಯವಾಗಿರುತ್ತದೆ. ಅಲ್ಲದೆ ಅಂತಹ ವಿಗ್ರಹಗಳನ್ನು ಪ್ರತಿಷ್ಠಾಪಿಸುವುದರಿಂದ ಆರಾಧಿಸುವ ಭಕ್ತರಿಗೆ ಇಷ್ಟಾರ್ಥ ಸಿದ್ಧಿ ಪ್ರಾಪ್ತವಾಗುತ್ತದೆ. ಅದುದರಿಂದ ಶಿಲ್ಪಿಯು ತನ್ನ ಕೌಶಲ್ಯದಿಂದ ಶಿಲ್ಪಗಳನ್ನು ನಿರ್ಮಾಣ ಮಾಡುತ್ತಾ ತನ್ನ ವಿಕಲ್ಪ ಗಳನ್ನು ಕಳೆದುಕೊಂಡು ಅವನ ಆತ್ಮ ಸಾಕ್ಷಾತ್ಕಾರವಾಗಿ ಯೋಗಾನಂದವನ್ನು ಪಡೆಯುತ್ತಾನೆ. ಅಲ್ಲದೆ ಆತನಿಂದ ನಿರ್ಮಾಣವಾಗಿರುವ ಶಿಲ್ಪಗಳು ನೋಡುಗರ ಮನಸ್ಸನ್ನು ಆಕರ್ಷಿಸುತ್ತಾ ಅವರಲ್ಲಿ ಅಗಾಧವಾದ, ಆತೀತವಾದ, ಸೌಂದರ್ಯ ಪ್ರಜ್ಞೆಯನ್ನು ಜಾಗೃತಗೊಳಿಸಿ ಉದ್ದೀಪನ ಗೊಳಿಸುವುದರ ಮೂಲಕ ಅವನಿಗೆ ಸಮಾಧಿ ಸ್ಥಿತಿಯ ಮಹದಾನಂದವನ್ನು ನೀಡುತ್ತದೆ. ಇಂತಹ ಶಿಲ್ಪಯೋಗಿಗಳಲ್ಲಿ ಶ್ರೀ ಜಿ.ಬಿ. ಹಂಸಾನಂದಾಚಾರ್ಯರು ಒಬ್ಬರಾಗಿದ್ದಾರೆ. ತಾವು ನಂಬಿರುವ ದೈವವನ್ನು ತಮ್ಮ ಕಲಾವಂತಿಕೆಯಿಂದ ಕಾಣುವ ಸ್ವಭಾವದವರಾದ ಇವರು ಬಹಳ ಕಠಿಣಕರವಾದ ಕಟ್ಟುನಿಟ್ಟಾದ ಆಚಾರ, ಸಂಪ್ರದಾಯಗಳನ್ನು ಅನುಸರಿಸುತ್ತಾ ಬಂದಿದ್ದಾರೆ. ಇವರು ನಿತ್ಯವೂ ಸ್ನಾನ, ಸಂಧ್ಯಾವಂದನೆ, ಪೂಜಾದಿಗಳನ್ನು ವಿಧಿವತ್ತಾಗಿ ಮತ್ತು ತಮ್ಮ ಕಲಾಕ್ಷೇತ್ರಕ್ಕೂ ಅನ್ವಯವಾಗು ವಂತೆ ತಮ್ಮ ಆಚಾರ ವಿಚಾರಗಳನ್ನು ಅಳವಡಿಸಿಕೊಳ್ಳುತ್ತಾ ಬಂದಿದ್ದಾರೆ.

ಒಂದು ಹಂಡೆ ಹಾಲು ಕಾಯಿಸಿದರೂ ಅದನ್ನು ಮೊಸರು ಮಾಡಬೇಕಾದಾಗ, ಒಂದು ಹನಿಯಷ್ಟು ಸ್ವಲ್ಪ ಮೊಸರನ್ನು ಅದಕ್ಕೆ ಸೇರಿಸಿದರೆ ಹಂಡೆಯ ಹಾಲು ಪೂರ್ತಿ ಹೆಪ್ಪುಗಟ್ಟಿ ಮೊಸರಾಗುತ್ತದೆ. ಹಾಗೆಯೇ ತಮ್ಮ ತಂದೆಯವರೊಡನೆ ಮಾಡಿದಂತಹ ಕಾರ್ಯಗಳು ಸ್ವಲ್ಪವಾದರೂ ಅವರಿಂದ ಕಲಿತು ಉಳಿಸಿ, ಬೆಳೆಸಿಕೊಂಡು ಬಂದಂತಹ ಕಲೆ ಇಂದು ಹಂಡೆಗಾತ್ರದ ಮೊಸರಾಗಿ ಹೆಪ್ಪುಗಟ್ಟಿ ನಿಂತಿದೆ ಎಂದು ತಮ್ಮ ತಂದೆಯವರ ಬಗ್ಗೆ ಅಭಿಮಾನದಿಂದ ಹೇಳುತ್ತಾರೆ.

ಇವರ ಕಲಾಜೀವನದಲ್ಲಿ ತಮ್ಮ ಕಲಿಕೆಗೆ ಹಲವಾರು ಅಡೆತಡೆಗಳು ಕಷ್ಟ ಕಾರ್ಪಣ್ಯಗಳು ಬಂದರೂ ಅನೇಕ ತರ್ಕ, ನಿಷ್ಠುರಗಳನ್ನು ಎದುರಿಸಿ ತಮ್ಮ ಕಲಿಕೆಯಲ್ಲಿ ಮುಂದುವರಿಯುತ್ತಾ

ಕಲಾ ಸಾಧನೆ ಮಾಡುತ್ತಾ ಬಂದಿದ್ದಾರೆ. "ಆಳಾಗ ಬಲ್ಲವನು ಅರಸನಾಗ ಬಲ್ಲ" ಎಂಬ ಗಾದೆ ಮಾತಿನಂತೆ ಇವರು ತಮ್ಮ ಕಷ್ಟ ಜೀವನದಲ್ಲಿ ಸಣ್ಣ ಸಣ್ಣ ಕೆಲಸಗಳಿಂದ ಹಿಡಿದು ದೊಡ್ಡ ದೊಡ್ಡ ರಥ ನಿರ್ಮಾಣದವರೆಗೂ ಎಲ್ಲದರಲ್ಲಿಯೂ ಸಮಾನಾಸಕ್ತರಾಗಿ ಭೇದಭಾವ ಎಣಿಸದೆ ತಮ್ಮ ಕಲಾನೈಪುಣ್ಯತೆಯನ್ನು ಮೆರೆಸಿದ್ದಾರೆ. ಅಂತಹ ಕಷ್ಟಜೀವನದಲ್ಲಿಯೂ ತಮ್ಮ ವಿದ್ಯಾಜ್ಞಾನಗಳಿಂದ ಸಮಾಜಕ್ಕೆ ಸೇವೆ ಸಲ್ಲಿಸುತ್ತಾ ಸಮಾಜಮುಖಿಯಾಗಿದ್ದಾರೆ. ಗ್ರಾಮದಲ್ಲಿರುವಂತಹ ಅನೇಕ ಸಾಮಾನ್ಯರಿಗೆ ಅವರ ಆರೋಗ್ಯ ವಿಷಯಗಳಲ್ಲಿ ತಮ್ಮ ಆಯುರ್ವೇದ ಔಷಧಿಗಳಿಂದ ಬಡವರಿಗೆ ಸಹಾಯ ಮಾಡಿದ್ದಾರೆ ಮತ್ತು ರೈತಾಪಿ ಜನಗಳಿಗೆ ಅನೇಕ ವ್ಯವಸಾಯಕ್ಕೆ ಸಂಬಂಧಪಟ್ಟ ಉಪಕರಣಗಳನ್ನು ಗೃಹೋಪಕರಣಗಳನ್ನು ತಯಾರಿಸಿ ಜೀವನವನ್ನು ಸಾಗಿಸುತ್ತಾ ನಂತರ ಹಂತಹಂತವಾಗಿ ತಮ್ಮ ಜೀವನಮಟ್ಟವನ್ನು ಆರ್ಥಿಕಸ್ಥಿತಿಯನ್ನು ಸುಧಾರಿಸಿಕೊಳ್ಳುತ್ತಾ ಬಂದು ತಮ್ಮೊಡನೆ ಕೆಲಸ ಮಾಡಬಲ್ಲಂತಹ ಅನೇಕ ಯುವ ಶಿಲ್ಪಿಗಳನ್ನು ತಮ್ಮ ಕಲಾ ಕೆಲಸಗಳಲ್ಲಿ ಸೇರಿಸಿಕೊಂಡು ಅಂತಹ ಆಸಕ್ತರಿಗೆ ತಮ್ಮ ಶಿಲ್ಪ ವಿದ್ಯೆಯನ್ನು ಕಲಿಸುತ್ತಾ ತಮ್ಮ ಸುತ್ತಮುತ್ತಲಿನ ಸಮಾಜದಲ್ಲಿ ಗಣ್ಯರು, ಗೌರವಾನ್ವಿತರೂ ಎನಿಸಿಕೊಂಡಿದ್ದಾರೆ.

ಶಿಲ್ಪಯೋಗಿಗಳಾಗಿರುವ ಶ್ರೀ ಜಿ.ಬಿ.ಹಂಸಾನಂದಾಚಾರ್ಯರು ತಮ್ಮ ಜೀವನದಲ್ಲಿ ಅಧ್ಯಾತ್ಮ ವನ್ನು ಅಳವಡಿಸಿಕೊಂಡು ತಮ್ಮ ಕಲೆಯನ್ನು ಹೇಗೆ ಉನ್ನತೀಕರಿಸಿಕೊಂಡರು ಎಂದರೆ, ಆದು ಶ್ರೀ ನಂದಿಲಿಂಗ ಸ್ವಾಮಿಗಳವರು ಆಧ್ಯಾತ್ಮಿಕ ತತ್ವಜ್ಞಾನಿಗಳೂ ಆಗಿದ್ದು, ಶ್ರೀಸಿದ್ಧಾರೂಢರ ಕರಕಮಲ ಸಂಜಾತರಾಗಿರುವ ಶ್ರೀ ಶಿವ ಪುತ್ರಪ್ಪ ಸ್ವಾಮಿಯವರ ಶಿಷ್ಯರಾದ ಇಂತಹ ಗುರುಗಳ ಒಂದು ದಿವ್ಯ ಮಾರ್ಗದರ್ಶನದಿಂದಾಗಿ ಕಲಾವಿದರಾದಂತಹ ಶಿಲ್ಪಿಗಳು ತಮ್ಮ ಕಲಾಜೀವನದಲ್ಲಿ ತತ್ವಜ್ಞಾನ ವನ್ನು ಅಳವಡಿಸಿಕೊಳ್ಳುತ್ತಾ ಬಂದಿದ್ದಾರೆ, "ಕಲೆ ಎಂದರೆ ಅಧ್ಯಾತ್ಮ, ಅಧ್ಯಾತ್ಮ ಎಂದರೆ ಕಲೆ," ಇಡೀ ಜೀವನವೇ ಒಂದು ಕಲೆ," ಪಶು, ಪಕ್ಷಿ, ಪ್ರಾಣಿಗಳನ್ನು ಮೊದಲುಗೊಂಡು ಎಲ್ಲದರಲ್ಲಿಯೂ ಕಲೆ ಅಡಗಿದೆ.

**ಉದಾಹರಣೆಗೆ:** ಒಂದು ಚಿಕ್ಕ ಗುಬ್ಬಿ, ತನ್ನ ಮರಿಗಳ ರಕ್ಷಣೆಗಾಗಿ ಗೂಡನ್ನು ಕಟ್ಟುತ್ತದೆ. ಅದೂ ಕೂಡ ವಾಸ್ತುಕಲೆಯನ್ನು ಬಲ್ಲವರಂತೆ ಪೂರ್ವದಿಕ್ಕಿಗೆ ಮುಖ ಮಾಡಿ, ಶತ್ರುಗಳಿಂದ ರಕ್ಷಣೆ ಪಡೆಯುವುದಕ್ಕೋಸ್ಕರ ಆಳವಾದ ಬಾವಿಯ ಒಳಗೆ ಮಗ್ಗುಲಲ್ಲಿ ಇರುವ ಮರಗಿಡಗಳನ್ನು ಆಶ್ರಯಿಸಿ ಗೂಡು ಕಟ್ಟುತ್ತದೆ. ವಾಸ್ತುಶಾಸ್ತ್ರ ನಿರ್ಣಯದ ಪ್ರಕಾರ ಗೂಡು ಪೂರ್ವದಿಕ್ಕಿಗೆ ಮುಖ ಮಾಡಿರುವುದರಿಂದ ಮಳೆಗಾಲದಲ್ಲಿ ಬೀಳುವ ಮಳೆ ಹನಿಗಳು ಗೂಡಿನೊಳಗೆ ಬೀಳದಂತೆ ಸುರಕ್ಷಿತವಾಗಿರುತ್ತದೆ. ಹೀಗೆ ಒಂದು ಚಿಕ್ಕ ಗುಬ್ಬಿಯು ಗೂಡು ಕಟ್ಟುವ ಹಾಗೆ ಎಷ್ಟೋ ಬುದ್ಧಿವಂತರಾದ ಕಲಾವಿದರಿಂದಾಗಲಿ ಕಟ್ಟಲು ಸಾಧ್ಯವಿಲ್ಲ. ಇದು ಆ ಪಕ್ಷಿಗೆ ಇರುವಂತಹ ಪ್ರಕೃತಿದತ್ತವಾದ ವಿಶೇಷವಾದ ಒಂದು ಕಲೆ ಎಂದು ಅವರು ಅಭಿಪ್ರಾಯ ತಿಳಿಸುತ್ತಾರೆ.

ಇವರು ಹೇಳುವಂತೆ ಕಲಾಜೀವನ ಎಂದರೆ ಬಹಳ ಕಷ್ಟಕರವಾಗಿರುವಂತಹದ್ದು. ನೈತಿಕ ಭಾವನೆಯ ಕಲಾವಿದರನ್ನು ಇಂದಿನ ದಿನಗಳಲ್ಲಿ ನೋಡಿದರೆ ಅವರದೂ ಕೂಡಾ ತುಂಬಾ

ಕಷ್ಟಕರವಾದ ಜೀವನ. ಅಲ್ಲದೇ ಅವರು ಅನೇಕ ಕಷ್ಟಗಳಿಂದ ಕಡುಬಡತನದಿಂದ ಜೀವನವನ್ನು ಅನುಭವಿಸಿದ್ದಾರೆ. ಹಿಂದಿನ ಕಾಲದ ಪರಿಸ್ಥಿತಿಗೂ ಮತ್ತು ಇಂದಿನ ಕಾಲದ ಪರಿಸ್ಥಿತಿಗೂ ತುಂಬಾ ವ್ಯತ್ಯಾಸವಿದೆ. ಹಿಂದಿನ ಕಾಲದಲ್ಲಿ ತಮ್ಮ ಅಜ್ಜ ಮುತ್ತಜ್ಜನವರು ಒಂದು ರಥವನ್ನು ಮಾಡಲು ಮೂರು ವರ್ಷಗಳ ಕಾಲ ಮರಮುಟ್ಟುಗಳನ್ನು ಕಾಡಿನಿಂದ ತಂದು ಗುಂಡಿ ಒಣಗಿಸಿ ವರ್ಷಗಟ್ಟಲೇ ಕೆಲಸ ಮಾಡಬೇಕಿತ್ತು. ಆದರೆ ಅದೇ ರಥವನ್ನು ಇಂದಿನ ದಿನಗಳಲ್ಲಿ ಅನೇಕ ಯಂತ್ರೋಪಕರಣಗಳ ಸಹಾಯದಿಂದ ಕೇವಲ ಮೂರು ತಿಂಗಳಲ್ಲಿ ತಯಾರಿಸಬಹುದಾಗಿದೆ. ಅಲ್ಲದೇ ಅನೇಕ ಸಣ್ಣ ಸಣ್ಣ ಕುಸುರಿ ಕೆಲಸಗಳನ್ನು ಮಾಡಲು ಸಣ್ಣ ಸಣ್ಣ ಯಂತ್ರಗಳು ಬಹಳವಾಗಿ ಆವಿಷ್ಕಾರಗೊಂಡಿರುವು ದರಿಂದ ಅನೇಕ ಕೈ ಕೆಲಸಗಳು ಕಡಿಮೆಯಾಗಿವೆ. ಇಂದಿನ ಯುಗದಲ್ಲಿ ಪ್ಲಾಸ್ಟಿಕ್ ಮಾಧ್ಯಮಗಳು ಹೆಚ್ಚುತ್ತಾ ಬಂದಿರುವುದರಿಂದ ಈ ಮೊದಲು ಕಟ್ಟಿಗೆಗಳಿಂದ ಬಂಡಿಯಾಕಾರದ ಅನೇಕ ಆಟಿಕೆ ಸಾಮಾನುಗಳನ್ನು ಮಾಡುವುದು ಕಣ್ಮರೆಯಾಗಿದೆ. ಆಗಿನ ಕಾಲದಲ್ಲಿ ಅಂತಹ ಅನೇಕ ಎಲ್ಲಾ ಆಟಿಕೆ ಸಾಮಾನುಗಳನ್ನು ಮಾಡಿ ಹತ್ತಿರದ ಜಾತ್ರೆಗಳಿಗೆ ಹೋಗಿ ಮಾರಾಟ ಮಾಡುತ್ತಿದ್ದುದಾಗಿ ಅವರು ಹೇಳುತ್ತಾರೆ. ಆದರೆ ಇಂದಿನ ದಿನಗಳಲ್ಲಿ ಹಳೆದಾದ ಅನೇಕ ಕಲಾಮಾಧ್ಯಮಗಳು ಇಲ್ಲವಾಗಿವೆ ಎಂದು ತಮ್ಮ ಖೇದವನ್ನು ವ್ಯಕ್ತಪಡಿಸುತ್ತಾರೆ. ಇಷ್ಟೇ ಅಲ್ಲದೇ ಹಂಸಾನಂದಾಚಾರ್ಯರು ಜ್ಯೋತಿಷ್ಯಶಾಸ್ತ್ರ ಬಲ್ಲವರಾಗಿದ್ದು, ತಮ್ಮ ಸುತ್ತಮುತ್ತ ಪ್ರದೇಶಗಳಲ್ಲಿ ಅನೇಕ ಕಟ್ಟಡ ನಿರ್ಮಾಣಕ್ಕೆ ಮತ್ತು ಮನೆಗಳ ಆಯನಿರ್ಮಾಣಕ್ಕೆ ವಾಸ್ತುಸಲಹೆಯನ್ನು ನೀಡಿರುತ್ತಾರೆ. ಇನ್ನು ಇವರ ಕಲಾಶೈಲಿಯ ಬಗ್ಗೆ ಪ್ರಸ್ತಾಪಿಸಿದಾಗ ಅವರು ಹೀಗೆ ಹೇಳಿದ್ದಾರೆ: ಶಿಲ್ಪಿಗಳಾದಂತಹ ಇವರು ಸಾಮಾನ್ಯವಾಗಿ ಅನೇಕ ರೀತಿಯ ಶಿಲ್ಪಕಲಾ ಶೈಲಿಗಳನ್ನು(ಹೊಯ್ಸಳ, ಚಾಲುಕ್ಯ, ವಿಜಯನಗರ) ಬಲ್ಲವರಾಗಿದ್ದಾರೆ.

**ಆಚಾರ್ಯರು ನಿರ್ಮಿಸಿದ ರಥಗಳು**

೧. ೧೯೮೪ರಲ್ಲಿ ಶ್ರೀ ಶನೇಶ್ವರ ರಥ, ಕಾಕುಬಾಳು
೨. ೧೯೯೭ರಲ್ಲಿ ಶ್ರೀ ಅಂಬಾದೇವಿಯ ರಥ, ಗುತ್ತಿಗನೂರು
೩. ೧೯೯೮ರಲ್ಲಿ ಶ್ರೀ ವೆಂಕಾವಧೂತರ ರಥ, ಜೋಗ
೪. ೨೦೦೨ರಲ್ಲಿ ಶ್ರೀ ಕೊಟ್ಟೂರೇಶ್ವರ ಬೆಳ್ಳಿಯ ರಥ, ಕೊಟ್ಟೂರು
೫. ೨೦೦೦ರಲ್ಲಿ ಶ್ರೀ ಆಂಜನೇಯಸ್ವಾಮಿಯ ರಥ, ಇಟ್ಟಗಿ
೬. ೨೦೦೩ರಲ್ಲಿ ಶ್ರೀ ರಾಘವೇಂದ್ರಸ್ವಾಮಿ ರಥ, ಹರಪನಹಳ್ಳಿ
೭. ೨೦೦೩ರಲ್ಲಿ ಶ್ರೀ ಕಲ್ಲೇಶ್ವರ ರಥ, ಹಗರಿಬೊಮ್ಮನಹಳ್ಳಿ
೮. ೨೦೦೪ರಲ್ಲಿ ಶ್ರೀ ಶರಣಬಸವೇಶ್ವರ ರಥ, ಕಾನಮಡಗು
೯. ೧೯೮೭ರಲ್ಲಿ ಶ್ರೀ ಕೇಶವ ರಥ, ಹೂವಿನಹಡಗಲಿ

ಹೀಗೆ ಶಿಲ್ಪಿ ಯೋಗಿಗಳಾದಂತಹ ಇವರು ಇನ್ನೂ ಅನೇಕ ರಥಗಳನ್ನು ನಿರ್ಮಿಸುತ್ತಾ ಬಂದಿದ್ದಾರೆ. ಅವುಗಳಲ್ಲಿ ಕೆಲವು ಮರಗೆತ್ತನೆಯಲ್ಲಿ ಮಾಡಿದವುಗಳಾದರೆ ಇನ್ನೂ ಕೆಲವು ಬೆಳ್ಳಿ

ಕುಸುರಿ ಕೆಲಸಗಳಿಂದ ಅಲಂಕೃತಗೊಂಡಿರುವಂತವುಗಳಾಗಿವೆ. ಇಂತಹ ಪರಿಸ್ಥಿತಿಯಲ್ಲಿ ಶಾಸ್ತ್ರ, ಸಂಪ್ರದಾಯಬದ್ಧವಾದ, ಶಿಲ್ಪಕಲಾ ಕಾರ್ಯವನ್ನು ದೇವಾಲಯಗಳಿಂದ ರಥ ನಿರ್ಮಾಣ ಕಾರ್ಯವನ್ನು ಮಾಡುತ್ತಾ ತಮ್ಮ ಕಲಾಸಾಧನೆ ಮಾಡುತ್ತಿರುವ ಜಿ.ಬಿ. ಹಂಸಾನಂದಾಚಾರ್ಯ ಅವರ ಕಲಾನೈಪುಣ್ಯತೆ ವಿವರಿಸಲು ಈ ಚಿಕ್ಕಲೇಖನ ಸಾಧ್ಯವಾಗುವುದಿಲ್ಲವೇನೋ ಎನಿಸುತ್ತದೆ.

**ಚಿತ್ರಕಲಾ ಶಾಲೆಯ ಸ್ಥಾಪನೆ:** ಶ್ರೀ ಸಿದ್ಧಾರೂಢ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ ಶ್ರೀ ಭುವನೇಶ್ವರಿ ಲಲಿತಕಲಾ ಮಹಾವಿದ್ಯಾಲಯದ ಸಂಸ್ಥಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ವಿದ್ಯಾಲಯವು ೧೯೯೪-೯೬ನೇ ಸಾಲಿನಲ್ಲಿ ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಇವರಿಂದ ಮಾನ್ಯತೆ ಪಡೆದಿದೆ. ಈ ವಿದ್ಯಾಲಯದ ನಿರ್ದೇಶಕರಾಗಿ ನಡೆಸಿಕೊಂಡು ಹೋಗುತ್ತಿದಾರೆ ಮತ್ತು ಅಲ್ಲಿನ ವಿಧ್ಯಾರ್ಥಿಗಳಿಗೂ ಕಲೆಯನ್ನು ಕುರಿತು ಹಾಗೂ ಶಿಲ್ಪಕಲೆಯ ಬಗ್ಗೆ ಸಾಕಷ್ಟು ಉಪನ್ಯಾಸವನ್ನು ನೀಡುತ್ತಿದ್ದಾರೆ. ಇನ್ನೂ ಹೆಚ್ಚಿನ ಕಲಾಸೇವೆ ಇವರ ಗುರಿಯಾಗಿದೆ. ಚಿತ್ರಕಲೆ, ಸಂಗೀತಕಲೆ, ಸಾಹಿತ್ಯ, ನಾಟಕ ಮುಂತಾದ ಕಲೆಗಳಲ್ಲಿ ಇವರ ಸಾಧನೆ ವಿಶೇಷವಾಗಿದೆ. ಹೀಗೆ ಅನೇಕ ವೈವಿಧ್ಯಮಯ ಕಲಾನೈಪುಣ್ಯತೆಯನ್ನು ಹಾಗೂ ಸಾತ್ವಿಕತೆಯಿಂದ ಕಲಾಸಾಧನೆಗೈಯುತ್ತಾ ಕಲಾದೇವಿಯ ಹೆಮ್ಮೆಯ ಪುತ್ರರೆನಿಸಿಕೊಂಡಿದ್ದು ಇನ್ನು ಹೆಚ್ಚಿನ ಕಲಾ ಲೋಕವನ್ನು ಸೃಷ್ಟಿಸುವ ಕನಸನ್ನು ಹೊಂದಿದ್ದಾರೆ.

**ಗೌರವ ಪ್ರಶಸ್ತಿಗಳ ಪಟ್ಟಿ:** ಇಟ್ಟಗಿ ಸಂಘ, ತಳಕಲ್ಲು ಕರಿಯಮ್ಮ ದೇವಸ್ಥಾನ ಕಮಿಟಿಯಿಂದ, ಮಹಾಜನದ ಹಳ್ಳಿ ಬಸವೇಶ್ವರ ಸಮಿತಿಯಿಂದ, ಹಗರಿಬೊಮ್ಮನಹಳ್ಳಿ ಆರ್ಯವೈಶ್ಯ ಕಮಿಟಿಯಿಂದ, ಹೊಸಪೇಟೆಯ ಜಂಬೂಕೇಶ್ವರ ಸಮಿತಿಯಿಂದ, ಕಾಕುಬಾಳುನಲ್ಲಿ ಶಿವಲಿಂಗಸ್ವಾಮಿಯವರಿಂದ ಶನೇಶ್ವರ ಕಮಿಟಿಯಿಂದ, ಹೂವಿನಹಡಗಲಿಯಲ್ಲಿ ಶ್ರೀ ಚನ್ನಕೇಶವ ಸಮಿತಿಯಿಂದ, ಮಲೆಬೆನ್ನೂರು ಶ್ರೀ ಕಾಳಿಕಾ ದೇವಸ್ಥಾನದ ಸಮಿತಿಯಿಂದ, ಹಾನಗಲ್ಲು ತಾಲೂಕು ಚಿಕ್ಕಳ್ಳಿ ವೀರಭದ್ರೇಶ್ವರ ಕಮಿಟಿಯಿಂದ, ತೆಲಿಗಿಯಲ್ಲಿ ಶಂಭುಲಿಂಗಾಶ್ರಮ ನಂದಿಲಿಂಗ ಸ್ವಾಮಿಯವರಿಂದ, ಕಲ್ಲಳ್ಳಿ ವೀರಭದ್ರೇಶ್ವರ ಕಮಿಟಿಯಿಂದ, ಹೂವಿನಹಡಗಲಿಯ ಶ್ರೀ ಮಲ್ಲಿಕಾರ್ಜುನ ಟ್ರಸ್ಟ್ ಕಮಿಟಿಯಿಂದ, ಬೆಂಗಳೂರು ರಾಜ್ಯ ವಿಶ್ವಕರ್ಮ ಸಮಿತಿಯಿಂದ, ಶಿರಸಂಗಿ ಶ್ರೀಕಾಳಿಕಾದೇವಿ ಟ್ರಸ್ಟ್ ಕಮಿಟಿಯಿಂದ, ಧೂಪದಹಳ್ಳಿ ವೀರಭದ್ರೇಶ್ವರ ಸಮಿತಿಯಿಂದ, ಅಂಬಾದೇವಿ ಮಠ ಗುತ್ತಿಗನೂರು ರುದ್ರಮುನಿ ತಾತನವರಿಂದ, ಜೋಗದಲ್ಲಿ ವೆಂಕಾವಧೂತರ ಮಠದಿಂದ, ತೆಲಿಗಿಯಲ್ಲಿ ಮಹೇಶದವರ ಸಮಿತಿಯಿಂದ, ಹಾವೇರಿ ತಾಲೂಕು ಚಿಕ್ಕಳ್ಳಿಯಲ್ಲಿ ಶ್ರೀ ಕೃಪಾನಂದ ಭಾರತೀಸ್ವಾಮಿಯವರಿಂದ,

೨೦೦೧ : ಹೂವಿನಹಡಗಲಿ ಕನ್ನಡ ರಾಜ್ಯೋತ್ಸವದ ಸಮಿತಿಯವರಿಂದ

೨೦೦೧ : ಜೈನ ಮಂದಿರ ಹೂವಿನಹಡಗಲಿ ಕೇಂದ್ರದವರಿಂದ

೨೦೦೨ : ಹೂವಿನಹಡಗಲಿ ಓಂ ಶಾಂತಿ ಕೇಂದ್ರದವರಿಂದ

೨೦೦೨ : ಯಲ್ಲಾಪುರ ಓಂ ಶಾಂತಿ ಕೇಂದ್ರದವರಿಂದ

೨೦೦೩ : ವಿನೋಬನಗರ ಹನುಮಂತದೇವರ ಕಮಿಟಿಯಿಂದ

೨೦೦೩ : ದಿಬ್ಬದಹಳ್ಳಿಯವರಿಂದ

೨೦೦೩ : ಕೊಟ್ಟೂರು ಶರಣ ಬಳಗದಿಂದ

೨೦೦೩ : ಹರಪನಹಳ್ಳಿ ರಾಘವೇಂದ್ರ ಕಮಿಟಿಯಿಂದ

೨೦೦೩ : ತೆಲಿಗಿ ದುರ್ಗಾದೇವಿ ಕಮಿಟಿಯಿಂದ

೨೦೦೩ : ಬೀದರ್ ಮಾಳಚಾಪುರ ಸಿದ್ಧಾರೂಢ ಸಂಸ್ಥೆಯಿಂದ

೨೦೦೩ : ಕೊಟ್ಟೂರು ಕೊಟ್ಟೂರೇಶ್ವರ ಕಲ್ಯಾಣ ಮಂಟಪದಿಂದ "ಶಿಲ್ಪ ಯೋಗಿ" ಎಂದು ಬಿರುದು ನೀಡಿದ್ದಾರೆ.

೨೦೦೪ : ವೀರಭದ್ರೇಶ್ವರ ಕಮಿಟಿ ಬುಕ್ಕಸಾಗರ ಇವರಿಂದ ಪ್ರಶಸ್ತಿ.

೨೦೦೪ : ಶರಣ ಬಸವೇಶ್ವರ ದಾಸೋಹ ಮಠ ಕಾನಾಮಡುಗು ಮತ್ತು ಉಜ್ಜಯಿನಿ ಶ್ರೀ ಮರುಳ ಸಿದ್ಧೇಶ್ವರ ದೇಶಿ ಕೇಂದ್ರ ಸ್ವಾಮೀಜಿಯವರಿಂದ ಸನ್ಮಾನಿಸಲ್ಪಟ್ಟಿದ್ದಾರೆ.

೨೦೦೯ : ವಿಶ್ವ ವೀರಶೈವ ಸಂಸ್ಕೃತಿ ಪ್ರತಿಷ್ಠಾನ(ರಿ) ಬೆಂಗಳೂರು. ಇವರಿಂದ "ಕರ್ನಾಟಕ ರತ್ನಶ್ರೀ" ಪ್ರಶಸ್ತಿ.

೨೦೧೦ : ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಇವರಿಂದ ಗೌರವ ಪ್ರಶಸ್ತಿ.

೨೦೧೨ : ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರಿಂದ "ಜಕಣಾಚಾರ್ಯ" ಪ್ರಶಸ್ತಿ.

### ೩.೬.೨. ಲೋಹ ಶಿಲ್ಪಿ ಶಂಕರಾಚಾರ್ಯ

ಬಾವಿಹಳ್ಳಿ ಶಂಕರಾಚಾರ್ಯರು ಬಹುಮುಖ ಪ್ರತಿಭೆಯ ಕಲಾವಿದರು. ಮಣ್ಣು, ಮರ, ಶಿಲೆ, ಲೋಹ, ಸಿಮೆಂಟ್ ಮಾಧ್ಯಮದಲ್ಲಿ ಅನೇಕ ಕಲಾಕೃತಿಗಳನ್ನು ನಿರ್ಮಿಸಿದ್ದಾರೆ. ಮೂಲತಃ ಸೋಗಿ ಗ್ರಾಮದವರಾದ ಇವರು ತಮ್ಮ ತಂದೆಯವರ ಮತ್ತು ಅವರ ಅಣ್ಣಂದಿರಿಂದ ಲೋಹ ವಿದ್ಯೆಯನ್ನು ಅಧ್ಯಯನ ಮಾಡಿದ್ದಾರೆ. ಮಣ್ಣಿನಿಂದ ನಿರ್ಮಿಸಿದ ಗಣೇಶನ ವಿಗ್ರಹಗಳು ಬಳ್ಳಾರಿ ಜಿಲ್ಲಾದ್ಯಂತ ಹೆಸರು ಮತ್ತು ಕೀರ್ತಿಗೆ ಪಾತ್ರವಾಗಿದೆ. ಸಿಮೆಂಟ್ ಶಿಲ್ಪದಲ್ಲಿ ಹೊಳಗುಂದಿಯ ಗೋಪುರಗಳನ್ನು ನಿರ್ಮಿಸಿದ್ದಾರೆ. ಇವರಿಗೆ ಐದು ಜನ ಮಕ್ಕಳಿದ್ದಾರೆ. ಅದರಲ್ಲಿ ಮೂರು ಜನ ಗಂಡುಮಕ್ಕಳು ಲೋಹ ಶಿಲ್ಪಕಲೆಯಲ್ಲಿ ತಂದೆಯವರಂತೆ ಕೌಶಲ್ಯ ಪೂರ್ಣವಾದ ಕೆತ್ತನೆಯನ್ನು ಮಾಡುತ್ತಿದ್ದಾರೆ. ಬೆಳ್ಳಿಯ ಕಿರೀಟ, ಬೆಳ್ಳಿಯ ಮುಖವಾಡ, ಛತ್ರ ಚಾಮರ ಹಾಗೂ ಪಂಚಲೋಹದ ವಿಗ್ರಹಗಳನ್ನು ಸುಂದರವಾಗಿ ನಿರ್ಮಿಸಿದ್ದಾರೆ ಮತ್ತು ಆರ್ಥಿಕವಾಗಿ ಸಾಧಾರಣ ಮಟ್ಟದಲ್ಲಿದ್ದು ೫ ಎಕರೆ ಭೂಮಿಯನ್ನು ಹೊಂದಿದ್ದಾರೆ. ಬಾವಿಹಳ್ಳಿಯಲ್ಲಿ ಒಂದು ಚಿಕ್ಕದಾದ ಮನೆಯಲ್ಲೇ ವಾಸವಾಗಿದ್ದಾರೆ. ಅವರ ಮಕ್ಕಳು ಹೊಸಪೇಟೆಯಲ್ಲಿ ಬೆಳ್ಳಿಯ ವಿಗ್ರಹಗಳನ್ನು ನಿರ್ಮಿಸುವ ಕಾರ್ಯಗಳಲ್ಲಿ ತೊಡಗಿದ್ದಾರೆ ಇನ್ನೊಬ್ಬ ಮಗ ಹೂವಿನಹಡಗಲಿ ವಾಸವಾಗಿ ವಿಶೇಷವಾಗಿ ಬೆಳ್ಳಿ ಲೋಹದ ಕೆಲಸವನ್ನು ಮಾಡುತ್ತಿದ್ದಾರೆ.

ಶಂಕರಾಚಾರ್ಯರ ಮೂಲ ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲ್ಲೂಕಿನ ಸೋಗಿ ಎಂಬ ಗ್ರಾಮದವರು. ಶಂಕರಾಚಾರ್ಯರ ತಂದೆಯವರಾದ ಕೊಟ್ರಪ್ಪ ಆಚಾರ್ಯ ಇವರು ಆಧ್ಯಾತ್ಮಿಕ ಮಾರ್ಗಿಗಳಾಗಿದ್ದರು. ಭಜನೆ, ನಾಟಕ, ಕೀರ್ತನೆಗಳು ಅವರ ಒಡನಾಡಿಗಳಾಗಿದ್ದವು. ಕಮ್ಮಾರಿಕೆ ಕೆಲಸವನ್ನು ತಮ್ಮ ಜೀವನೋಪಾಯವಾಗಿರಿಸಿಕೊಂಡ ಕೊಟ್ರಪ್ಪ ಆಚಾರ್ಯರು ಬಂಗಾರ, ಬೆಳ್ಳಿ, ಬಡಗಿ ಮುಂತಾದ ಕೆಲಸದಲ್ಲಿ ಬಹಳ ನೈಪುಣ್ಯತೆಯನ್ನು ಹೊಂದಿದವರಾಗಿದ್ದರು. ಇಂತಹ ಶಿಲ್ಪಿಯ ಮಗನಾಗಿ ಜನಿಸಿದವರೇ ಶಂಕರಾಚಾರ್ಯರು. ಇವರು ತಂದೆ ತಾಯಿಗಳಿಗೆ ಏಕಮಾತ್ರ ಪುತ್ರರಾಗಿದ್ದರು. ಆದ್ದರಿಂದ ಮುದ್ದಿನ ಮಗನಾಗಿದ್ದರು. ಅವರು ಸಾಂಸಾರಿಕ ಜೀವನ ನಡೆಸುವುದು ತುಂಬಾ ಕಷ್ಟಕರವಾಗಿತ್ತು. ಕಮ್ಮಾರಿಕೆ ಕೆಲಸದಿಂದ ಬಂದ ಹಣದಿಂದಲೇ ಜೀವನ ನಡೆಸುತ್ತಿದ್ದರು. ಇಂತಹ ಕಷ್ಟಕರವಾದ ಜೀವನದಲ್ಲಿ ಅವರ ನಿರಾಳ ಮನಸ್ಸು ಸರಳ ಸೌಜನ್ಯ ಮೂರ್ತಿಗಳಾಗಿದ್ದರು. ಈರ್ವರೂ ತ್ಯಾಗಶೀಲರಾಗಿದ್ದರು. ತಂದೆಯವರ ಈ ಬದುಕನ್ನು ಕುರಿತು ಹೇಳುವಾಗ ಶಂಕರಾಚಾರ್ಯರ ಮುಖದಲ್ಲಿ ಯಾವುದೋ ಧ್ಯಾನಸ್ಥ ಚೈತನ್ಯ ಎದ್ದುಕಾಣುತ್ತಿತ್ತು.

ಕೊಟ್ರಪ್ಪ ಆಚಾರ್ಯ ಮತ್ತು ಶಾರದಮ್ಮ ದಂಪತಿಗಳ ಮಗನಾದ ಶಂಕರಾಚಾರ್ಯರು ೨೯.೬.೧೯೪೭ರಂದು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನ ಸೋಗಿ ಗ್ರಾಮದಲ್ಲಿ ಜನಿಸಿದರು(ಈಗ ಬಾವಿಹಳ್ಳಿ ಗ್ರಾಮದಲ್ಲಿ ವಾಸವಾಗಿದ್ದಾರೆ). ಇವರು ತುಂಬ ಸರಳ ಸಹಜ ಚಟುವಟಿಕೆಯಿಂದ ಇದ್ದರು. ಐದು ವರ್ಷದ ಹಸುಳೆಯಿರುವಾಗಲೇ ತಂದೆಯವರು ಮಾಡುತ್ತಿದ್ದ ಕಮ್ಮಾರಿಕೆ ಕೆಲಸವನ್ನು ಕಣ್ಣುಮಿಟುಕಿಸದೇ ನೋಡುತ್ತಿದ್ದರು. ಆವಾಗಲೇ ತನ್ನ ತನ್ಮಯತೆಯನ್ನು ಕಲಾಕ್ಷೇತ್ರದಲ್ಲಿ ಸ್ಥಾಪಿಸಲಾರಂಭಿಸಿ, ಭವಿಷ್ಯವನ್ನು ಭರವಸೆಯಿಂದ ವಿಸ್ತರಿಸಿಕೊಳ್ಳಲಾರಂಭಿಸಿದರು. ಒಂಬತ್ತು ವರ್ಷದವನಿರುವಾಗಲೇ ವರ್ಣಚಿತ್ರಗಳನ್ನು ರಚಿಸಲಾರಂಭಿಸಿದರು. ಇದನ್ನು ಕಂಡ ತಂದೆ ತಾಯಂದಿರು ಅಪಾರ ಸಂತೋಷ ಮತ್ತು ಅಭಿಮಾನದಿಂದ ಕುಣಿದು ಕುಪ್ಪಳಿಸಿದರು. ಬಾಲಕನ ಇಂಥ ಅದ್ಭುತ ಕಲಾಕೃತಿಯನ್ನು ಕಂಡು ಹೆಬ್ಬಾಳ ಚಂದ್ರಶೇಖರ ಎಂಬ ಶಿಲ್ಪಕಲಾವಿದರು ಹೀಗೆ ಹೇಳುತ್ತಾರೆ. "ಈ ಹುಡುಗ ದೊಡ್ಡ ಕಲಾವಿದನಾಗಿ ಹೆಸರಾಂತ ಕಲಾವಿದರ ಪಟ್ಟಿಗೆ ಸೇರುತ್ತಾನೆ" ಎನ್ನುವ ಭವಿಷ್ಯ ನುಡಿಯುತ್ತಾರೆ. ಈ ರೀತಿ ಅವರ ಹಾರೈಕೆಯಂತೆ ಇಂದು ಹೆಸರಾಂತ ಲೋಹ ಶಿಲ್ಪಿಗಳಾಗಿ ಕೆ. ಶಂಕರಾಚಾರ್ಯರು ಬೆಳೆದು ನಿಂತಿದ್ದು, ಸಾಮಾನ್ಯವಾಗಿ ಶಿಲ್ಪರೂಪಿಕೆಗೆ ಸೈದ್ಧಾಂತಿಕತೆಗಿಂತ ಪ್ರಾಯೋಗಿಕತೆಯೇ ಬಹುಮುಖ್ಯವಾದದ್ದು. ನೋಟಗ್ರಹಿಕೆ ಮತ್ತು ಕ್ರಿಯೆಯುಕ್ತವಾದ ಅನೌಪಚಾರಿಕ ಶಿಕ್ಷಣವನ್ನು ತೀರಾ ಮುಗ್ಧಾವಸ್ಥೆಯಲ್ಲಿಯೇ ಶಂಕರಾ ಚಾರ್ಯರು ತನ್ನದಾಗಿಸಿಕೊಳ್ಳುತ್ತ ಬಂದರು. ಔಪಚಾರಿಕ ಶಿಕ್ಷಣ ಇಂತಹ ಕಲೆಗಳ ಕಲಿಕಾ ವಿಷಯದಲ್ಲಿ ತುಂಬಾ ಶುಷ್ಕವಾದ ಅನುಭವವನ್ನೇ ನೀಡುವಂಥದ್ದು. ಬದುಕಿನ ಭವದೊಂದಿಗೆ ಅದು ತಳಕು ಹಾಕಿಕೊಳ್ಳಲಾರದು. ಆದರೆ ಆಚಾರ್ಯರು ಇಂಥ ಜೀವಾನುಭವ ಮತ್ತು ಶಿಲ್ಪ ರಚನಾನುಭವಗಳನ್ನು ಮೇಳೈಸಿಕೊಂಡು ಬೆಳೆದರು. ಹೀಗಾಗಿಯೇ ಅವರ ಚಿತ್ರ ಮತ್ತು ಶಿಲ್ಪಕಲೆಗಳಲ್ಲಿ ಬದುಕಿನ ಸಹಜ ಲಯ ವಿನ್ಯಾಸಗಳು ಹೆಣಿಕೆ ರೂಪದಲ್ಲಿ ಎದ್ದು ಕಾಣುತ್ತವೆ.

### ಶಿಕ್ಷಣ

ಸಂಪ್ರದಾಯವಾದ ಸ್ವಯಂಪ್ರೇರಿತ ಕಲಿಕೆ ನಡೆಯುತ್ತಿರುವಾಗಲೇ ಶಂಕರಾಚಾರ್ಯರ ಅಭಿರುಚಿಗೆ ವಿಮುಖವಾದ ಕಲಾಶಿಕ್ಷಣಕ್ಕೆ ಕಳುಹಿಸಲಾಯಿತು. ಜನಿಸಿದ ಊರಲ್ಲೇ ಪ್ರಾಥಮಿಕ ಶಾಲಾಭ್ಯಾಸಕ್ಕೆ ಹೋಗುತ್ತಿದ್ದರು. ಇದು ಆಚಾರ್ಯರಿಗೆ ಅವರ ಸಹಜ ಕಲಿಕೆ ಮತ್ತು ಅಭಿರುಚಿಗೆ ತುಂಬ ತೊಡಕಾಯಿತು. ಹೆಚ್ಚಾಗಿ ಚಿತ್ರಕಲೆಯಲ್ಲಿ ಆಸಕ್ತಿಯಿದ್ದರಿಂದ ಪ್ರಾಥಮಿಕ ಶಾಲಾಭ್ಯಾಸಕ್ಕೆ ಐದನೇ ತರಗತಿಗೆ ವಿದಾಯ ಹೇಳಿದರು. ನಂತರ ತಂದೆಯವರ ಜೊತೆಗೂಡಿ ಕಮ್ಮಾರಿಕೆ ಜೊತೆಗೆ ಮೃತ್ತಿಕೆಯಲ್ಲಿ ಗಣಪತಿ ಮೂರ್ತಿಯನ್ನು ರಚಿಸಿಕೊಂಡು ಬಂದರು. ಕುಟುಂಬ ಜೀವನ ತುಂಬ ಕಷ್ಟಕರವಾದ ಪರಿಸ್ಥಿತಿಯಲ್ಲಿ ಬೆಳೆದು ಬಂದ ಆಚಾರ್ಯರು ಯಾವುದೇ ಪರಿಸ್ಥಿತಿಗೆ ಎದೆಗುಂದದೆ ಮೂರ್ತಿಗಳ ವಿನ್ಯಾಸ, ರೂಪ, ರಚನೆ, ವಿಧಿ–ವಿಧಾನಗಳ ಕಡೆಗೆ ಹೆಚ್ಚು ಗಮನ ಹರಿಸುತ್ತಿದ್ದರು. ಕೆಸರಿನಲ್ಲಿ ತಮಗನಿಸಿದ ಮೂರ್ತಿಗಳನ್ನು ವಿನ್ಯಾಸಗೊಳಿಸಿ ಖುಷಿ ಪಡುತ್ತಿದ್ದರು. ಚಿತ್ರ ಬಿಡಿಸುವುದಲ್ಲಿಯೂ ಅದೇ ಆಧ್ಯಾತ್ಮಿಕತೆಯನ್ನು ಕಾಪಾಡಿಕೊಳ್ಳುತ್ತಿದ್ದರು. ತನ್ನ ಮನಕ್ಕೊಪ್ಪುವ ರಚನಾವಿನ್ಯಾಸ ಸಿದ್ಧಿಯಾಗುವವರೆಗೂ ತಳಮಳ ತಾಕಲಾಟಗಳೊಂದಿಗೆ ಮುರಿದು ಕಟ್ಟುವ ಕ್ರಿಯೆಗಳಲ್ಲಿ ಬೇಸರವಿಲ್ಲದೆ ಭಾಗಿಯಾಗುತ್ತಿದ್ದರು. ನಂತರ ಅವರು ಗುಡಿಕೈಗಾರಿಕೆಯ ಅಧ್ಯಯನವನ್ನು ಮಾಡಿ ಜಿಲ್ಲೆಯಾದ್ಯಂತ ಪ್ರಸಿದ್ಧಿ ಪಡೆದರು. ಈ ರೀತಿ ಆಚಾರ್ಯರ ಬಾಲ್ಯಜೀವನ ಕಷ್ಟದಾಯಕವಾಗುತ್ತಿದ್ದರೂ ತಮ್ಮ ಕಲಿಕೆಗೆ ಯಾವ ರೀತಿ ಭಂಗ ಬಾರದಂತೆ ಮೇಳೈಸಿಕೊಂಡು ಬಂದರು.

### ಆಚಾರ್ಯರ ಸಾಂಸಾರಿಕ ಬದುಕು

ಸದಾ ಕ್ರಿಯಾಶೀಲ ಪ್ರವೃತ್ತಿಯುಳ್ಳ ಮತ್ತು ಕಲೋಪಾಸಕರಾದ ಶಂಕರಾಚಾರ್ಯರು ಸುಶೀಲಮ್ಮ ಎನ್ನುವವರೊಡನೆ ತಮ್ಮ ವಿವಾಹ ಜೀವನಕ್ಕೆ ಕಾಲಿಟ್ಟರು. ಸಗೃಹಿಣಿಯೂ, ಸಾತ್ವಿಕಳೂ ಆದಂತಹ ಸುಶೀಲಮ್ಮನವರು ತನ್ನ ಪತಿಯ ಪ್ರತಿ ಕೆಲಸದಲ್ಲೂ ಭಾಗಿಯಾಗುತ್ತಿದ್ದಳು. ಆದರ್ಶ ದಂಪತಿಗಳಂತೆ ಇವರ ವಿವಾಹ ತೃಪ್ತಿಕರವಾಗಿತ್ತು. ನಂತರ ಜೀವನದಲ್ಲಿ ಸಂಸಾರದ ಭಾರವನ್ನು ನಿಭಾಯಿಸುತ್ತಾ ತಮ್ಮ ಕಲಾಕಾರ್ಯವನ್ನು ಸ್ವಲ್ಪವೂ ಎಡೆಬಿಡದಂತೆ ಮುಂದುವರಿಸಿಕೊಂಡು ನಂತರ ಕುಟುಂಬವು ದೊಡ್ಡದಾಯಿತು. ತಮ್ಮ ಮಕ್ಕಳೆಲ್ಲರಿಗೂ ಸಾಂಪ್ರದಾಯಿಕ ಕಲಾಪ್ರವೃತ್ತಿಯನ್ನು ಮುಂದುವರಿಸಿಕೊಂಡು ನಂತರ ಕುಟುಂಬವು ದೊಡ್ಡದಾಯಿತು. ತಮ್ಮ ಮಕ್ಕಳೆಲ್ಲರಿಗೂ ಸಾಂಪ್ರದಾಯಿಕ ಕಲಾಪ್ರವೃತ್ತಿಯನ್ನು ಮುಂದುವರಿಸಿಕೊಂಡು ಹೋಗಲು ಸಹಾಯ ಮತ್ತು ಪ್ರೋತ್ಸಾಹಕ್ಕೆ ಬಲವಾಗಿ ನಿಂತಿದ್ದಾರೆ.

ಆಚಾರ್ಯರಿಗೆ ಐದು ಜನ ಮಕ್ಕಳು. ಎರಡು ಹೆಣ್ಣು ಮತ್ತು ಮೂರು ಗಂಡುಮಕ್ಕಳು. ಮೊದಲನೆಯವರು ನಾಗರಾಜ್ ಆಚಾರ್ಯ ಅವರು ಎ.ಎಂ., ಜಿ.ಡಿ., ಕಲಾ ವಿದ್ಯಾಭ್ಯಾಸವನ್ನು ಮುಗಿಸಿ, ಹೊಸಪೇಟೆಯಲ್ಲಿ ಶಿಲ್ಪಕಲೆಯನ್ನು ಮುಂದುವರಿಸಿದ್ದಾರೆ. ಎರಡನೆಯವರು ಮೌನೇಶ್ ಆಚಾರ್ಯ ಅವರು ಜೆ.ಒ.ಡಿ.ಸಿ. ಮತ್ತು ಎಲೆಕ್ಟ್ರಿಕಲ್ ಕೋರ್ಸನ್ನು ವಿದ್ಯಾಭ್ಯಾಸ ಮಾಡಿ ವಂಶ ಪರಂಪರಾಗತವಾಗಿ ಬಂದ ಲೋಹ ಶಿಲ್ಪಕಲೆಯನ್ನು ರಚಿಸುತ್ತ ತಂದೆಗೆ ಸಹಾಯಕರಾಗಿದ್ದಾರೆ. ಇನ್ನು ಮೂರನೆಯವರು ದ್ವಾರಕೀಶ ಆಚಾರ್ಯ. ಇವರು ಸಹ ಎಸ್.ಎಸ್.ಎಲ್.ಸಿ. ಅಭ್ಯಾಸವನ್ನು

ಮಾಡಿ ತಂದೆಯವರ ಮಾರ್ಗದರ್ಶನದಿಂದ ಕಲೆಯನ್ನು ಮುಂದುವರಿಸಿದ್ದಾರೆ. ಆಚಾರ್ಯರ ಯಾವುದೇ ಶಿಲ್ಪಕಲಾ ಕಾರ್ಯವಿದ್ದರೂ ಎಲ್ಲರೂ ಜೊತೆಗೂಡಿ ಲೋಹಶಿಲ್ಪ, ಶಿಲ್ಪಕಲೆ ವೃತ್ತಿಯಿಂದ ನಿರ್ಮಾಣವಾದಂತಹ ಅನೇಕ ಕಲಾಕೃತಿಗಳನ್ನು ಯಶಸ್ವಿಯಾಗಿ ನಿರ್ಮಿಸುತ್ತ ಬಂದಿದ್ದಾರೆ. ತಾವು ಹೇಗೆ ತಮ್ಮ ತಂದೆಯವರ ಕಲಾಸಂಪ್ರದಾಯವನ್ನು ಉಳಿಸಿಕೊಂಡು ಬಂದರೋ ಹಾಗೆಯೇ ತಮ್ಮ ಮಕ್ಕಳು ಸಹ ಇದೇ ಸಂಸ್ಕೃತಿಯನ್ನು ಇನ್ನೂ ಉತ್ತಮವಾಗಿ ಮುಂದುವರಿಸಿಕೊಂಡು ಹೋಗುತ್ತಾರೆ ಎಂಬ ಆಶಯ ಮತ್ತು ದೃಢವಿಶ್ವಾಸವನ್ನು ಕಲಾವಿದರಾದ ಕೆ. ಶಂಕರಾಚಾರ್ಯರು ವ್ಯಕ್ತಪಡಿಸುತ್ತಾರೆ.

**ನಾಟಕ ಕಲೆ**

ಆಚಾರ್ಯರು ಶಿಲ್ಪರಚನೆ ಮಾತ್ರವಲ್ಲದೆ, ನಟರೂ, ಸಂಗೀತಗಾರರೂ ಹೌದು. ಇವರು ನಟನೆ ಮಾಡಿದ ಅನೇಕ ನಾಟಕಗಳು ಯಶಸ್ವಿಯಾಗಿವೆ. ಅವರು ಹಾಡಿದ ಕೆಲವು ನಾಟಕಗಳು ಈ ಕೆಳಗಿನಂತಿವೆ.

೧. ಹೇಮರೆಡ್ಡಿ ಮಲ್ಲಮ್ಮ

೨. ಸವಿತ ಮಾಸ್ತರ

೩. ಹರಿಶ್ಚಂದ್ರ

೪. ರಕ್ತರಾತ್ರಿ

೫. ಸಂಸಾರನೌಕೆ

೬. ಪಡೆದ ಮುತ್ತು

೭. ವರನೋಡಿ ಹೆಣ್ಣು ಕೊಡು

೮. ಬೆಳದಿಂಗಳು

ಇವರು ನಟನೆ ಅಷ್ಟೇ ಅಲ್ಲದೇ, ತಬಲ, ಹಾರ್ಮೋನಿಯಂ ಇತ್ಯಾದಿ ವಾದ್ಯಗಳನ್ನು ನಾಟಕ ಗಳಿಗೆ ನುಡಿಸುವುದು ಇವರ ಹವ್ಯಾಸವಾಗಿತ್ತು. ನಂತರ ಆರೋಗ್ಯ ಸರಿಯಿಲ್ಲದ ಕಾರಣ ನಾಟಕ ದಲ್ಲಿ ಮುಂದುವರಿಯಲಾಗಲಿಲ್ಲ. ಈ ರೀತಿ ತಮ್ಮ ಕಲಾಪ್ರೌಢಿಮೆಯನ್ನು ಬೆಳಗಿಸಿಕೊಂಡ ಆಚಾರ್ಯರು ಸಕಲ ವಿದ್ಯಾಪಾರಂಗತರಾಗಿದ್ದರು.

**ಪರಂಪರೆ**

ಶಂಕರಾಚಾರ್ಯ ಅವರ ಹಿಂದಿನ ತಲೆಮಾರಿನವರು ಮಾಡಿದ ಕಮ್ಮಾರಿಕೆ, ಬಡಗಿ, ಲೋಹಶಿಲ್ಪ, ಸಿಮೆಂಟ್‌ಶಿಲ್ಪ ವೃತ್ತಿಯಲ್ಲಿ ಹೀಗೆ ಬರೆಯುತ್ತಾ ಹೋದರೆ ಒಂದು ಗ್ರಂಥವನ್ನೇ ಬರೆಯಬೇಕಾದೀತು. ಅವರು ಬೆಳೆದ ಹಿನ್ನೆಲೆ ಮಾತ್ರ ನಮಗೆ ಮುಖ್ಯವೆನಿಸುತ್ತದೆ. ಇವರ ಅಜ್ಜ ಮಹಾರುದ್ರಪ್ಪನವರು ಕಮ್ಮಾರಿಕೆ ಕೆಲಸದಲ್ಲಿ ಸಿದ್ಧಹಸ್ತರು ಮತ್ತು ಬಹಳ ಅನುಭವವುಳ್ಳವರಾಗಿದ್ದರು. ನಂತರ ಲೋಹಶಿಲ್ಪ ಕಲೆಯನ್ನು ಕರಗತ ಮಾಡಿಕೊಂಡಿದ್ದರು. ಎಂತಹ ಕಠಿಣ ಕೆಲಸ

ಬಂದರೂ ಎದೆಗುಂದದೇ ಸರಾಗವಾಗಿ ಸರಳವಾಗಿ ಮಾಡಬಲ್ಲ ಚತುರತೆ ಪಡೆದವರು. ನವಿರು ನವಿರಾದ ಸೂಕ್ಷ್ಮ ಕೆತ್ತನೆ, ಸೂಕ್ಷ್ಮ ಎಳೆಯ ಕೆತ್ತನೆಗಳಿಗೆ ಕಿರಿದಾದ ಲೋಹದ ತಗಡಿನಲ್ಲಿ ಬ್ರಹ್ಮಾಂಡವನ್ನು ತೋರಿಸಬಲ್ಲ ನಯಗಾರಿಕೆಯ ಕೆಲಸಗಳಿಗೆ ಪ್ರಸಿದ್ಧಿ. ಹೀಗೆಯೇ ಜನಾಂಗದ ಸಮಸ್ಯೆಗಳಿಗೆ ಸ್ಪಂದಿಸುವ ಮತ್ತವರ ಕೆಲಸ ಕಾರ್ಯಗಳಿಗೆ ದುಃಖ ದುಮ್ಮಾನಗಳಿಗೆ ಹೆಗಲುಕೊಡುವ ಗುಣ ಅವರದು. ಇಂತಹವರಲ್ಲಿ ಶಿಷ್ಯವೃತ್ತಿ ಮಾಡಿದ ಶಂಕರಾಚಾರ್ಯರು ಸಹಜವಾಗಿಯೇ ಅವರ ಸದ್ಗುಣಗಳ ಕೆಲ ಚಾತುರ್ಯಗಳನ್ನು ಮೈಗೂಡಿಸಿಕೊಂಡು ಬಂದರು. ಅಲ್ಲಿಯವರೆಗಿನ ಕಲಾಜೀವನದಲ್ಲಿ ಯಾವುದೇ ಶಿಲಾ ಕಾರ್ಯವನ್ನು ಆರಂಭ ಮಾಡಿದಾಗ್ಯೂ ತಮ್ಮ ಪೂಜ್ಯ ಕೆಲಸವನ್ನು ಗುರುಗಳೋಪಾದಿಯಲ್ಲಿ ಮನದಲ್ಲಿ ಧ್ಯಾನಿಸಿ ಮಾಡುವುದರಿಂದ ತಮ್ಮ ಎಲ್ಲಾ ಕಾರ್ಯಗಳೂ ಸಫಲತೆಯನ್ನು ಕಂಡಿವೆಯೆಂದು ಹೇಳುತ್ತಾರೆ.

ಅವರ ಪ್ರಕಾರ ಕಲೆಗಳು ಅನೇಕ ವಿಧವಾಗಿದ್ದು, ಕಲಾಸಂದರ್ಭಕ್ಕನುಗುಣವಾಗಿ ಎಲ್ಲವೂ ತೋರಿ ಅಡಗಿ ಹೋಗುವಂತಹ ಕಲೆಗಳಾಗಿವೆ. ಆದರೆ ಲೋಹಶಿಲ್ಪಕಲೆ ಪ್ರಾಚೀನವಾದದ್ದು ಮತ್ತು ಎಲ್ಲಾ ಕಲೆಗಳಂತೆ "ತೋರಿ ಅಡಗುವ ಕಲೆ ಅಲ್ಲವೇ ಅಲ್ಲ, ಅದುವೇ ಲೋಹಶಿಲ್ಪ ಕಲೆ" ಎಂದು ಹೇಳುತ್ತಾರೆ. ಹೀಗೆ ಲೋಹಶಿಲ್ಪಕಲೆಗಳಲ್ಲಿ ಅತ್ಯಂತ ಗಂಭೀರವಾದದ್ದು ಮತ್ತು ಅಷ್ಟೇ ಆಧ್ಯಾತ್ಮಿಕ ರಹಸ್ಯಗಳನ್ನು ಒಳಗೊಂಡಿರುವಂತಹದು. ಕಲಾವಿದ ಶಂಕರಾಚಾರ್ಯರು ಭಾವಪೂರ್ಣ ವಾಗಿ ಹೇಳುತ್ತಾರೆ. ಇದರಿಂದ ಇವರ ಕಲಾಜ್ಞಾನ, ಶಾಸ್ತ್ರ ಅಧ್ಯಯನ, ಅವರ ಒಂದು ಆಧಾತ್ಮಿಕ ಅನುಭವಗಳ ಸಾರ, ಸಾತ್ವಿಕತೆ ಎಷ್ಟು ಉನ್ನತ ಮಟ್ಟದ್ದಾಗಿದೆ ಮತ್ತು ಅಷ್ಟೇ ತರ್ಕ ಬದ್ಧವಾಗಿರುವುದು ನಮಗೆ ಕಂಡುಬರುತ್ತದೆ. ಈ ರೀತಿಯಾಗಿ ಲೋಹಶಿಲ್ಪ ಕಲೆಯಲ್ಲಿ ಅನುಭವ ಸಿದ್ಧರಾದ ಅವರು ಅದರೊಳಗೆ ತಮ್ಮ ತಪಃಶಕ್ತಿಯನ್ನು ಸಿದ್ಧಿಸಿಕೊಳ್ಳಬೇಕಾಗುತ್ತದೆ. ತಾವು ನಂಬಿರುವ ದೈವವನ್ನು ತಮ್ಮ ಕಲಾವಂತಿಕೆಯಿಂದ ಕಾಣುವ ಸ್ವಭಾವದವರಾದ ಅವರು ಬಹಳ ಕಠಿಣಕರವಾದ ಕಟ್ಟುನಿಟ್ಟಾದ ಆಚಾರ, ಸಂಪ್ರದಾಯಗಳನ್ನು ಅನುಸರಿಸುತ್ತಾ ಬಂದಿದ್ದಾರೆ. ಇವರು ನಿತ್ಯವೂ ಸ್ನಾನ, ಸಂಧ್ಯಾವಂದನೆ, ಪೂಜಾದಿಗಳನ್ನು ವಿಧಿವತ್ತಾಗಿ ಮತ್ತು ತಮ್ಮ ಕಲಾಕ್ಷೇತ್ರಕ್ಕೂ ಅನ್ವಯವಾಗುವಂತೆ ತಮ್ಮ ಆಚಾರ ವಿಚಾರಗಳನ್ನು ಅಳವಡಿಸಿಕೊಳ್ಳುತ್ತಾ ಬಂದಿದ್ದಾರೆ.

**ಪ್ರಶಸ್ತಿ ಮತ್ತು ಪುರಸ್ಕಾರಗಳು**

ಕಲಾವಿದ ಶಂಕರಾಚಾರ್ಯರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಹಾಗೂ ಶಿಲ್ಪ ಕಲಾ ಅಕಾಡೆಮಿ ಗೌರವ ಪ್ರಶಸ್ತಿ ಸಂಘ ಸಂಸ್ಥೆಗಳಿಂದ ಅನೇಕ ಸನ್ಮಾನ ಪ್ರಶಸಿಗಳಿಗೆ ಭಾಜನರಾಗಿದ್ದಾರೆ ಸರಳ ಜೀವನದ ಕಲಾವಿದರಾಗಿದ್ದು ಕಲಾಕೃತಿ ನಿರ್ಮಾಣದಲ್ಲಿಯೇ ಅವರ ಬದುಕು ಪರಿಪಕ್ವವಾಗಿದೆ. ಯಾವಾಗಲೂ ಲೋಹ ಶಿಲ್ಪ ಕಲೆಯಲ್ಲೇ ಕ್ರಿಯಾಶೀಲರಾಗಿ ತಮ್ಮ ೭೫ನೇ ವಸಂತದಲ್ಲಿಯೂ ಲೋಹ ಶಿಲ್ಪ ನಿರ್ಮಾಣ ಕಾರ್ಯದಲ್ಲಿ ಮಗ್ನರಾಗಿದ್ದಾರೆ. ಇವರು ಕೂಡ ಆರ್ಥಿಕವಾಗಿ ಸರಕಾರದ ಯಾವುದೇ ಸೌಲಭ್ಯವನ್ನು ಪಡೆಯದೇ ತಮ್ಮ ಕಲೆಯನ್ನೆ ನಂಬಿ ಬದುಕನ್ನು ನಡೆಸುತ್ತಿದ್ದಾರೆ.



**ಶಿಲ್ಪಯೋಗಿ ಶ್ರೀ. ಜಿ. ಜಿ. ಹಂಸನಂದಾಚಾರ್ಯ**
(ಬಳ್ಳಾರಿ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಶಿಲ್ಪಕಲಾ ಕೃತಿ ನಿರ್ಮಿಸುವ ಕಾರ್ಯದಲ್ಲಿ ನಿರತ ಕಲಾವಿದರು




ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ "ಜಕಣಾಚಾರಿ ಪ್ರಶಸ್ತಿ" ಪುರಸ್ಕಾರ ಸಮಾರಂಭ - ೨೦೧೨

# ಹೈದರಾಬಾದ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು



**ಲೋಹಶಿಲ್ಪಿ ಶ್ರೀ. ಶಂಕರಾಚಾರ್ಯ**
(ಬಳ್ಳಾರಿ ಜಿಲ್ಲೆಯ ಸಾಂಪ್ರದಾಯಿಕ ಶಿಲ್ಪಕಲಾವಿದರು)



ಲೋಹಶಿಲ್ಪ ಕಲಾಕೃತಿ ನಿರ್ಮಿಸುವ ಕಾರ್ಯದಲ್ಲಿ ನಿರತ ಕಲಾವಿದರು



ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಗೌರವ ಪ್ರಶಸ್ತಿ ಪುರಸ್ಕಾರ ಸಮಾರಂಭ - ೨೦೧೪

ಒಟ್ಟಾರೆ ಭಾರತೀಯ ಸಾಂಪ್ರದಾಯಿಕ ಶಿಲ್ಪಗಳಲ್ಲಿ ಕೆಲವು ಇತ್ತೀಚಿನ ತಾಂತ್ರಿಕ ಬೆಳವಣಿಗೆಗಳನ್ನು ಅಳವಡಿಸಲಾಗಿದೆ. ಲೋಹಗಳ ಶುದ್ಧೀಕರಣ, ಮರ, ಶಿಲೆ, ಲೋಹ, ಜೇಡಿಮಣ್ಣು ಅಲ್ಲದೇ ಫೈಬರ್ ಗ್ಲಾಸ್ ಮುಂತಾದ ಹೊಸ ವಸ್ತುಗಳ ಬಳಕೆ, ದೇವ-ದೇವತೆಗಳ ಮೂರ್ತಿಗಳಲ್ಲದೇ ಇತರ ರೂಪಗಳ ಬಳಕೆ ಹೀಗೆ ಹಲವಾರು ಬದಲಾವಣೆಗಳಿದ್ದರೂ ಶಿಲ್ಪಿಗಳ ಕುಶಲತೆ ಮುಂದುವರಿದಿದೆ. ನಮ್ಮ ಈಗಿನ ಪೀಳಿಗೆ ಹಾಗೂ ಮುಂಬರುವ ಪೀಳಿಗೆಗಳು ಸಾಂಪ್ರದಾಯಿಕ ಭಾರತೀಯ ಶಿಲ್ಪಕಲೆಯ ಭವ್ಯ ಪರಂಪರೆಯನ್ನು ಅರಿಯುವ ಮತ್ತು ಅರ್ಥೈಸಿಕೊಳ್ಳುವ ಒಳ್ಳೆಯ ಅಂಶಗಳನ್ನು ಮೆಚ್ಚುವ ಬಗ್ಗೆ ಅಭಿಮಾನ ಮತ್ತು ಹೆಮ್ಮೆ ತಾಳುವ ಚಿತ್ತವೃತ್ತಿ ಬೆಳೆಸಿಕೊಳ್ಳುವುದು ಅವಶ್ಯವಾಗಿದೆ. ಈ ಗುರಿ ಸಾಧಿಸುವ ಭರವಸೆಯಿಂದ "ಚಿರಮಭಿ ವರ್ದತಾಂ ಭಾರತೀಯ ಶಿಲ್ಪ ಕಲಾಶ್ರೀ" ಎಂದು ಹಾರೈಸೋಣ.

## ಅಧ್ಯಾಯ : ನಾಲ್ಕು

# ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರ ವೈಶಿಷ್ಟ್ಯ

ಶಿಲ್ಪ ಎನ್ನುವುದು ಬಹುವಾಗಿ ರೂಢಿಯಲ್ಲಿರುವ ಪದ. ಕರಕೌಶಲ್ಯದಿಂದ ಉತ್ಪನ್ನವಾದ ವಸ್ತು ಅಥವಾ ಕಲಾ ವಿಶೇಷ ಎಂಬುದು ಇದರ ಸಾಧಾರಣ ಅರ್ಥ. ಇದರ ಸೃಷ್ಟಿಗೆ(ತಯಾರಿಕೆಗೆ) ಬಳಸಿರುವ ವಸ್ತುವನ್ನು ಆಧರಿಸಿ ಶಿಲಾಶಿಲ್ಪ(ಕಲ್ಲಿನ ಶಿಲ್ಪ), ಮೃಣ್(ಮಣ್ಣಿನ) ಶಿಲ್ಪ, ಕಾಷ್ಠ(ಮರದ) ಶಿಲ್ಪ, ಲೋಹ(ಕಬ್ಬಿಣ, ತಾಮ್ರ, ಕಂಚು ಇತ್ಯಾದಿ ಲೋಹಗಳಿಂದ ತಯಾರಾದ) ಶಿಲ್ಪ, ಸ್ವರ್ಣ (ಬಂಗಾರ) ಶಿಲ್ಪ ಇತ್ಯಾದಿಯಾಗಿ ಬಗೆಗಳನ್ನು ಹೇಳುವುದುಂಟು. ಶಿಲ್ಪ ಎನ್ನುವುದು ಸಂಸ್ಕೃತ ಶಬ್ದ. **ಶಿಲ್(=ಸಮಾಧೌ)** ಧಾತುವಿನಿಂದ ನಿಷ್ಪನ್ನವಾಗಿದೆ. ಸಮಾಧಿ ಎಂದರೆ ತಪಸ್ಸು. ತಪಸ್ಸಿನಿಂದ ಸಿದ್ಧ ವಾಗಿರುವ, ಕೌಶಲದಿಂದ ಕೂಡಿರುವ ನಿರ್ಮಾಣವನ್ನು ಶಿಲ್ಪ ಎಂದು ಪರಿಗಣಿಸಬೇಕು ಎಂಬುದು ಪದನಿಷ್ಪತ್ತಿ ಶಾಸ್ತ್ರದ ಆಶಯ.[೧]

ತಪಸ್ಸು ಸುಮ್ಮನೆ ಇದ್ದಕ್ಕಿದ್ದಂತೆಯೇ ಆಗುವುದಿಲ್ಲ. ಇದಕ್ಕೆ ಮೊದಲು ಒಂದು ಸಂಕಲ್ಪ, ಆ ಸಂಕಲ್ಪದಿಂದ ಪ್ರೇರಿತವಾದ ಆಲೋಚನೆ, ಧ್ಯಾನ, ಭಾವನೆ ಇತ್ಯಾದಿಗಳನ್ನೆಲ್ಲಾ ಒಳಗೊಂಡು ನೆರವೇರಿದ ತಪಸ್ಸಿನ ಫಲವೇ ಶಿಲ್ಪ. ಇದರಲ್ಲಿ ಕಲಾಕೌಶಲ್ಯವೂ ಸೇರಿರುವ ಸಾಧ್ಯತೆಯೂ ಉಂಟು. ತಪಸ್ಸಿನ ಪ್ರಭಾವದಿಂದ ನಿರ್ವಹಿಸಲ್ಪಡುವುದು ಶಿಲ್ಪ ಎಂಬುದೇ ಸಂಪೂರ್ಣ ಅರ್ಥವಲ್ಲ. ಇದು ಒಂದು ಮುಖದ ಅರ್ಥ. ಸಮಾಧಿ ಸೌಖ್ಯವನ್ನು ದಯಪಾಲಿಸುವುದು ಎಂಬುದು ಇನ್ನೊಂದು ಮುಖದ ಅರ್ಥ. ಶಿಲ್ಪಕರ್ಮವನ್ನು ನಿರ್ವಹಿಸುವವನು(ಶಿಲ್ಪಿ) ತನ್ನ ತಪಸ್ಸಿನಿಂದ(ಸಂಕಲ್ಪ, ಆಲೋಚನೆ ಇತ್ಯಾದಿಗಳಿಂದ) ಶಿಲ್ಪವನ್ನು ನಿರ್ಮಿಸಿ ಕೃತಕೃತ್ಯತೆಯನ್ನು ಪಡೆಯುತ್ತಾನೆ. ಆದ್ದರಿಂದ ಮೊದಲ ಅರ್ಥವು ಶಿಲ್ಪಿಗೆ ಅನ್ವಯವಾಗುತ್ತದೆ. ಎರಡನೆಯ ಅರ್ಥವನ್ನು ಶಿಲ್ಪಕಲಾ ದರ್ಶಕನ ಪರವಾಗಿ ಅನ್ವಯಿಸಬೇಕಾಗಿರುತ್ತದೆ. ಏಕಾಗ್ರಚಿತ್ತದಿಂದ ಶಿಲ್ಪಿಯಾದವನು ನಡೆಸುವ ಶಿಲ್ಪಕರ್ಮದ ಫಲವಾಗಿ ರೂಪುಗೊಳ್ಳುವ ಶಿಲ್ಪವು ಅದನ್ನು ನೋಡುವವನಲ್ಲಿ ಸೌಂದರ್ಯ ಆರಾಧನಾ ಪ್ರಜ್ಞೆಯನ್ನು

---

೧. ಮ. ಗಂಗಾಧರಮೂರ್ತಿ (ಸಂ.) : ವಿಶ್ವಕರ್ಮ ಮಾಸಪತ್ರಿಕೆ, ಸಂಚಿಕೆ–೮, ಪು–೧೬

ಉದ್ದೀಪನಗೊಳಿಸಿ, ಅವನಿಗೆ ಸಮಾಧಿ ಸ್ಥಿತಿಯನ್ನು ತಂದುಕೊಟ್ಟು, ಆನಂದವನ್ನು ಕರುಣಿಸುತ್ತದೆ. ಆದ್ದರಿಂದ ಶಿಲ್ಪವು ಅತ್ಯಂತ ಮಹತ್ತರವೂ ಪೂಜ್ಯವೂ ಆದುದು ಎಂಬುದು ವೇದ ಋಷಿಗಳ ಭಾವನೆ. ಆದ್ದರಿಂದಲೇ ಶಿಲ್ಪಯೋಗ ಎಂದು ಇದನ್ನು ಕರೆದಿರುವುದು.

ಪ್ರತಿಯೊಂದು ಯೋಗಕ್ಕೂ ಒಂದು ಗುರಿ, ಒಂದು ಫಲ ಇದ್ದೇ ಇರುತ್ತದೆ. ಹಾಗಿದ್ದರೆ ಶಿಲ್ಪ ಯೋಗದ ಫಲವೇನು? ಋಗ್ವೇದವು ಇದರ ಫಲವನ್ನು ಬಹು ಸ್ಪಷ್ಟ ರೀತಿಯಲ್ಲಿ ಹೇಳಿದೆ(ಋಗ್ವೇದ ಸಂಹಿತೆ, ಸ್ವಾಧ್ಯಾಯಮಂಡಲ, ಪಾರಡಿ, ಋ.ಸಂ. ೧:೧೧೦:೮).: ಆಂಗಿರಸ ಬ್ರಹ್ಮರ್ಷಿಯ ಮಗನಾದ ಸುಧನ್ವನಿಗೆ ಮೂವರು ಮಕ್ಕಳು-ಋಭು, ವಿಭ್ವ ಮತ್ತು ವಾಜ. ಇವರು ಮನುಷ್ಯರು(**ಮನುಸೂನವಃ**). ಆದ್ದರಿಂದ ಮರಣಧರ್ಮ ಶೀಲರು. ತ್ವಷ್ಟ ಪ್ರಜಾಪತಿಯ ಶಿಷ್ಯರು. ಇವರಿಗೆ ಶಿಲ್ಪವನ್ನು ಬೋಧಿಸಿದ್ದು ತ್ವಷ್ಟ ಪ್ರಜಾಪತಿಯೇ. ಮರದಲ್ಲಿ ತಯಾರಿಸುವ ಚಮಸ ಎಂಬ ಪಾತ್ರೆಯನ್ನು ಯಜ್ಞಗಳಲ್ಲಿ ಬಳಸುತ್ತಾರೆ. ಇದರ ತಯಾರಿಕೆಯಲ್ಲಿ ಋಭುಗಳು ಬಹು ನಿಪುಣರೆಂದು ಪ್ರಖ್ಯಾತಿ. ಒಂದನ್ನು ನಾಲ್ಕು ಚಮಸಗಳಾಗಿ ಮಾಡಿದರು. ದೇವತೆಗಳು ಬಯಸಿದ ಹಲವು ಶಿಲ್ಪಗಳನ್ನು ತಯಾರಿಸಿಕೊಟ್ಟರು. ಹೀಗೆ ಶಿಲ್ಪದ ಮೂಲಕ ಅವರು ಲೋಕ ಸಂಗ್ರಹವನ್ನು ಮಾಡಿದ್ದರಿಂದ ಇವರಿಗೆ ದೈವತ್ವವು ಲಭಿಸಿತು. ಇದರ ಫಲವಾಗಿ ಇವರು ಸೂರ್ಯ ಸಮಾನ ತೇಜೋವಂತರಾಗಿ ಸಂವತ್ಸರದಲ್ಲಿ ವರ್ಷಋತು ಕಾಲದಲ್ಲಿ ಮಾಡಬಹುದಾದ ಅಗ್ನಿಷ್ಟೋಮಾದಿಗಳಲ್ಲಿ ಹವಿರ್ಭಾಗವನ್ನು ಪಡೆಯುವ ಹಕ್ಕನ್ನು ಗಳಿಸಿಕೊಂಡರು. ಮರ್ತ್ಯಾಸಃ ಸಂತೋ ಅಮೃತತ್ವಮಾನುಶುಃ ಎಂಬುದಾಗಿ ಋಗ್ವೇದವು ಅವರ ಸಾಧನೆಯನ್ನು ವರ್ಣಿಸಿದೆ.

ಶಿಲ್ಪಕರ್ಮವನ್ನು ನೆರವೇರಿಸಿದ ಋಭುಗಳು - ಮರಣಶೀಲ ಧರ್ಮವುಳ್ಳ ಮನುಷ್ಯರಾಗಿದ್ದವರು ದೇವತೆಗಳಾದರು. ಎಂದರೆ ಶಿಲ್ಪಯೋಗದಿಂದ ಮನುಷ್ಯರಾದವರು ದೇವತೆಗಳಾಗಬಲ್ಲರು! ಇದು ಶಿಲ್ಪಯೋಗದ ಫಲ. ಶಿಲ್ಪಶಾಸ್ತ್ರಾಧ್ಯಯನವು ವೇದಾಧ್ಯಯನಕ್ಕೆ ಸಮಾನವಾದುದು. ಸಾಂಖ್ಯಯೋಗ ಮತ್ತು ಅದರ ತಿಳಿವು ಅಷ್ಟಾಂಗಯೋಗ ಮತ್ತು ವಿದ್ಯೆಗಳು, ಶಿಲ್ಪ ಮುಂತಾದ ಕರ್ಮಗಳು, ವೇದ ಮೊದಲಾದ ಶಾಸ್ತ್ರಗಳು ಅವುಗಳಲ್ಲಿರುವ ವಿಭಾಗ ಜ್ಞಾನ ಈ ಸಕಲವು ಪರಮೇಶ್ವರನಿಂದಲೇ ಉಪದೇಶಿತವಾದುವು ಎಂದು ಮಹಾಭಾರತವು(**ಯೋಗೋ ಜ್ಞಾನಂ ತಥಾ ಸಾಂಖ್ಯಂ ವಿದ್ಯಾಃ ಶಿಲ್ಪಾನಿ ಕರ್ಮ ಚ । ವೇದಾಃ ಶಾಸ್ತ್ರಾಣಿ ವಿಜ್ಞಾನಮೇತತ್ಸರ್ವಂ ಜನಾರ್ದನಾತ್ ॥**) ಎಂದು ಹೇಳಿದೆ. ವೇದ ಮತ್ತು ಶಿಲ್ಪ ಅಧ್ಯಯನಗಳು ಸಮಾನವಾದುವು ಎಂಬುದಾಗಿ ಸ್ಪಷ್ಟಪಡಿಸಿದ್ದು ಇವೆಲ್ಲಾ ಪರಮಾತ್ಮನಿಂದಲೇ ಮೊದಲಿಗೇ ಸ್ಪಷ್ಟವಾಗಿ ಬಂದಿವೆ ಎಂದು ಹೇಳಿದೆ. ಇದು ಶಿಲ್ಪಯೋಗ ಸಾಧನೆಯ ಅಂತಿಮ ಫಲ. ಅದಕ್ಕೂ ಮೊದಲೇ ಹಲವು ಹಂತಗಳಲ್ಲಿ ಫಲ ನೀಡುವುದೂ ಶಿಲ್ಪವೇ. ಈ ಅಂಶವನ್ನು **ಶಿಲ್ಪ ವಿದ್ಯಾರಹಸರ್ಯೋಪನಿಷತ್ತು ರೂಪಮೇವ ತಚ್ಛಿಲ್ಪಂ** ಎಂದು ರೂಪ ನಿರ್ಮಾಣವೇ ಶಿಲ್ಪ. ಆದ್ದರಿಂದ ಸಕಲ ಚರಾಚರಗಳೂ ಶಿಲ್ಪ ಮೂಲದಿಂದಲೇ ಬಂದಿವೆ ಎಂಬುದಾಗಿ (**ಅತಃ ಶಿಲ್ಪಮೂಲಾನಿ ಸರ್ವಾಣಿ**) ನಿರ್ಣಯಿಸಿದೆ. ಶಿಲ್ಪದಿಂದ ಲಭಿಸಬಹುದಾದ ಪ್ರತಿಫಲಗಳ ಬಗ್ಗೆ ಶಿಲ್ಪ ವಿದ್ಯಾರಹಸ್ಯೋಪನಷತ್ತು ಇಂತು ನಿರ್ದೇಶಿಸಿದೆ.[೨]

---

೨. ಮ. ಗಂಗಾಧರಮೂರ್ತಿ (ಸಂ.) : ವಿಶ್ವಕರ್ಮ ಮಾಸಪತ್ರಿಕೆ, ಸಂಚಿಕೆ–೮, ಪು–೧೭, ೧೮

*ಏಭಿಃ ಸುಖಂ ಜೀವಿಯುರ್ಲೋಕಾಃ |*
*ಏಭಿರಾಪ್ನುಯಾನ್ನಿಶ್ರೇಯಸಂ |*
*ಏಭಿರ್ಭವಂತಿ ಜಗಂತಿ ಚಕ್ಷುಷ್ಮಂತಿ |*
*ಏಭಿಃ ಪೂಜ್ಯಂತೇಽತ್ರ ವೇಧಸಃ ಸ್ಥಪತಯಶ್ಚ |*
*ಏಭಿಃ ಪೂರ್ಣಂ ಭವತ್ಯಾನಂದಂ ಚ |*
*ಏಭಿರ್ಮುಮುಕ್ಷವಃ ಪ್ರಾಪ್ನುವಂತಿ ಮೋಕ್ಷಂ |*

ಇಹಲೋಕದಲ್ಲಿರುವ ಜೀವಿಗಳಿಗೆ ಸಕಲ ಸುಖಸೌಭಾಗ್ಯಗಳನ್ನು ಈ ಶಿಲ್ಪವೇ ಕರುಣಿಸುತ್ತದೆ. ಶಿಲ್ಪ ಪ್ರತಿಪಾದ್ಯವಾದ ದೇವಾಲಯಾದಿಗಳ ನಿರ್ಮಾಣ ಮತ್ತು ದೇವತಾಮೂರ್ತಿಗಳ ರೂಪ ಕಲ್ಪನೆಯಿಂದ ಆಯಾ ದೇವತೆ ಉಪಾಸಕರು ಆಯಾ ಮಂತ್ರ ಪ್ರತಿಪಾದ್ಯ ದೇವಮೂರ್ತಿಗಳ ಲಕ್ಷಣಗಳಿಗೆ ಅನುಗುಣವಾಗಿ ಶಿಲ್ಪಕ್ರಮದಿಂದ ನಿರ್ಮಿತವಾಗಿರುವ ದೇವತಾಮೂರ್ತಿಗಳ ರೂಪಧ್ಯಾನಾದಿಗಳಿಂದ ಚಿತ್ತಶುದ್ಧಿಯನ್ನು, ಏಕಾಗ್ರ ನಿಷ್ಠೆಯನ್ನು ಹೊಂದುವುದರಿಂದ ಶಿಲ್ಪವೇ ಮೋಕ್ಷಸಾಧನವಾಗಿರುತ್ತದೆ. ಸಕಲ ಶಾಸ್ತ್ರಗಳ ಅಧಿಷ್ಠಾತೃ ದೇವಮೂರ್ತಿಗಳ ಆರಾಧನೆಯಿಂದಲೇ ಸಕಲ ಜ್ಞಾನಗಳ ಸಿದ್ಧಿಯಾಗುವುದರಿಂದ ಶಿಲ್ಪ ಎಂದು ಕರೆಯುತ್ತಾರೆ. ಇಂತಹ ಲೋಕಸಂಗ್ರಾಹಕವಾದ ಶಿಲ್ಪಶಾಸ್ತ್ರವನ್ನು ಅನುಸರಿಸಿ ಸೃಷ್ಟಿಕರ್ತನಂತೆಯೇ ನಿತ್ಯ ನೂತನ ಶಿಲ್ಪಗಳ ಸೃಷ್ಟಿಕರ್ತೃಗಳಾಗಿರುವ ಸ್ಥಪತೀಶ್ವರರು ಪ್ರಪಂಚದಲ್ಲಿ ಸೃಷ್ಟಿಕರ್ತನ ಪ್ರತಿನಿಧಿಗಳಾಗಿರುವುದರಿಂದ, ಅವರು ಎಲ್ಲರಿಗೂ, ಎಲ್ಲಾ ಕಾಲಗಳಲ್ಲೂ ಪೂಜನೀಯರಾಗಿರುತ್ತಾರೆ. ಇಂತಹ ಶಿಲ್ಪವೇದದ ಪರಿಪೂರ್ಣ ಜ್ಞಾನವುಳ್ಳವರಾದ ಸ್ಥಪತಿಗಳಿಂದ, ಅವರ ಸೃಷ್ಟಿಗಳಿಂದ ಎಲ್ಲರಿಗೂ ಸಂಪೂರ್ಣವಾದ ಆನಂದವು ಲಭಿಸುತ್ತದೆ.[೩]

ಇದನ್ನೇ ಶಿಲ್ಪವೆಂದು ಹೇಳುತ್ತಾರೆ(**ಇತ್ಯೇವಂ ಭವತಿ ಶಿಲ್ಪಂ**). ಶಿಲ್ಪದ ಶಾಸ್ತ್ರೀಯ ನಿರ್ವಚನ ಇದು: ಇಹದಲ್ಲಿ ಸುಖ-ಸಂತೋಷ ಮತ್ತು ಪರದಲ್ಲಿ ಮೋಕ್ಷದ ಆನಂದವನ್ನು **ಕರುಣಿಸಲು ಶಕ್ತವಾದ ಜ್ಞಾನ ಅಡಗಿಸಿಕೊಂಡಿರುವುದೇ ಶಿಲ್ಪ**. ಇದಿಷ್ಟೇ ಅಲ್ಲ ಈ ಶಿಲ್ಪಯೋಗವನ್ನು ಪಾರಂಪರ್ಯ ದಿಂದ ರೂಢಿಸಿಕೊಂಡು ಬಂದು ಸ್ಥಪತಿಯಾದವನಿಗೂ ಇಹ-ಪರ ಸಾಧಕವಾಗುವುದರೊಂದಿಗೆ ಆತನೇ ಸೃಷ್ಟಿಕರ್ತೃವಿನ ಪ್ರತಿನಿಧಿಯಾಗಿ ಈ ಪ್ರಪಂಚದಲ್ಲಿ ಗೌರವವನ್ನು ಪಡೆಯುವ ಭಾಗ್ಯವು ಲಭಿಸುತ್ತದೆ.

**ಶಿಲ್ಪ ಮಾಡಿಸುವವನಿಗೆ ಏನು ಫಲ?**

ಈ ವಿವರಗಳು ಶಿಲ್ಪಿಗೆ ಮತ್ತು ಶಿಲ್ಪಶಾಸ್ತ್ರಕ್ಕೆ ಅನ್ವಯಿಸುತ್ತವೆ ಎಂಬುದು ಸರಿಯೆ. 'ಇವನ್ನು ಮಾಡಿಸಿದವನಿಗೆ(ಕಾರಯಿತನಿಗೆ) ಶಿಲ್ಪವು ಕೊಡುವ ಫಲವೇನು?' ಎಂಬುದು ನಾವು ತಿಳಿಯಬೇಕಾಗಿರುವ ಮುಖ್ಯ ಅಂಶವೇ.

ಸ್ವರ್ಣಾಭರಣಗಳ ಅಲಂಕಾರ ಧಾರಣೆಯ ವಿನಿಯೋಗಾರ್ಥವಾಗಿ ಋಗ್ವೇದದ ಖಿಲಸೂಕ್ತಗಳಲ್ಲಿ **ಹಿರಣ್ಯ ಸೂಕ್ತ** ಎಂದು ಹೆಸರಾಗಿರುವ ಈ ಮಂತ್ರವನ್ನು ಪಠಿಸುವ ಪದ್ಧತಿಯುಂಟು-

*ಆಯುಷ್ಯಂ ವರ್ಚಸ್ಯಂ ರಾಯಸ್ಪೋಷಮೌದ್ಭಿದ್ಯಂ |*

---

೩. ಮ. ಗಂಗಾಧರಮೂರ್ತಿ (ಸಂ.) : ವಿಶ್ವಕರ್ಮ ಮಾಸಪತ್ರಿಕೆ, ಸಂಚಿಕೆ–೮, ಪು–೧೯

*ಇದಂ ಹಿರಣ್ಯಂ ವರ್ಚಸ್ವಂ ಜೈತ್ರ್ಯಾಯಾವಿಶತಾದಿಮಾಂ |*
*ಉಚ್ಚೈರ್ವಾಜಿಪೃತನಾಷಾಟ್ ಸಭಾಸಾಹಂ ಧನಜಯಂ |*
*ಸರ್ವಾಃ ಸಮಗ್ರಾಋದ್ಧಯೋ ಹಿರಣ್ಯೇಸ್ಮಿಂತ್ಸಮಾಹಿತಾಃ |*
*ಶುನಮಹಾಂ ಹಿರಣ್ಯಸ್ಯ ಪಿತುರ್ನಾನವೇ ಜಗ್ರಭಂ |*
*ತೇಜನಮಾಂ ಸೂರ್ಯತ್ವ ಚಮಕರಂ ಪೂರುಷ ಪ್ರಿಯಂ |*
*ಸಮ್ರಾಜಂ ಚ ವಿರಾಜಂ ಚಾಭಿಷ್ಟಿರ್ಯಾಚಮೇ ಧ್ರುವಾ |*
*ಲಕ್ಷ್ಮೀರಾಷ್ಟ್ರಸ್ಯ ಯಾಮುಖೇತ ಯಾಮಾಮಿಂದ್ರ ಸಂಸೃಜ ||*

ಸಾಯಣಾಚಾರ್ಯರ ಭಾಷ್ಯಾನುಸಾರ ಈ ಮಂತ್ರದ ತಾತ್ಪರ್ಯವು ಇಂತಿದೆ:

ಆಯುಷ್ಯ, ವರ್ಚಸ್ಸು, ಸರ್ವವಿಧವಾದ ಧನಗಳಿಗೂ ಮೂಲವಾಗಿರುವ ಕೀರ್ತಿಯನ್ನು ತಂದುಕೊಡುವಂತಹ ಹಿರಣ್ಯವು ನಮ್ಮನ್ನು ಪ್ರವೇಶಿಸಲಿ. ನಮ್ಮನ್ನು ದೃಢವಾಗಿಸಿ, ಗಟ್ಟಿಯಾಗಿ ಮಾತಾಡುವವರನ್ನು, ಶತ್ರು ಸಂಪತ್ತುಗಳನ್ನು ಜಯಿಸಿ, ಸಕಲ ಐಶ್ವರ್ಯಗಳನ್ನು ಪಡೆಯುವಿಕೆಯು ಈ ಹಿರಣ್ಯದೇವನನ್ನು ಆಶ್ರಯಿಸಿಕೊಂಡಿವೆ. ಎಲೈ ಹಿರಣ್ಯವೇ ತಂದೆಯನ್ನು ಸ್ಮರಿಸುವಂತೆ ನಿನ್ನನ್ನು ಸ್ಮರಿಸುತ್ತಿದ್ದೇನೆ. ನನ್ನನ್ನು ಸೂರ್ಯನಂತೆ ತೇಜಶ್ಶಾಲಿಯನ್ನಾಗಿ ಮಾಡು. ಜನರಿಗೆ ನನ್ನನ್ನು ಪ್ರಿಯನನ್ನಾಗಿ ಮಾಡು. ನನ್ನನ್ನು ಸಾಮ್ರಾಟನನ್ನಾಗಿ ವಿರಾಟನನ್ನಾಗಿ ಯಾವ ಲಕ್ಷ್ಮಿಯಿಂದ ನೀನು ಮಾಡಿಸುತ್ತಿರುವೆಯೋ ಆ ಲಕ್ಷ್ಮಿಯು ನನ್ನ ಗೃಹಕ್ಕೆ ಅಭಿಮುಖಳಾಗಿರುವಂತೆ ಮಾಡುವಂತಹವನಾಗು.[೪]

ಈ ಸೂಕ್ತದ ದ್ರಷ್ಟಾರ ಋಷಿಗಳು ಸಾನಗಾದಿ ಶಿಲ್ಪ ಋಷಿಗಳು. ದೇವತೆ ಹಿರಣ್ಯ. ಈ ಸೂಕ್ತವನ್ನು ಸುವರ್ಣಾಲಂಕಾರವನ್ನು ಧರಿಸುವಾಗ ಪಠಿಸಬೇಕು. ಇದರಿಂದ ಸ್ಪಷ್ಟವಾಗುವ ಅಂಶವೆಂದರೆ ಸುವರ್ಣಾಲಂಕಾರ ಧಾರಣೆಯಿಂದಲೇ ಧರಿಸಿದವನಿಗೆ ಐಶ್ವರ್ಯ ಸಿದ್ಧಿಯುಂಟಾಗುವ ಅವಕಾಶವಿದೆ ಎಂಬ ಮಹತ್ತ್ವದ ವಿಷಯ. ಸಾಧಾರಣವಾದ ಸುವರ್ಣ ಶಿಲ್ಪದ ಪ್ರಭಾವವೇ ಇಷ್ಟು ಮಹತ್ತರವಾದುದಾಗಿದ್ದರೆ ಇನ್ನುಳಿದ ಶಿಲ್ಪಗಳ ಮಹತ್ತ್ವನ್ನು ನಾವು ಕಲ್ಪಿಸಿಕೊಳ್ಳುವುದು ಅಸಾಧ್ಯವೇನಲ್ಲ. ಈ ಕಾರಣದಿಂದಲೇ ಐತರೇಯ ಬ್ರಾಹ್ಮಣವು *ಈ ಶಿಲ್ಪಗಳಿಂದ ಯಜಮಾನನ ಆತ್ಮವು ಸಂಸ್ಕಾರಗೊಳ್ಳುತ್ತದೆ*(***ಯಜಮಾನ ಆತ್ಮಾನಂ ಸಂಸ್ಕುರುತೇ***) ಎಂದು ಘೋಷಿಸಿರುವುದು.[೫]

## ಶಿಲ್ಪದ ವ್ಯಾಪ್ತಿ

(**ಇತ್ಯೇವಂ ಭವತಿ ಶಿಲ್ಪಂ**) ಎಂಬುದಾಗಿ ಯಾವುದನ್ನು ಉದ್ದೇಶಿಸಿ ಶಿಲ್ಪವೆಂದು ಶಿಲ್ಪವಿದ್ಯಾ ರಹಸ್ಯೋಪನಿಷತ್ತು ಹೇಳಿದೆಯೋ ಅದರ ಶಾಸ್ತ್ರೀಯವೂ, ಬಹುವ್ಯಾಪಕವೂ ಆಗಿರುವ ಅರ್ಥವನ್ನು ಹೇಳಬೇಕಾಗಿದ್ದರೆ ಈಗಾಗಲೇ ನಾವು ತಿಳಿದಿದ್ದೇವೆ ಎಂದುಕೊಂಡಿರುವುದೇ ಶಿಲ್ಪ ಎಂಬುದರ ಅರ್ಥ ಮತ್ತು ವ್ಯಾಪ್ತಿಯಲ್ಲ ಎಂಬುದನ್ನು ಶಿಲ್ಪಶಾಸ್ತ್ರದಿಂದಲೇ ಗ್ರಹಿಸಬೇಕು. ಈ ರೀತಿಯ ವ್ಯಾಪಕವಾದ ಅರ್ಥವನ್ನು ನಮ್ಮ ಗ್ರಹಿಕೆಗಾಗಿ ಹೇಳಿರುವ ಶಿಲ್ಪಶಾಸ್ತ್ರಗಳು ಇವೆಯೇ ಎಂದು ಹುಡುಕಬೇಕಾಗುತ್ತದೆ. ಬಹುದೊಡ್ಡ ದುರ್ದೈವ ಎಂದರೆ ಯಾವುದೇ ಶಿಲ್ಪಶಾಸ್ತ್ರವು ಸಮಗ್ರವಾಗಿ

---

೪. ಮ. ಗಂಗಾಧರಮೂರ್ತಿ (ಸಂ.) : ವಿಶ್ವಕರ್ಮ ಮಾಸಪತ್ರಿಕೆ, ಸಂಚಿಕೆ–೮, ಪು–೨೦
೫. ಅದೇ., ಪು–೨೧

ಇದುವರೆವಿಗೂ ನಮಗೆ ದೊರೆತಿಲ್ಲ. ಅನೇಕ ಬಾರಿ ಅವು ಹೇಳಿರುವ ವಿಷಯಗಳೇ ಅಪರಿಪೂರ್ಣವಾಗಿರುವುದುಂಟು. ಇದಕ್ಕೆ ಪ್ರಧಾನ ಕಾರಣವು ಶಿಲ್ಪಶಾಸ್ತ್ರಗಳು ಶಿಲ್ಪಿಗಳಿಗೆ ಕೈಪಿಡಿಗಳಾಗಿ (*Hand Book*) ಸಿದ್ಧವಾಗಿದ್ದು ಅವನ್ನು ಶಿಲ್ಪಿಗಳೇ ತಮ್ಮ ಸಾಂಪ್ರದಾಯಿಕ ಶಿಲ್ಪ ಗುರುಕುಲಗಳಲ್ಲಿ ಶಿಷ್ಯರಿಗೆ ಉಪದೇಶ ಮಾಡುತ್ತಿದ್ದದ್ದು. ಇದರಿಂದಾಗಿ ಈ ಶಾಸ್ತ್ರ ಗ್ರಂಥಗಳ ಅಧ್ಯಯನ ಮತ್ತು ಪ್ರಸರಣದಲ್ಲಿ ಅನ್ಯರ ಪ್ರವೇಶವಿರಲಿಲ್ಲ. ಭಾರತೀಯ ಶಿಲ್ಪಿಯ ಜೀವನಶೈಲಿ ಮತ್ತು ಅಧ್ಯಯನದ ಕ್ರಮ ಬದಲಾಗುತ್ತಲೇ ಈ ಶಾಸ್ತ್ರಗಳು, ಗುರುಕುಲಗಳು ಮೂಲೆಗುಂಪಾಗಿ ನಾಶದ ಅಂಚಿಗೆ ಜಾರಿದವು. ಈ ಕಾರಣದಿಂದಾಗಿ ಸಾಧಾರಣವಾದ ಶಿಲ್ಪಿಯೂ ಕೂಡ ತನ್ನ ವ್ಯಾವಹಾರಿಕ ವೃತ್ತಿಯನ್ನು ನಿರ್ವಹಿಸಲು ಪ್ರಸ್ತುತದಲ್ಲಿ ಹಲವು ಶಿಲ್ಪಶಾಸ್ತ್ರಗಳ ಮತ್ತು ಇತರ ಆಕರಗಳ ಆಸರೆಯನ್ನು ಪಡೆಯಬೇಕಾಗಿರುತ್ತದೆ. ಇವಕ್ಕೂ ಮಿಗಿಲಾಗಿ ಹಿರಿಯರ, ಅನುಭವಿಗಳ ಮಾರ್ಗದರ್ಶನವನ್ನು ಕೇಳುವುದು ಅತ್ಯಾವಶ್ಯಕವಾಗಿರುತ್ತದೆ.[೬]

**ಶಿಲ್ಪದಲ್ಲಿ ಎರಡು ಬಗೆ**

ಮನುಷ್ಯನ ಬದುಕಿನಲ್ಲಿ ಇಷ್ಟು ಶಕ್ತಿಶಾಲಿಯಾಗಿರುವ ಶಿಲ್ಪದ ಬಗ್ಗೆ ನಾವು ಇನ್ನೂ ಹೆಚ್ಚು ವಿವರಗಳನ್ನು ತಿಳಿಯಬೇಕು.

> *ಶಿಲ್ಪಾನಿಶಂಸಂತಿ ದೇವಶಿಲ್ಪಾನ್ಯೇತೇಷಾಂ ವೈಶಿಲ್ಪಾನಾಮನು ಕೃತೀಹ ಶಿಲ್ಪ ಮಧಿಗಮ್ಯತೇ ಹಸ್ತೀಕಂ ಸೋ ವಾಸೋ ಹಿರಣ್ಯ ಮಶ್ವತರೀರಥಃ ಶಿಲ್ಪಂ ಶಿಲ್ಪಂಹಾಸ್ಮಿನ್ನಧಿಗಮ್ಯತೇ ಯ ಏವಂ ವೇದಯ ದೇವಶಿಲ್ಪಾನಿ ಆತ್ಮ ಸಂಸ್ಕೃತಿರ್ವಾವ ಶಿಲ್ಪಾನಿ ಛಂದೋಮಯಂ ವಾ ಏತೈರ್ಯಜಮಾನ ಆತ್ಮಾನಂ ಸಂಸ್ಕುರುತೇ ।*

ಇದಕ್ಕೆ ಸಾಯಣ ಭಾಷ್ಯದ ಅನ್ವಯ ತಾತ್ಪರ್ಯ ಇಂತಿದೆ-ಶಿಲ್ಪ ಧರ್ಮವನ್ನು ಲೌಕಿಕ ನಿದರ್ಶನವನ್ನು ಹೇಳಿ ವಿವರಿಸಲಾಗುತ್ತಿದೆ. ಶಿಲ್ಪ ಶಬ್ದ ಅರ್ಥಗಳಲ್ಲಿ ಆಶ್ಚರ್ಯವನ್ನುಂಟು ಮಾಡುವುದು ಎಂಬುದೂ ಒಂದು. ಈ ಶಿಲ್ಪದಲ್ಲಿ ಎರಡು ಬಗೆಗಳು - ಮೊದಲಿನದು ದೇವಶಿಲ್ಪ. ಎರಡನೆಯದು ಮಾನವಶಿಲ್ಪ. ನಾಭಾನೇದಿಷ್ಠಾದಿಗಳು ಯಾವ ಶಿಲ್ಪವನ್ನು ಮಾಡುತ್ತಾರೆಯೋ ಅವು ದೇವತೆಗಳಿಗೆ ಪ್ರಿಯವಾದುದು. ಆದ್ದರಿಂದ ಆ ಶಿಲ್ಪವನ್ನು ದೇವಶಿಲ್ಪ ಎನ್ನುತ್ತಾರೆ. ಈ ದೇವಶಿಲ್ಪಕ್ಕೆ ಸಮಾನವಾಗಿ ಮಾನವ ಲೋಕದಲ್ಲಿ ಯಾವ ಶಿಲ್ಪ ಕರ್ಮವನ್ನು ನಡೆಸಲಾಗುತ್ತಿದೆಯೋ ಅದನ್ನು ಉದಾಹರಿಸ ಲಾಗುತ್ತದೆ. ಪ್ರಪಂಚದಲ್ಲಿ ಶಿಲ್ಪಿಗಳು ಮಣ್ಣು, ಮರ, ಕಲ್ಲು ಮುಂತಾದವುಗಳಿಂದ ಆಕೃತಿಗಳನ್ನು ನಿರ್ಮಿಸುತ್ತಿದ್ದಾರೆ. ಮತ್ತೆ ಕೆಲವರು ಕಂಚಿನ ತಟ್ಟೆ, ಕನ್ನಡಿಗಳನ್ನು ರೂಪಿಸಿಕೊಡುತ್ತಿದ್ದಾರೆ. ಮತ್ತೆ ಕೆಲವರಿಂದ ಬೇರೆ ಬೇರೆಯ ವಸ್ತುಗಳು ಸಿದ್ಧವಾಗುತ್ತಿವೆ. ಕತ್ತೆಯಲ್ಲಿ ಕುದುರೆಯಿಂದ ಆಗುವ ಮರಿಯನ್ನು ಹೇಸರಗತ್ತೆ(ಅಶ್ವತರ) ಎಂದು ಹೇಳುವಂತೆಯೇ ಶಿಲ್ಪದ ಸಂದರ್ಭದಲ್ಲಿಯೂ ಹೇಳ ಬೇಕಾಗುತ್ತದೆ. ಇಂತಹುದೇ ಮಾನವ ಶಿಲ್ಪ ಎಂದು ಹೇಳಬಹುದು. ಇದನ್ನು ಕಂಡು ನಾಭಾ ನೇದಿಷ್ಠಾದಿಗಳ ಶಿಲ್ಪವು ಆಶ್ಚರ್ಯಕರವಾದದ್ದು ಎಂದು ನಿಶ್ಚಿತವಾಗಿದೆ. ಇದನ್ನು ಅರ್ಥ ಮಾಡಿಕೊಂಡರೆ

---

೬. ಮ. ಗಂಗಾಧರಮೂರ್ತಿ (ಸಂ.) : ವಿಶ್ವಕರ್ಮ ಮಾಸಪತ್ರಿಕೆ, ಸಂಚಿಕೆ-೧೨, ಪು-೯

ಕೌಶಲವು ಬಗೆಬಗೆಯಾಗಿರುವುದಾಗಿ ಗೊತ್ತಾಗುತ್ತದೆ. ಶಿಲ್ಪಗಳಿಗೆಲ್ಲಾ ಗೌರವ ತೋರಬೇಕೆಂಬುದು ಇಲ್ಲಿಯ ಆಶಯ. ಈ ಕಾರಣದಿಂದಲೇ ನಾಭಾನೇದಿಷ್ಠಾದಿಗಳ ಶಿಲ್ಪವು ಪೂಜ್ಯವೆಂದು ಹೇಳಬಹುದು. ಆದ್ದರಿಂದ ಸುವರ್ಣಾಭರಣಾದಿ ಶಿಲ್ಪಗಳಂತೆಯೇ ಇತರ ಶಿಲ್ಪಗಳು ಪೂಜಾರ್ಹವಾದುವು ಎಂಬುದು ಸ್ಪಷ್ಟವಾಗಿದೆ. ಹೀಗೆ ಶಿಲ್ಪವನ್ನು ಸ್ತುತಿಸಲು ಇರುವ ಕಾರಣ **ನಾಭಾನೇದಿಷ್ಠಾದಿಗಳ ಶಿಲ್ಪಗಳು ಜೀವಾತ್ಮನಿಗೆ ಸಂಸ್ಕಾರವನ್ನುಂಟು ಮಾಡುವಂತಹವು** ಎಂಬುದೇ. ಆದ್ದರಿಂದ ಯಜಮಾನನು ಆ ಶಿಲ್ಪಗಳಿಂದ ತನ್ನ ಜೀವಾತ್ಮನನ್ನು ವೇದಮಯವಾಗುವಂತೆ ಸಂಸ್ಕರಿಸುತ್ತಾನೆ.[೭]

**ದೇವಶಿಲ್ಪ:** ದೇವಶಿಲ್ಪಗಳು ಎಂದರೆ ಯಾವುವು ಎಂಬುದನ್ನು ನಾವು ತಿಳಿಯಬೇಕು. ದೇವತಾ ಸಂಬಂಧವಾದ ಎಲ್ಲಾ ಶಿಲ್ಪಗಳೂ ದೇವ ಶಿಲ್ಪಗಳೇ. ದೈವತೋಪಯೋಗಿಯಾದ ಯಜ್ಞಕುಂಡ, ಯಜ್ಞವೇದಿ, ಯಜ್ಞಪಾತ್ರೆ, ದೇವಾಲಯ, ದೇವಮೂರ್ತಿ, ದೇವೋಪಕರಣ, ಪಾತ್ರೆ, ಸುವರ್ಣಾಲಂಕಾರ, ರಥ, ಶಸ್ತ್ರಾಸ್ತ್ರಗಳು, ತ್ರೈವರ್ಣಿಕರಿಗೆ ಅವರ ವೃತ್ತಿ ನಿರ್ವಹಣೆಗೆ ಹಾಗೆಯೇ ಸುವರ್ಣ, ತಾಮ್ರ, ಲೋಹ, ಕಾಷ್ಠ, ಪಾಷಾಣಾದಿ ಪಂಚವಿಧ ಶಿಲ್ಪಗಳು ದೇವಶಿಲ್ಪಗಳೆಂದು ಹೇಳಲ್ಪಡುತ್ತವೆ. ದೇವಶಿಲ್ಪಗಳು ಅತ್ಯಂತ ಪವಿತ್ರವಾದುವು. ಶಾಸ್ತ್ರೋಕ್ತ ಪ್ರಮಾಣ, ಕ್ರಮ, ಮಂತ್ರಗಳ ಅನುಸಾರ ಸಮಂತ್ರಕವಾಗಿ ಇವನ್ನು ತಯಾರಿಸಬೇಕು. ಅಲಂಕಾರದಿಂದ ಬಾಹ್ಯಾಂಗಗಳು, ದೇವತಾಮೂರ್ತಿ ಯಜ್ಞೋಪಕರಣಾದಿಗಳಿಂದ ಅಂತರಂಗವು ಪವಿತ್ರವಾಗುತ್ತದೆ. ಸ್ವರ್ಣಾದಿ ಪಂಚಶಿಲ್ಪಗಳು ಕಾಮ್ಯ ಕರ್ಮಗಳೇ. ಯಜ್ಞಾದಿ ವೈದಿಕ ಕರ್ಮಗಳೂ ಕಾಮ್ಯ ಕರ್ಮಗಳೇ. ಆದ್ದರಿಂದ ಇವರೆಡೂ ಸಮಾನವೆಂಬುದು ಶಾಸ್ತ್ರದ ಹೇಳಿಕೆ. ಈ ಕಾರಣದಿಂದಲೇ **ಕ್ರತು** ಎಂಬ ಶಬ್ದಕ್ಕೆ **ಶಿಲ್ಪ** ಎಂಬ ಶಬ್ದವು ಪರ್ಯಾಯವಾಚಿ ಎಂದೂ ಹೇಳಿದೆ.[೮]

ನಾಭಾನೇದಿಷ್ಠನು ಮನುವಿನ ಮಗ. ಈತನು ವೇದ ಮಂತ್ರ ದ್ರಷ್ಟಾರ. ಋಗ್ವೇದದಲ್ಲಿ ನಾಭಾನೇದಿಷ್ಠ ಸೂಕ್ತವಿದೆ. ಅದರೊಂದಿಗೇ ನಾರಾಶಂಸ ಸೂಕ್ತವೂ ಇದೆ. **ನರಾಃ** ಎಂಬುದು ಆಂಗಿರಸ ಕುಲೋತ್ಪನ್ನ ಋಷಿಗಳಿಗೆ ಇರುವ ಪರ್ಯಾಯನಾಮ. ನಾಭಾನೇದಿಷ್ಠನಿಗೂ ನಾರಾಶಂಸ ಎಂಬ ಪರ್ಯಾಯ ನಾಮವಿದೆ. ನಾರಾಶಂಸ ಸೂಕ್ತದಲ್ಲಿ ಶಿಲ್ಪಕರ್ಮವನ್ನು ಮಾಡುತ್ತಿದ್ದ ಆಂಗಿರಸನ(ನರನ) ಪ್ರಾರ್ಥನೆ ಇದೆ. ಬೃಹಸ್ಪತಿಯನ್ನು ನಾರಾಶಂಸನೊಂದಿಗೆ ಸಮೀಕರಿಸಲಾಗಿದೆ. ಇವರು ಯಜ್ಞದಲ್ಲಿ ಬಳಸುವ ಚಮಸಾದಿಗಳನ್ನು ತಯಾರಿಸುತ್ತಿದ್ದರು. ಇವರನ್ನು ಪಿತೃಗಳೆಂದು ಕರೆದಿರುವುದುಂಟು. ಆದ್ದರಿಂದ ಇವರು ದೇವಶಿಲ್ಪಿಗಳು. ವೇದ ಮಂತ್ರ ವಿಧಿಯಿಂದ ಯಜ್ಞಾಂಗ ಹಾಗೂ ದೇವತಾರಾಧನೆಗೆ ಅವಶ್ಯಕವಾಗಿರುವ ಶಿಲ್ಪಗಳನ್ನು ಮಾಡುವುದು ಇವರ ಕೆಲಸ. ನಾಭಾನೇದಿಷ್ಠ ಶಿಲ್ಪರ್ಷಿಯು ಶಿಲ್ಪಿ ಸಂತತಿಗೆ ಸೇರಿದವನು. **ಯತ್ತೇಶಿಲ್ಪಂ ಕಶ್ಯಪಂ ರೋಚನಾವತ್** ಎಂಬುದು ಪ್ರಸಿದ್ಧವಾದ ವಾಕ್ಯ. ಕಶ್ಯಪ ಋಷಿಯ ಶಿಲ್ಪವು ಅತ್ಯಂತ ರೋಚಕವಾದುದಂತೆ. ಆದ್ದರಿಂದ ಕಶ್ಯಪನು ಪ್ರಸಿದ್ಧ ಶಿಲ್ಪರ್ಷಿಯಾಗಿದ್ದಾನೆ. ಕಶ್ಯಪರ್ಷಿಯಿಂದ ಅದಿತಿಯಲ್ಲಿ ಸೂರ್ಯನು

---

೭. ಮ. ಗಂಗಾಧರಮೂರ್ತಿ (ಸಂ.) : ವಿಶ್ವಕರ್ಮ ಮಾಸಪತ್ರಿಕೆ, ಸಂಚಿಕೆ–೧೨, ಪು–೧೨

೮. ಅದೇ.,ಪು–೧೩

ಹುಟ್ಟಿದ. ಸೂರ್ಯನಿಗೆ ಸಂಜ್ಞಾದೇವಿಯಲ್ಲಿ ಮನು ಹುಟ್ಟಿದ. ಸಂಜ್ಞಾದೇವಿಯು ತ್ವಷ್ಟಬ್ರಹ್ಮನ ಮಗಳು ಮತ್ತು ವಿಶ್ವರೂಪಾಚಾರ್ಯನ ಸೋದರಿ. ಮನುವಿನ ಮಗನೇ ನಾಭಾನೇದಿಷ್ಠ. ಆದ್ದರಿಂದ ಈ ದೇವಶಿಲ್ಪವು ಶಿಲ್ಪಿವಂಶಜರಿಂದಲೇ ಪ್ರಾರಂಭವಾಗಿ ಅವರಿಂದಲೇ ಮುಂದುವರಿದು ಬರುತ್ತಿದೆ.[೯]

**ಮಾನವಶಿಲ್ಪ:** ಈ ಶಿಲ್ಪವೇ ಅಲ್ಲದೆ ಸಂಸ್ಕಾರದ ಅವಶ್ಯಕತೆ ಇಲ್ಲದ, ಬಹುಜನರು ಜೀವನ ಸುಖಗೊಳಿಸಲು ಅವಶ್ಯಕವಾದ ನಿತ್ಯೋಪಯೋಗಿ ವಸ್ತುಗಳ ನಿರ್ಮಾಣವನ್ನು ಮಾನವ ಶಿಲ್ಪ ಎಂದು ಕರೆಯುತ್ತಾರೆ. ಇವಕ್ಕೆ ಪೂಜೆಯ ಅವಶ್ಯಕತೆಯು ಇರುವುದಿಲ್ಲ. ಈ ಶಿಲ್ಪಗಳು ಪೂಜೆಗೆ ಅನರ್ಹವಾದುವು. ಇಲ್ಲಿ ಗಮನಿಸಬೇಕಾದ ವಿಷಯವಿದೆ. ನೇಗಿಲು ಸಾಧಾರಣವಾಗಿ ವ್ಯವಸಾಯ ಮಾಡಲು ಎಲ್ಲಾ ಒಕ್ಕಲಿಗರೂ ಬಳಸುವ ಸಾಧನ. ಯಜ್ಞ ಭೂಮಿಯನ್ನು, ನಗರ ನಿರ್ಮಾಣ, ಕೋಟೆ, ಅರಮನೆಗಳ ನಿರ್ಮಾಣದಲ್ಲಿ ಭೂಪರೀಕ್ಷೆಯ ಸಂದರ್ಭದಲ್ಲಿ ನೆಲವನ್ನು ಉಳಲು ನೇಗಿಲನ್ನು ಬಳಸುತ್ತಾರೆ. ಆ ನೇಗಿಲನ್ನು ಶಿಲ್ಪಿ ಬ್ರಾಹ್ಮಣನೇ ತಯಾರಿಸಿರಬೇಕು. ಶಿಲ್ಪಶಾಸ್ತ್ರಗಳಲ್ಲಿ ಹೇಳಿರುವ ಮರಮುಟ್ಟುಗಳಲ್ಲಿ ನೇಗಿಲೂ ಕೂಡ ಒಂದು. ಆದರೆ ಇದು ದೇವಶಿಲ್ಪಕ್ಕೆ ಸೇರಿದ್ದು. ನಿತ್ಯದ ಬೇಸಾಯದ ಸಂದರ್ಭದಲ್ಲಿ ಬಳಸುವ ನೇಗಿಲು ಬ್ರಾಹ್ಮಣ ಶಿಲ್ಪಿಯೂ ಸೇರಿದಂತೆ ಯಾರಾದರೂ ಮಾಡಬಹುದು. ಅದೇ ರೀತಿಯಾಗಿಯೇ ಯಜ್ಞ ಸಂಬಂಧದಲ್ಲಿ ಎತ್ತಿನ ಗಾಡಿಯನ್ನು ಶಿಲ್ಪಿ ಬ್ರಾಹ್ಮಣನೇ ಮಾಡಬೇಕು. ಯಜ್ಞದಲ್ಲಿ ಬಳಸುವ ೪೮ ಪರಿಕರಗಳಲ್ಲಿ ಒಂದು. ವ್ಯವಸಾಯದ ಬಳಕೆಗೆ ಯಾರಾದರೂ ತಯಾರಿಸಬಹುದು. ಆದರೆ ಗ್ರಾಮಗಳಲ್ಲಿ ಇಂದಿಗೂ ಬಹುಪಾಲು ಶಿಲ್ಪಿ ಬ್ರಾಹ್ಮಣರೇ ನೇಗಿಲು, ಗಾಡಿಗಳನ್ನು ತಯಾರಿಸುತ್ತಾರೆ. ಇದರಿಂದ ಜನರು ಇವರ ಬ್ರಾಹ್ಮಣಿಕೆಯನ್ನು ಗುರುತಿಸದೆ ಇರುವ ಅವಕಾಶಗಳು ಉಂಟು. ಆದರೆ ವೈದಿಕ ಶಿಲ್ಪಿಗಳು ತಮ್ಮ ಬ್ರಾಹ್ಮಣಿಕೆಯನ್ನು ಯಾವುದೇ ಸಂದರ್ಭದಲ್ಲೂ ತ್ಯಜಿಸಿದವರಲ್ಲ.[೧೦]

**ವಾಜಪೇಯ-ರಥಶಿಲ್ಪ**

ವಾಜಪೇಯ ಎಂಬುದು ಸೋಮಯಜ್ಞವೇ. ಏಕೆಂದರೆ ವಾಜಪೇಯ ಯಜ್ಞದಲ್ಲಿ ಸೋಮವೇ ಹವಿಸ್ಸು. ವಾಜಪೇಯ ಯಜ್ಞದಲ್ಲಿ ಸೋಮವನ್ನು ಹವಿಸ್ಸನ್ನಾಗಿ ಸ್ವೀಕರಿಸಿದಾಗ ಆತನು ವಾಜಿ (ಮಹಾಶಕ್ತಿಶಾಲಿ, ಶೀಘ್ರಗಾಮಿ, ಬಲಿಷ್ಠ) ಆಗುತ್ತಾನೆ ಎಂದು ಹೇಳಿದೆ. ಈ ರೀತಿಯಾಗಿ ಬೃಹಸ್ಪತಿಯು ಸೋಮವನ್ನು ಸ್ವೀಕರಿಸಿ ಮಹಾಬಲಿಷ್ಠನಾದ. ರಥವನ್ನು ನಿರ್ಮಿಸಿ ದೇವತೆಗಳಲ್ಲಿ ಜ್ಯೇಷ್ಠತ್ವವನ್ನು ಗಳಿಸಿಕೊಂಡು, ಇಂದ್ರನಿಗೆ ಆಚಾರ್ಯತ್ವವನ್ನು ವಹಿಸಿದನು. ಇದೇ ರೀತಿಯಲ್ಲಿ ಸೋಮವನ್ನು ಸ್ವೀಕರಿಸಿ ತ್ವಷ್ಟ(ವಿಶ್ವಕರ್ಮ) ಮತ್ತು ಆತನ ಶಿಷ್ಯರಾದ ಋಭುಗಳು ಬಹು ಬಲಿಷ್ಠರಾಗಿ ರಥ ಮತ್ತು ಅಶ್ವಗಳನ್ನು ಸೃಷ್ಟಿಸಿ ಲೋಕಪೂಜ್ಯರಾದರು. ಆದ್ದರಿಂದಲೇ ತ್ವಷ್ಟವು ಬಹು ಶೀಘ್ರಗಾಮಿ ಯಾಗಿದ್ದ ರಥ ಮತ್ತು ಅಶ್ವಗಳನ್ನು ಸೃಷ್ಟಿಸಿದ(ತ್ವಷ್ಟುರರ್ವಾಜಾ ಯತ ಅಶುರಶ್ವಃ - ಯಜುರ್ವೇದ) ಎಂದು ಹೇಳಿದೆ. ವಾಜಪೇಯದಲ್ಲಿ ಋಭುಗಳು ಬಹು ಮುಖ್ಯರಾದವರಾಗಿದ್ದಾರೆ. ಈ ಯಜ್ಞದ

---

೦೯. ಮ. ಗಂಗಾಧರಮೂರ್ತಿ (ಸಂ.) : ವಿಶ್ವಕರ್ಮ ಮಾಸಪತ್ರಿಕೆ, ಸಂಚಿಕೆ-೧೨, ಪು-೧೪

೧೦. ಅದೇ.,ಪು-೧೬

ಮಧ್ಯಭಾಗದಲ್ಲಿ ತೃತೀಯ ಸವನದಲ್ಲಿ ಋಭುಗಳು ಪ್ರಧಾನರಾಗಿರುವುದರಿಂದಲೇ **ಅನವಸ್ತೆ ರಥಮಶ್ವಯ ತಕ್ಷನ್** ಮೊದಲಾದ ಮಂತ್ರಗಳಿಂದ ರಥ - ಅಶ್ವಗಳನ್ನು ನಿರ್ಮಿಸಬಲ್ಲ ಶಕ್ತಿವಂತರಾದರು. ಇದೇ ರೀತಿಯಾಗಿಯೇ ಬೃಹಸ್ಪತಿಯೂ ಕೂಡ ವಾಜಪೇಯ ಯಜ್ಞದಲ್ಲಿಯ ಸೋಮವನ್ನು ಸ್ವೀಕರಿಸಿ ಬಲಿಷ್ಠನಾಗಿ ಯಜ್ಞ - ರಥ - ಅಶ್ವಗಳನ್ನು ಸೃಷ್ಟಿಸಿದ ಶಿಲ್ಪ ವಿಜ್ಞಾನಿ. ಎಂದರೆ ರಥಕಾರ.[೧೧]

ಯಜುರ್ವೇದದ ಮಂತ್ರವೊಂದರಲ್ಲಿ ರಥ ನಿರ್ಮಾಣದ ಸಂದರ್ಭದಲ್ಲಿ 'ಶತ್ರುವನ್ನು ಘಾತಿಸಬಲ್ಲ ಇಂದ್ರನ ವಜ್ರವಾಗಿರುವ ಎಲೈ ರಥವೇ ನೀನು ಯಜಮಾನನಿಗೆ ಸಹಕಾರಿಯಾಗಿ ವೈರಿಯನ್ನು ಜಯಿಸುವಂತೆ ಮಾಡು' ಎಂದು ಹೇಳಿದೆ. ಈ ಅರ್ಥಕ್ಕೆ ಸಹಕಾರಿಯಾಗಿ ತೈತ್ತಿರೀಯ ಬ್ರಾಹ್ಮಣದಲ್ಲಿ **ವಜ್ರೋವೈರಥಃ । ವಜ್ರೇಣೈವ ದಿಶಾಽಭಿಜಯತಿ** ಎಂದು ಹೇಳಿರುವುದರಿಂದ ರಥವೇ ವಜ್ರಾಯುಧ ಎಂಬುದಾಗಿ ಸ್ಪಷ್ಟವಾಗುತ್ತದೆ. ಇದೇ ಕಾರಣದಿಂದಲೇ ವಜ್ರ ಮತ್ತು ರಥವನ್ನು ನಿರ್ಮಿಸಿದ್ದು ತ್ವಷ್ಟೃವೇ ಎಂದು ಶ್ರುತಿಗಳಲ್ಲಿ ಅನೇಕ ಬಾರಿ ಹೇಳಿರುವುದು.[೧೨]

**ಪ್ರಥಮ ಸ್ರಷ್ಟಾರರು:** ಈ ಎಲ್ಲಾ ವಿವರಣೆಯಿಂದ ಬೃಹಸ್ಪತಿಯು ರಥಕಾರ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಬೃಹಸ್ಪತಿಯನ್ನು ಪ್ರಥಮ ಸಂಕೃತಿ(ಶಿಲ್ಪಿ) ಎಂದು ಉಲ್ಲೇಖಿಸಿರುವುದು.

***ಸಪ್ರಥಮ ಸ್ಸಂಕೃತಿರಿಶ್ವಕರ್ಮಾ । ಸಪ್ರಥಮೋ ಮಿತ್ರೋ ವರುಣೋಽ ಅಗ್ನಿಃ । ಸಪ್ರಥಮೋ ಬೃಹಸ್ಪತಿಶ್ಚಿಕಿತ್ವಾನ್ ॥*** – ಶ್ರೇಷ್ಠತಮ ನಿರ್ಮಾಣಗಳನ್ನು ಮಾಡುವವನನ್ನು **ಸಂಕೃತಿ(ಶಿಲ್ಪಿ)** ಎನ್ನುತ್ತಾರೆ - ಸಮ್ಯಕ್ ಕೃತಿ ನಿರ್ಮಾತೃ. ಎಂದರೆ ಅತ್ಯಂತ ಪರಿಪೂರ್ಣವಾದ ಶಿಲ್ಪ ಸೃಷ್ಟಿಗಳನ್ನು ಮಾಡುವವರು. ಅಂಥವರಲ್ಲಿ ಮೊದಲಿಗ ವಿಶ್ವಕರ್ಮ ದೇವನು. ಆತನು ಇಂದ್ರನು(ಎಂದರೆ ಇಂದ್ರನಂತೆ ಐಶ್ವರ್ಯವಂತ). ಅದೇ ತೆರನಾಗಿ ಮಿತ್ರ, ವರುಣ, ಅಗ್ನಿ ಮತ್ತು ಬೃಹಸ್ಪತಿಗಳೂ ಪ್ರಥಮ ಸಂಕೃತಿಗಳೇ(ಶಿಲ್ಪಿಗಳೇ). ಸ್ಪಷ್ಟವಾಗಿ ಇಲ್ಲಿ ಬೃಹಸ್ಪತಿಗೆ ಕೂಡ ವಿಶ್ವಕರ್ಮತ್ವವನ್ನು ಹೇಳಿದೆ. ಆದ್ದರಿಂದ ಬೃಹಸ್ಪತಿಯು ಶಿಲ್ಪರ್ಷಿ. ಅಂಗಿರಾ ಬ್ರಹ್ಮರ್ಷಿಯ ಮಗನೇ ಬೃಹಸ್ಪತಿ. ಆಂಗಿರಸ ಬ್ರಹ್ಮರ್ಷಿಯು ರಥಕಾರ. ಈತನ ಸೋದರರಾದ ಶಾಂತಿ, ಸಂವರ್ತ, ವಾಮದೇವ, ಸತ್ಯಕ, ಮನು ಅಂಗಿರಾ, ಸುಧನ್ವ ಮುಂತಾದವರೂ ರಥಕಾರ ಶಿಲ್ಪಿಗಳೇ. ಇವರ ಸಂತತಿಯು ಸೂತ್ರ ಗ್ರಂಥಗಳಲ್ಲಿ ಬಹು ವ್ಯಾಪಕ ರೀತಿಯಲ್ಲಿ ದೊರೆಯುತ್ತದೆ. ಇವರೆಲ್ಲರೂ ಶಿಲ್ಪಿ ವಂಶಪ್ರವರ್ತಕ ಋಷಿಗಳೇ.[೧೩]

ಶಿಲ್ಪವನ್ನು ಮಾಡುವವನು ಶಿಲ್ಪಿ. ಶಾಸ್ತ್ರದ ಪಾಂಡಿತ್ಯ, ಸಿದ್ಧಿಗಳನ್ನು ಗಳಿಸಿ ಶಿಲ್ಪಶಾಸ್ತ್ರದ ಎಲ್ಲಾ ಮುಖಗಳನ್ನೂ ನಿರ್ವಹಿಸಬಲ್ಲ ಸಮರ್ಥನನ್ನು ಸ್ಥಪತಿ ಎನ್ನುತ್ತಾರೆ. ಈ ಸ್ಥಪತಿ ಪಟ್ಟವು ಸಿದ್ಧಿಸ ಬೇಕಾಗಿದ್ದರೆ **ಗೀಷ್ಪತೀಷ್ಟಿ(ಬೃಹಸ್ಪತಿ ಸವನ)**ಯನ್ನು ಮಾಡಬೇಕು ಎಂಬುದಾಗಿ ನಾಮಲಿಂಗಾನುಶಾಸನದ ಬ್ರಹ್ಮವರ್ಗದಲ್ಲಿ ಹೇಳಿದೆ(**ಸಗೀಷ್ಪತೀಷ್ಟ್ಯಾ ಸ್ಥಪತಿಃ**). ಬೃಹಸ್ಪತಿ ಸವನದಿಂದ ಶಿಲ್ಪಿತ್ವವು ಹೇಗೆ ಲಭಿಸುತ್ತದೆ ಎಂಬ ಸಂದೇಹಕ್ಕೆ ಇಲ್ಲಿ ಅವಕಾಶವಿದೆ. **ಸ್ಥಪತಿಃ ಶಿಲ್ಪಿ ಭೇದೇಪಿ** ಎಂಬ ವಿವರಣೆ

---

೧೧. ಮ. ಗಂಗಾಧರಮೂರ್ತಿ (ಸಂ.) : ವಿಶ್ವಕರ್ಮ ಮಾಸಪತ್ರಿಕೆ, ಸಂಚಿಕೆ–೧೩, ಪು–೨೧
೧೨. ಅದೇ.
೧೩. ಅದೇ., ಪು–೧೪

ನಾಮಲಿಂಗಾನುಶಾಸನದ ನಾನಾರ್ಥಕೋಶದಲ್ಲಿ ಹೇಳಿದೆ. ಇದರಿಂದ ಸ್ಥಪತಿ ಎಂಬುದು ಶಿಲ್ಪಿಗಳೇ ಸೇರಿದ್ದು ಸ್ಥಪತಿಯು ಶಿಲ್ಪಿಯೇ ಆಗಿರಬೇಕು. ಬೃಹಸ್ಪತಿಯೂ ಶಿಲ್ಪಿಯೇ ಆಗಿರುವುದನ್ನು ಈ ಮೊದಲೇ ನಾವು ತಿಳಿದಿದ್ದೇವೆ. ಬೃಹಸ್ಪತಿ ಸವನ ಎಂಬುದು ವಾಜಪೇಯವೇ ಎಂಬುದಾಗಿ ಅಮರಕೋಶದ ಸಗೀಷ್ಪತೀಷ್ಟ್ಯಾ ಸ್ಥಪತಿಃ ಎಂಬ ವಾಕ್ಯಕ್ಕೆ ಇರುವ ಟೀಕೆಯಿಂದ ಸ್ಪಷ್ಟವಾಗುತ್ತದೆ. **ವಾಜಪೇಯೇನೇಷ್ಟ್ವಾ ಬೃಹಸ್ಪತಿ ಸವನೇನ ಯಜೇತೇತಿತದ್ವಿಧಿಃ**(ವಾಜಪೇಯ ಯಜ್ಞದಲ್ಲಿ ಹವಿಸ್ಸು ಬೃಹಸ್ಪತಿಗೆ ಸಂಬಂಧಿಸಿದ್ದಾಗಿದೆ.)[೧೪]

ಬೃಹಸ್ಪತಿಯು ರಥಕಾರ ಶಿಲ್ಪಿಯಾಗಿದ್ದು ವಾಜಪೇಯ ಯಜ್ಞವನ್ನು ಮಾಡುವ ಸಾಮರ್ಥ್ಯವನ್ನು ಪಡೆದಿದ್ದ. ಆದ್ದರಿಂದ ಶಿಲ್ಪಿಯಾದವನು ಸ್ಥಪತಿಯಾಗಲು ವಾಜಪೇಯ ಯಜ್ಞವನ್ನು ಆಚರಿಸಬೇಕು ಎಂಬ ನಿಯಮ ಇರುವುದು. ವಾಜಪೇಯ(ಸೋಮಯಜ್ಞ)ವನ್ನು ಮಾಡುವುದು ಎಂದರೆ ರಥಶಿಲ್ಪದ ಸಿದ್ಧಿಯನ್ನು ಮಾಡಿಕೊಳ್ಳುವುದು ಎಂದೇ, **ಸ್ಥಪತಿಯಾದವನು ರಥಶಿಲ್ಪವನ್ನು ಸಮಂತ್ರಕವಾಗಿ ಮಾಡುವ ಸಾಮರ್ಥ್ಯವನ್ನು ಪಡೆದಿರಬೇಕು** ಎಂಬುದೇ ಇದರ ಸೂಚ್ಯಾರ್ಥ. ಹೀಗೆ ವೇದ ಮಂತ್ರಗಳಿಂದಲೇ ಶಿಲ್ಪವು ಸಿದ್ಧವಾಗಬೇಕಾದುದು. ದೇವಮೂರ್ತಿ ಶಿಲ್ಪದಲ್ಲೂ ಇದೇ ರಹಸ್ಯವು ಅಡಗಿದೆ. ವೇದ ಮಂತ್ರಗಳಲ್ಲಿ ಅಡಗಿರುವ ಧ್ಯಾನ ರೂಪಗಳನ್ನು ಪ್ರತ್ಯಕ್ಷ ವಿಗ್ರಹ ರೂಪದಲ್ಲಿ ನಿರ್ಮಿಸುವದೇ ದೇವಮೂರ್ತಿ ಶಿಲ್ಪ. ಇದಕ್ಕೆ ಉದಾಹರಣೆಯಾಗಿ **ಚತ್ವಾರಿ ಶೃಂಗಾತ್ರಯೋ ಅಸ್ಯಪಾದಾದ್ವೇಶೀರ್ಷೇ ಸಪ್ತಹಸ್ತಾಸೋ ಅಸ್ಯ** ಎಂಬ ಮಂತ್ರದಿಂದ ಅಗ್ನಿಗೆ ನಾಲ್ಕು ಕೊಂಬುಗಳು, ಮೂರು ಪಾದಗಳು, ಎರಡು ತಲೆಗಳು, ಏಳು ತೋಳುಗಳು ಇವೆ ಎಂಬುದು ವೇದದ ವಿವರಣೆ. ಅಂತಹ ದೇವ ಮೂರ್ತಿಯನ್ನು ಸೃಷ್ಟಿಸಿ ಪ್ರಪಂಚದ ಜನರ ಕಣ್ಮುಂದೆ ಇರಿಸುವುದೇ ಶಿಲ್ಪಶಾಸ್ತ್ರ. ಇದೇ ಕಾರಣ ದಿಂದಲೇ ನಾಮಲಿಂಗಾನು ಶಾಸನವು **ಮೋಕ್ಷೇಧೀರ್ಜ್ಞಾನಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ** ಎಂದು ಹೇಳಿದೆ. ಇದಕ್ಕೆ ಟೀಕಾಕಾರರು **ಶಿಲ್ಪಶಾಸ್ತ್ರವಿಷಯವೇ ವಿಜ್ಞಾನಮಿತಿ ಜಾನಾತಿರನಟ್ ಜ್ಞಾನಂ ವಿವಿಧಂ ವಿರೂಪಂ ವಾ ಜ್ಞಾನಂ ವಿಜ್ಞಾನಂ** ಎಂದು ವಿವಿಧ ರೂಪಗಳನ್ನು ಸೃಷ್ಟಿಸುವ ಬುದ್ಧಿಗೇ ವಿಜ್ಞಾನವೆಂಬ ಹೆಸರಿದೆ ಎಂದು ಹೇಳಿದ್ದಾರೆ. ಇದೇ ಕಾರಣದಿಂದಲೇ ಭಾಗವತವು ವಿಜ್ಞಾನವೆಂದರೆ ದೃಷ್ಟಿಗೆ ಸಂಬಂಧಿಸಿರುವ ರೂಪಶಿಲ್ಪ ನೈಪುಣ್ಯ **(ದೃಶ್ಯತೇ ಯತ್ರಹಿ ತ್ವಾಷ್ಟ್ರಂ ವಿಜ್ಞಾನಂ ಶಿಲ್ಪ ನೈಪುಣ್ಯಂ)** ಎಂದು ವಿವರಿಸಿದೆ. **ಅಷ್ಟಾದಶ ವೇದ**ವಿದ್ಯೆಗಳಲ್ಲಿ ಸ್ಥಾಪತ್ಯವೇದವೂ ಒಂದು ಎಂದು ಪರಿಗಣಿತವಾಗಿದೆ.[೧೫]

## ೪.೧. ಕಲಾಮಾಧ್ಯಮಗಳ ವೈಶಿಷ್ಟ್ಯ

ಕನ್ನಡದ ನೆಲ ಹಲವು ವಿಶೇಷಗಳಿಂದ ಕೂಡಿದ ಕರಿನೆಲ. ಕರ್ನಾಟಕ ದಕ್ಷಿಣದಲ್ಲಿ ಚಾಮರಾಜನಗರ ಕೊನೆಯದಾದರೆ, ಉತ್ತರದಲ್ಲಿ ಬೀದರ್ ಜಿಲ್ಲೆ ಕೊನೆಯದು. ಈ ಜಿಲ್ಲೆ ಗಡಿಯಾಚೇ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದ ರಾಜ್ಯಗಳುಂಟು. ಹೀಗಾಗಿ ಕರ್ನಾಟಕ,

---

೧೪. ಮ. ಗಂಗಾಧರಮೂರ್ತಿ (ಸಂ.) : ವಿಶ್ವಕರ್ಮ ಮಾಸಪತ್ರಿಕೆ, ಸಂಚಿಕೆ–೧೩, ಪು–೨೨

೧೫. ಅದೇ.

ಮಹಾರಾಷ್ಟ್ರ ಮತ್ತು ಆಂಧ್ರದ ಸಂಸ್ಕೃತಿಗಳೆಲ್ಲವು ಇಲ್ಲಿ ಸಮ್ಮಿಳಿತಗೊಂಡಿವೆ. ವಿಶೇಷವಾಗಿ ಹೈದರಾಬಾದ್ ನಿಜಾಮ ಸಂಸ್ಕೃತಿ ಅಚ್ಚಳಿಯದ ಪ್ರಭಾವವನ್ನು ಇಲ್ಲಿನ ಜನರಲ್ಲಿ ನಡೆ ನುಡಿಗಳಲ್ಲಿ ಸಂಸ್ಕಾರ, ಸಂಸ್ಕೃತಿಗಳಲ್ಲಿ, ಸಂಪ್ರದಾಯಗಳಲ್ಲಿ ಅಷ್ಟೇ ಏಕೆ? ವಿವಿಧ ಕಲೆಗಳಲ್ಲಿ ಸಹ ಕಾಣಬಹುದು. ಈ ಕಲೆ ಹಲವಾರು ಮಾಧ್ಯಮಗಳಲ್ಲಿ ಸೃಷ್ಟಿಗೊಂಡು ಆಯಾ ಕಾಲದ ಜನರ ಅಗತ್ಯದ ಹಿನ್ನೆಲೆಯಲ್ಲಿ ಬೆಳದುಬಂದಿದೆ. ಮಣ್ಣು, ಮರ, ಶಿಲೆ, ಲೋಹ, ಗಚ್ಚುಗಾರೆ(ಸಿಮೆಂಟ್), ಪಿ.ಓ.ಪಿ ಮುಂತಾದ ಸಂಕೀರ್ಣ ಮಾಧ್ಯಮಗಳಲ್ಲಿ ದೃಶ್ಯಕಲೆ ಬೆಳದುಬಂದಿದೆ.

ಕಲಾವಿದನ ಆಂತರ್ಯದ ಆನಂದಾನುಭವವನ್ನು ದೊರೆತ ಸಾಧನೆಗಳಿಂದ ರೂಪಿಸುವ ಮಾರ್ಗವೇ ಕಲಾಕೃತಿ ಎಂದರುಹಿದ. ಹಿಂದಿನಿಂದ ಇಂತಹ ಕೃತಿನಿರ್ಮಾಣಕ್ಕೆ ಕಲಾವಿದನು ತನ್ನ ಸುತ್ತಮುತ್ತ ಅಪಾರವಾಗಿ ದೊರೆಯುವ ಪ್ರಕೃತಿ ಸಂಪತ್ತನ್ನು ಉಪಯೋಗಿಸಿಕೊಳ್ಳುವುದು ಸಹಜ. ಆದುದರಿಂದ ತಮಗೆ ಸುಲಭವಾಗಿ ದೊರೆಯುವ ಮಣ್ಣು–ಮರ–ಬಂಡೆ– ಕಲ್ಲು–ಲೋಹ–ಬಟ್ಟೆ–ಕಾಗದ–ಗೋಡೆ ಇವುಗಳನ್ನು ಪ್ರಧಾನ ಸಾಧನಗಳಾಗಿ ಉಪಯೋಗಿಸಿಕೊಂಡು ತಮ್ಮ ಕೌಶಲ್ಯವನ್ನು ತೋರಿ ಕಲಾಕೃತಿ ನಿರ್ಮಾಣ ಮಾಡುತ್ತ ಬಂದಿರುವರು. ಹಿಂದೂಸ್ತಾನ ಒಂದು ವಿಶಾಲ ಬಹುಭಾಗ. ಅನೇಕ ರಾಷ್ಟ್ರಗಳಿಂದ ಕೂಡಿದ ಒಂದು ದೊಡ್ಡಖಂಡವೆನ್ನಬಹುದು. ಪ್ರಾಚೀನ ಸಂಸ್ಕೃತಿಯ ಈ ನಾಡಿನಲ್ಲಿ ಅನೇಕ ಮತಗಳು, ಪಂಥಗಳು, ಬಗೆಬಗೆಯ ಆಚಾರ–ವಿಚಾರಗಳು, ವಿವಿಧ ಭಾಷೆಗಳು ಬೆಳೆಯುತ್ತ ಬಂದಿವೆ. ಬೆಳೆದು ಬಾಳಿ ದಿಗಂತ ಕೀರ್ತಿ ಗಳಿಸಿವೆ. ಕ್ರಿಶ ಆರನೇ ಶತಮಾನದಿಂದೀಚೆಗೆ ಭಿನ್ನಸಂಸ್ಕೃತಿ ಜನರು ಭಾರತಕ್ಕೆ ಬಂದು ನೆಲಸಿ, ಅನೇಕ ವರ್ಷಗಳ ಕಾಲ ಆಡಳಿತ ನಡೆಸುತ್ತ ಬಂದರು. ಇದರಿಂದ ನಮ್ಮ ಜನಾಂಗದ ಮೇಲೆ ಪರಕೀಯ ಸಂಸ್ಕೃತಿ ಕಲೆಯ ಪ್ರಭಾವ ಬಹುಕಾಲ ಬೀರಿ ಕೆಲವು ಪರಿವರ್ತನೆಯಾದದ್ದು ಕಂಡುಬರುತ್ತದೆ. ಆದರೆ ಬಲವಾದ ಅಡಿಪಾಯದ ಮೇಲೆ ನಿಂತ ಸಂಸ್ಕೃತಿ, ಕಲೆ ತಾತ್ಕಾಲಿಕ ತೊಂದರೆಗೀಡಾದರೂ ಅಳಿಯಲಾರದು. ಪ್ರಗತಿಪಥ ಹಿಡಿದ ಜನಾಂಗ ಇತರರಲ್ಲಿನ ಗುಣಗ್ರಹಣ ಮಾಡಿ ತನ್ನ ವಿಕಾಸಕ್ಕೆ ಹಾದಿ ಮಾಡಿಕೊಳ್ಳುವುದು. ಕಲಾಮಾಧ್ಯಮಗಳಲ್ಲಿ ಅನೇಕ ರೀತಿಯ ವೈಶಿಷ್ಟ್ಯತೆ ಕಾಣಬಹುದು. ಶಿಲ್ಪಕಲೆಯನ್ನು ಕುರಿತು ಹೇಳುವಾಗ ಮೂರ್ತಿಶಿಲ್ಪಗಳು: ಮೂರ್ತಿಶಾಸ್ತ್ರಕ್ಕೆ ಅನುಗುಣವಾಗಿ ತಯಾರಾದ ದೇವತಾ ವಿಗ್ರಹಗಳು, ದೇವತೆಯ ಆಯುಧಗಳು, ವಾಹನಗಳು ಪ್ರಮುಖವಾದ ಪಾತ್ರ ವಹಿಸುತ್ತವೆ.

**ಭಾವಶಿಲ್ಪಗಳು:** ಸಾಮಾನ್ಯವಾಗಿ ವ್ಯಕ್ತಿಶಿಲ್ಪಗಳನ್ನು ಸಹ ಭಾವಶಿಲ್ಪ ಪ್ರಕಾರಕ್ಕೆ ಸೇರಿಸಿಕೊಂಡಿರುವುದು ವಾಡಿಕೆಯಾಗಿದೆ. ವ್ಯಕ್ತಿಶಿಲ್ಪಗಳು ಮತ್ತು ಬಾವಶಿಲ್ಪಗಳೆಂದು ಬೇರೆ ಬೇರೆಯಾಗಿ ನೋಡುವುದಕ್ಕೆ ಅವಕಾಶವಿದೆ. ಒಬ್ಬ ವ್ಯಕ್ತಿಯ ದೈಹಿಕ ಮುಖ ಚರ್ಯೆಗಳಿಂದ ವ್ಯಕ್ತಿ ಇಂಥವನೇ ಎಂದು ಗುರುತಿಸುವುದಕ್ಕೆ ಸಾಧ್ಯವಿರುವಂತಹ ಶಿಲ್ಪಗಳನ್ನು ವ್ಯಕ್ತಿಶಿಲ್ಪಗಳೆಂದು ಪರಿಭಾವಿಸಬಹುದಾಗಿದೆ. ಉದಾಹರಣೆಗಾಗಿ ಇಂದಿನ ಗಾಂಧೀಜಿ, ಅಂಬೇಡ್ಕರ್ ಇತ್ಯಾದಿ. ಕುಶಾನರ ಕಾಲದಲ್ಲಿಯ ಕನಿಷ್ಕನ ವ್ಯಕ್ತಿಶಿಲ್ಪ ಮಥುರಾ ಮ್ಯೂಸಿಯಂನಲ್ಲಿದೆ. ವ್ಯಕ್ತಿಚಿತ್ರಣ ಶಿಲ್ಪದಲ್ಲಿ, ದೈಹಿಕ ಮುಖಚರ್ಯೆ–

ಗಳಿಗಿಂತ ಭಾವವೇ ಪ್ರಮುಖವಾಗಿದ್ದಲ್ಲಿ ಭಾವಶಿಲ್ಪವಾಗುತ್ತದೆ. ಭಾವಶಿಲ್ಪದಲ್ಲಿ ಮೂಲ ವ್ಯಕ್ತಿಯ ದೈಹಿಕ ರೂಪಗಳು ಗೌಣವಾಗಿ, ಆದರ್ಶರೂಪ ಪಡೆಯುತ್ತವೆ. ಉದಾಹರಣೆಗಾಗಿ ನಮ್ಮ ಬುದ್ಧ, ಬುದ್ಧನ ಅರೆಮುಚ್ಚಿದ ಕಣ್ಣು, ಅಗಲವಾದ ಎದೆ, ಸೌಮ್ಯ ಮುಖ, ನಿಂತ ಅಥವಾ ಕುಳಿತ ಭಂಗಿ, ಬುದ್ಧನ ಆಂತರಿಕ ಭಾವವನ್ನು ಹೊರಹೊಮ್ಮುತ್ತವೆಯೇ ಹೊರತು, ಬುದ್ಧನ ವೈಯಕ್ತಿಕ ದೈಹಿಕ ರೂಪವನ್ನಲ್ಲ, ಇದಕ್ಕೆ ಶ್ರವಣಬೆಳಗೊಳದ ಬಾಹುಬಲಿಯನ್ನು ಸಹ ಉದಾಹರಿಸಬಹುದು. ವ್ಯಕ್ತಿಯ ತಲೆ ಮತ್ತು ಎದೆ ಭಾಗ ಮಾತ್ರ ತೋರಿಸಿರುವ ಶಿಲ್ಪಗಳನ್ನು ಎದೆಮೊಗಶಿಲ್ಪ ಅಥವಾ ಬಸ್ಟ್ ಎಂದು ಅನೇಕ ವಿದ್ವಾಂಸರು ಕರೆದಿರುವುದನ್ನು ಲಕ್ಷ್ಯ ವಹಿಸಿ ಅಧ್ಯಯನದಲ್ಲಿ ಅಳವಡಿಸಲಾಗಿದೆ.

ಶಿಷ್ಟಪದ ಶಿಲ್ಪಕಲೆಯು ನಿಗದಿತ ವರ್ಗಕ್ಕೆ ನಿಗದಿತ ಜನಾಂಗಕ್ಕೆ ಸಾಂಪ್ರದಾಯಿಕ ಮಾರ್ಗ ಸೂತ್ರವನ್ನು ಅನುಸರಿಸಿ ನಿರ್ಮಾಣ ಮಾಡುವುದಾಗಿದ್ದರೆ, ಸಾಂಪ್ರದಾಯಿಕ ಶಿಲ್ಪಕಲೆಯು ಸಾಂಪ್ರದಾಯಿಕ ಉಸಿರಿನಿಂದ, ಬೆವರಿನಿಂದ, ಹಾಗೂ ನಂಬಿಕೆಗಳಿಂದ ರೂಪ ತಾಳಿದಂತಹುದು, ಅವರ ಉತ್ಪಾದಕತೆಯ ಸಂದರ್ಭದಲ್ಲಿ ಸೃಷ್ಟಿಗೊಂಡಂತಹುದು. ಸಾಂಪ್ರದಾಯಿಕ ಸಮಾಜದ ಸೃಜನಶೀಲವಾದ ಮನಸ್ಥಿತಿಯ ಸ್ತರಗಳು ಅಲ್ಲಿ ಅಡಗಿರುವದಷ್ಟೇ ಅಲ್ಲದೆ ಅವು ಆ ಸಮುದಾಯದ ಸಾಂಸ್ಕೃತಿಕ ಪ್ರತಿಬಿಂಬಗಳೂ ಆಗಿವೆ. ಜನಪದ ಆಶೋತ್ತರಗಳು, ನಂಬಿಕೆ ಆದರ್ಶಗಳು ಇಲ್ಲಿ ಘನೀಭೂತಗೊಂಡಿರುತ್ತವೆ.

**ಸಾಂಪ್ರದಾಯಿಕ ಶಿಲ್ಪಗಳ ವರ್ಗೀಕರಣ**

ಸಾಂಪ್ರದಾಯಿಕ ಶಿಲ್ಪಗಳನ್ನು ವರ್ಗೀಕರಣಗೊಳಿಸುವ ಕಾರ್ಯವು ಅಸಾಧಾರಣವಾದುದು. ಶಿಲ್ಪಗಳು ಪಡಿಯಚ್ಚುಗಳ ತಯಾರಿಕೆಯ ಆಯಾಮದಿಂದ ಹೊರತುಪಡಿಸಿದ ಶಿಲ್ಪಗಳನ್ನು ಗಮನಿಸಿದಾಗ ಪ್ರತಿಯೊಂದು ಶಿಲ್ಪವೂ ಪ್ರತ್ಯೇಕವಾಗಿಯೇ ರೂಪಗಳ ಸಂಯೋಜನೆಗಳನ್ನು ಪ್ರಕಟಿಸುತ್ತದೆ. ಪ್ರತಿಯೊಂದು ಶಿಲ್ಪವೂ ಅದರದೇ ಆದ ವಿಶೇಷತೆಗಳನ್ನು ಎಲ್ಲಾ ರೀತಿಯಲ್ಲಿಯೂ ವಿಭಿನ್ನತೆಯಿಂದ ಅನಾವರಣ ಗೊಳಿಸಿವೆ. ಧಾರ್ಮಿಕ ಶಿಲ್ಪಗಳ ಹಿನ್ನೆಲೆಗಳಲ್ಲಿ ಸ್ತ್ರೀ ದೇವತೆಗಳು, ಪುರುಷ ದೇವತೆಗಳು, ಪರಿವಾರ ದೇವತೆಗಳು, ವಾಹನಗಳು, ಉಗ್ರ ದೇವತೆಗಳು, ಶಾಂತ ಸ್ವರೂಪ ದೇವತೆಗಳು, ಗಂಭೀರ ಸ್ವರೂಪ ದೇವತೆಗಳು, ಸ್ವಾಬಾವಿಕವಾಗಿ ದೊರೆತ ವಸ್ತುಗಳಲ್ಲಿಯೇ ನೆಲೆಗೊಂಡು ದೇವತೆಗಳ ನಿಸರ್ಗ ರೂಪಾಕಾರಗಳು, ವಿವಿಧ ವರ್ಣಗಳ, ಜನಾಂಗಗಳ, ಲಿಂಗಗಳು, ಆಯಾ ಕಾಲದ ಕಾವ್ಯ, ಘಟನೆ, ಹಿನ್ನೆಲೆಯ ಹೀಗೆ ಸಹಸ್ರಾರು ಶಿಲ್ಪಗಳನ್ನು ಧಾರ್ಮಿಕವಾಗಿಯೇ ಅಲ್ಲದೇ, ಸೌಂದರ್ಯಾತ್ಮಕವಾಗಿ, ಮನರಂಜನಾತ್ಮಕವಾಗಿ, ಜನಾಂಗೀಯ ಐತಿಹ್ಯಗಳಲ್ಲಿ ರಚನೆಗೊಂಡಿದ್ದನ್ನು ಕಾಣಬಹುದಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಸಾಂಪ್ರದಾಯಿಕ ಶಿಲ್ಪಕಲೆಗಳನ್ನು ಪ್ರಮುಖವಾಗಿ ಐದು ಮಾಧ್ಯಮ ಗಳನ್ನಾಗಿ ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ.

೪.೧.೧. ಮಣ್ಣಿನ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಗಳು

೪.೧.೨. ಶಿಲಾ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಗಳು

೪.೧.೩. ಮರ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಗಳು

೪.೧.೪. ಲೋಹ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಗಳು

೪.೧.೫. ಗಾರೆ ಗಚ್ಚು ಮತ್ತು ಸಿಮೆಂಟ್ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಗಳು

ಇವುಗಳ ವೈಶಿಷ್ಟ್ಯತೆಯ ಹಾಗೂ ಬಳಕೆಯ ಪ್ರಾಮುಖ್ಯತೆ ಮತ್ತು ಅನಿವಾರ್ಯತೆಯ ಬಗ್ಗೆ ಉದಾಹರಣೆಗಳ ಸಮೇತ ಸೂಕ್ತ ಅಧಾರಗಳೊಂದಿಗೆ ವಿಶ್ಲೇಷಣಾತ್ಮಕವಾಗಿ ಆಯಾ ಅಧ್ಯಾಯಗಳಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸಾಂಪ್ರದಾಯಿಕ ಶಿಲ್ಪಕಲೆಗಳು ಸ್ವಾಭಾವಿಕವಾಗಿ ನೈಸರ್ಗಿಕ ಮೂಲ ವಸ್ತುಗಳ ನೇರ ಬಳಕೆಯ ಮೂಲಕ ತಮ್ಮ ಆಕಾರಗಳನ್ನು ಪಡೆದುಕೊಂಡಿವೆ.

ತ್ರಿಮಾನ ಶಿಲ್ಪ(ದುಂಡು ಶಿಲ್ಪ) ಹಾಗೂ ದ್ವಿಮಾನ ಶಿಲ್ಪ(ಉಬ್ಬು ಶಿಲ್ಪ)ಗಳು ಶಿಷ್ಟಪದ ಮತ್ತು ಜನಪದ ಶಿಲ್ಪಕಲೆಗಳಲ್ಲಿ ಪ್ರಮುಖವಾಗಿ ವರ್ಗೀಕರಣಗೊಂಡಿವೆ. ಈ ಶಿಷ್ಟ ಮತ್ತು ಸಾಂಪ್ರದಾಯಿಕ ಶಿಲ್ಪಗಳ ವಿಂಗಡಣೆಯು ಮೂಲ ಜನಪದ ಮತ್ತು ನಗರೀಕರಣದ ಜನಪದಗಳ ಪ್ರಮುಖ ವ್ಯತ್ಯಾಸಗಳನ್ನು ಸ್ಪಷ್ಟಪಡಿಸುವಲ್ಲಿ ಯಶಸ್ವಿಯಾಗಿವೆ. ಇವುಗಳ ಹಲವಾರು ವಿಶೇಷತೆಯ ಶೈಲಿಗಳ ಸಂಕ್ಷಿಪ್ತ ವಿವರಣೆಗಳೊಂದಿಗೆ ಸಾಂಪ್ರದಾಯಿಕ ಶಿಲ್ಪಕಲೆಯು ಹಲವಾರು ವೈಶಿಷ್ಟ್ಯ ಮತ್ತು ವಿಧಾನಗಳ ಸ್ವರೂಪಗಳನ್ನು ಅಧ್ಯಯನ ಮಾಡಲಾಗಿದೆ. ಇವುಗಳ ಲಕ್ಷಣ, ಧಾರ್ಮಿಕ ಆಚರಣೆಗಳಲ್ಲಿ ಪ್ರಸ್ತುತತೆ, ಸೌಂದರ್ಯದ ಶಿಲ್ಪರಚನೆ, ವಿವಿಧ ಶೈಲಿಯ ರೂಪುರೇಷೆಗಳು ಇವುಗಳ ವಿಶಿಷ್ಟತೆಯನ್ನು ಕುರಿತು ಚರ್ಚಿಸಲಾಗಿದೆ.

**೪.೧.೧. ಮಣ್ಣಿನ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಕಲೆ**

ಮಣ್ಣಿನ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಕಲೆಯನ್ನು ಕುರಿತು, ವಿಶೇಷವಾಗಿ ಅಧ್ಯಯನ ನಡೆಸಿ ಸೂಕ್ತ ವಿವರಗಳನ್ನು ಕ್ರೋಡೀಕರಿಸಲಾಗಿದೆ. ಪ್ರಸ್ತುತ ಮಣ್ಣಿನ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಕಲೆಯು, ಪ್ರಮುಖವಾಗಿ ಸಾಂಪ್ರದಾಯಿಕ ಆಚರಣೆಗಳ ಮೂಲಕವಾಗಿಯೇ ಮೊದಲಿಗೆ ನಂಬಿಕೆಯ, ಧಾರ್ಮಿಕ ಆಚರಣೆಗಳ ಮುಖಾಂತರ ಕಂಡುಬಂದಿರುವುದು ದೊರೆತ ಮಾಹಿತಿಗಳಿಂದ ವ್ಯಕ್ತವಾಗಿದೆ.

ಮಣ್ಣಿನ ಮಾಧ್ಯಮದ ಸಾಂಪ್ರದಾಯಿಕ ಕಲೆಯನ್ನು ಧರ್ಮಮೂಲ ಸಾಂಪ್ರದಾಯಿಕ ಶಿಲ್ಪಕಲೆ ಎಂದು ಅಧ್ಯಯನ ಮಾಡಿದ್ದರೂ, ಶೃಂಗಾರ, ಸೌಂದರ್ಯ ಹಾಗೂ ದಿನ ಬಳಕೆಯ ವಸ್ತುಗಳಲ್ಲಿ ಮತ್ತು ವಿವಿಧ ಮಾಧ್ಯಮಗಳಲ್ಲಿ ತಯಾರಾಗುವ ಮುಖ್ಯ ಶಿಲ್ಪಗಳ ತಾತ್ಕಾಲಿಕ ಅಥವಾ ಪೂರ್ವ ಸಿದ್ಧತೆ ಶಿಲ್ಪಗಳಾಗಿ ಅಂದರೆ ಪೂರ್ವಭಾವಿ ರಚನೆಯ ಕಿರು ಮಾದರಿ(ಕೀ ಮಾಡೆಲ್)ಗಳಾಗಿ ಮಣ್ಣಿನ ಶಿಲ್ಪಗಳ ರಚನೆ ಕುರಿತು ಅಧ್ಯಯನ ಮಾಡಿರುವುದು ವಾಸ್ತವವಾಗಿದೆ. ಮೌಖಿಕ ನಂಬಿಕೆಗಳ ದೈವಗಳ ಆಚರಣೆಗಳ ಸಂದರ್ಭಗಳಲ್ಲಿ ಭೂತಗಳಂತಹ ಹಲವಾರು ಶಿಲ್ಪಗಳನ್ನು ರಚನೆ ಮಾಡುವ ಸಂದರ್ಭದಲ್ಲಿ ಮೊದಲಿಗೆ, ಪ್ರಯೋಗಾತ್ಮಕವಾದ ಶಿಲ್ಪಗಳ ಈ ಮಣ್ಣಿನ ಮಾಧ್ಯಮದ ಮುಖಾಂತರ ರಚನೆಗೊಂಡು, ಬಣ್ಣವನ್ನು ಪಡೆದ, ಆಚರಣೆಗಳ ಪ್ರಾಮುಖ್ಯತೆಗಳನ್ನು ಅವುಗಳ ಸಾಧಕ ಬಾಧಕಗಳ ಹಿನ್ನೆಲೆಯನ್ನು ಪ್ರಮುಖವಾಗಿ ಅಭ್ಯಸಿಸಿ ಅಧ್ಯಯನ ಮಾಡಲಾಗಿದೆ.

ವಿವಿಧ ಭೌಗೋಳಿಕ ಪ್ರದೇಶದ ವಿವಿಧ ಪ್ರಕಾರದ ಮಣ್ಣನ್ನು ಒಂದೇ ರೀತಿಯ ಶಿಲ್ಪಕ್ಕೆ ಬಳಸದೆ ಹಲವಾರು ವಿಭಿನ್ನ ಶೈಲಿಯ ಶಿಲ್ಪಗಳ ನಿರ್ಮಾಣ ಹಂತಗಳಲ್ಲಿ ಬಳಸಿಕೊಂಡಿರುವುದನ್ನು ದಾಖಲು ಮಾಡಲಾಗಿದೆ. ಜೇಡಿಮಣ್ಣಿನ ಹಸಿ ಶಿಲ್ಪಗಳು, ಸುಡಾವೆ ಮಣ್ಣಿನ ಶಿಲ್ಪಗಳ, ಸಿಮೆಂಟ್ ಮತ್ತು ಗಾರೆ ಶಿಲ್ಪಗಳು, ಮುಂತಾದವು ಅಧ್ಯಯನದಲ್ಲಿ ಒಳಗೊಂಡಿವೆ. ಧಾರ್ಮಿಕ ಆರಾಧನಾ ವಿಶೇಷಗಳಿಗೆ ಮೊದಲಿಗೆ ಪೂಜಾರ್ಹಗೊಂಡ ಮಾತೃದೇವತೆಯನ್ನು ಮಣ್ಣಿನ ಮೂರ್ತಿಗಳ ಹೊರ ಆವರಣಗಳಲ್ಲಿನ ಆರಾಧನೆ, ಆಚರಣೆಗಳಿಗೆ ಮೊದಲುಗೊಂಡು, ದೇವಾಲಯ ಹಾಗೂ ಗೃಹ ಬಳಕೆಯಲ್ಲಿ ಮುಖ್ಯ ಪಾತ್ರವನ್ನು ವಹಿಸಿರುವುದರ ಬಗ್ಗೆ ಅವಲೋಕಿಸಲಾಗಿದೆ.

ಒಂದೇ ರೂಪದ, ಹಲವಾರು ಹೆಸರುಗಳ ದೇವತೆಗಳು, ಆಯಾ ಪ್ರಾದೇಶಿಕ ಕಥೆ, ಐತಿಹ್ಯ, ಪವಾಡಗಳ, ಹಿನ್ನೆಲೆಗಳನ್ನು ಹೊಂದಿದ್ದು, ಅವುಗಳ ಬಗ್ಗೆಯೂ ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಲಾಗಿದೆ. ವೃತ್ತಿಮೂಲ ಮಣ್ಣಿನ ಮಾಧ್ಯಮದ ವಸ್ತುಗಳಾದ ದೀಪಗಳು, ಹೂದಾನಿಗಳು, ಮುಂತಾದವುಗಳಲ್ಲಿನ ಸೌಂದರ್ಯಾತ್ಮಕ ವಿನ್ಯಾಸಗಳು, ಪ್ರಾಣಿ, ಪಕ್ಷಿಗಳ ವಿವಿಧ ಆಕಾರಗಳ ಅಲಂಕಾರಿಕ ಮನೋಲ್ಲಾಸ ಅಭಿವ್ಯಕ್ತಿಯ ಚಿತ್ತಾಕರ್ಷಕ ಒಳ ಆವರಣ ಮತ್ತು ಹೊರ ಆವರಣಗಳ ಸಾಂಪ್ರದಾಯಿಕ ಶಿಲ್ಪಗಳನ್ನು ಅರ್ಥಪೂರ್ಣವಾಗಿ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಹರಕೆಯ ಶಿಲ್ಪಗಳು, ಆಟಿಕೆ ಶಿಲ್ಪಗಳು, ಶೃಂಗಾರದ ಕಿರುಶಿಲ್ಪಗಳು, ಮಣ್ಣಿನ ಮಾಧ್ಯಮದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದು ಅವುಗಳ ಪೂರಕ ಬಳಕೆಯನ್ನು ಶ್ರೀಮಂತಗೊಳಿಸಿರುವುದನ್ನು ಕೂಡ ಮಣ್ಣಿನ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಕಲೆ ಅಧ್ಯಯನದಲ್ಲಿ ರೂಪಿಸಲಾಗಿದೆ.

**ಮಣ್ಣು(ಮೃತಿಕೆ):** ಕ್ರಿ ಪೂ.ಸುಮಾರು ೯೦೦ರಿಂದ ೩೦೦ರವರಿಗಿನ ಅವಧಿಯ ಹರಪ್ಪ ಮೊಹೆಂಜೊದಾರೊ ಮತ್ತು ಅನಂತರ ಸಂಸ್ಕೃತಿಗಳಲ್ಲಿ ಅಲ್ಲದೇ ಉತ್ತರ ದಕ್ಷಿಣ ಮಧ್ಯ ಭಾರತದ ಹಲವಡೆ ಪ್ರಾಚೀನ ನೆಲೆಗಳಲ್ಲಿ ವಿವಿಧ ಆಕಾರದ ಮತ್ತು ವಿವಿಧ ನಕ್ಷೆ ರಚನೆಗಳಿಂದ ಕೂಡಿದ ವರ್ಣಮಯ ಪಾತ್ರೆಗಳು ದೊರೆಕಿವೆ. ಈ ಪಾತ್ರೆಗಳ ಮೇಲೆ ಜಾಮಿತಿ ಆಕೃತಿಗಳಲ್ಲದೇ ಪಕ್ಷಿ–ಪ್ರಾಣಿ–ಮಾನವಾಕೃತಿಗಳ ಅಲಂಕಾರಿಕ ನಕ್ಷೆಗಳನ್ನು ಕಾಣಬಹುದು. ಮೃತಿಕೆ ಶಿಲ್ಪದ ವಿಕಾಸದ ಹೆಜ್ಜೆಗಳನ್ನು ತೋರುವ ಉತ್ತಮ ನಿದರ್ಶನ ಎನ್ನಬಹುದು. ಕ್ರಿ.ಶ.೨೦೦ರ ಕುಶಾನ ಹಾಗೂ ಗುಪ್ತ ಪೂರ್ವಕಾಲೀನ ಮೃತ್ತಿಕಾ ಶಿಲ್ಪಗಳಲ್ಲಿ ಇದನ್ನು ಕಾಣಬಹುದು. ಮಣ್ಣಿನ ಪಾತ್ರೆಗಳಿಗೆ ಹೊಳಪು ತರುವುದು ಕೂಡ ಈ ಕಲೆಯ ಕುಶಲತೆಯ ಒಂದು ಅನನ್ಯ ಸಾಧನೆಯಾಗಿದೆ.

ಪ್ರಾಚೀನವಾದ ಹರಪ್ಪ ಸಂಸ್ಕೃತಿಯಲ್ಲಿಯೂ ಈ ಕೌಶಲ್ಯ ವ್ಯಕ್ತವಾಗಿದೆ. ಆಗ ಪಾತ್ರೆಗಳಿಗೆ ನುಣುಪು ಹೊಳಪುಗಳನ್ನು ತರಲು ಕೆಮ್ಮಣ್ಣು ಮತ್ತು ಅಭ್ರಕದ ಹುಡಿಯನ್ನು ಬೆರೆಸುತ್ತಿದ್ದರು ಎಂಬುದು ಗೊತ್ತಾಗುತ್ತದೆ. ಜೇಡಿಮಣ್ಣಿನಿಂದ ಕಾಗದದಷ್ಟು ತೆಳುವಾಗಿ ಪಾತ್ರೆ ತಯಾರಿಸಿರುವುದು ಕಂಡುಬರುತ್ತವೆ.

ಜೇಡಿಮಣ್ಣಿನಿಂದ ತಯಾರಿಸಲ್ಪಟ್ಟು ಬೆಂಕಿಯಲ್ಲಿ ಸುಟ್ಟ ಸುಡಾವೆ ಮೃತ್ತಿಕ ಶಿಲ್ಪ ಹಾಗೂ ದೇವಾಲಯಗಳು ಈ ಕಲೆಯ ಇನ್ನೊಂದು ವೈಶಿಷ್ಟ್ಯವೆನಿಸಿದೆ. ಮೃತ್ತಿಕಾ ಶಿಲ್ಪಕಲೆಯನ್ನು ಇಂದಿಗೂ

ಜೀವಂತವಾಗಿ ಕಾಯ್ದುಕೊಂಡು ಬಂದ ಹಲವಾರು ಕೇಂದ್ರಗಳು ಭಾರತದಾದ್ಯಂತ ಹರಡಿವೆ. ಭಾರತದ ಪ್ರತಿಯೊಂದು ಹಳ್ಳಿಯಲ್ಲಿಯೂ ಈ ಕಲೆ ಜೀವಂತವಾಗಿರುವುದನ್ನು ಇಂದಿಗೂ ನೋಡ ಬಹುದು. ಇಂತಹ ಪ್ರಾಚೀನ ಕಲೆಯೊಂದಿಗೆ ತಯಾರಿಸಲಾಗುತ್ತಿರುವ ಸಾಧನ ಸಲಕರಣೆಗಳು ಪ್ರಾಣಿ, ಪಕ್ಷಿ, ದೇವತಾಮೂರ್ತಿ ಶಿಲ್ಪಗಳು ವಿವಿಧ ನಮೂನೆಯ ಆಲಂಕಾರಿಕ ರಚನೆಗಳು ಕಲಾ ವಸ್ತುಗಳು ಜೇಡಿಮಣ್ಣಿನ ಶಿಲ್ಪಕಲೆಯ ವಸ್ತುಗಳೇ ಆಗಿವೆ.

ಶತಪಥ ಬ್ರಾಹ್ಮಣದಲ್ಲಿ ಮಣ್ಣಿನ ಬಲವೃದ್ಧಿಯನ್ನು ನೊರಜುಗಲ್ಲು, ಕಲ್ಲು ಮತ್ತು ಕಬ್ಬಿಣದ ಚೂರ್ಣಗಳನ್ನು ಬೆರೆಸುವುದರಿಂದ ಸಾಧಿಸಬಹುದು ಎಂಬುದಾಗಿ ಹೇಳಲಾಗಿದೆ. ಮಣ್ಣಿನ ಈ ಬಲ ವೃದ್ಧಿಯನ್ನು ಸ್ಥೋಮ್ನ ಎಂದು ಕರೆಯಲಾಗಿದೆ. ಇಟ್ಟಿಗೆಯ ಅಥವಾ ಪಾತ್ರೆಯ ಸುಟ್ಟ ಮಣ್ಣು ಸಾಧಾರಣ ಮಣ್ಣಿನ ಬಲವೃದ್ಧಿಗಾಗಿ ತುಂಬಾ ಪ್ರಯೋಜನಕ್ಕೆ ಬರುತ್ತದೆ ಎಂಬುದು ಆ ಕಾಲಕ್ಕೇ ಗೊತ್ತಿತ್ತು. ಊಖಾ ಪಾತ್ರೆಯು ಬೆಂಕಿಯಲ್ಲಿ ಬೇಯುವಾಗ ಬಿರುಕು ಬಿಟ್ಟರೆ ಅಥವಾ ಸಿಡಿದು ಹೋದರೆ ಅದನ್ನು ನುಣ್ಣನೆ ಅರೆದು, ಅದಕ್ಕೆ ಕಲ್ಲಿನ ಪುಡಿ ಬೆರೆಸಿ ಹೊಸ ಮಣ್ಣನ್ನು ಮಿಶ್ರಣ ಗೊಳಿಸಿಕೊಂಡು ಮತ್ತೆ ಊಖಾವನ್ನು ತಯಾರಿಸಿ ಬೆಂಕಿಯಲ್ಲಿ ಸುಡುತ್ತಿದ್ದರು. ಈ ರೀತಿಯಲ್ಲಿ ಸಿದ್ಧಪಡಿಸಿದ ಊಖಾ ಪಾತ್ರೆ ಒಡೆಯುತ್ತಿರಲಿಲ್ಲ.

**ಮಣ್ಣಿನ ಕಣಗಳ ಪುನರ್ರಚನೆ:** ಇಟ್ಟಿಗೆ ಮತ್ತು ಪಾತ್ರೆಗಳ ತಯಾರಿಕೆಗೆ ಮಣ್ಣಿನಲ್ಲಿ ನಯವಾದ ಮರಳನ್ನು ಬೆರೆಸಿ ಬಲಗೊಳಿಸುವುದನ್ನು ಈಗಾಗಲೇ ಹೇಳಿದೆ. ಉಪ್ಪು, ಮರದ ತುಂಡುಗಳು, ಅಕ್ಕಿ ಬೂಸ ಇತ್ಯಾದಿಗಳು, ಬಿಳಿ, ಕೆಂಪು ಅಥವಾ ಹಳದಿ ಬಣ್ಣದ ಮಣ್ಣನ್ನು ಸಂಗ್ರಹಿಸಿ ಅದಕ್ಕೆ ತ್ರಿಫಲದ ಕಷಾಯವನ್ನು ಬೆರೆಸಿ ದೀರ್ಘಕಾಲದವರೆಗೂ ಚೆನ್ನಾಗಿ ನಾದುತ್ತಿದ್ದರು. ಇಂತಹ ಮಣ್ಣನ್ನು ಗೋಡೆಯ ನಿರ್ಮಾಣಕ್ಕಾಗಿ ಬಳಸುತ್ತಿದ್ದರು. 'ತುಷಾಂಗಾರಸ್ಥಿ ಪಾಷಾಣ ಶರ್ಕರಾ ಕಾಷ್ಠ ಲೋಷ್ಟಕೈ: ವರ್ಜಿತಾ' ಎಂದು ಮಣ್ಣು ಇದ್ದಿಲು, ಮೊಳೆ, ಕಲ್ಲು, ಮರ ಮುಂತಾದವುಗಳಿಂದ ಮುಕ್ತವಾಗಿರಬೇಕು ಎಂದು ವಿವರಿಸಲಾಗಿದೆ.

**ಬಂಧಕ ದ್ರವ್ಯಗಳಿಂದ ಮಣ್ಣಿನ ಬಲಸಂವರ್ಧನೆ:** ಗೋಡೆಯ ಮೇಲೆ ಚಿತ್ರ, ಉಬ್ಬು ಶಿಲ್ಪ ಗಳನ್ನು ರಚಿಸಬೇಕಾಗಿದ್ದರೆ ಅದರ ಮೈ ನುಣುಪಾಗಿರಬೇಕಾದುದು ಅವಶ್ಯಕ. ಅದರಿಂದ ಈ ಕೆಲಸಕ್ಕಾಗಿ ನುಣುಪಾದ ಲೇಪವನ್ನು ತಯಾರಿಸಬೇಕು. ಲೇಪವನ್ನು ತಯಾರಿಸುವ ಕ್ರಮವು ಇಂತಿವೆ: ಅಕ್ಕಿ, ಗೋಧಿ ಮತ್ತು ಜವೆ ಇವುಗಳ ಹಿಟ್ಟು ಸಮಪಾಲು ತೆಗೆದುಕೊಂಡು ಒಟ್ಟು ಭಾಗದ ಎಂಟರಷ್ಟು ನೀರನ್ನು ಬೆರೆಸಿ ಒಂದು ಭಾಗದಷ್ಟು ನೀರು ಉಳಿಯುವತನಕ ಕಾಯಿಸಬೇಕು. ಇದನ್ನು ತ್ರಿಯಾವಕಲ್ಕ ಎನ್ನುತ್ತಾರೆ.

ತೊಳೆದ ಸೂಕ್ಷ್ಮವಾದ ಮರಳು, ಸುಣ್ಣ ಮತ್ತು ಹತ್ತಿ ಸಮಭಾಗಗಳಲ್ಲಿ ತೆಗೆದುಕೊಂಡು, ಮರದ ಪುಡಿ ಮತ್ತು ತ್ರಿಯವ ಕಲ್ಕವನ್ನು ಬೆರೆಸಬೇಕು. ಈ ಮಿಶ್ರಣವು ನುಣುಪಾಗಿ ಸ್ವಲ್ಪ ಗಟ್ಟಿಯಾಗುವ ತನಕ ಬೆರೆಸುತ್ತಿರಬೇಕು. ನಂತರ ಇದನ್ನು ಗೋಡೆಯ ಮೇಲೆ ಸಮಾನವಾಗಿ

ಲೇಪಿಸಬೇಕು. ಈ ಲೇಪವನ್ನು ತಯಾರಿಸುವ ಇನ್ನೊಂದು ಪದ್ಧತಿಯೂ ಕೂಡ ಇದೆ. ಶಂಖ ಮತ್ತು ಚಿಪ್ಪುಗಳನ್ನು ಸುಡುವುದರಿಂದ ಸುಣ್ಣವನ್ನು ತಯಾರಿಸುತ್ತಾರೆ. ಈ ಸುಣ್ಣದಲ್ಲಿ ನುಣ್ಣನೆಯ ಮರಳು, ಮುದ್ಗಕ್ವಾಥದ ಕಲ್ಕ, ಬೆಲ್ಲದ ನೀರು, ಬೇಯಿಸಿರುವ ಮರದ ಚೂರ್ಣ ಇವನ್ನು ಬೆರೆಸಬೇಕು. ಈ ಮಿಶ್ರಣವು ಬೆಣ್ಣೆಯಂತೆ ನುಣುಪಾಗಿ, ಮೆದುವಾಗಿ ಸಿದ್ಧವಾಗುವ ತನಕ ಚೆನ್ನಾಗಿ ಕುಟ್ಟಬೇಕು. "ಮುದ್ಧಕ್ವಾತ" ಎಂದರೆ ಕ್ಷೀರವೃಕ್ಷ ಮತ್ತು ಕದಂಬವೃಕ್ಷದ ಗೋಂದು, ತ್ರಿಫಲ ಕಷಾಯ, ಉದ್ದು, ಕಡಲೆ ಅಥವಾ ಬೇಯಿಸಿದ ಗೋಧಿಯ ಹಿಟ್ಟು ಮಿಶ್ರಣ ಮಾಡಿ ಅದಕ್ಕೆ ಹದಿನಾರು ಪಟ್ಟು ನೀರನ್ನು ಸೇರಿಸಿ ಅದು ಒಂದು ಭಾಗದಷ್ಟು ಉಳಿದಿರುವ ತನಕ ಬೇಯಿಸಿ ತಯಾರಿಸಿರುವ ಕಲ್ಕ. ಮಣ್ಣಿನ ಬಲಸಂವರ್ಧನೆಗಾಗಿ ಕಷಾಯವನ್ನು ಬೆರೆಸುವ ಪದ್ಧತಿ ಈ ಮೊದಲೇ ಉಲ್ಲೇಖಿಸಲಾಗಿದೆ. ಇದರೊಂದಿಗೆ ಇನ್ನೂ ಕೆಲವು ಪದಾರ್ಥಗಳನ್ನು ಬೆರಸಲಾಗುತ್ತಿತ್ತು. "ತಂತ್ರಸಮುಚ್ಚಯ"ದಲ್ಲಿ ದೇವತಾಮೂರ್ತಿಗಳ ತಯಾರಿಕೆಗಾಗಿ ಮಣ್ಣಿನ ಬಲಸಂವರ್ಧನೆಯ ಕ್ರಮವನ್ನು ವಿವರಿಸಲಾಗಿದೆ. ದೇವತಾ ಮೂರ್ತಿಯನ್ನು ಬೆಂಕಿಯಿಂದ ಸುಡುವುದು ಸರಿಯಲ್ಲ ವೆಂಬುದು ಅಲ್ಲಿಯ ಶಿಲ್ಪಿಗಳ ಮತ್ತು ಆಗಮಿಕರ ಭಾವ. ಅವರು ಇಂದೂ ವಿಗ್ರಹಪ್ರತಿಷ್ಠಾಕ್ರಮದಲ್ಲಿ ಬಳಸುವ ಅಷ್ಟಬಂಧನವನ್ನು ಬೆಂಕಿಯಲ್ಲಿ ಬೇಯಿಸದೆಯೇ ತಯಾರಿಸಿ ವಿಗ್ರಹಪ್ರತಿಷ್ಠಾಪನೆಯನ್ನು ಮಾಡುತ್ತಾರೆ. ಪೀಠವು ದೇವಿಯ ಅಂಗದ ಸಂಕೇತವಾಗಿರುವುದರಿಂದ ಅಲ್ಲಿ ಬಿಸಿಯಾಗಿರುವ ಅಷ್ಟಬಂಧನ ಸುರಿಯಬಾರದೆಂಬುದು ಅವರ ಅಭಿಮತ. ಅದ್ದರಿಂದ ಮಣ್ಣಿನ ಮೂರ್ತಿಯು ನೀರಿನಿಂದ ಪ್ರತಿನಿತ್ಯವೂ ಅಭಿಷೇಕವನ್ನು ಪಡೆದುಕೊಳ್ಳುವಷ್ಟು ಸಮರ್ಥವಾಗಿರಬೇಕು. ಆ ಮಣ್ಣಿನ ಮೂರ್ತಿಗಳನ್ನು ಅದಕ್ಕೆ ತಕ್ಕಂತೆ ತಯಾರಿಸುತ್ತಿದ್ದರು. ಮೂರ್ತಿಯನ್ನು ತಯಾರಿಸಲು ಮಣ್ಣು ಭೂಮಿಯಲ್ಲಿ ಅನೇಕ ರೀತಿಯಿಂದ ದೊರೆಯುತ್ತದೆ.

ಶಿಲ್ಪಕಲೆಯನ್ನು ನಿರ್ಮಿಸುವ ಕಲಾವಿದನು ಮಣ್ಣಿನ ಪರೀಕ್ಷೆ ಮಾಡುವ ಪದ್ಧತಿಯನ್ನು ಅರಿತಿರಬೇಕು. ಮಣ್ಣಿನಲ್ಲಿ ಅನೇಕ ಪ್ರಕಾರಗಳಿವೆ. ಎಲ್ಲ ಮಣ್ಣು ಶಿಲ್ಪಕಲೆಯ ಬಳಕೆಗೆ ಬರುವುದಿಲ್ಲ. ವಿಶೇಷವಾಗಿ ಜೇಡಿಮಣ್ಣು, ನುಣುಪಾದ ಹಾಗೂ ನಯವಾದ ಮಣ್ಣು ಮಣ್ಣಿನ ಮೂರ್ತಿಗಳು ತಯಾರಿಸಲು ಬರುತ್ತದೆ. ಮಣ್ಣಿನಿಂದ ಗಣೇಶ, ಶಿವ, ಪಾರ್ವತಿ, ನಾಗ, ಸೂರ್ಯ, ಮುಂತಾದ ದೇವ ದೇವತೆಗಳ ಶಿಲ್ಪಗಳನ್ನು ಮಾಡುವುದರ ಜೊತೆಗೆ ವ್ಯಕ್ತಿಗಳ ಭಾವಶಿಲ್ಪಗಳನ್ನು ಮಣ್ಣಿನಲ್ಲಿ ಮಾದರಿ ಕಲಾಕೃತಿಯನ್ನು ಕಲಾವಿದ ರಚಿಸಿಕೊಳ್ಳುತ್ತಾನೆ. ಮಣ್ಣನ್ನು ನೀರಿನಲ್ಲಿ ನೆನೆಹಾಕಿ ಅದನ್ನು ಕುಟ್ಟಿ ಹದಗೊಳಿಸಿ ಅದಕ್ಕೆ ಹತ್ತಿಯ ಮಿಶ್ರವನ್ನು ಮಾಡಿಕೊಂಡು ಪುನಃ ಕುಟ್ಟಿದಾಗ ಮಣ್ಣು ಹದವಾಗುತ್ತದೆ. ಈ ಮಣ್ಣಿನಲ್ಲಿ ಯಾವುದೇ ಕಲ್ಲು, ಅರಳು, ಇಲ್ಲದಂತೆ ನೋಡಿಕೊಂಡು ಮೊದಲೇ ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ. ಹದವಾದ ಹೂರಣದಂತೆ ಮಾಡಿಕೊಂಡ ಮಣ್ಣನ್ನು ತೇವವಾದ ಬಟ್ಟೆಯಿಂದ ಹೊದಿಸಿ ಸಂಗ್ರಹಿಸಿ ಕಾಯ್ದಿಟ್ಟುಕೊಂಡು ವಾರಗಟ್ಟಲೇ ಮಣ್ಣಿನ ಮೂರ್ತಿರಚನೆಯನ್ನು ಮಾಡಲು ಬರುತ್ತದೆ. ಇಂತಹ ಹದವಾದ ಮಣ್ಣಿನಿಂದ ಅನೇಕ ಮಣ್ಣಿನ ಮೂರ್ತಿಗಳನ್ನು ಒಂದು ಇಂಚಿನಿಂದ ಹತ್ತು ಹದಿನೈದು ಅಡಿಗಳವರೆಗಿನ ಮೂರ್ತಿಗಳನ್ನು ಮಾಡಿಕೊಳ್ಳುತ್ತಾರೆ. ಮಣ್ಣಿನ ಬಳಕೆ ಬೇರೆ ಬೇರೆ ಹಂತದಲ್ಲಿ ಕಂಡುಬರುತ್ತದೆ.

### ೪.೧.೨. ಶಿಲಾ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಕಲೆ

ಆದಿಮಾನವ ಶಿಲಾಯುಗದಿಂದಲೇ ಬಂಡೆಗಳ ಮೇಲೆ ಮೂಡಿಬಂದ ಪ್ರಾಣಿಚಿತ್ರಗಳ ಸೂಕ್ಷ್ಮ ಕೆತ್ತನೆಯನ್ನು ಮತ್ತು ಬೇಟೆಯಾಡಲು ಆಯುಧಗಳನ್ನು ಶಿಲೆಯಲ್ಲಿ ತಯಾರಿಸಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ಶಿಲಾಶಿಲ್ಪ ಮನುಷ್ಯನ ಅತಿ ಪ್ರಾಚೀನ ಕಲೆ. ಮರ, ಮೂಳೆ, ಕೊಂಬು ದಂತಗಳಲ್ಲಿ ಕೆತ್ತನೆ ಕೆಲಸ ಮಾಡುವುದು ಜಗತ್ತಿನಲ್ಲೆಲ್ಲ ಕಾಣಬರುವ ಕಲೆಯಾಗಿದ್ದು, ಗ್ರೀಸ್, ರೋಮ್, ಅಸ್ಸೀಯಾ, ಈಜಿಪ್ಟ್ ರಾಷ್ಟ್ರಗಳಲ್ಲೆಲ್ಲ ಈ ಶಿಲ್ಪಕ್ಕೆ ಉತ್ತೇಜನವಿತ್ತು. ಅಂತೆಯೇ ಭಾರತದಲ್ಲಿ ಗುಜರಾತ, ರಾಜಸ್ತಾನ, ಬಿಹಾರ, ಒರಿಸ್ಸಾ, ಕರ್ನಾಟಕಗಳಲ್ಲಿಯೂ ಪ್ರೋತ್ಸಾಹವಿತ್ತು. ಆದರೆ ಶಿಲ್ಪಕ್ಕೆ ಮರ ಮೂಳೆಗಳಿಗಿಂತಲು ಹೆಚ್ಚು ತಾಳಿಕೆ ಮತ್ತು ಬಾಳಿಕೆ ಬರುವ ಮಾಧ್ಯಮ ಕಲ್ಲು. ಅಂತೆಯೇ ನಮ್ಮ ರಾಷ್ಟ್ರದ ಇತಿಹಾಸದಲ್ಲಿ ಶಿಲ್ಪಕಲೆಯಲ್ಲಿ ಪ್ರಮುಖವಾಗಿ ಕಂಡುಬರುವುದು ಶಿಲಾಶಿಲ್ಪ'.[೧೬]

ನಿಸರ್ಗದತ್ತವೂ ವೈವಿಧ್ಯಮಯವೂ ಆದ ಇನ್ನೊಂದು ಸಾಮಗ್ರಿ ಕಲ್ಲು ಅಥವಾ ಶಿಲೆಯನ್ನು, ಶಿಲಾಯುಗದ ಕಾಲದಿಂದಲೂ ಅಂದಿನ ಅಗತ್ಯದ ರಚನೆಗಳಿಗೆ ಮೂಲಸಾಮಗ್ರಿಯನ್ನಾಗಿ ಬಳಸಿ ಕೊಂಡು ಬರಲಾಗಿದೆ. ಅತಿ ಪ್ರಾಚೀನ ಶಿಲಾಯುಗದಲ್ಲಿ ನಸು ಹಾಗೂ ಕಡುವರ್ಣದ ಜ್ವಾಲಾಮುಖಿ ನಿರ್ಮಿತ ಕ್ವಾರ್ಟ್ಜಾಯಿಟ್(ಬೆಣಚುಕಲ್ಲು) ಶಿಲೆಗಳನ್ನು ಬಳಸಿಕೊಂಡು ಕೊಡಲಿ, ಉಳಿ, ಚಾಕು ಮುಂತಾದ ಉಪಕರಣಗಳನ್ನು ತಯಾರಿಸಿಕೊಂಡುದುಂಟು. ಪ್ರಾಗೈತಿಹಾಸ ಕಾಲದ ನಿವೇಶನವಾದ ಮಸ್ಕಿಯಲ್ಲಿ (ಕರ್ನಾಟಕ) ನುಣುಪುಗೊಳಿಸಿದ ಶಿಲಾ ಉಪಕರಣಗಳು, ಆಭರಣಗಳು ದೊರಕಿವೆ. ಇಲ್ಲಿಯೇ ದೊರಕಿದ ಕೆಂಪು ಶಿಲೆಯ ಮಾನವ ದುಂಡಾಕೃತಿ, ವೃಕ್ಷ, ಪ್ರಾಣಿ ಹಾಗೂ ಅಕ್ಷರ ಗಳನ್ನು ಒಳಗೊಂಡ ವಿವಿಧ ಬಗೆಯ ಶಿಲಾಮುದ್ರೆಗಳು ಶಿಲ್ಪಗಾರಿಕೆಯ ಕೌಶಲದ ರಚನೆಗಳಾಗಿವೆ. ಅಶೋಕನ ಕಾಲದ ಏಕಶಿಲಾ ಸಿಂಹ ಹಾಗೂ ವೃಷಭ ಸ್ತಂಭಗಳ ಅನಂತರದ ಬೋಧಗಯಾ, ಸಾಂಚಿ, ಅಮರಾವತಿ ಸ್ತೂಪಗಳು, ಅಲ್ಲಿನ ತೋರಣ ಶಿಲ್ಪಗಳು, ಶಿಲ್ಪಕಾರಿಕೆಯ ಉತ್ತಮ ರಚನೆ ಗಳಾಗಿವೆ. ಕುಶಾನ, ಪೂರ್ವಕಾಲ, ಗುಪ್ತಕಾಲಾವಧಿಯ ಮಧುರಾ ಶಿಲ್ಪಗಳು ಹಾಗೆಯೇ ಗುಪ್ತರ ಕಾಲದ ಶಿಲ್ಪರಚನೆಗಳು ಲಾವಣ್ಯಪೂರ್ಣ, ಚಲನಶೀಲ ಸತ್ವಶಾಲಿ ರಚನೆಗಳಾಗಿವೆ. ಕೊನಾರ್ಕದ ಸೂರ್ಯ ದೇವಾಲಯ, ಒರಿಸ್ಸಾದ ಲಿಂಗರಾಜ ದೇವಾಲಯ, ಚಂದೇಲರ ಕಾಲದ ಖಜುರಾಹೋ ದೇವಾಲಯಗಳು ಶಿಲ್ಪಿಗಾರಿಕೆಯ ಅನುಪಮ ದಕ್ಷಿಣದಲ್ಲಿ ಮಹಾಬಲಿಪುರಂ, ಶ್ರೀರಂಗಂ, ಮದುರೈ, ಕರ್ನಾಟಕದ ಹಳೇಬೀಡು, ಬೇಲೂರು, ಐಹೊಳೆ, ಪಟ್ಟದಕಲ್ಲು ಮುಂತಾದ ಕಡೆಗಳಲ್ಲಿ ಶಿಲ್ಪ ಕಲೆಗಾರಿಕೆಯ ಉತ್ಕೃಷ್ಟ ಮಾದರಿಗಳನ್ನು ಕಾಣಬಹುದಾಗಿದೆ. ಇಂತಹ ಶಿಲ್ಪಗಾರಿಕೆಯನ್ನು ತಲೆಮಾರು ಗಳಿಂದ ಉಳಿಸಿಕೊಂಡು ಬಂದ ನೂರಾರು ನೆಲೆಗಳು ದೇಶದುದ್ದಕ್ಕೂ ಹರಡಿವೆ. ವಿಭಿನ್ನ ಕಲಾಕಾರರಿಂದ, ವಿಭಿನ್ನ ಕಮ್ಮಟಗಳಲ್ಲಿ, ವಿಭಿನ್ನ ಪ್ರದೇಶಗಳಲ್ಲಿ ರಚನೆಗೊಂಡಿರುವ ಕಲಾಕೃತಿಗಳ ಆಯಾ ಪ್ರದೇಶದ ವೈಶಿಷ್ಟ್ಯ-ವೈವಿಧ್ಯಗಳನ್ನೊಳಗೊಂಡು ವಿಕಾಸವನ್ನು ಹೊಂದಿರುವುದನ್ನು ಗುರುತಿಸಬಹುದಾಗಿದೆ.

---

೧೬ ಕರೀಗೌಡ ಬೀಚನಹಳ್ಳಿ(ಸಂ.): ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ: ೨, ಕರಕುಶಲ ಕಲೆಗಳು, ಪು-೨೨೦

ಪ್ರಾಚೀನ ಕಾಲದಿಂದಲೂ ಪರಂಪರಾಗತವಾಗಿ ಉಳಿದುಬಂದ ಈ ಶಿಲ್ಪಗಾರಿಕೆಯ ಕರಕುಶಲ ಕಲೆಯ ಹಲವಾರು ನೆಲೆಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ಹೆಸರಿಸಬಹುದಾಗಿದೆ. ರಾಜಸ್ಥಾನ (ಸಂಗಮವರಿ ಮತ್ತು ಮರಳುಕಲ್ಲು) ದೆಹಲಿ, ಮಧ್ಯಪ್ರದೇಶ ಮತ್ತು ಉತ್ತರಪ್ರದೇಶ(ಮರಳುಕಲ್ಲು), ಒರಿಸ್ಸಾ, ಬಿಹಾರ, ಗುಜರಾತ್, ಕೆಸಲ್‌ಮೇರ, ಉದಯಪುರ, ಜಯಪುರ, ಆಗ್ರಾ, ಮಿರ್ಜಾಪೂರ ಸೋಮನಾಥಪುರ, ಹಳೇಬೀಡು, ಗೋಲ್ಕೊಂಡ, ಶಿವಾರ ಪಟ್ಟಣ, ದೇವನಹಳ್ಳಿ ಮುಂತಾದವುಗಳಿವೆ. ಭಾರತದ ಈ ಪ್ರಮುಖ ಊರುಗಳಲ್ಲಿ ಹಾಗೂ ಅನೇಕ ಹಳ್ಳಿಗಳಲ್ಲಿ ನಿತ್ಯ ಬಳಕೆಯ ಪಾತ್ರೆ ಪರಿಕರ ಗಳನ್ನು ಮೊದಲು ಮಾಡಿಕೊಂಡು ದೇವಾಲಯಗಳಲ್ಲಿನ ಅರ್ಚನೆಗಾಗಿ ದೇವತಾ ಮೂರ್ತಿಗಳನ್ನು ನಿರ್ಮಿಸಲಾಗುತ್ತದೆ. ಅಲ್ಲದೇ, ಮನೆ, ದಿವಾನಖಾನೆ, ಸಾರ್ವಜನಕ ಸ್ಥಳ ಮುಂತಾದಡೆಗಳಲ್ಲಿನ ಅಲಂಕಾರಕ್ಕಾಗಿ ತಯಾರಿಸಲಾಗುವ ಸಾಂಪ್ರದಾಯಿಕ ಹಾಗೂ ನವೀನ ಶೈಲಿಯ ಪ್ರಾಣಿ ಪಕ್ಷಿ ಮಾನವ ಹಾಗೂ ದೇವತಾಮೂರ್ತಿಗಳು ಈ ಕಲೆಯ ವಿಕಾಸದ ಕಲ್ಪನೆಯನ್ನು ಮೂಡಿಸಬಲ್ಲದಾಗಿದೆ.

ಯಾವುದೇ ಕಟ್ಟಡದ ನಿರ್ಮಾಣದಲ್ಲಿ ಕಲ್ಲು ಬಹು ಮುಖ್ಯವಾದ ವಸ್ತು. ಕಲ್ಲು ದೊರೆಯುವ ಎರಡು ಮುಖ್ಯಸ್ಥಳಗಳು ಎಂದರೆ ಮೊದಲಿನದು ಬೆಟ್ಟ, ಎರಡನೆಯದು ಭೂಮಿ. ಭೂಮಿಯ ಒಳಗೆ ದೊರೆಯುವ ಕಲ್ಲಿಗಿಂತಲೂ ಬೆಟ್ಟದ ಮೇಲೆ ದೊರೆಯುವ ಕಲ್ಲು ಒಳ್ಳೆಯದು ಎಂಬುದಾಗಿ ಭಾವಿಸಲಾಗುತ್ತದೆ. ಏಕೆಂದರೆ ಭೂಮಿಯಿಂದ ಕಲ್ಲನ್ನು ತೆಗೆದ ನಂತರ ಅದು ಗಾಳಿ, ಮಳೆ, ಬಿಸಿ ಮತ್ತು ವಾತಾವರಣದ ವೈಪರೀತ್ಯಗಳಿಗೆ ತುತ್ತಾಗಿ ಮೊದಲಿನಂತೆ ದೃಢವಾಗಿರದೆ ದುರ್ಬಲ ವಾಗಿರುತ್ತದೆ. ಆದರೆ ಬೆಟ್ಟದ ಮೇಲಿನ ಕಲ್ಲು ಹೀಗಾಹಿರುವುದಿಲ್ಲ. ಬೆಟ್ಟ, ಸಮುದ್ರ ಅಥವಾ ನದಿ ತೀರ, ತೀರ್ಥಕ್ಷೇತ್ರ ಅಥವಾ ಕಾಡು ಅಥವಾ ಕ್ಷೀರವೃಕ್ಷದ ಬಳಿ ಅಥವಾ ದೇವಾಲಯದ ಹತ್ತಿರ ದೊರೆಯುವ ಕಲ್ಲು ಕಟ್ಟಡ ರಚನೆಗೆ ಒಳ್ಳೆಯದಾಗಿರುತ್ತದೆ. ಇದರ ವಿನಾ ಬೇರೆಯ ಸ್ಥಳ ಗಳಲ್ಲಿ ದೊರೆಯುವ ಕಲ್ಲುಗಳು ಸ್ವೀಕಾರಾರ್ಹವಾದುದಲ್ಲ. ಹುತ್ತ, ಸ್ಮಶಾನ, ಗೋರಿ ಮುಂತಾದವುಗಳು ಇರುವ ಸ್ಥಳದಲ್ಲಿ ಭೂಮಿಯ ಒಳಗಿನ ಕಲ್ಲು ತ್ಯಾಜ್ಯ. ಬಹುವಾಗಿ ಕೆಸರಿನಿಂದ ತುಂಬಿರುವ, ದುರ್ಗಂಧಯುಕ್ತವಾಗಿರುವ, ಸಸ್ಯಾಂಗಾರಯುಕ್ತ ನೆಲ ಇವುಗಳಲ್ಲಿ ದೊರೆಯುವ ಶಿಲೆಯು ತ್ಯಾಜ್ಯ. ಏಕೆಂದರೆ ಉಪ್ಪು ನೀರು ಕಲ್ಲಿನ ಮೇಲೆ ಪರಿಣಾಮ ಬೀರುತ್ತದೆ, ಸಸ್ಯಾಂಗಾರಯುಕ್ತ ನೆಲವು ದುರ್ಬಲವಾಗುತ್ತದೆ. ಆದ್ದರಿಂದ ಈ ಶಿಲೆಗಳನ್ನು ಕಟ್ಟಡ ರಚನೆಯಲ್ಲಿ ಬಳಸಬಾರದು. ಶಿಲೆಗಳ ಸ್ವೀಕಾರ, ನಿರಾಕರಣೆಯನ್ನು ಅವುಗಳ ಬಣ್ಣ, ಲಿಂಗ ಮತ್ತು ವಯೋಮಾನಗಳ ಆಧಾರದಿಂದ ತೀರ್ಮಾನಿಸಲಾಗುತ್ತದೆ.

**ಶಿಲೆ ಆಯ್ಕೆ:** ಭೂಮಿಯಲ್ಲಿ ಅನೇಕ ಶಿಲೆಗಳು ದೊರೆಯುತ್ತವೆ. ಅವುಗಳಲ್ಲಿ ಗ್ರಾನೈಟ್, ಸಿಲಿಕಾ, ಕ್ವಡ್ಜ್, ಪಚ್ಚದ ಕಲ್ಲು, ವಜ್ರ, ಮಾಣಿಕ್ಯ, ಕ್ರಿಸ್ಟಲ್, ಸ್ಪಟಿಕ, ವೈಢೂರ್ಯ, ಗೋಮೇಧ, ಸಂಗಮರಿಕಲ್, ಮುಂತಾದ ಶಿಲೆಗಳು ದೊರೆಯುತ್ತವೆ. ಅದರೆ ಶಿಲಾಮೂರ್ತಿಗಳನ್ನು ಕೆತ್ತಲು ಇವು ಕಠಿಣ್ಯವಾಗುತ್ತವೆ. ಆದ್ದರಿಂದ ಶಿಲ್ಪಿಯಾದವರು ಶಿಲೆಯನ್ನು ಆಯ್ಕೆ ಮಾಡುವಾಗ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಪೂರ್ವಕಾಲದಲ್ಲಿ ಸ್ಥಪತಿಗಳು ಶಿಲ್ಪವನ್ನು ನಿರ್ಮಾಣ

ಮಾಡಬೇಕಾದರೆ ಶಿಲೆಯ ಆಯ್ಕೆಗಾಗಿ ಬೆಟ್ಟ ಗುಡ್ಡಗಳನ್ನು ಹುಡುಕಿಕೊಂಡು ಹೋಗುತ್ತಿದ್ದರು. ನಂತರ ತಮ್ಮ ಕೈಯಲ್ಲಿ ಇರುವ ಸುತ್ತಿಗೆಯಿಂದ ಶಿಲೆಗಳನ್ನು ಬಾರಿಸಿ ನೋಡಿ ಅದ್ದರಿಂದ ನಾದವನ್ನು ಸೂಕ್ಷ್ಮವಾಗಿ ಗ್ರಹಿಸಿ ನಾದವು ಅತಿ ಕಾಠಿಣ್ಯವಿಲ್ಲದ ಮತ್ತು ಮಂದಗತಿ ಇಲ್ಲದ ಒಂದು ವಿಶೇಷ ನಾದವು ಹೊರಹೊಮ್ಮುತ್ತದೆ. ಇದನ್ನು ನೋಡಿಕೊಂಡು ಆ ಶಿಲೆಗೆ ಪೂಜೆ ಶಾಸ್ತ್ರೋಕ್ತ ಮಂತ್ರಗಳನ್ನು ಪಠಿಸಿ ತಾನು ಮಾಡುವ ಶಿಲೆಯ ವಿಗ್ರಹವನ್ನು ಕುರಿತು ಮಂತ್ರ ಸೂಕ್ತವನ್ನು ಹೇಳಿ ಆ ದೇವತೆ ಆಹ್ವಾನವನ್ನು ಮಾಡಿಕೊಂಡು ಸಂಕಲ್ಪಸಿ ಬರುತ್ತಿದ್ದರು. ನಂತರ ಶುಭವಾರ, ಶುಭತಿಥಿ ಮತ್ತು ದೇವಗಣದ ನಕ್ಷತ್ರಗಳನ್ನು ನೋಡಿಕೊಂಡು ಅಮೃತಗಳಿಯಲ್ಲಿ ಆ ಶಿಲೆಯನ್ನು ಭೂಮಿಯಿಂದ ಹೊರಗೆ ತೆಗೆದು ಅಲ್ಲಿಯೇ ಒಂದು ನಿರ್ದಿಷ್ಠ ಅಳತೆಗೆ ಬರುವಂತೆ ಅದನ್ನು ಚಾನಸುತ್ತಿಗೆಯಿಂದ ಕೆತ್ತಿ ತೆಗೆದು ಆ ಶಿಲೆಯನ್ನು ತಮ್ಮ ಶಿಲ್ಪಕುಟೀರಕ್ಕೆ ತಂದು ಶಿಲ್ಪರಚನೆಯ ಕಾರ್ಯವನ್ನು ಮಾಡುವ ಸಂಪ್ರದಾಯ ರೂಢಿಯಲ್ಲಿ ಇತ್ತು. ಹೀಗಿನ ತಲೆಮಾರುಗಳಲ್ಲಿ ಇಂತಹ ಯಾವುದೇ ಕಾರ್ಯವನ್ನು ಮಾಡುವುದು ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತದೆ.

ಏಕೆಂದರೆ ಈಗ ವಿಗ್ರಹದ ಶಿಲೆಯನ್ನು ಅಳತೆಗೆ ತಕ್ಕಂತೆ ಯಂತ್ರಗಳ ಸಹಾಯದಿಂದ ಕೊರೆದು ಕ್ರೇನ್ ಮೂಲಕ ಲಾರಿಗಳಿಗೆ ತುಂಬಿ ಶಿಲ್ಪಿಗಳಿಗೆ ಬೇಕಾದ ಜಾಗದಲ್ಲಿ ತಂದು ಹಾಕ ಲಾಗುತ್ತದೆ. ಇದರಿಂದ ಶಿಲ್ಪಿಗಳಿಗೆ ಸಮಯವು ಉಳಿಯುತ್ತವೆ ಮತ್ತು ಶಿಲೆಗಳಲ್ಲಿ ಬರುವ ಪದರು, ಎಳೆಗಳು, ಲೋಪಗಳು, ಅವುಗಳಲ್ಲಿ ಇರುವುದಿಲ್ಲ. ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆಯಲ್ಲಿ ಕೃಷ್ಣಶಿಲೆ ದೊರಯುತ್ತದೆ. ಈ ಶಿಲೆಯಲ್ಲಿ ಅನೇಕ ಶಿಲ್ಪಿಗಳು ಕಲಾಕೃತಿಯನ್ನು ಸುಂದರವಾಗಿ ನಿರ್ಮಿಸಿರುವುದು ಕಂಡುಬರುತ್ತದೆ. ಬಾಗಲಕೋಟೆ ಜಿಲ್ಲೆಯ ಕಾಗಲುಗಂಭ, ಶಲ್ಲಿಕೇರಿ, ಮುಂತಾದ ಸ್ಥಳಗಳಲ್ಲಿ ದೊರೆಯುವ ಶಿಲಾಮೂರ್ತಿಗಳನ್ನು ರಚಿಸಲು ಅಳತೆಗೆ ತಕ್ಕಂತೆ ಕಲ್ಲುಗಣಿ, ಕೋರೆ ಮಾಲೀಕರಿಗೆ ಮುಂಗಡ ಹಣವನ್ನು ಕೊಟ್ಟು ತಮಗೆ ಬೇಕಾದ ರೀತಿಯಲ್ಲಿ ಸದೃಢವಾದ ಕಲ್ಲುಗಳನ್ನು ಶಿಲ್ಪಿಗಳು ತರಿಸಿಕೊಳ್ಳುತ್ತಾರೆ.

ಶಿಲಾ ವಿಗ್ರಹಗಳನ್ನು ಮಾಡುವಾಗ ಕೆಲವು ವಿಶಿಷ್ಟ ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಶಿಲ್ಪಿಗೆ ಶಾಸ್ತ್ರದ ಕಟ್ಟುಪಾಡಾದರೂ ಏತಕ್ಕೆ? ಪ್ರತಿಭೆ, ಪ್ರೌಢಿಮೆಗಳಿದ್ದರೆ ಅವನು ತನಗೆ ತೋಚಿದಂತೆ, ತನಗೆ ತೋಚಿದುದನ್ನು ಮಾಡಬಹುದಲ್ಲ? ಇದಕ್ಕೆ ಶುಕ್ರನೀತಿಸಾರ ಹೀಗೆ ಸಮಾಧಾನವನ್ನು ನೀಡುತ್ತದೆ.

*ಧ್ಯಾನಯೋಗಸ್ಯ ಸಂಸಿದ್ಧ್ಯೈ ಪ್ರತಿಮಾಲಕ್ಷಣಂ ಸ್ಮೃತಂ!*
*ಪ್ರತಿಮಾಕಾರಕೋ ಮರ್ತ್ಯೋ ಯಥಾ ಧ್ಯಾನರತೋ ಭವೇತ್!!*

ಶಾಸ್ತ್ರಗ್ರಂಥಗಳಲ್ಲಿ ಪ್ರತಿಮಾಲಕ್ಷವನ್ನು ಹೇಳಿರುವುದು ಧ್ಯಾನಯೋಗ ಕೈಗೂಡುವ ಸಲುವಾಗಿ; ಪ್ರತಿಮೆಯನ್ನು ಮಾಡುವ ಶಿಲ್ಪಿ ಧ್ಯಾನದಲ್ಲಿ ತೊಡಗಲೆಂದು. ಧ್ಯಾನವೆಂದರೆ ಮನಸ್ಸು ಒಂದೇ ವಿಚಾರದಲ್ಲಿ, ತೈಲಧಾರೆಯಂತೆ ಎಡೆಬಿಡದೆ ಹರಿಯುವುದು. ಈ ಬಗೆಯ ವ್ಯವಧಾನವಿಲ್ಲದಿದ್ದರೆ ಪ್ರತಿಮೆಯನ್ನು ಮಾಡಿದರೂ ಅದರಲ್ಲಿ ವಿಶೇಷ ಸನ್ನಿಧಾನ ಕೂಡಿಬರುವುದಿಲ್ಲ; ಅದು ಆರಾಧನೆಗೆ

ತಕ್ಕದ್ದಾಗುವುದಿಲ್ಲ. ವಾಸ್ತವವಾಗಿ ಪ್ರತಿಮೆ ಸಿದ್ಧವಾಗುವುದು ಕೈಗಳಿಂದ ಅಲ್ಲ; ಮನಸ್ಸಿನಿಂದಲೇ. ಮನಸ್ಸಿನ ಸಂಸ್ಕಾರ ಶಿಲ್ಪಿಗೆ ಅತ್ಯಗತ್ಯ. ಯಾವ ಕಲಾವಿದನಿಗೂ ಈ ಮಾತು ಸರಿಯೇ.

ವಿಗ್ರಹ ಎಂಬ ಮಾತಿನ ಅರ್ಥ ಹೆಚ್ಚಿನ ಒಲುವಿನಿಂದ ಯಾವುದನ್ನು ಹಿಡಿದುಕೊಳ್ಳುವೆವೋ ಅದು(ವಿಶೇಷಣ ಗೃಹ್ಯತೆ) ಎಂದ ಮೇಲೆ ಶಿಲ್ಪಿಯು ಪ್ರತಿಮೆಯನ್ನು ಮಾಡತೊಡಗಿದಾಗ, ಅವನ ಮನಸ್ಸು ಪ್ರತಿಮೆಯನ್ನು ಚೆನ್ನಾಗಿ ತನ್ನಲ್ಲಿ ಮೂಡಿಸಿಕೊಂಡಿರಬೇಕು. ಮನಸ್ಸಿನಲ್ಲಿ ಚಿತ್ರ ಸ್ಫುಟವಾಗಿದ್ದರೆ ಕೈಗಳಿಂದ ಹೊರಹೊಮ್ಮುವ ಚಿತ್ರವಾಗಲಿ ಶಿಲ್ಪವಾಗಲಿ ಅಚ್ಚುಕಟ್ಟಾಗಿರುತ್ತದೆ. ವಿಗ್ರಹಗಳನ್ನು ಮಾಡಲು ಉದ್ಯುಕ್ತನಾದ ಶಿಲ್ಪಿಯು ಕಲೆಯಲ್ಲಿ ಕೌಶಲ್ಯವನ್ನು ಹೊಂದಿದವನಾಗಿರಬೇಕು, ಶಾಸ್ತ್ರದಲ್ಲಿ ನಿಪುಣನಾಗಿರ ಬೇಕು. ಕೆಲಸ ಪ್ರಾರಂಭಿಸುವ ಮುಂಚೆ ಸ್ನಾನ ಆಹ್ನಿಕಗಳನ್ನು ಮಾಡಿ ಶುಚಿರ್ಭೂತನಾಗಿ ಕಳಿತು ಧ್ಯಾನ ಮಂತ್ರವನ್ನು ತಾನು ರಚಿಸಿಬೇಕೆಂದಿರುವ ಮೂರ್ತಿಯ ಸ್ವರೂಪವನ್ನು ಮನಸ್ಸಿನಲ್ಲಿ ತಂದು ಕೊಂಡು ಮಂತ್ರ ಪುಷ್ಪಗಳಿಂದ ಪೂಜಿಸಿ ಅದರಲ್ಲೇ ಲೀನನಾಗಿ ಅನಂತರ ಕೆಲಸಕ್ಕೆ ತೊಡಗಬೇಕು. ಹೀಗೆಯೇ ಮುಗಿಯುವವರೆಗೂ ಪ್ರತಿನಿತ್ಯವೂ ಮಾಡಬೇಕು.

ವಿಗ್ರಹಗಳು ಕೆತ್ತನೆಯಲ್ಲಿ ಮುಂದೆ, ಹಿಂದೆ, ಎಲ್ಲ ಕಡೆಯಲ್ಲೂ ಕೆತ್ತಲ್ಪಟ್ಟಿದ್ದರೆ ಚಿತ್ರಾರ್ಧವೆಂದು ಕರೆಯಲ್ಪಡುವುವು. ಇವುಗಳಲ್ಲಿ ತಲೆಯಿಂದ ಕಾಲಿನವರೆಗೂ ಪೂರ್ತಿಯಾಗಿ ಕೆತ್ತಿರುವುದನ್ನು ವ್ಯಕ್ತ ವಿಗ್ರಹವೆಂದೂ ಸೊಂಟದವರೆಗೆ ಮಾತ್ರ ಕೆತ್ತಿರುವುದನ್ನು ಅವ್ಯಕ್ತವಿಗ್ರಹವೆಂದೂ ಕರೆಯುವರು.[೬]

ವಿಗ್ರಹಗಳಲ್ಲಿ ಕೆಲವು ಉಗ್ರ ಮೂರ್ತಿಗಳು, ಕೆಲವು ಸೌಮ್ಯಮೂರ್ತಿಗಳಿರುತ್ತವೆ. ಉಗ್ರ ಮೂರ್ತಿಗಳು ಸಾಮಾನ್ಯವಾಗಿ ಆಕಾರದಲ್ಲಿ ದೊಡ್ಡವಾಗಿ, ಅನೇಕ ಬಾಹುಗಳನ್ನು ಹೊಂದಿರುವುದಾಗಿ, ಕ್ರೂರದೃಷ್ಟಿಯುಳ್ಳವುಗಳಾಗಿ, ಕೋರೆದಾಡೆಗಳಿಂದ ಕೂಡಿದುವಾಗಿ ಇರುತ್ತವೆ. ಕತ್ತಿನಲ್ಲಿ ರುಂಡ ಮಾಲಿಯು, ಕೈಗಳಲ್ಲಿ ಬಗೆ ಬಗೆಯ ಆಯುಧಗಳು ಇರುತ್ತವೆ. ಇಂತಹ ಮೂತಿಗಳನ್ನು ಕ್ರೂರ ಸ್ವಭಾವದವರು ಹಿಂಸಾತ್ಮಕ ಕಾರ್ಯದಲ್ಲಿ ತಮ್ಮ ಇಷ್ಟಾರ್ಥವನ್ನು ಪಡೆಯುವುದಕ್ಕಾಗಿ ಪೂಜಿಸುವರು. ಸೌಮ್ಯಮೂರ್ತಿಗಳು ಸುಂದರಾಕಾರವನ್ನು ಹೊಂದಿ ನೋಡುವವರ ಮನಸ್ಸಿಗೆ ಸಂತೋಷವನ್ನುಂಟು ಮಾಡಿ ಅವರ ಮನಸ್ಸನ್ನು ಆಕರ್ಷಿಸಿ ಧ್ಯಾನಾಸಕ್ತರನ್ನಾಗಿ ಮಾಡಲು ಸಹಯ ಮಾಡುತ್ತಾರೆ.

ಮೂರ್ತಿಯನ್ನು ಮಾಡಲು ಬಳಸಲಾಗುವ ವಸ್ತುವನ್ನು ಕೆತ್ತದೆ(ಮೆತ್ತಿ) ರೂಪ ಕೊಡುವ ಕೌಶಲ್ಯಕ್ಕೆ ಮಾಡೆಲಿಂಗ್ ಎನ್ನುತ್ತಾರೆ. ಚಿತ್ರ ಹಾಗೂ ರೇಖಾಚಿತ್ರಗಳಲ್ಲಿ ಮೂರು ಆಯಾಮದ ಆಕೃತಿಯ ಆಳವನ್ನು ತೋರಿಸಲು ಪಾತಳಿರೇಖೆ ಹಾಗೂ ಛಾಯೆಗಳನ್ನು ಬಳಸಲಾಗುತ್ತದೆ. ಇದಕ್ಕೂ ಮಾಡೆಲಿಂಗ್ ಎನ್ನುತ್ತಾರೆ. ಯಾವುದೇ ಸಮಯದಲ್ಲಿ ಈ ತಂತ್ರವನ್ನು ಬಳಸಿ ಆಯಾಮಗಳ ಕಲ್ಪನೆ ಕೊಡಬಹುದಾಗಿದೆ. ಕೇವಲ ಜೇಡಿಮಣ್ಣು ಅಥವಾ ಅದರೊಡನೆ ಉಪಯೋಗಿಸುವ ವಸ್ತುವನ್ನು ಮಾಡೆಲಿಂಗ್ ಕ್ಲೇ ಎನ್ನುತ್ತಾರೆ. ವ್ಯಾಪಾರಿ ಉದ್ದೇಶದಿಂದ ಮಣ್ಣಿನ ಬದಲಾಗಿ ಆದರಂತಹ ಕೃತಕ ಮಾಧ್ಯಮಗಳನ್ನು ಬಳಸಿ ಮೂರ್ತಿಯನ್ನು ತಯಾರಿಸುವುದಕ್ಕೂ ಈ ಪದ ಅನ್ವಯವಾಗುತ್ತದೆ. ದಪ್ಪವಾಗಿ ಬಣ್ಣ ಹಾಕುವ ಶೈಲಿಯಲ್ಲಿ ಆಕ್ರಲಿಕ್ ಬಣ್ಣಗಳನ್ನು ಕೂಡಿಸುವುದಕ್ಕೆ ಬಳಸುವ ದಟ್ಟ ಲೇಹ್ಯ ನಿರ್ಮಿಸಲಿರುವ ದೊಡ್ಡ ಶಿಲ್ಪ ಅಥವಾ ಚಿತ್ರದ ಕಲ್ಪನೆಯನ್ನು ಉಂಟು ಮಾಡುವ ಸಣ್ಣ ಮಾದರಿ.

**ವರ್ಣ:** ಶಿಲೆಗಳು ಮುಖ್ಯವಾಗಿ ನಾಲ್ಕು ಬಣ್ಣಗಳಲ್ಲಿರುತ್ತವೆ–ಬಿಳುಪು, ಕೆಂಪು, ಹಳದಿ ಮತ್ತು ಕಪ್ಪು. ಈ ಮುಖ್ಯ ಬಣ್ಣಗಳಲ್ಲಿ ಹಲವು ಛಾಯೆಗಳ ವರ್ಣಗಳು ಇರುತ್ತವೆ. ಬಿಳುಪು ಏಳು ಬಗೆಗಳಾಗಿರುತ್ತವೆ–ಹಸುವಿನ ಹಾಲಿನಂತೆ, ಶಂಖದಂತೆ, ಕುಂದ ಪುಷ್ಪದಂತೆ(ಸೂಜಿಮಲ್ಲಿಗೆಯಂತೆ), ಚಂದ್ರನಂತೆ, ಮುತ್ತು ಅಥವಾ ಸ್ಫಟಿಕದಂತೆ ಅಥವಾ ಮಲ್ಲಿಗೆ ಹೂವಿನಂತೆ. ಇಂದ್ರಗೋಪವೆಂಬ ಕೀಟದಂತೆ, ಜಾತಿಲಿಂಗದಂತೆ(ಪಾರಿಜಾತ ಹೂವಿನಂತೆ), ಮೊಲದ ರಕ್ತದಂತೆ. ದಾಳಿಂಬೆ ಹೂವಿನಂತೆ ಎಂದು ಐದು ವಿಧವಾದ ಕೆಂಪು ಬಣ್ಣಗಳುಂಟು. ಹಳದಿಯಲ್ಲಿ ಬಂಧೂಕ ಹೂ ಎಂಬ ಎರಡು ಬಗೆಗಳಿವೆ. ಕಪ್ಪು ಬಣ್ಣದಲ್ಲಿ ಕೋಣದ ಕಣ್ಣಿನ ಬಣ್ಣ, ನೀಲಿ ಕಮಲದಂತೆ, ದುಂಬಿಯಂತೆ, ನವಿಲಿನ ಕೊರಳಿನಂತೆ, ಕಪ್ಪು ಬಣ್ಣದ ಹಸುವಿನಂತೆ, ಉದ್ದಿನ ಕಾಳಿನಂತೆ ಎಂದು ಹತ್ತು ಬಗೆಗಳಿವೆ. ಬಿಳಿಯ ಬಣ್ಣದ ಕಲ್ಲು ದೇವಾಲಯಕ್ಕೆ ಅತ್ಯಂತ ಶ್ರೇಷ್ಠವಾದುವು. ಇದರ ನಂತರದಲ್ಲಿ ಕ್ರಮವಾಗಿ ಕೆಂಪು, ಹಳದಿ ಮತ್ತು ಕಪ್ಪುಕಲ್ಲುಗಳು ಶ್ರೇಷ್ಠವಾದುವು. ಬಿಳುಪು, ನೀಲಮಿತ್ರ ಬಿಳಪು, ಉದ್ದು ಅಥವಾ ದುಂಬಿಯಂತಹ ಕಪ್ಪು ಬಣ್ಣ ಅಥವಾ ಪಾರಿವಾಳದಂತಹ ಬೂದು ಬಣ್ಣ ದೇವಾಲಯದ ನಿರ್ಮಾಣಕ್ಕಾಗಿ ತುಂಬಾ ಒಳ್ಳೆಯದಾಗಿರುತ್ತದೆ. ಕಲ್ಲು ಒಂದೇ ಬಣ್ಣದ್ದಾಗಿರಬೇಕು. ಬೇರೆ ಬೇರೆಯ ಬಣ್ಣಗಳು ಸೂಕ್ತವಾದುದಲ್ಲ. ಗಾಳಿ ಸುಡುವ ಬಿಸಿಲು ಅಥವಾ ಬೆಂಕಿ ಹಾಗೂ ವಾತಾವರಣದ ವೈಪರೀತ್ಯಗಳಿಂದ ಕಲ್ಲಿನಲ್ಲಿರುವ ಲೋಹವು ಉಪ್ಪಿನ ಫಲವಾಗಿ ಕೆಲವು ಕಡೆ ಕಡಿಮೆಯಾಗಿ ಮತ್ತೆ ಕೆಲವು ಕಡೆ ಹೆಚ್ಚಾಗಿ ಇರುವುದರಿಂದ ಲೋಹಕ್ಷಾರವು ಕೆಂಪು, ಹಳದಿ, ಕಪ್ಪು, ಹಸಿರು ಮುಂತಾದ ಹಲವು ರಂಗುಗಳು ಕಲ್ಲಿನಲ್ಲಿ ಕಾಣಿಸಿಕೊಳ್ಳುತ್ತವೆ. ಆದ್ದರಿಂದ ಮಿಶ್ರ ರಂಗಿನ ಕಲ್ಲುಗಳ ಮೇಲೆ ಉಪ್ಪಿನ ಪ್ರಕ್ರಿಯೆಯೇ ಹೆಚ್ಚಾಗಿದೆ ಎಂಬುದನ್ನು ಸೂಚಿಸುತ್ತದೆ. ಆದ್ದರಿಂದ ಮಿಶ್ರ ರಂಗಿನ ಶಿಲೆಗಳನ್ನು ವರ್ಜಿಸಬೇಕು.

**ಶಿಲೆಗಳಲ್ಲಿರುವ ದೋಷಗಳು:** ಶಿಲ್ಪಶಾಸ್ತ್ರಗಳಲ್ಲಿ ಕಲ್ಲಿನ ದೋಷಗಳ ಬಗ್ಗೆ ವಿಸ್ತೃತವಾದ ವಿವರಣೆಗಳು ದೊರೆಯುತ್ತವೆ. ಕಲ್ಲಿನಲ್ಲಿ ರೇಖೆಗಳು, ಕಲೆಗಳು, ಮಚ್ಚೆಗಳು ಇರಬಾರದು. ರೇಖೆಗಳು ಮೂರು ಬಗೆಯಲ್ಲಿ ಇರುತ್ತವೆ.

೧. ಹಗ್ಗದಂತೆ ಹೊಸೆದುಕೊಂಡು ವಕ್ರವಾಗಿರುವ ರೇಖೆ,

೨. ಸೂರ್ಯಕಿರಣದಂತೆ ನೇರವಾಗಿರುವ ರೇಖೆ. ಸೂರ್ಯಕಿರಣದಲ್ಲಿ ಧೂಳಿನ ಕಣಗಳು ಕಾಣುವಂತೆಯೇ ಕಾಣಿಸುತ್ತಿರುತ್ತದೆ.

೩. ಮಳೆಯ ಧಾರೆಯಂತೆ ನೇರವಾದ ಒಂದೇ ಬಣ್ಣದ ರೇಖೆಗಳು. – ಇದೇ ಬಗೆಯಾಗಿ ಕಲೆಗಳು ಆಕಾರದಿಂದ ಮೂರು ಬಗೆಯಾಗಿರುತ್ತವೆ. ೧. ನೇರಳೆಯ ಹಣ್ಣಿನ ಆಕಾರದಲ್ಲಿರುವ ಕಲೆಗಳು, ೨. ದ್ರಾಕ್ಷಿಹಣ್ಣಿನಂತೆ(ಮೊಲೆಯ ಗುಂಡಾದ ತೊಟ್ಟಿನಂತೆ) ಅಥವಾ ಇನ್ನೂ ಕಿರಿದಾಗಿರುವ ಕಲೆಗಳು, ೩. ವೃತ್ತಾಕಾರದ ಕಲೆಗಳು.

**ಮಚ್ಚೆಗಳು ನಾಲ್ಕು ಬಗೆಯಾಗಿರುತ್ತವೆ:** ೧. ಗರಿಕೆ ಹೊಸೆದುಕೊಂಡಿರುವಂತೆ ಇರುವುದು, ೨. ಬಿದುರಿನ ಮೊಳಕೆಗಳಂತೆ ಕಾಣಿಸುವುದು, ೩. ಕರ್ಪೂರದ ಎಲೆಗಳಂತೆ ಸೀಳಿಕೊಂಡಿರುವಂತೆ

ಇರುವುದು, ೪. ಜೇಡರ ಕಾಲಿನಂತೆ ಉದ್ದಕ್ಕೆ ಹರಡಿಕೊಂಡಿರುವುದು, ಈ ರೀತಿಯ ಶಿಲೆಗಳನ್ನು ಬಿಡಬೇಕು. ಶಿಲೆಯ ಬಣ್ಣ, ರೇಖೆ, ಮಚ್ಚೆ ಮುಂತಾದವುಗಳ ಆಧಾರದಿಂದಲೇ ಅದು ಸ್ವೀಕಾರಾರ್ಹವೇ ಅಥವಾ ಅಲ್ಲವೇ ಎಂಬುದನ್ನು ತೀರ್ಮಾನಿಸಲಾಗುತ್ತದೆ. ಬಿಳಿಯ ಬಣ್ಣದ ರೇಖೆಗಳು ಕಪ್ಪು ಅಥವಾ ಬೇರೆ ಯಾವುದೇ ಬಣ್ಣದ ಕಲ್ಲಿನಲ್ಲಿದ್ದರೆ ಅದನ್ನು ಸ್ವೀಕರಿಸಬಹುದು. ಆದರೆ ಬಿಳಿಯ ಅಥವಾ ಇನ್ಯಾವುದೇ ಬಣ್ಣದ ಕಲ್ಲಿನಲ್ಲಿ ಕಪ್ಪು ರೇಖೆಗಳಿದ್ದರೆ ಆ ಕಲ್ಲು ತ್ಯಾಜ್ಯ ಬಿಳಿ ಬಣ್ಣದ ರೇಖೆಯು ಸ್ಫಟಿಕವಾಗಿದ್ದು ಅದು ತುಂಬಾ ಕಠೋರವಾಗಿರುತ್ತದೆ. ಕಲ್ಲಿಗಿಂತಲೂ ತುಂಬಾ ಬಲವಾಗಿರುತ್ತದೆ. ಆದ್ದರಿಂದ ಬಿಳಿಯ ರೇಖೆ ಇರುವ ಕಲ್ಲು ಬಲವಾಗಿರುತ್ತದೆ. ಕಪ್ಪು ರೇಖೆಯು ಮಣ್ಣಿನಿಂದ ಅಥವಾ ಗೌಣ ಖನಿಜದಿಂದ ರೂಪುಗೊಂಡಿರುತ್ತವೆ. ಆದ್ದರಿಂದ ದುರ್ಬಲವಾಗಿದ್ದು ಕಲ್ಲನ್ನೂ ದುರ್ಬಲಗೊಲಿಸುತ್ತದೆ. ಆದ್ದರಿಂದ ಆ ಕಲ್ಲನ್ನು ತ್ಯಾಜ್ಯ ಎಂದು ಪರಿಗಣಿಸಲಾಗಿದೆ. ಕಲ್ಲಿನ ಮೇಲೆ ಮಚ್ಚೆಗಳು ಇರಬಾರದು(ಕಲಂಕಂ ರೋಗದ ಜ್ಞೇಯಂ). ಮಚ್ಚೆಗಳು ಗೌಣ ಖನಿಜಗಳ ಫಲವಾಗಿ ಮೂಡುತ್ತವೆ. ಕಪ್ಪು ಕಲ್ಲಿನಲ್ಲಿ ಬಿಳಿಯ ಮಚ್ಚೆ ಇದ್ದರೆ ಆ ಕಲ್ಲು ಒಳ್ಳೆಯದು. ಆದರೆ ಬೇರೆ ಯಾವುದೇ ಇತರ ಬಣ್ಣದ ಕಲ್ಲಿನಲ್ಲಿ ಕಪ್ಪು ಮಚ್ಚೆ ಇದ್ದರೆ ಅದು ಕಟ್ಟಡಕ್ಕಾಗಲಿ, ಶಿಲ್ಪಕ್ಕಾಗಲಿ ಅಗ್ರಾಹ್ಯವೆಂದು ಪರಿಗಣಿಸಬೇಕು. ಜಿಯೋಲೈಟ್, ಕ್ಯಾಲ್ಸೈಟ್, ಫೆಲ್ಡಸ್ಪರ್, ಮುಂತಾದ ಗೌಣ ಖನಿಜಗಳು ಕಲ್ಲುಗಳಲ್ಲಿ ಇದ್ದರೆ ಬಿಳಿಯ ಮಚ್ಚೆ ಕಾಣಿಸುತ್ತದೆ. ಆ ಗೌಣ ಖನಿಜವು ಕ್ಲೋರೈಟ್ ಅಥವಾ ಆಲಿವಿನ್‌ಗಳಾಗಿದ್ದರೆ ಮಚ್ಚೆಗಳು ಹಸುರು ಅಥವಾ ಕಪ್ಪು ಬಣ್ಣದ್ದಾಗಿರುತ್ತವೆ.

ಬಿಳಿಯ ಬಣ್ಣದ ಗೌಣ ಖನಿಜಗಳು ಬಹು ಕಠೋರವಾಗಿರುತ್ತವೆ. ಅವುಗಳ ಮೇಲೆ ವಾತಾವರಣದ ಪ್ರಭಾವವು ತುಂಬಾ ಬೇಗ ಉಂಟಾಗುತ್ತದೆ. ಆದ್ದರಿದಲೇ ಈ ರೀತಿಯ ಮಚ್ಚೆಗಳು ಇರುವ ಕಲ್ಲು ಒಳ್ಳೆಯವಲ್ಲ ಎಂದು ತಿರಸ್ಕರಿಸಲಾಗುತ್ತದೆ. ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಮಚ್ಚೆ ಮತ್ತು ಕಲೆಗಳನ್ನು ವಿಭಾವ ಎಂದು ಕರೆಯಲಾಗಿದೆ. ಇವುಗಳಲ್ಲಿ ಮೂರು ಬಗೆಗಳಿವೆ– ಕಬ್ಬಿಣ, ಕಂಚು ಮತ್ತು ಚಿನ್ನದ ಬಣ್ಣಗಳು. ಕಪ್ಪು ಬಣ್ಣದ ವಿಭಾವವು ಆ ಕಲ್ಲಿನಲ್ಲಿರುವ ಹೆಚ್ಚು ಪ್ರಮಾಣದ ಐರನ್ ಸಲ್ಫೈಡ್ ಫಲವಾಗಿ ಉಂಟಾಗುತ್ತದೆ. ಕಂಚು ಅಥವಾ ಚಿನ್ನದ ಬಣ್ಣದ ವಿಭಾವವು ಆ ಕಲ್ಲಿನಲ್ಲಿರುವ ಹೆಚ್ಚು ಪ್ರಮಾಣದ ಐರನ್ ಸಲ್ಫೈಡ್ ಫಲವಾಗಿ ಉಂಟಾಗುತ್ತದೆ. ಈ ರೀತಿಯ ಗೌಣ ಖನಿಜಗಳು ದುರ್ಬಲವಾಗಿರುವುದರಿಂದ ಆ ಕಲ್ಲು ತ್ಯಾಜ್ಯವಾಗಿರುತ್ತದೆ. ಯಾವ ಕಲ್ಲಿನಲ್ಲಿ ರೇಖೆಗಳು, ಮಚ್ಚೆಗಳು ಮತ್ತು ಕಲೆಗಳು ಹೆಚ್ಚಾಗಿದ್ದರೆ ಆ ಶಿಲೆಯನ್ನು ಪ್ರಾಸಾದ ನಿರ್ಮಾಣದಲ್ಲಿ ಬಳಸಬಾರದು. ಈ ಮಚ್ಚೆಗಳು ಬಾದಾಮಿಯ ಆಕಾರದಲ್ಲಿದ್ದರೆ ಅದನ್ನು ಅಮಿಗ್ಡ ಲಾಯ್ಡಲ್ ಎಂದು ಕರೆಯುತ್ತಾರೆ. ಇದರಲ್ಲಿ ದುರ್ಬಲವಾದ ಗೌಣ ಖನಿಜಗಳು ಇರತ್ತವೆ. ಆದ್ದರಿಂದ ಇವು ಅಗ್ರಾಹ್ಯ.

**ಶಿಲೆಯ ವಯಸ್ಸಿನ ವರ್ಗೀಕರಣ:** ಕಲ್ಲಿನಲ್ಲಿ ಬಾಲ, ತರುಣ ಮತ್ತು ವೃದ್ಧ ಎಂಬ ಮೂರು ವಯೋಮಾನಗಳಿವೆ. ಕಲ್ಲನ್ನು ಹೊಡೆದಾಗ ತೀರ ಮೆಲ್ಲಗೆ ಸದ್ದು ಕೇಳಿಸಿದರೆ, ಬಲವಾಗಿ

ಹೊಡೆದಾಗ ಮಣ್ಣಿನಂತೆ ಸದ್ದು ಕೇಳಿಸಿದಾಗ ಅಥವಾ ಅರೆ ಬೆಂದ ಇಟ್ಟಿಗೆಯಂತೆ ಕೇಳಿಸಿದಾಗ, ಅಗಲವಿಲ್ಲದೆ ಕೇವಲ ಉದ್ದವಾಗಿದ್ದಾಗ, ಮರದ ಎಳೆಗಳಂತೆ ಇದ್ದಾಗ(ಎಂದರೆ ಕೇವಲ ಉದ್ದ ಅಗಲಗಳಿದ್ದು ದಪ್ಪ ತೀರಾ ಕಡಿಮೆಯಾಗಿದ್ದಾಗ) ಆ ಕಲ್ಲು ಬಾಲಶಿಲೆ ಎಂದು ಕರೆಯಲ್ಪಡುತ್ತದೆ. ಘಂಟೆಯಂತೆ ಗಣ ಗಣನೆ ಮೊರೆಯುವ ಮತ್ತು ಒಮ್ಮೆ ಹೊಡೆದರೆ ಬಹು ಹೊತ್ತು ಶಬ್ದ ಉಳಿಯುವಂತಹ ಸದ್ದನ್ನು ಕೊಡುವ, ಮುಟ್ಟಿದರೆ ಮೆದುವಾಗಿ, ಶೀತಲವಾಗಿರುವಂತಹ, ಸುಗಂಧಪೂರಿತ ಪರಿಮಳಗಳು ಹೊಮ್ಮುವ, ಸಣ್ಣರಂಧ್ರಗಳು, ಛಿದ್ರಗಳು ಇರುವ ಶಿಲೆಯನ್ನು ತರುಣ ಶಿಲೆ ಎನ್ನುತ್ತಾರೆ. ಬಡಿದರೆ ಗಣಗಣನೆ ಸದ್ದು ಬರದ, ಸ್ಪರ್ಶಿಸಿದರೆ ಕಪ್ಪೆಯ ಅಥವಾ ಮೀನಿನ ಚರ್ಮದಂತೆ ಇದ್ದರೆ, ಹೊರಮೈ ಒರಟಾಗಿದ್ದರೆ, ಹಾವಿನ ಪೊರೆಯಂತೆ ಅನೇಕ ರಂಧ್ರಗಳನ್ನು ಪಡೆದುಕೊಂಡಿದ್ದರೆ, ವಾತಾವರಣದ ಪ್ರಭಾವವು ಕಲ್ಲಿನ ಮೇಲುಂಟಾಗಿ ಆಗಲೇ ಕಲ್ಲು ಹಾಳಾಗಲು ಪ್ರಾರಂಭವಾಗಿದ್ದರೆ ಅದನ್ನು ವೃದ್ಧಶಿಲೆ ಎಂದು ಕರೆಯುತ್ತಾರೆ. ಬಾಲ–ವೃದ್ಧಶಿಲೆಗಳನ್ನು ವರ್ಜಿಸಿ ಕೇವಲ ತರುಣ ಶಿಲೆಗಳನ್ನೇ ಪ್ರಾಸಾದ ಮತ್ತು ಮೂರ್ತಿ ನಿರ್ಮಾಣಗಳಲ್ಲಿ ಬಳಸಬೇಕು.

**ಲಿಂಗದ ಅನುಸಾರ ವರ್ಗೀಕರಣ:** ತುಂಬಾ ದೊಡ್ಡದಾದ, ವೃತ್ತಾಕಾರವಾದ, ಹತ್ತು ಅಥವಾ ಹನ್ನೆರಡು ಕೋನಗಳ, ಘಂಟೆಯಂತೆ ಗಣಗಣನೆ ಸದ್ದು ಮಾಡುವ, ಆಯತಾಕಾರದ, ತರುಣ, ಸೌಂದರ್ಯಪೂರ್ಣ ಮೂಲದಿಂದ ಅಗ್ರದವರೆವಗೂ ಒಂದೇ ಆಕಾರ, ಬಣ್ಣ ಇರುವ, ತೂಕವಾಗಿರುವ ಸುತ್ತಿಗೆಯಿಂದ ಬಡಿದರೆ ಕಿಡಿಗಳನ್ನು ಚೆಲ್ಲುವ, ಆಲದ ಮರ ಅಥವಾ ಅಶ್ವತ್ಥ ಮರದ ಎಲೆ ಯಂತೆ ಪೂರ್ವ ಅಥವಾ ಉತ್ತರ ದಿಕ್ಕಿಗೆ ಅಗ್ರವನ್ನು ಪಡೆದಿರುವ ಶಿಲೆಯು ಪುಂಶಿಲೆ ಎಂದು ಕರೆಯಲ್ಪಡುತ್ತದೆ. ಕಲ್ಲಿನ ಗಣಿಯಿಂದ ತೆಗೆಯುವಾಗ ಕಲ್ಲಿನ ಮೇಲ್ಭಾಗವನ್ನು ಅಗ್ರವೆಂದೂ, ತಳಭಾಗವನ್ನು ಮೂಲವೆಂದು ಕರೆಯಲಾಗುತ್ತದೆ. ಕಲ್ಲಿನ ಅಗಲವು ಪೂರ್ವ ಅಥವಾ ಉತ್ತರ ದಿಕ್ಕಿಗೆ ಇದ್ದರೆ ಒಳ್ಳೆಯದೆಂದು ಭಾವಿಸಲಾಗುತ್ತದೆ. ಕಲ್ಲಿನ ಅಗ್ರವು ವಾಯವ್ಯಕ್ಕೆ ಇದ್ದು ಮೂಲವು ಆಗ್ನೇಯಕ್ಕೆ ಇದ್ದರೆ ಒಳ್ಳೆಯದೆಂದು ಭಾವಿಸಲಾಗುತ್ತದೆ. ತುಂಬಾ ದೊಡ್ಡದೂ ಅಲ್ಲದೆ ತುಂಬಾ ಸಣ್ಣದೂ ಅಲ್ಲದ, ನಾಲ್ಕು ಅಥವಾ ಎಂಟು ಕೋನಗಳ, ತಾಳವಾದ್ಯದಂತಹ ಸುನಾದ ಹೊಮ್ಮಿಸುವ, ಮೂಲ ದಪ್ಪವಾಗಿಯೂ, ಅಗ್ರವು ತೆಳುವಾಗಿಯೂ ಇರುವ ಸಾಧಾರಣವಾದ ಭಾರದ, ಮುಟ್ಟಲು ಬಹು ಶೀತಲವಾಗಿರುವ ಶಿಲೆಯು ಸ್ತ್ರೀ ಶಿಲೆ ಎಂದು ತಿಳಿಯಬೇಕು.

ಚಿಕ್ಕದಾದ, ವೃತ್ತಾಕಾರದ, ಒಣ ಒರಟಾದ ಹೊರಮೈಯ, ಬಡಿದಾಗ ಗಣಗಣ ಸದ್ದು ಬರದ, ಮೂಲವು ತೆಳುವಾಗಿ ಅಗ್ರಭಾಗವು ದಪ್ಪಗೆ ಇರುವ, ತ್ರಿಕೋನಾಕೃತಿಯ ಅಥವಾ ಒಂದು ಬಾಹು ಎದುರಾಗಿರುವ ಬಾಹುವಿಗಿಂತಲೂ ಕಡಿಮೆಯಾಗಿರುವ ಶಿಲೆಯನ್ನು ನಪುಂಸಕ ಶಿಲೆ ಎಂದು ಹೇಳಲಾಗುತ್ತದೆ. ಪುಲ್ಲಿಂಗ ಶಿಲೆಯನ್ನು ಕಲ್ಲಿನ ಗೋಡೆ, ಶಿಖರ ಇತ್ಯಾದಿಗಳ ನಿರ್ಮಾಣ ಕ್ಕಾಗಿಯೂ, ಸ್ತ್ರೀಲಿಂಗ ಶಿಲೆಯನ್ನು ಅಧಿಷ್ಠಾನ ಮತ್ತು ಉಪಪೀಠಗಳಿಗಾಗಿಯೂ ನಪುಂಸಕ ಶಿಲೆಯನ್ನು ಬುನಾದಿಯಲ್ಲು ಬಳಸಬೇಕೆಂಬ ನಿರ್ದೇಶನವಿದೆ.

ಕಲ್ಲಿನ ಆಯ್ಕೆಗೆ ಶಿಲ್ಪಶಾಸ್ತ್ರದ ನಿಯಮಗಳನ್ನು ಮೇಲೆ ಹೇಳಿದ್ದರೂ ಇನ್ನೂ ಬಿಟ್ಟಿರುವ ವಿವರಣೆಗಳೂ ಇವೆ. ಅವುಗಳಲ್ಲಿ ಕೆಲವನ್ನಾದರೂ ಹೇಳಲೇಬೇಕು–ಮಳೆ, ಬಿಸಿಲು, ಬೆಂಕಿಗಳಿಂದ ಕ್ಷಯಿಸಿರುವ ಶಿಲೆ ಅಥವಾ ಉಪ್ಪು ನೀರಿನಿಂದ ಘಾತಗೊಂಡಿರುವ ಶಿಲೆ, ನದಿ, ಸಾಗರದ ತೀರದಲ್ಲಿ ಇರುವ ಕಲ್ಲು, ಕಲ್ಲಿನಲ್ಲಿ ಮರಳಿನ ಅಂಶ ಹೆಚ್ಚಾಗಿರುವ ಕಲ್ಲು, ಮಣ್ಣಿನಿಂದಲೇ ಸಿದ್ಧ ವಾಗಿರುವ ಕಲ್ಲು ಈ ಎರಡೂ ಬಗೆಯ ಕಲ್ಲುಗಳು ನೀರಿನಲ್ಲಿ ಕರಗುತ್ತವೆ. ಕಾರಣ ಇವುಗಳಲ್ಲಿ ಬಂಧಕ ದ್ರವ್ಯವು ಬಹು ಕಡಿಮೆಯಾಗಿದ್ದು ಕಲ್ಲು ತೀರಾ ಮೆದುವಾಗಿರುತ್ತದೆ. ಅಶುಭ ಸ್ಥಳದಲ್ಲಿರುವ ಕಲ್ಲು, ಬೇರೆಯ ಕೆಲಸಕ್ಕಾಗಿ ಉಪಯೋಗವಾಗುತ್ತಿರುವ ಕಲ್ಲು, ರೇಖೆಗಳು, ಮಚ್ಚೆಗಳು, ಕಲೆಗಳು, ಇರುವ ಶಿಲೆಗಳು, ವೃದ್ಧವಕ್ರ ಶಿಲೆಗಳು ಅಗ್ರಾಹ್ಯ ಶಿಲೆಗಳೆಂದು ತಿಳಿಯಬೇಕು. ಕಾಗೆ, ಗಿಡುಗ, ಒಂಟೆ, ಕೋತಿ ಇವುಗಳ ಬಣ್ಣ ಪಡೆದಿರುವ, ಬೆಕ್ಕು, ಹಾವು, ಕಾಡುಹಂದಿ, ನರಿ, ತೋಳ, ಕಪ್ಪೆ ಇವುಗಳ ಆಕಾರದಂತಿರುವ, ಬಲವಾದ ಪೆಟ್ಟಿಗೆ ಪುಡಿಯಾಗುವ, ಒಂದೇ ಬಣ್ಣವಿಲ್ಲದೆ ಹಲವು ಬಣ್ಣಗಳನ್ನು ಹೊಂದಿರುವ ಶಿಲೆಯನ್ನು ತ್ಯಜಿಸಬೇಕು. ಶಿಲೆಯ ಒಳಗೆ ಟೊಳ್ಳಾಗಿದ್ದು ಎಂದರೆ ಒಡೆದಾಗ ವೃತ್ತಾಕಾರದಲ್ಲಿ ಅಥವಾ ಬೇರೆಯ ಆಕಾರದಲ್ಲಿ ಟೊಳ್ಳು(ಪೊಟರೆ) ಇರುವ ಶಿಲೆಯನ್ನು ಗರ್ಭಿಣಿ ಶಿಲೆ ಎಂದು ಪರಿಗಣಿಸಿ ಕೈ ಬಿಡಬೇಕು. ಗರ್ಭವಿರುವ ಕಲ್ಲು ಮೂರ್ತಿ ನಿರ್ಮಾಣಕ್ಕಾಗಲಿ, ದೇವಾಲಯ ನಿರ್ಮಾಣಕ್ಕಾಗಲಿ ಅಗ್ರಾಹ್ಯವಾದುದಾಗುತ್ತದೆ.

ವಿಷ್ಣು ಧರ್ಮೋತ್ತರ ಪುರಾಣ(೩೦:೯೦:೧೦–೧೪) ಮತ್ತು ಶಿಲ್ಪರತ್ನ(೧೪:೨೨–೩೦)ಗಳಲ್ಲಿ ಹಲವು ಬಗೆಯ ಲೇಪಗಳನ್ನು ವಿವರಿಸಲಾಗಿದೆ. ಆ ಲೇಪಗಳನ್ನು ಬಳಿಯುವುದರಿಂದ ಆ ಶಿಲೆ ಯಲ್ಲಿ ಗರ್ಭವಿದೆಯೋ ಇಲ್ಲವೋ ಎಂಬುದು ಗೊತ್ತಾಗುತ್ತದೆ. ಲೇಪದ ನಂತರದ ಬಣ್ಣ ಮತ್ತು ಗರ್ಭದ ಬಗೆಗಳನ್ನು ಮುಂದಿನ ಪುಟದಲ್ಲಿ ಮಾಡಲಾಗಿದೆ.

| ಕ್ರಮಾಂಕ | ಲೇಪವನ್ನು ಮಾಡಿದ ಒಂದು ರಾತ್ರಿಯ ನಂತರದಲ್ಲಿ ಇರುವ ವರ್ಣ | ಗರ್ಭದ ಬಗೆ |
|---|---|---|
| ೧. | ಮಂಜಿಷ್ಠದಂತೆ ಕೆಂಪು | ಕಪ್ಪೆಯಂತೆ |
| ೨. | ಹಳದಿ | ಮೊಸಳೆಯಂತೆ |
| ೩. | ಕಪಿಲ ವರ್ಣ | ಇಲಿಯಂತೆ |
| ೪. | ಕಪ್ಪು ಅಥವಾ ಕಪ್ಪು ಮಿಶ್ರಿತ ಬಿಳುಪು | ಸರ್ಪದಂತೆ |
| ೫. | ಪಾರಿವಾಳದಂತೆ(ಬೂದು ಬಣ್ಣ) | ಚೇಳಿನಂತೆ |
| ೬. | ರಕ್ತದಂತೆ ಕೆಂಪು | ಓತೀಕ್ಯಾತನಂತೆ |
| ೭. | ಜೇನಿನಂತೆ | ಮಿಣುಕು ಹುಳದಂತೆ |
| ೮. | ಮಿಶ್ರವರ್ಣ | ಇರುವೆಯಂತೆ |
| ೯. | ಧೂಮ್ರವರ್ಣ | ದುಂಬಿಯಂತೆ |
| ೧೦. | ನೀಲಿ ಅಥವಾ ಹಳದಿ | ಆಮೆಯಂತೆ |

ಕಲ್ಲಿನಲ್ಲಿ ವಿಷವಿದೆಯೇ ಇಲ್ಲವೇ ಎಂಬುದನ್ನು ತಿಳಿಯಲು ಹಲವು ಲೇಪಗಳ ಬಗ್ಗೆ ವಿವರಗಳು ದೊರೆಯುತ್ತವೆ. ಆ ಲೇಪಗಳು ಹಾಕಿದ ಮೂರು ರಾತ್ರಿಗಳ ನಂತರ ಲೇಪದ ಬಣ್ಣದಲ್ಲಿ ವ್ಯತ್ಯಾಸ ಕಂಡುಬಂದರೆ ಆ ಕಲ್ಲಿನಲ್ಲಿ ವಿಷವಿದೆ ಎಂದು ತೀರ್ಮಾನಿಸಬೇಕು. ಈ ರೀತಿಯ ಕಲ್ಲುಗಳನ್ನು ಕೈಬಿಡಬೇಕು. ದೇವಾಲಯದ ನಿರ್ಮಾಣಕಾಗಿ ಸ್ವೀಕರಿಸುವ ಕಲ್ಲುಗಳು ಶ್ರೇಷ್ಠ ಹಾಗೂ ಉತ್ತಮ ಗುಣದ ಕಲ್ಲಿಗೆ ಪ್ರಸಿದ್ಧವಾದ ಬೆಟ್ಟದಿಂದ ತೆಗೆದಿರಬೇಕು. ನೆಲದ ಒಳಗೆ ಅಡಗಿರುವ, ದಟ್ಟವಾದ ಕಲ್ಲು, ಸುಲಭವಾದ ಪೆಟ್ಟಿಗೆ ಒಡೆಯುವಂತಹ ಕಲ್ಲು ಸ್ವೀಕಾರಾರ್ಹವಲ್ಲ. ಹೊಡೆದರೆ ಗಣಗಣನೆ ಸದ್ದು ಮಾಡುವ, ಬಡಿದಾಗ ಕಿಡಿ ಸಿಡಿಸುವ, ಅಗ್ರವು ಪೂರ್ವ ಅಥವಾ ಉತ್ತರಕ್ಕೆ ಇರುವ ಶಿಲೆಯನ್ನು ಮಾತ್ರವೇ ಸ್ವೀಕರಿಸಬೇಕು. ಆಧುನಿಕ ಕಾಲದಲ್ಲೂ ಸರ್ಕಾರದ ಎಂಜನಿಯರಿಂಗ್ ವಿಭಾಗವು ಸರ್ಕಾರಿ ಕಟ್ಟಡಗಳಿಗೆ ಬಳಸುವ ಕಲ್ಲಿನ ಗುಣ ವಿಶೇಷಗಳನ್ನು ಹೀಗೆ ವಿವರಿಸಿದೆ: ಕಠೋರವಾದ ಕಲ್ಲು, ತೂಕವಾಗಿದ್ದು, ವಾತಾವರಣ ಮಳೆ ಮುಂತಾದವುಗಳಿಂದ ಬಹುಕಾಲದ ತನಕ ಇದ್ದು ಯಾವ ಕಲ್ಲು ಜೀರ್ಣವಾಗಿಲ್ಲವೋ, ಪೊಟರೆಗಳು, ಬಿಲಗಳು, ರೇಖೆಗಳು ಮುಂತಾದವು ಇಲ್ಲದೆ ಘನ ಆಕಾರದಲ್ಲಿರುವ ಕಲ್ಲು ಮಾತ್ರವೇ ಕಟ್ಟಡ ರಚನೆಗೆ ಸ್ವೀಕಾರಾರ್ಹ. ಮೇಲೆ ವಿವರಿಸಿರುವ ಶಾಸ್ತ್ರೀಯ ವಿವರಗಳು ಇಂದಿನ ಆಧುನಿಕ ನಿಯಮಗಳ ಪ್ರಾಚೀನ ಶಾಸ್ತ್ರದ ಅನ್ವಯ ಗ್ರಾಹ್ಯವಾಗಿರುವ ಶಿಲೆಯು ಆಧುನಿಕ ನಿಯಮಗಳ ಪ್ರಕಾರವು ಗ್ರಾಹ್ಯವೇ ಆಗಿದೆ. ಇಂದು ಕಲ್ಲಿನ ಪರೀಕ್ಷೆಗೆ ಗೊತ್ತಿರುವಷ್ಟು ವಿವಿಧ ಪದ್ಧತಿಗಳು ಅವುಗಳಲ್ಲಿ ಬಳಸುವ ಆಧುನಿಕ ಉಪಕರಣಗಳು ಪ್ರಾಚೀನ ಕಾಲದ ಶಿಲ್ಪಿಗಳಿಗೆ ಗೊತ್ತಿರಲಿಲ್ಲ. ಆದ್ದರಿಂದಲೇ ಶಿಲಾಪರೀಕ್ಷೆಯ ಬಗ್ಗೆ ಶಿಲ್ಪಶಾಸ್ತ್ರಗಳಲ್ಲಿ ಇಷ್ಟೊಂದು ವಿವರವಾದ ಪರೀಕ್ಷೆಗಳನ್ನು ಹೇಳಲಾಗಿದೆ ಎನಿಸುತ್ತದೆ. ದೋಷವಿರುವ ಶಿಲೆಯು ಆಯ್ಕೆಯಾಗಬಾರದೆಂಬುದು ಅವರ ಉದ್ದೇಶವಾಗಿತ್ತು. ಶಿಲ್ಪಿಗಳಿಗೆ ಒಳ್ಳೆಯ ಮತ್ತು ಉಪಯುಕ್ತವಾದ ಕಲ್ಲು ಯಾವುದೆಂಬುದು ನಿಖರವಾಗಿ ಗೊತ್ತಿತ್ತು. ಲಿಂಗರಚನೆಗಾಗಿ ಬೇಕಾದ ಕಲ್ಲಿನ ಲಕ್ಷಣಗಳು ಹೀಗಿವೆ.

ಶಿಲ್ಪಾಚಾರ್ಯರು ಶುಕ್ಲಪಕ್ಷದ ಸುಮುಹೂರ್ತದಲ್ಲಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಶುದ್ಧನಾಗಿದ್ದುಕೊಂಡು ಲಿಂಗರಚನೆಗೆ ಬೇಕಾದ ಒಳ್ಳೆಯ ಕಲ್ಲನ್ನು ಸಂಗ್ರಹಿಸಲು ಹೊರಡಬೇಕು. ಅನಂತರ ಪೂರ್ವಾಭಿಮುಖನಾಗಿ, ಶಕುನಗಳನ್ನು ಪರೀಕ್ಷಿಸುತ್ತ ಕಲ್ಲನ್ನು ಹುಡುಕುತ್ತ ಈ ಮಂತ್ರ ಹೇಳಬೇಕು "ತ್ರಿನೇತ್ರಾಯ ಚ ರುದ್ರಾಯ ಭೂತಾನಾಂ ಪತೆಯೇ ನಮಃ। ಶಿಲಾಂ ದರ್ಶಯ ದೇವೇಶ! ಪ್ರಸನ್ನೋ ವೃಷಭಧ್ವಜ!"॥ (ಮೂರು ಕಣ್ಣುಗಳುಳ್ಳ, ಭೂತಪತಿಯಾದ ರುದ್ರನಿಗೆ ನಮಸ್ಕಾರ. ಹೇ ದೇವೇಶ, ನಂದಿವಾಹನ! ಪ್ರಸನ್ನನಾಗು ಕಲ್ಲನ್ನು ತೋರಿಸು.). ಯಾವ ಬೆಟ್ಟಗಳಲ್ಲಿ ಕಲ್ಲುಗಳನ್ನು ಸಂಗ್ರಹ ಮಾಡಬೇಕೋ ಆ ಮಹಾಪರ್ವತಗಳ ಹೆಸರು ಗಳು ಹೀಗಿವೆ. ಕೈಲಾಸ, ಗಂಧಮಾದನ, ಶ್ರೀಶೈಲ, ನೀಲಾಚಲ, ಶೇಷಾಚಲ, ನಿಷಧಪರ್ವತ, ಗೌರೀಪರ್ವತ, ಕುಮಾರಾಚಲ(ಭೂಮಿಯಲ್ಲಿ ಅತ್ಯಂತ ಪ್ರಸಿದ್ಧವಾದ), ಹೇಮಕೂಟ, ಮೇರುಪರ್ವತ, ತ್ರಿಕೂಟಾಚಲ– ಇವು ಎಲ್ಲರಿಗೂ ಸಿಕ್ಕುವುದು ಸುಲಭವಲ್ಲ. ಆದ್ದರಿಂದ ಬೇರೆ ಬೆಟ್ಟಗಳನ್ನು ತಿಳಿಸುತ್ತೇನೆ. ಸಹ್ಯ,

ವಿಂಧ್ಯ, ಮಲಯ, ಕುಮಾರ, ವೇದಾಚಲ, ಪಾರಿಯಾತ್ರ ಮತ್ತು ಮಹೇಂದ್ರ–ಈ ಪರ್ವತಗಳೂ ಸಿಕ್ಕುವುದು ಕಷ್ಟವಾದಲ್ಲಿ ಭೂಮಿಯಲ್ಲೇ ಸಿಕ್ಕುವ ಪ್ರಶಸ್ತ ಶಿಲೆಗಳನ್ನು ಆಯ್ಕೆ ಮಾಡಿಕೊಳ್ಳಬಹುದು. ಭೂಮಿಯಲ್ಲಿನ ಶಿಲೆಗಳನ್ನೇ ಆಯ್ಕೆ ಮಾಡಿಕೊಳ್ಳಬೇಕಾಗಿ ಬಂದಲ್ಲಿ ನದಿಯ ತೀರದ ಶಿಲೆಗಳು ಆಯ್ಕೆಗೆ ಶ್ರೇಷ್ಠವೆಂಬುದನ್ನು ಗಮನಿಸಬೇಕು. ಕಾವೇರಿ, ಸರಯೂ, ಗಂಗೆ, ಗೋದಾವರಿ, ನರ್ಮದೆ, ಸಿಂಧು, ಶೋಣ, ಸರಸ್ವತೀ, ಯಮುನಾ, ತುಂಗಭದ್ರಾ, ಭೂಮಿಯಲ್ಲಿ ಅತ್ಯಂತ ಪ್ರಸಿದ್ಧವಾದ ಗೋಮತೀ, ಚಂದ್ರಭಾಗಾ, ಪಯೋಷ್ಣೀ ಈ ನದಿಗಳು. ಇವುಗಳ ತೀರದಲ್ಲಿ ಕಲ್ಲುಕಟ್ಟುವುದು ಕಷ್ಟವಾದಲ್ಲಿ ಉದ್ಯಾನ, ತೀರ್ಥ ಹಾಗೂ ತೋಪುಗಳಲ್ಲಿ ಸಿಕ್ಕುವ ಕಲ್ಲುಗಳು ಪ್ರಶಸ್ತ. ಅಲ್ಲಿಯೂ ಕಲ್ಲು ಸಿಕ್ಕದಿದ್ದಲ್ಲಿ ಮನೋಹರವಾದ ಬೇರೆ ಜಾಗಗಳಿಂದ ಕಲ್ಲನ್ನು ಶೇಖರಿಸಬಹುದು.

**ಭೂಮಿಯು ನಾಲ್ಕು ವಿಧ**

ಮಾಹೇಂದ್ರೀ, ವಾರುಣೀ, ಆಗ್ನೇಯೀ ಹಾಗೂ ವಾಯುವೀ. ಅವುಗಳ ಲಕ್ಷಣಗಳು ಹೀಗಿವೆ. ಯಾವ ಭೂಮಿಯ ಉತ್ತರಕ್ಕೆ ನೀರಿದ್ದು, ದಕ್ಷಿಣ ಭಾಗದಲ್ಲಿ ಭತ್ತದ ಗದ್ದೆಯೂ, ಪಶ್ಚಿಮದಲ್ಲಿ ಹಾಲು ಸ್ರವಿಸುವ ಆಲ ಮುಂತಾದ ಮರಗಳೂ ಇರುತ್ತವೋ ಆ ಭೂಮಿ "ಮಾಹೇಂದ್ರೀ." ಅಲ್ಲಿನ ಕಲ್ಲಿಗೂ ಅದೇ ಹೆಸರು. ನೀರಿನಿಂದ ಕೂಡಿದ್ದೂ ಎಳೆ ಭತ್ತದ ಗಿಡಗಳಿದ್ದು ಹೂಬಿಟ್ಟ ಮರಗಳು ಎಲ್ಲೆಡೆಯಲ್ಲೂ ಇದ್ದು ಹುಲ್ಲಿನಿಂದ ಹಸುರಾಗಿ ಪಶುಗಳು ಇಷ್ಟಪಡುವ ಭೂಮಿಗೆ ವಾರುಣೀ ಭೂಮಿಯೆಂದು ಹೆಸರು. ಇದು ಅತ್ಯಂತ ಪ್ರಶಸ್ತ. ಗಿಡುಗಗಳು, ಹದ್ದುಗಳು ಮತ್ತು ಹಂದಿಗಳು ಯಾವ ಭೂಮಿಯ ಸುತ್ತ ನಿತ್ಯವೂ ಸಂಚಾರ ಮಾಡುವುವೋ, ಅಂತರ್ಜಲವು ತುಂಬ ಕಮ್ಮಿ ಇರುತ್ತದೋ ಆ ಭೂಮಿಯು ವಹ್ನಿಗುಣದಿಂದ ಕೂಡಿದ್ದೆಂದು ತಿಳಿಯಬೇಕು. ಶ್ಲೇಷಾತ್ಮಕ, ಪೀಲು, ವಿಭೀತಕ ಈ ಮರಗಳಿಂದ ಕೂಡಿದ್ದು, ಬಿಸಿಲುಕುದುರೆಯನ್ನು ಉಂಟು ಮಾಡುವಂಥದ್ದು, ನರಿಗಳ ಹಿಂಡುಗಳಿಂದ ಕೂಡಿದ್ದು, ನೀರಿಲ್ಲದ ಭೂಮಿ ಇಂಥದ್ದು ವಾಯುವೀ. ಆಗ್ನೇಯೀ ಹಾಗೂ ವಾಯುವೀ ಇವೆರಡನ್ನೂ ಬಿಟ್ಟು ಮೊದಲಿನ ಎರಡೂ ಪ್ರಶಸ್ತ, ಹುತ್ತ, ದೇವಸ್ಥಾನ, ಹೆಣ ಬಿದ್ದ ಚೌಕ, ಉಪ್ಪುನೀರಿನಲ್ಲಿ ಅದ್ದಿಕೊಂಡಿರುವುದು, ಬಿಸಿಲಿನ ಹೊಡೆತಕ್ಕೆ ಯಾವಾಗಲೂ ಸಿಕ್ಕಿರುವಂಥದ್ದು, ಮೂಲೆ ದಿಕ್ಕುಗಳಲ್ಲಿ ಇರುವುದು, ಗೀರುಗಳಿರುವಂಥದ್ದು ಬಣ್ಣಗೆಟ್ಟಿರುವುದು, ಹಲವಾರು ಬಣ್ಣಗಳಿರುವುದು ಇಂಥ ಶಿಲೆಗಳು ಅಪ್ರಶಸ್ತ. ಶಿಲೆಗಳ ಪೈಕಿ ಬಾಲಾ, ವೃದ್ಧಾ, ಚಂಡಾಲಜಾತಿ ಎಂಬ ಅಪ್ರಶಸ್ತರೂಪ ಶಿಲೆಗಳನ್ನು ಬಿಟ್ಟುಬಿಡಬೇಕು. ಉಳಿಯ ಏಟನ್ನು ಸಹಿಸದ ಮಣ್ಣಿನಿಂದ ಮೃದುವಾಗಿ ಅಂಟಂಟಾಗಿ, ಮೃದುವಾಗಿರುವ ಗಿಡದ ಚಿಗುರಿನಂತಿರುವುದು, ಬಾಲ, ಹಾವಿನ ಪೊರೆಯಂತೆ ಇದ್ದು ಒರಟಾಗಿರುವ ಹಳೇ ಶಿಲೆಯು ವೃದ್ಧಾ ಎನಿಸುವುದು. ಅನೇಕ ವರ್ಣಗಳುಳ್ಳದ್ದಾಗಿ ಒರಟು ಧೂಮ್ರವರ್ಣದ್ದೂ ನೀಲಿಬಣ್ಣದ್ದೂ ಆಗಿರುವಂಥದ್ದು ಚಂಡಾಲೀ ಶಿಲೆ. ಇದನ್ನು ಖಂಡಿತ ವರ್ಜಿಸಿಬಿಡಬೇಕು. ಪ್ರಶಸ್ತವಾದ ಶಿಲೆಯ ವಿಚಾರವನ್ನು ಮತ್ತೆ ವಿವರಿಸಲಾಗಿದೆ.

ಪುಣ್ಯಕ್ಷೇತ್ರಗಳು, ಉದ್ಯಾನ, ಪುಣ್ಯತೀರ್ಥ, ಮರದ ನೆರಳು, ಇಂಥ ಜಾಗದಲ್ಲಿ ಇದ್ದು ತಂಪಾಗಿರುವ, ಯಾವ ಪೊಳ್ಳೂ ಇಲ್ಲದೇ ಘನಾಕಾರದಲ್ಲಿರುವ, ನುಣುಪಾಗಿರುವ, ಹೊಡೆದರೆ

ಘಂಟೆಯಂತೆ ನಾದವನ್ನುಂಟುಮಾಡುವ, ತುಪ್ಪದ ವಾಸನೆ ಬರುವ ಅಗಲವಾಗಿರುವ ಕಲ್ಲುಗಳು ಲಿಂಗಕಾರ್ಯಕ್ಕೆ ಪ್ರಶಸ್ತವಾದವು.

ಬಿಳುಪಿನದೂ ತಾವರೆಯಂಥ ಶಿಲೆ ಬ್ರಾಹ್ಮಣಶಿಲೆ. ಚಂದ್ರನು ಅದಕ್ಕೆ ದೇವತೆ. ಕೆಂಪು ಕೆಂಪಾಗಿದ್ದು ಹುರುಳಿಯ ಆಕಾರದ ಶಿಲೆ ಕ್ಷತ್ರಿಯ ಶಿಲೆ. ಇಂದ್ರನು ಇದಕ್ಕೆ ದೇವತೆ. ಹಳದಿ ಅಥವಾ ಹಸಿರಾಗಿರುವುದು ವೈಶ್ಯಶಿಲೆ. ಭಗನು ಅದಕ್ಕೆ ಅಧಿ ದೇವತೆ, ಅಶ್ವನೀ ದೇವತೆಗಳು. ಈ ರೀತಿಯಾಗಿ ಶಿಲೆಯನ್ನು ಪರೀಕ್ಷಿಸಿ ಪ್ರಶಸ್ತವಾದುದನ್ನು ಆಯ್ಕೆ ಮಾಡಿ ನೀರಿನಿಂದ ಚೆನ್ನಾಗಿ ತೊಳೆದು, ಗಂಧದ ಲೇಪನ ಮಾಡಿ ಮೊನಚಾದ ಹಾಗೂ ಬಿಳಿ ಶೂಲವನ್ನು ಧರಿಸಿರುವವನಾಗಿ, ದಿಕ್‌ಪಾಲಕರ ಜೊತೆಗೂಡಿದ್ದು ಅಸ್ತ್ರಗಳ ಸಮೂಹ ಧರಿಸಿರುವ ಮೃತ್ಯುಂಜಯ(ಮಂತ್ರ)ಸಹಿತನಾಗಿ ಶಿವ–ಅಂಗಪಂಚಕ(?)ದಿಂದ ಕೂಡಿರುವ ಶಿವನನ್ನು ಅಲ್ಲಿ ಪೂಜಿಸಿ, ಆ ಪಶ್ಚಿಮ ದಿಕ್ಕಿನಲ್ಲಿ ಆಜ್ಯ ವನ್ನು ಪಾಶುಪತಮಂತ್ರೋ–ಚ್ಚಾರಣಪೂರ್ವಕ ಹೋಮ ಮಾಡಬೇಕು. ನೂರೆಂಟು ಸಲ ಹೋಮ ಮಾಡಿದ ಅನಂತರ ದೋಷಗಳಿಲ್ಲದ ಹಾಗೂ ಮಹತ್ತ್ವಶಾಲಿಯಾದ ಶಿಲೆಯು ಕೆತ್ತಲು ಯೋಗ್ಯ ವಾಗುತ್ತದೆ. ಚೂಪಾದ ಶಸ್ತ್ರವನ್ನು ಪೂಜಿಸಿ ಪಕ್ಕದಲ್ಲಿಟ್ಟುಕೊಂಡು, ಗಣಗಳಿಗೆ ವಿದಿಕ್ಕುಗಳಲ್ಲಿ ಬಲಿಯನ್ನರ್ಪಿಸಬೇಕು. ಶಿಲೆಯ ಪಶ್ಚಿಮಭಾಗದಲ್ಲಿ ಆಗಮಿಕಾಚಾರ್ಯನು ದರ್ಭಶಯ್ಯೆಯಲ್ಲಿ ಮಲಗಿ ಆಣವಕಸ್ವಪ್ನವನ್ನು ಜಪಿಸಿ ಏಕಾಗ್ರ ಮನಸ್ಕನಾಗಿ(ಹೀಗೆ ಹೇಳಿಕೊಳ್ಳಬೇಕು) ಶಂಭುವೆ,(ನಿನಗೆ) ನಮಸ್ಕಾರ. ತ್ರಿನೇತ್ರನೂ, ರುದ್ರನೂ, ವರದನೂ, ವಾಮನೂ ವಿಶ್ವರೂಪನೂ ಸ್ವಪ್ನಾಧಿಪತಿಯೂ ಆದ(ನಿನಗೆ) ನಮಸ್ಕಾರ.

ದೇವತೆಗಳಿಗೂ ದೇವನಾದವನೆ ಒಡೆಯನೆ! ನಿನ್ನ ಹತ್ತಿರ ಬಂದು ಶರಣಾಗತನಾಗಿದ್ದೇನೆ.(ನನಗೆ ಪ್ರಶಸ್ತವಾದ ಶಿಲೆಯನ್ನು) ತೋರಿಸು.(ಸ್ವಪ್ನದಲ್ಲಿ) ದೇವತಾಮೂರ್ತಿಯ ಆಕಾರದ ಉಜ್ವಲವಾದ ಶಿಲೆಯನ್ನು ನೋಡಿದಲ್ಲಿ(ಅದನ್ನೇ ಶಿಲ್ಪಕಾರ್ಯಕ್ಕೆಂದು) ಗ್ರಹಿಸಬೇಕು ಅಥವಾ ಮತ್ತೊಂದು ಪ್ರಶಸ್ತ ಶಿಲೆಯನ್ನಾದರೂ ಗ್ರಹಿಸಬಹುದು. ಶುಭಸ್ವಪ್ನವನ್ನು ಬೆಳಗಿನ ಜಾವದಲ್ಲಿ ನೋಡಿ ಸ್ನಾನ ಮಾಡಿ, ಮಹೇಶ್ವರನನ್ನು ಅರ್ಚಿಸಿ, ಶಿಲೆಯ ಮೇಲೆ ಬಾಯಿ, ಬೆನ್ನು, ತಲೆ ಹಾಗೂ ಬುಡದ ಭಾಗಗಳ ಚಿಹ್ನೆಯನ್ನು ಕಲ್ಪಿಸಬೇಕು.

ಶಿಲೆಯನ್ನು ಮೇಲಕ್ಕೆತ್ತಿ ಕೆಳಗೆ ಹಾಕಿದಲ್ಲಿ ಅದು ಯಾವ ದಿಕ್ಕಿಗೆ ಮುಖ ಮಾಡಿಕೊಂಡು ಇರುತ್ತದೋ ಅದರಿಂದ ಕೆತ್ತಿದ ಪ್ರತಿಮೆಯೂ ಅದೇ ದಿಕ್ಕಿಗೆ ಮುಖ ಮಾಡಿಕೊಂಡಿರುವಂತೆ ಏರ್ಪಡಿಸಬೇಕು. ಶಿಲೆಯ ಯಾವ ಜಾಗದಲ್ಲಿ(ಕುಟ್ಟುವಾಗ) ಗಂಟೆ ಸದ್ದು ಹೊರಡುತ್ತದೋ, ಕತ್ತರಿಸುವಾಗ ಕಿಡಿಗಳು ಹಾರುತ್ತವೋ ಅಲ್ಲಿ ತಲೆಯ ಚಿಹ್ನೆಯನ್ನು ಕಲ್ಪಿಸಬೇಕು. ಈ ರೀತಿಯಾಗಿ ಮಾಡಿ ರಥದಲ್ಲಿ ಶಿವಾಲಯಕ್ಕೆ ಅದನ್ನು ತೆಗೆದುಕೊಡು ಹೋಗಿ ಉತ್ತರ ದಿಕ್ಕಿನಲ್ಲಿಟ್ಟು ಸರಿಯಾಗಿ ಲಿಂಗವನ್ನು ಕೆತ್ತಬೇಕು. ಪುಂಶಿಲೆಯಿಂದ ಲಿಂಗವನ್ನೂ ಸ್ತ್ರೀಶಿಲೆಯಿಂದ ಪೀಠವನ್ನೂ, ನಪುಂಸಕ ಶಿಲೆಯಿಂದ ಪಾದಶಿಲೆಯನ್ನೂ ಕೆತ್ತಲೇಬೇಕು. ಇವುಗಳ ಪೈಕಿ ಗಂಭೀರವಾದ ನಾದವನ್ನು ಕೊಡುವಂಥ ಗಟ್ಟಿಯಾದ, ಲೋಹದಂಥ, ದೊಡ್ಡದಾದ, ಹಿಪ್ಪಲೀ ಎಲೆಯಂಥ ಮೇಲ್ಮೈಯುಳ್ಳ

ಶಿಲೆಯು ಪುಂಶಿಲೆ. ಬಾಳೆ ಎಲೆಯಂತಿದ್ದು ಮೃದುವಾದ ಧ್ವನಿ ಕೊಡುವ ಸ್ತ್ರೀ ಶಿಲೆ. ಧ್ವನಿ ಯಾವುದೂ ಬಾರದಿರುವುದೂ ಸಡಿಲವಾದದ್ದೂ ಎರಡೆರಡು ಸಲ ಏಟು ಹಾಕಬೇಕಾಗಿರುವಂಥದ್ದೂ ನಪುಂಸಕ ಶಿಲೆ. ಈಗ ಶಿಲಾಗರ್ಭದ ಬಗ್ಗೆ ಹೇಳುವೆನು. ಹೊಡೆದು ಕತ್ತರಿಸುವಾಗ ಮಂಡಲವೇ ನಾದರೂ(=ಸುಳಿ) ಕಣ್ಣಿಗೆ ಕಂಡರೆ ಅಲ್ಲಿ ಗರ್ಭ(=ಟೊಳ್ಳು) ಇದೆಯೆಂದು ತಿಳಿಯಬೇಕು. ಯಾವ ರೀತಿಯ ಮಂಡಲದಿಂದ ಸೂಚಿತವಾಗುವ ಗರ್ಭದಲ್ಲಿ ಏನಿರುತ್ತದೆಂದು ನಾನು ಹೇಳುತ್ತೇನೆ.

ಮಂಡಲವು ಮಂಜಿಷ್ಠಾದ ಬಣ್ಣದಲ್ಲಿದ್ದರೆ ಗರ್ಭದಲ್ಲಿ ಕಪ್ಪೆಯೂ, ಕಪ್ಪಗಿದ್ದರೆ ಹೆಂಟೆಗೊದ್ದವೂ, ಕತ್ತಿಯಂತಿದ್ದರೆ ಹಾವೂ, ಬೆಳ್ಳಗಿದ್ದರೆ ನೀರೂ ಜೇನುತುಪ್ಪದ ಬಣ್ಣದಂತಿದ್ದರೆ ಮಿಣುಕು ಹುಳವೂ ಇರುತ್ತದೆ. ಪಾರಿವಾಳದ ಬಣ್ಣದಲ್ಲಿದ್ದರೆ ಮನೆಯ ಹಲ್ಲಿಯೂ, ಕಪಿಲ(ಕೆಂದು) ವರ್ಣದಲ್ಲಿದ್ದರೆ ಇಲಿಯೂ, ಕೆಂಪಗಿದ್ದರೆ ಓತಿಯೂ, ಬೆಲ್ಲದ ಬಣ್ಣದಲ್ಲಿದ್ದರೆ ಸಣ್ಣಕಲ್ಲೂ ಇರುತ್ತದೆ. ಹರಿತಾಳದ ಬಣ್ಣದಲ್ಲಿದ್ದರೆ ಏಡಿಯೂ, ಸಂಪಿಗೆ ಹೂವಿನ ಬಣ್ಣದಲ್ಲಿದ್ದರೆ ಅಥವಾ ಬಣ್ಣಬಣ್ಣವಾಗಿದ್ದರೆ ಕ್ರಿಮಿಯೂ, ಗರ್ಭವು ಒರಟಾಗಿದ್ದರೆ ಮರಳೂ, ವಿಚಿತ್ರವಾದ ಬಣ್ಣದಲ್ಲಿದ್ದರೆ ಚೇಳೂ, ಕೆಂಪು ಬಣ್ಣದಲ್ಲಿದ್ದರೆ ಬಣ್ಣದ ಮೀನೂ, ಹಳದಿಯಾಗಿದ್ದರೆ ದುಂಬಿಯೂ, ಬೂದು ಬಣ್ಣದಲ್ಲಿದ್ದರೆ ಕೇವಲ ಪೊಳ್ಳು ಇರುತ್ತದೆ. ಮುತ್ತುಗದ ಹೂವಿನ ಬಣ್ಣದಲ್ಲಿದ್ದರೆ ಕಪ್ಪರ ಶುಂಠಿಹುಳು ಅಥವಾ ಇರುವೆ, ಅಗಸೇ ಹೂವಿನ ಬಣ್ಣದಲ್ಲಿದ್ದರೆ ಅಥವಾ ನೀಲಿ ಬಣ್ಣದಲ್ಲಿದ್ದರೆ ನೊಣಗಳಿರುತ್ತವೆ. ಈ ರೀತಿಯಾಗಿ ಪ್ರಸಿದ್ಧವಾದ ಲಕ್ಷಣಗಳಿಂದ ಶಿಲೆಯಲ್ಲಿ ಗರ್ಭವನ್ನು ಶಾಸ್ತ್ರೀಯವಾಗಿ ಪರೀಕ್ಷಿಸಿ ಬಾಹ್ಯಲಕ್ಷಣಗಳಿಗೆ ಅನುಗುಣವಾಗಿ ಲೇಪ ಹಾಕಬೇಕು.

ಬ್ರಹ್ಮಾಣಿ(=ಸರಸ್ವತಿ), ವಿಷ್ಣು, ಶಿವ, ವೈಷ್ಣವ ಈ ಪ್ರತಿಮೆಗಳಿಗೆ ಹಾಲು, ಕರಗಿದ ತುಪ್ಪ, ಸಮಪ್ರಮಾಣದ ತುಪ್ಪ ಹಾಗೂ ಜೇನುತುಪ್ಪ ಇವುಗಳನ್ನು ಅರೆದು ಲೇಪ ಹಾಕಬೇಕು. ಅದು ಸುತ್ತಲೂ ಒದ್ದೆಯಾದಲ್ಲಿ ಅದರೊಳಗೆ ಟೊಳ್ಳಿದೆಯೆಂದು ತಿಳಿಯಬೇಕಲ್ಲದೆ, ಅಲ್ಲಿ ಹಾವು, ಚೇಳು ಅಥವಾ ಹೆಂಟೆಗೊದ್ದವಿದೆಯೆಂದು ತಿಳಿಯಬೇಕು. ಗಂಧಕಾಮ್ಲದ ಲವಣ ಮತ್ತು ಚೋರ ಇವೆರಡನ್ನೂ ಹಸುವಿನ ಹಾಲಿನಲ್ಲಿ ಅರೆದು ಪ್ರತಿಮೆ ಮಾಡಬೇಕಾಗಿರುವ ಶಿಲೆಗೆ ಚೆನ್ನಾಗಿ ಬಳಿಯಬೇಕು. ಮೂರು ರಾತ್ರಿಯ ಅವಧಿಯಲ್ಲಿ ಅದು ಕೆಂಪಗಾದಲ್ಲಿ ಅದರೊಳಗೆ ಆಮೆ ಇರುತ್ತದೆ ಅಥವಾ ಕಪ್ಪೆ ಇರುತ್ತದೆಂದು ತಿಳಿಯಬೇಕು. ಅಶ್ವತ್ಥ, ನೆಲ್ಲಿ ಹಾಗೂ ಶೂಲಿ ಇವು ಗಳನ್ನು ಮೇಕೆಯ ಹಾಲಿನಲ್ಲಿ ಅರೆದು ಪ್ರತಿಮೆ ಮಾಡಬೇಕಾಗಿರುವ ಶಿಲೆಗೆ ಚೆನ್ನಾಗಿ ಬಳಿಯಬೇಕು.

ಶಿಲೆಯು ಅನೇಕ ಬಣ್ಣಗಳುಳ್ಳದ್ದಾಗಿ ಕಾಣಿಸಿದಲ್ಲಿ ಅದರ ಗರ್ಭದಲ್ಲಿ ಹೆಂಟೆಗೊದ್ದ ಹಾಗೂ ಹಾಗೂ ಮೀನುಗಳಿರುವುದು ನಿಶ್ಚಯ. ಸುಗಂಧಮುಸ್ತ, ಲಾಮಂಚ, ಗನ್ನೇರಿಳೆಗಿಡ, ತಾವರೆ ಇವುಗಳ ಎಲೆಗಳನ್ನು ಮೂರುಪಲಗಳಷ್ಟು ಸ್ತ್ರೀಯ ಎದೆಹಾಲಿನಿಂದ ಅರೆದು ಶಿಲೆಯ ಮೇಲೆ ಲೇಪಿಸಬೇಕು. ಮೂರು ದಿವಸಗಳ ಅವಧಿಯಲ್ಲಿ ಶಿಲೆಯು ಬೇರೆ ಬಣ್ಣಕ್ಕೆ ತಿರುಗಿದರೆ ಅದರಲ್ಲಿ ವಿಷ ಇದೆಯೆಂದು ತಿಳಿದುಕೊಳ್ಳಬೇಕು. ಅದು ಶೀಘ್ರವಾಗಿ ನಾಶವನ್ನು ಉಂಟು ಮಾಡುವಂತಹದ್ದು. ಅನಂತರ ಅದನ್ನು ಕೈಯಿಂದಲೂ ಸಹ ಮುಟ್ಟಕೂಡದು.

ಗರ್ಭದಲ್ಲಿ ಕಪ್ಪೆ ಇದ್ದರೆ ನೀರಿನ ಭಯವನ್ನೂ, ಹೆಂಟೆಗೊದ್ದವಿದ್ದರೆ ರಾಜನಾಶ ಹಾಗೂ ಹಸುಗಳು ನಾಶವಾಗುವುದನ್ನೂ, ಹಾವು ಇದ್ದರೆ ದೇವತಾಪ್ರತಿಷ್ಠಾಪನೆ ಮಾಡುವವನ ನಾಶ ಮತ್ತು ಪ್ಲೇಗ್ ರೋಗವನ್ನೂ ಉಂಟುಮಾಡುತ್ತದೆ. ನೀರಿದ್ದರೆ ದೇವತಾಪ್ರತಿಷ್ಠಾಪನೆ ಮಾಡುವವನ ಸಾವು, (ಸ್ತ್ರೀಯರ)ಗರ್ಭನಾಶ ಇವೆರಡೂ ಸಂಭವಿಸುತ್ತದೆ. ಮಿಣುಕುಹುಳುವಿದ್ದರೆ ಬೆಂಕಿಯಿಂದ ಅಪಾಯ ವನ್ನೂ, ಮನೆಯ ಹಲ್ಲಿ ಇದ್ದರೆ ಉಗ್ರವಾದ ದುರದೃಷ್ಟವನ್ನೂ ಉಂಟುಮಾಡುತ್ತದೆ. ಇಲಿ ಇದ್ದರೆ ಕಳ್ಳರಿಂದ ಭಯವನ್ನೂ, ಹೆಂಟೆಗೊದ್ದವು ಘೋರಕ್ಷಾಮವನ್ನೂ, ಕಲ್ಲಿದ್ದರೆ ಅನಾವೃಷ್ಟಿಯನ್ನೂ ಏಡಿ ಇದ್ದರೆ ಸಸ್ಯನಾಶವನ್ನೂ ಉಂಟುಮಾಡುತ್ತದೆ. ಕ್ರಿಮಿಗಳಿದ್ದರೆ ಕುಷ್ಠವನ್ನೂ, ಮರಳಿದ್ದರೆ ಸುತ್ತಮುತ್ತ ಕಳ್ಳರಿಂದ ನಾಶವನ್ನೂ, ಉಂಟುಮಾಡುತ್ತದೆ. ಚೇಳು ನೋವನ್ನೂ ಮೀನು ದ್ರವ್ಯನಾಶ ವನ್ನೂ ಉಂಟುಮಾಡುತ್ತದೆ.

ಪತಂಗವು ಪದವಿಯ ನಾಶವನ್ನೂ, ದುಂಬಿಯು ಅನೇಕ ರೋಗಗಳನ್ನೂ, ಕೇವಲ ಟೊಳ್ಳು ಇದ್ದರೆ ಅನೇಕ ರೋಗಗಳನ್ನೂ, ಕಪ್ಪರಶುಂಠಿಯು ದ್ರವ್ಯನಾಶವನ್ನೂ ಮಾಡುತ್ತದೆ. ಇರುವೆಯಿದ್ದರ ಚಿಂತೆಯನ್ನೂ, ನೊಣವಿದ್ದರೆ(ಪ್ರತಿಷ್ಠಾಪನೆ) ಮಾಡುವವನ ಪ್ರವಾಸವನ್ನೂ, ಆಮೆಯಿದ್ದರೆ ರೋಗಮೂಲಕವಾದ ಉಗ್ರಭಯವನ್ನೂ, ವಿಷವಿದ್ದರೆ ಮಳೆ ಬಾರದೆ ಹೋಗುವುದನ್ನೂ ಸೂಚಿಸುತ್ತದೆ. ಲಿಂಗರಚನೆಯಲ್ಲಿ ಇದೇ ರೀತಿಯಲ್ಲಿ ಬಹಳಷ್ಟು ದೋಷಗಳಿರುವುದನ್ನು(ಶಿಲ್ಪಶಾಸ್ತ್ರದಲ್ಲಿ) ಹೇಳಲಾಗಿದೆ. ಈಗ ರೇಖೆಗಳ ಬಗ್ಗೆ ಹೇಳುತ್ತೇನೆ. ಇವುಗಳಲ್ಲಿ ಕೆಲವು ಶುಭ. ಕೆಲವು ದೋಷ ವನ್ನುಂಟು ಮಾಡುತ್ತವೆ. ಇವು ಅನೇಕ ಆಕಾರಗಳಿಂದಲೂ ಬಣ್ಣಗಳಿಂದಲೂ ಬೇರೆಬೇರೆಯಾಗಿರುತ್ತವೆ. ಕೆಳದರ್ಜೆಯ ಶಿಲೆಯಲ್ಲಿ ಉತ್ತಮವಾದ ರೇಖೆಯಿದ್ದರೆ ಆ ಶಿಲೆ ಪ್ರಶಸ್ತ. ಶಿಲೆ ಉತ್ತಮ ದರ್ಜೆ ಯದ್ದಾದರೂ ಕೆಳದರ್ಜೆಯ ರೇಖೆ ಇದ್ದಲ್ಲಿ ಅದು ಅಪ್ರಶಸ್ತ. ಬ್ರಾಹ್ಮಣ ಮುಂತಾದ ವರ್ಣಭೇದಗಳಿಂದ ರೇಖೆಗಳು, ಬಿಳಿ, ಕೆಂಪು, ಹಳದಿ ಮತ್ತು ಕಪ್ಪು ಬಣ್ಣದ್ದಾಗಿ ಕಾಣಿಸುತ್ತವೆ. ಯಾವ ಶಿಲೆಯಲ್ಲಿ ಇಂದ್ರನ ವಜ್ರಾಯುಧದಂತಿರುವ ಶಿಲೆಯು ಕಾಣಿಸುತ್ತದೋ ಆ ಶಿಲೆ ಯಾವ ಬಣ್ಣದ್ದಾಗಿದ್ದರೂ ಸರಿಯೆ, ಗ್ರಾಹ್ಯವೇ. ಯಾವ ಶಿಲೆಯಲ್ಲಿನ ರೇಖೆಗಳು ಒಂದೇ ಬಣ್ಣದ್ದಾಗಿರುತ್ತವೋ ಅವು ಪ್ರತಿಷ್ಠಾಪಕನ ವಂಶವನ್ನು ವರ್ಧಿಸುತ್ತವೆ. ಯಾವುದರಲ್ಲಿ ರೇಖೆಗಳು ಅನೇಕ ವರ್ಣಗಳಿಂದ ಬೇರೆಯಾಗಿರುತ್ತವೋ ಆ ಶಿಲೆ ವರ್ಜ್ಯ. ಏಕೆಂದರೆ ಅದು ರಾಜನನ್ನು ಕೊಲ್ಲುತ್ತದೆ. ತುಂಡು ತುಂಡಾದ ರೇಖೆಗಳಿರುವ ಅಥವಾ ಎಲ್ಲಾ ವಿಧದ(ಬೇರೆ ಬೇರೆ) ಬಣ್ಣಗಳನ್ನು ತೋರಿಸುವ ರೇಖೆಗಳಿಂದ ಕೂಡಿರುವ ಶಿಲೆಯು ವರ್ಜ್ಯ. ಡೊಂಕಾದ, ತೀರಾ ದಪ್ಪನಾದ, ಒರಟಾದ, ತೆಳ್ಳಗಿರುವ ರೇಖೆಗಳು ಇರುವ ಶಿಲೆಯೂ ಸಹ ವರ್ಜ್ಯವೇ. ನಂದ್ಯಾವರ್ತ, ಭೂಧನ* ಈ ರೀತಿ ಇರುವ, ಶ್ರೀವತ್ಸಚಿಹ್ನೆ, ಆಮೆ–ಇವುಗಳಂಥ ಶಂಖ, ಸ್ವಸ್ತಿಕ ಚಿಹ್ನೆ, ಪದ್ಮ, ಹಸು, ಎತ್ತು, ಚಕ್ರ, ಸೂರ್ಯ, ಚಂದ್ರ, ಛತ್ರ, ಹಾರ, ಧ್ವಜ, ಶಿವಲಿಂಗ, ತೋರಣ, ಜಿಂಕೆ, ಕೋಟೆ, ಶೂಲ, ವಜ್ರ, ಶಫರ–ಇವುಗಳಿಗೆ ಹೋಲಿಸಬಹುದಾದ ರೇಖೆಗಳು, ಜೊತೆ ಕಟ್ಟಿಕೊಂಡಿರುವಂತಿರುವ ರೇಖೆಗಳು ಇವೆಲ್ಲ ಪ್ರಶಸ್ತ. ಅಗ್ನಿಬೀಜ, ವಾಯುಬೀಜ ಇಲ್ಲಿ ಇರಬಹುದು. ಸ್ವರಗಳು ಬಣ್ಣ ಹಾಗೂ ಆಕಾರ ಇವು ಭಿನ್ನವಾಗಿದ್ದರೂ ಪ್ರಶಸ್ತವೇ. ನಾಯಿಯ ಆಕಾರದ ರೇಖೆಯನ್ನು ಬಿಟ್ಟು

ಕಾಗೆ, ಗಿಡುಗ, ತೋಳ, ಒಂಟೆ, ಕೋತಿಗಳಂತಿರುವ, ಬೆಕ್ಕು ಹದ್ದುಗಳ ಆಕಾರದ, ಹಾವು, ಗೂಬೆ, ನರಿ, ಹುಳುಗಳಂತಿರುವ, ಅಡ್ಡಡ್ಡ ಹರಡಿಹೋಗಿರುವ, ರೇಖೆಗಳು ಇರುವ ಶಿಲೆಯನ್ನು ಬಿಟ್ಟು ಪ್ರಶಸ್ತವಾದ ಬೇರೆ ಶಿಲೆಯನ್ನು ಸಂಗ್ರಹಿಸಬೇಕು.

ಶಿಲಾಮಾಧ್ಯಮದ ಸಾಂಪ್ರದಾಯಿಕ ಶಿಲ್ಪಕಲೆ ಪ್ರಧಾನವಾಗಿ ಧಾರ್ಮಿಕ ಹಿನ್ನೆಲೆಯಲ್ಲಿ ಹಾಗೂ ಸ್ಮಾರಕಗಳ ಹಿನ್ನೆಲೆಯಲ್ಲಿ, ಪ್ರಮುಖವಾಗಿ ತಮ್ಮ ಆಚರಣೆ, ಸಂಪ್ರದಾಯ, ನಂಬಿಕೆಯ ಮೂಲಕ ಬೆಳೆಸಿಕೊಂಡು ಬಂದ ದೇವ ದೇವತೆಯರ ಯಕ್ಷರರು, ಗಂದರ್ವವರು ನಾಗಶಿಲ್ಪಗಳನ್ನು ಒಳಗೊಂಡಂತೆ ಅನೇಕ ರೂಪಗಳನ್ನು ಶಿಲಾ ಮಾಧ್ಯಮದಲ್ಲಿ ರೂಪ ಪಡೆದುಕೊಂಡಿರುವುದರ ಬಗ್ಗೆ ಅಧ್ಯಯನ ನಡೆಸಲಾಗಿದೆ. ಇದರಲ್ಲಿ ಅನೇಕ ಪ್ರಕಾರಗಳನ್ನು ಉಪವಿಂಗಡಣೆಗಳನ್ನಾಗಿ ಮಾಡಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆರಾಧನೆ, ಆಚರಣೆಗಳ ಹಿನ್ನೆಲೆಯಲ್ಲಿ ಅನೇಕ ಶಿಲಾ ಶಿಲ್ಪಗಳ ಮಹತ್ವ ಮತ್ತು ಸಂಪ್ರದಾಯವಾದಿ ವಿಚಾರಧಾರೆ, ಇವುಗಳ ಮೂಲಕ ಸೃಷ್ಟಿಗೊಂಡ ಹಲವಾರು ಗ್ರಾಮದೇವತಾ ಶಿಲ್ಪಗಳು ಅಧ್ಯಯನದಲ್ಲಿ ಸ್ಥಾನ ಪಡೆದಿದೆ. ಶಿಲಾ ಮಾಧ್ಯಮದ ಶಿಲ್ಪಗಳ ಮೇಲೆ ಬಣ್ಣಗಳ ಬಳಕೆಯಿಂದ ಆದ ವಿಶಿಷ್ಟ ಶೈಲಿ ಪ್ರಕಾರಗಳನ್ನು ಗಮನದಲ್ಲಿರಿಸಿಕೊಂಡು ಅಧ್ಯಯನ ಮಾಡಲಾಗಿದೆ. ಕೃಷ್ಣ ಅಥವಾ ಮೃದು ಶಿಲೆಯಲ್ಲಿ ಆಲಂಕಾರಿಕ ಸೂಕ್ಷ್ಮ ವಿವರಣೆಗಳ ಸ್ಪಷ್ಟ ಕೆತ್ತನೆಯ ಸಾಂಪ್ರದಾಯಿಕ ಶಿಲಾ ಶಿಲ್ಪಗಳು, ಒರಟು ಕಲ್ಲಿನಲ್ಲಿ ಕಥಾಹಿನ್ನೆಲೆಯ ನಿರೂಪಣೆಯ ಉದ್ದೇಶವನ್ನು ನೇರವಾಗಿ ವಿವರಿಸುವ ಶಿಲ್ಪಗಳು, ಅವುಗಳ ಮೈವಳಿಕೆ, ಸಂಯೋಜನಾ ಬದ್ಧತೆ ಹಾಗೂ ಸ್ಥಳಾವಕಾಶ ಬಳಕೆಯ ಪ್ರಮಾಣಬದ್ಧ ರಚನಾಕ್ರಮಗಳ ಬಗ್ಗೆ ವಿರಣಾತ್ಮಕವಾಗಿ ಅಧ್ಯಯನ ಕೈಗೊಳ್ಳಲಾಗಿದೆ.

ಧಾರ್ಮಿಕ ಶಿಲ್ಪ ಶೈಲಿಗಳಲ್ಲಿನ ಮುಖ್ಯ ಪಾತ್ರದ ರೂಪಾಲಂಕಾರಗಳು, ಮೈವಳಿಕೆ, ಸೂಕ್ಷ್ಮ ಕೆತ್ತನೆ, ಮುಖ್ಯಮೂರ್ತಿಯ ಬಳಗದ ರೂಪ ಮತ್ತು ಆಕಾರಗಳ ಸಂಯೋಜನೆ, ಸರಿಯಾದ ಅವಕಾಶದಲ್ಲಿ ಅವುಗಳ ಅಳವಡಿಕೆ ಮತ್ತು ವಿನ್ಯಾಸಗೊಂಡ ಸೌಂದರ್ಯಾತ್ಮಕ ಕಿರು ಶಿಲ್ಪಗಳ ಆಕಾರ–ಗಾತ್ರಗಳ ಅನುಪಾತದ ಅವಕಾಶದ ಬಳಕೆಯನ್ನು ಕ್ರೋಢೀಕರಿಸಲಾಗಿದೆ. ಹೊರ ಆವರಣದ ಶಿಲ್ಪಗಳ ರಚನೆಗಳಲ್ಲಿನ ಮತ್ತು ಒಳ ಆವರಣದ ಬಳಕೆಯು ಶಿಲ್ಪಶೈಲಿಗಳ ಬಗ್ಗೆ ಹಾಗೂ ತಾತ್ಕಾಲಿಕವಾಗಿ ಆಚರಣೆಗೆ ಒಳಗಾಗುವ ಶಿಲ್ಪಗಳಲ್ಲಿ ಸ್ವಾಭಾವಿಕ ಆಕಾರದ ಶಿಲೆಗಳ ಆರಾಧನೆ ಆಚರಣೆಗಳ ವೈಶಿಷ್ಟ್ಯಗಳನ್ನು ವಿಶ್ಲೇಷಿಸಲಾಗಿದೆ. ತ್ರಿಮಾನ ಶಿಲ್ಪ(ದುಂಡು ಶಿಲ್ಪ), ದ್ವಿಮಾನ ಶಿಲ್ಪ (ಉಬ್ಬು ಶಿಲ್ಪ) ಇವುಗಳ ರಚನಾಕ್ರಮ ಮತ್ತು ಅಳವಡಿಕೆಗಳ ವಿಭಿನ್ನಗಳ ಶಿಷ್ಟ ಸಂಪ್ರದಾಯ ಕೆತ್ತನೆಗಳು, ಜನಪದದಿಂದ ಶಿಷ್ಟ ಆಚರಣೆಗೆ ಒಳಗಾದ ಸಾಂಪ್ರದಾಯಿಕ ದೇವತೆಗಳಲ್ಲಿ ರೂಪ–ಅಲಂಕಾರಗಳ ಪರಿವರ್ತನೆಗಳು ವಿಸ್ತೃತವಾಗಿ ಅಧ್ಯಯನಗೊಂಡಿದೆ. ಮುಖ್ಯ ಶಿಲ್ಪಗಳು, ಪರಿವಾರದವರ ಶಿಲ್ಪಗಳು, ವಾಹನ ಶಿಲ್ಪಗಳು ಹಾಗೂ ಆಲಂಕಾರಿಕ ಶಿಲ್ಪಗಳಲ್ಲಿನ ವೈವಿಧ್ಯಮಯ ಸಂಯೋಜನೆಗಳನ್ನು ವಿವರಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಒಟ್ಟಾರೆ ಹೈದರಾಬಾದ್ ಕರ್ನಾಟಕ ಭೌಗೋಳಿಕ ಪ್ರದೇಶದ ವ್ಯಾಪ್ತಿಯಲ್ಲಿ ಪ್ರತಿಮೆ ಮಾಡುವ ಶಿಲೆಯು, ಖನಿಜ ರೂಪದಲ್ಲಿ ಎಲ್ಲಿಯೂ ದೊರೆಯುವುದಿಲ್ಲ. ಇಡೀ ಕರ್ನಾಟಕದ

ಶಿಲ್ಪಿಗಳು ಮೈಸೂರಿನ ಹೆಚ್.ಡಿ. ಕೋಟೆಯ ಸಾದರಹಳ್ಳಿ ಹಾಗೂ ಬಾಗಲಕೋಟ ಜಿಲ್ಲೆಯ ಸಲ್ಲೀಕೆರೆಯಿಂದ ಮಾತ್ರ ಕಲ್ಲುಗಳನ್ನು ತಮಗೆ ಬೇಕಾದ ಅಳತೆಯಲ್ಲಿ ಗಣಿ ಮಾಲೀಕರಿಗೆ ಮುಂಗಡ ಹಣವನ್ನು ನೀಡಿ ಖರೀದಿಸಬೇಕಾಗುತ್ತದೆ. ನಂತರ ಅಲ್ಲಿಂದ ಆ ಕಲ್ಲುಗಳನ್ನು ಬೃಹತ್ ವಾಹನಗಳ ಮೂಲಕ ತಮ್ಮ ತಮ್ಮ ಸ್ಥಳೀಯ ಶಿಲ್ಪ ಕುಟೀರಗಳಿಗೆ ಸಾಗಾಣಿಕೆ ಮಾಡಿ ಕೊಳ್ಳಬೇಕಾಗುತ್ತದೆ. ಕಲ್ಲುಗಳ ಸಾಗಾಣಿಕೆ ವೆಚ್ಚವು ಅಧಿಕವಾಗುತ್ತದೆ. ಕಾರಣ ಶಿಲ್ಪಿಗಳು ಶಿಲ್ಪಕಾರ್ಯ ಮಾಡುವ ಸ್ಥಳೀಯ ಪರಿಸರದಲ್ಲಿ ಯಾವುದೇ ಪ್ರತಿಮೆಯನ್ನು ಮಾಡುವ ಶಿಲೆಯು ಲಭ್ಯವಿರುವುದಿಲ್ಲ. ಆದ್ದರಿಂದ ಸುಮಾರು ೪೦೦–೫೦೦ ಕಿ.ಮೀ.ಗಳಿಂದ ಶಿಲೆಯನ್ನು ತರಿಸಿಕೊಳ್ಳುವ ವೆಚ್ಚ ಶಿಲ್ಪಿಗಳಿಗೆ ಭಾರವಾಗುತ್ತದೆ.

### ೪.೧.೩. ಮರಮಾಧ್ಯಮದ ಸಾಂಪ್ರದಾಯಿಕ ಶಿಲ್ಪಕಲೆ

ಮಾನವನು ಕಲ್ಲು ಅಥವಾ ಶಿಲೆಯನ್ನು ಬಳಸಿಕೊಳ್ಳುವ ಮೊದಲು ಬಳಸಿಕೊಂಡ ಸಾಮಗ್ರಿಯೇ ಮರ ಅಥವಾ ಕಟ್ಟಿಗೆಯಾಗಿದೆ. ಶಿಲ್ಪ ಹಾಗೂ ವಾಸ್ತುಶಿಲ್ಪಗಳಲ್ಲಿನ ಪ್ರಾರಂಭದ ಶಿಲಾರಚನೆಗಳು ಕಾಷ್ಠಶಿಲ್ಪಗಳ ಅನುಕರಣಗಳೇ ಎನ್ನಲಾಗುತ್ತದೆ. ಋಗ್ವೇದದಲ್ಲಿ ಕಾಷ್ಠಶಿಲ್ಪ ದೇವಾಲಯದ ಉಲ್ಲೇಖವಿದೆ. ಬೃಹತ್ ಸಂಹಿತೆ ಹಾಗೂ ಶಿಲ್ಪಶಾಸ್ತ್ರಗಳಲ್ಲಿ ಮರ ಕಡಿಯುವ, ಕಟ್ಟಿಗೆಯನ್ನು ಹದಗೊಳಿಸುವ ಮತ್ತು ಯಾವ ಶಿಲ್ಪಗಳಿಗೆ ಎಂಥ ಕಟ್ಟಿಗೆಗಳನ್ನು ಬಳಸಬೇಕೆಂಬುದರ ವಿವರಗಳಿವೆ. ಇದು ಈ ಕಲೆಯ ಪ್ರಾಚುರ್ಯ ಹಾಗೂ ವಿಕಾಸವನ್ನು ಸೂಚಿಸುತ್ತದೆ. ಮೌರ್ಯ ಚಂದ್ರಗುಪ್ತರ ಅರಮನೆಯು ಕಟ್ಟಿಗೆಯದೇ ಆಗಿದ್ದು, ಆ ಕಾಲದ ಕಾಷ್ಠಶಿಲ್ಪಿಗಳ ಕುಶಲತೆಯ ನಿದರ್ಶನವೆಂದು ಹೇಳಲಾಗುತ್ತದೆ. ಪಾಟಲಿಪುತ್ರವು ೫೦೦ ಕಾವಲುಗೋಪುರ ಮತ್ತು ೬೪ ದ್ವಾರಗಳನ್ನೊಳಗೊಂಡ ಕಾಷ್ಠ ನಿರ್ಮಿತ ನಗರವೇ ಆಗಿತ್ತು. ಬುರಹತ್ ಮತ್ತು ಕಾರ್ಲೆ ಚೈತ್ಯಾಲಯಗಳು ಕಾಷ್ಠಶಿಲ್ಪದ ಅನುಕರಣೆಗಳೇ ಆಗಿರಬಹುದು ಎಂದು ತಿಳಿದುಬರುತ್ತದೆ.[೧೭]

ಭಾರತದಲ್ಲಿ ಮರಕೆತ್ತನೆ ಒಂದು ಅದ್ಭುತ ಸಂಪ್ರದಾಯ. ಮರದಲ್ಲಿ ಕೈಗೊಳ್ಳುವ ಸೂಕ್ಷ್ಮ ಕೆತ್ತನೆಗಳು ದೇವಾಲಯಗಳಲ್ಲಿ ಮತ್ತು ಮಠಗಳಲ್ಲಿ ಮಂಟಪಗಳಾಗಿ, ರಥಗಳಾಗಿ, ಕಾಷ್ಠಶಿಲ್ಪಗಳಾಗಿ ಸಾಕರಗೊಂಡಿರುವ ಸಮಯದಲ್ಲೇ, ಅರಮನೆಗಳಲ್ಲಿ ಅತ್ಯಾಕರ್ಷಕ ದ್ವಾರಗಳಾಗಿ, ಮನೆಗಳಲ್ಲಿ ಸುಂದರ ವಿನ್ಯಾಸದ ಕಂಬಗಳಾಗಿವೆ. ಹಿಮಾಚಲ ಪ್ರದೇಶದಲ್ಲಿನ ಸುಮಾರು ೧೦೦೦ ವರ್ಷಗಳಷ್ಟು ಪುರಾತನವಾದ ಹಿಡಿಂಬೆ ದೇವಾಲಯವು ಚಳಿ, ಗಾಳಿ, ಹಿಮಕ್ಕೆ ಮೈ ಒಡ್ಡಿದ್ದರೂ ಸಹ, ಸ್ವಲ್ಪವೂ ಹಾನಿಯಾಗದಂತೆ ಉಳಿದಿರುವುದು, ಮರದ ಸಂರಕ್ಷಣೆಗಾಗಿ ಮಾರ್ಗದರ್ಶನ ಹಾಕಿಕೊಟ್ಟಿದೆ. ಗುಡ್ಡಗಾಡು ಜನಾಂಗಗಳು ಈಗಲೂ ಅಸ್ತಿತ್ವದಲ್ಲಿರುವ ಮಧ್ಯಪ್ರದೇಶದ ಬಸ್ತರ್ ಮುಂತಾದ ಸ್ಥಳಗಳಲ್ಲಿ ಮರದ ಕೆತ್ತನೆ ಧಾರ್ಮಿಕ ನಂಬಿಕೆಗಳಿಗೆ ಇಂಬು ನೀಡಿದೆ.[೧೮]

ವಿವಿಧ ರೀತಿಯ ಮರಗಳನ್ನು ಶಿಲ್ಪಕಲಾಕೃತಿಗಳಿಗೆ ಮಾಧ್ಯಮವನ್ನಾಗಿ ಬಳಸಿಕೊಂಡು ಸಾಂಪ್ರದಾಯಿಕ ಶಿಲ್ಪಕಲೆಯನ್ನು ಪ್ರಮುಖ ಶಿಲ್ಪಕಲೆಯನ್ನಾಗಿ, ಮಹತ್ವವನ್ನು ನೀಡಿ ರಚಿಸಿರುವುದರ

---

೧೭. ಕರೀಗೌಡ ಬೀಚನಹಳ್ಳಿ (ಸಂ.) : ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ: ೨, ಕರಕುಶಲ ಕಲೆಗಳು, ಪು–೫

೧೮. ಅದೇ., ಪು–೧೮

ವೈಶಿಷ್ಟ್ಯತೆ ಕುರಿತಾಗಿ ಅಧ್ಯಯನ ಮಾಡಲಾಗಿದೆ. ಸಾಂಪ್ರದಾಯಿಕ ಶಿಲ್ಪ ಪ್ರಕಾರಗಳು ಶಿಲ್ಪಕಲೆಯ ಸೌಂದರ್ಯ ಪ್ರಜ್ಞೆ, ಧಾರ್ಮಿಕ ಹಿನ್ನೆಲೆ ಹಾಗೂ ತಾವು ನಂಬಿಕೊಂಡು ಬಂದ ವೈಚಾರಿಕತೆಯ ಹಿನ್ನೆಲೆಗಳನ್ನು ಸೌಂದರ್ಯ ಮೂಲ ಸಾಂಪ್ರದಾಯಿಕ ಶಿಲ್ಪಕಲೆಯ ಮುಖಾಂತರ, ಅವುಗಳಲ್ಲಿ ತಮ್ಮ ವ್ಯಕ್ತಿ ಮೂಲ ಸಾಂಪ್ರದಾಯಿಕ ಶಿಲ್ಪ ಪ್ರಕಾರವನ್ನೂ ಕೂಡ ಪ್ರತಿರೂಪಿಸಿಕೊಂಡು ಅವುಗಳನ್ನು ಇವುಗಳಲ್ಲಿ ಗಮನಿಸಬಹುದಾಗಿದೆ.

ನಾಮಾಂಕಿತ ಸಾಂಪ್ರದಾಯಿಕ ದೈವಗಳ, ಭೂತಗಳ, ವಿವಿಧ ಆಚರಣೆಗಳ ಮುಖವಾಡಗಳ, ರಥಗಳ, ಬಾಗಿಲುವಾಡಗಳ, ದಿನಬಳಕೆಯ ವಸ್ತುಗಳ, ಎತ್ತಿನ ಬಂಡಿ ಮತ್ತು ಬಳಸುವ ವಾಹನ ಇತ್ಯಾದಿಗಳ ಮೇಲೆ ಮರ ಮಾಧ್ಯಮದಿಂದ ರಚನೆಗೊಂಡ ಜನಪದ ಶಿಲ್ಪಗಳನ್ನು ಗಮನಿಸಬಹುದಾಗಿದೆ. ಬಣ್ಣವನ್ನು ಲೇಪಿಸಿ ಸೌಂದರ್ಯಾತ್ಮಕವಾಗಿ ಇವುಗಳನ್ನು ಬಳಸಿ ರೂಢಿಸಿಕೊಂಡು ಬಂದಿರುವ ಸಾಂಪ್ರದಾಯಿಕ ಸಂಪ್ರದಾಯವನ್ನು ಗಟ್ಟಿಗೊಳಿಸಿಕೊಂಡು ಬರುವುದರಲ್ಲಿ ಮರ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಗಳು ಸಫಲಗೊಂಡಿವೆ. ಈ ರೀತಿಯ ಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಮಣ್ಣಿನ ಮಾಧ್ಯಮ, ಶಿಲಾ ಮಾಧ್ಯಮಗಳಿಗೂ ವಿಭಿನ್ನವಾದ ಮಾಧ್ಯಮವಾಗಿ ಮರ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಗಳು ಹೇಗೆ ತಮ್ಮ ವೈಶಿಷ್ಟ್ಯವನ್ನು ಗುರುತಿಸಿಕೊಂಡಿವೆ ಎಂಬುದನ್ನು ಈ ಅಧ್ಯಾಯದಲ್ಲಿ ಪೂರಕ ವಿವರಣೆಗಳೊಂದಿಗೆ ಅಧ್ಯಯನ ನಡೆಸಲಾಗಿದೆ.

ಗ್ರಾಮದೇವತೆಯ ನೆಲದ ಮೂರ್ತಿ(ಗುಡಿಯಲ್ಲಿ ಸ್ಥಾಪಿತವಾದ ಶಾಶ್ವತ ಪೂಜಾಮೂರ್ತಿ) ಮತ್ತು ಉತ್ಸವದ ಮೂರ್ತಿಗಳ ಶಿಲ್ಪರಚನಾ ಕ್ರಮದಲ್ಲಿನ ಬಿಡಿ ಭಾಗಗಳ ಸಂಯೋಜನಾಬದ್ಧ, ಪ್ರಮಾಣಬದ್ಧ ಕೆತ್ತನೆಯ ವಿಧಾನಗಳು, ಪರಿವಾರ ದೇವತೆಗಳ ರಚನಾವಿಧಾನಗಳು, ತಾತ್ಕಾಲಿಕ ಆಚರಣೆ ಮತ್ತು ಶಾಶ್ವತ ಆಚರಣೆಗೆ ಬಳಸುವ ಮಾಧ್ಯಮದ ವಿವಿಧ ಬಗೆಯ ಮೂಲ ವಸ್ತುವಿನ ಉಪಯೋಗಗಳನ್ನು ಕೂಡ ಇಲ್ಲಿ ವಿವರಿಸಲಾಗಿದೆ. ಸ್ವಾಭಾವಿಕವಾಗಿ ಬೆಳೆದ ಮರಗಳನ್ನು ವಿಶಿಷ್ಟವಾಗಿ ಗ್ರಾಮದೇವತೆಯನ್ನಾಗಿಸಿ ಪರಿಸರ ಹಿತ ದೃಷ್ಟಿಯಿಂದ ಆರಾಧಿಸಿ, ಪ್ರಕೃತಿಯ ಸಂಬಂಧವನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿರುವ ವಿವಿಧ ರೀತಿಯ ಸೈದ್ಧಾಂತಿಕ ಪ್ರಜ್ಞೆಯ ಆರೋಗ್ಯ ವಿಚಾರದ ಕಲ್ಪನೆಯ ಮಹತ್ವಗಳನ್ನು ಅಧ್ಯಾಯದಲ್ಲಿ ವಿವರಿಸಲಾಗಿದೆ. ದಿನಬಳಕೆಯ ವಸ್ತುಗಳ ವಿನ್ಯಾಸದಲ್ಲಿ ಸೌಂದರ್ಯದೊಂದಿಗೆ, ಧಾರ್ಮಿಕ ಪ್ರಜ್ಞೆಯ ವಿನ್ಯಾಸ ಸಂಯೋಜನೆಗಳ, ಆಟಿಕೆಗಳು, ಕಿರುಶಿಲ್ಪಗಳು, ಹರಕೆ ಶಿಲ್ಪಗಳಲ್ಲಿನ ಕಥಾನಕ ನಿರೂಪಣೆ ಹಿನ್ನೆಲೆಗಳ ಪ್ರಾಣಿ, ಪಕ್ಷಿಗಳ ಸಹಯೋಗದಿಂದ ಮಾನವನ ಸಹಜೀವನ ಉಪಯೋಗಗಳನ್ನು ಕೂಡ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಮರ ಮಾಧ್ಯಮದ ತ್ರಿಮಾನ ಶಿಲ್ಪಗಳ ಜನಪದೀಯ ಸಂಯೋಜನೆ, ಸ್ಥಳಾವಕಾಶ ಕಲ್ಪನೆ ಸೂಕ್ಷ್ಮ ಕೆತ್ತನೆಗಳು, ಮೈವಳಿಕೆ, ಉಬ್ಬುಶಿಲ್ಪಗಳ ಭಿತ್ತಿರೂಪಕಗಳ ವಿಸ್ತಾರ ಸಂಯೋಜನೆ, ಆಭರಣಗಳಲ್ಲಿ ಮತ್ತು ಚಿತ್ತಾರದ ಪ್ರತಿರೂಪ ಅಚ್ಚುಗಳಲ್ಲಿನ ಸೂಕ್ಷ್ಮವಾದ ಸೌಂದಯಾತ್ಮಕ ಪೂರಕ ಕೆತ್ತನೆಗಳನ್ನು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

ಸಾಂಪ್ರದಾಯಿಕ ಶಿಲ್ಪಗಳ ಸಂಯೋಜನಾಬದ್ಧತೆಗೆ ಅನುಗುಣವಾಗಿ, ರೂಪ ಮತ್ತು ಅಲಂಕಾರಗಳ ಅವಕಾಶಬದ್ಧ ರಚನೆಗಳಿಗೆ ಒಳಗೊಂಡು ನಿರ್ಮಾಣಗೊಂಡಿರುತ್ತದೆ. ಕಥಾ ಸ್ವರೂಪ ಹಿನ್ನೆಲೆಗೆ ತಕ್ಕಂತೆ ಆಕೃತಿಯನ್ನು ಅನುಪಾತದ ಅವಕಾಶದ ಚೌಕಟ್ಟಿನಲ್ಲಿ ಹಿನ್ನೆಲೆಗೆ ಕ್ರಮಬದ್ಧವಾದ ವಿನ್ಯಾಸ, ಪರಸ್ಪರ ಹೊಂದಾಣಿಕೆಯ ಕಲಾವಿದನ ಸ್ಪಷ್ಟ ನಿರ್ದೇಶನದಲ್ಲಿ ಸ್ಥಾಪಿತ ವಾಗಿರುತ್ತದೆ. ಮಾರಮ್ಮ ದೇವತೆಯ ಶಿಲ್ಪ ರಚನೆಯ ಸಂದರ್ಭದಲ್ಲಿ ಮರಮಾಧ್ಯಮದಲ್ಲಿ ಆಕೆಯ ರೌದ್ರಾವತಾರದ ಮುಖ ಲಕ್ಷಣಕ್ಕೆ ಹೊಂದಾಣಿಕೆಯಾಗುವಂತಹ ದೇಹದ ರಚನೆ, ಕೈಗಳು ಹಾಗೂ ಅವುಗಳಲ್ಲಿನ ವ್ಯವಸ್ಥಿತ ಆಯುಧಗಳ, ವಾಹನಗಳ ರೂಪಾಕಾರಗಳು, ಶಿಲ್ಪಕ್ಕೆ ಲಕ್ಷಣವಾಗಿ ಸರಿ ಹೊಂದುವಂತೆಯೇ ರೂಪಿಸಿ, ವಸ್ತ್ರಾಭರಣಧಾರಣೆಯನ್ನು ಅಗತ್ಯಕ್ಕೆ ತಕ್ಕಂತೆ ಉಪಯೋಗಿಸಿ, ಉಡುಗೆ-ತೊಡುಗೆಗಳ ಕೊರತೆಯಿಲ್ಲದ ಹಾಗೆಯೇ ವಿನ್ಯಾಸವನ್ನು ರೂಪಿಸಿ, ಮೂರ್ತಿಯನ್ನು ಸ್ಥಾಪಿಸುವ ಸ್ಥಳಾವಕಾಶ ಯೋಜನೆಗೆ ತಕ್ಕಂತೆ ನಿರ್ಮಿಸಿರುತ್ತಾರೆ. ಈ ರೀತಿಯ ಹಲವಾರು ವೈಶಿಷ್ಟ್ಯದ ಜನಪದ ಶಿಲ್ಪಗಳನ್ನು ಅಧ್ಯಯನ ಮಾಡಲಾಗಿದೆ. ಅಂತೆಯೇ ಜನಪದರು ಆಚರಿಸುವ ಆಯಾ ಪ್ರದೇಶಗಳಿಗೆ ಅನುಗುಣವಾಗಿರುವ ಹಬ್ಬ-ಹರಿದಿನಗಳಂತಹ ಸಂದರ್ಭಗಳಲ್ಲಿ ರಚಿಸುವ ವಿಶಿಷ್ಟ ಮಾಧ್ಯಮಗಳ ಶಿಲ್ಪಗಳಲ್ಲಿ, ಜನಪದೀಯ ವಿಶಿಷ್ಟ ಅಂಶಗಳನ್ನು ಒಳಗೊಂಡಂತೆ ರಚಿಸಲ್ಪಟ್ಟಿರುವ ಕೀಲುಕುದುರೆಗಳು, ಗಾರುಡಿ ಗೊಂಬೆಗಳು, ದೃಷ್ಟಿ ಗೊಂಬೆಗಳು, ಸೂತ್ರದ ಗೊಂಬೆಗಳು ಇನ್ನೂ ಮುಂತಾದ ಶೈಲಿಗಳಲ್ಲಿ ಮತ್ತು ಅಹಾರ ಪದಾರ್ಥಗಳಲ್ಲಿ, ವಿವಿಧ ಮಾಧ್ಯಮಗಳೊಂದಿಗೆ ಜನಪದ ಶಿಲ್ಪಗಳು ಮಾಧ್ಯಮದಲ್ಲಿ ರಚನೆಯಾಗಿದ್ದು, ಅವುಗಳ ರಚನಾಕ್ರಮದ ವಿಶೇಷಗಳ ಅದ್ಯಯನವನ್ನು ಇಲ್ಲಿ ರೂಪಿಸಲಾಗಿದೆ.

ಲಾವಂಚ ಬೇರಿನಲ್ಲಿ ತಯಾರಿಸುವ ಸೌಂದರ್ಯಾತ್ಮಕ ದೇವರುಗಳು, ಮುಖವಾಡಗಳು, ಆಲಂಕಾರಿಕ ವಿನ್ಯಾಸಗಳು, ಸೇಣಬಿನ ವಿನ್ಯಾಸಗಳು, ಉತ್ಸವ-ಜಾತ್ರೆಗಳ ಸಂದರ್ಭದಲ್ಲಿ ಬಳಸುವ ಪಲ್ಲಕ್ಕಿ, ಉತ್ಸವ ವಾಹನಗಳು, ಬೆದರುಗೊಂಬೆಗಳು ಅಧ್ಯಯನಕ್ಕೆ ಒಳಗೊಂಡಿರುತ್ತದೆ.

**ಮರಗಳ ವಿಧಗಳು**

ಮರವು(ಸೌದೆ) ವೃಕ್ಷಗಳಲ್ಲಿ ದೊರೆಯುತ್ತದೆ. ವೃಕ್ಷಗಳು ಅನೇಕ ಬಗೆಯಾಗಿವೆ. ಮರದ ಗುಣಗಳು ವೃಕ್ಷದ ಲಕ್ಷಣಗಳು ವೃಕ್ಷದ ಬಗೆಯಿಂದ ನಿರ್ಣಯವಾಗಿರುತ್ತದೆ. ವೃಕ್ಷಗಳ ಬಗ್ಗೆ ಭಾರತೀಯ ಶಿಲ್ಪಿಗೆ ಬಹುಪ್ರಾಚೀನ ಕಾಲದಿಂದಲೇ ತಿಳಿದಿತ್ತು. ಅನೇಕ ವೃಕ್ಷಗಳಿಗೆ ಹೆಸರು ಕೊಟ್ಟಿದ್ದರು. ಅವುಗಳ ವಿಶೇಷಗಳನ್ನು ಮತ್ತು ಪ್ರಯೋಜನಗಳನ್ನು ತಿಳಿದಿದ್ದರು. ಈ ಬಗ್ಗೆ ಪ್ರಾಚೀನ ಶಿಲ್ಪ ಸಾಹಿತ್ಯದಲ್ಲಿ ಹಲವು ವಿವರಗಳು ದೊರೆಯುತ್ತವೆ. ದೃಢವಾದ ಮತ್ತು ಬಲವಾದ ಮರದಿಂದ ರಥವನ್ನು, ಗಾಡಿಗಳನ್ನು, ಮರದ ಕಂಬಗಳನ್ನು, ತಯಾರಿಸುತ್ತಿದ್ದರು. ಋಗ್ವೇದದಲ್ಲಿ ಶಾಲ್ಮಲಿ ವೃಕ್ಷದ(ಬೂರುಗದ ಮರ) ಹೆಸರು ಉಲ್ಲೇಖವಾಗಿದೆ. ಶತಪಥ ಬ್ರಾಹ್ಮಣವು ಕನಿಷ್ಠ ಕ್ರಿ.ಪೂ. ೧೮೦೦ರಷ್ಟು ಪ್ರಾಚೀನವಾದದ್ದು ಎಂದು ಅಂಗೀಕರಿಸಲಾಗಿದೆ. ಅದರಲ್ಲಿ ಅನೇಕ ವೃಕ್ಷಗಳ ಹೆಸರು ಗಳನ್ನು ಹೇಳಲಾಗಿದೆ-ಅಶ್ವಗಂಧಾ(ಹಿರೇಮದ್ದಿನಗಿಡ), ಅಧ್ಯಂಡಾ(ಕಿರುನೆಲ್ಲಿ), ಪೃಶ್ನಿಪರ್ಣಿ(ನರಿ

ಹೊನ್ನೆಗಿಡ), ಅಶ್ವತ್ಥ(ಅರಳಿ), ವಿಭೀತಕ (ತಾರೆಗಿಡ), ಬಿಲ್ವಪತ್ರೆ ಮರ , ಸ್ಫೂರ್ಜಕ, ಹರಿದ್ರ(ಅರಿಸಿನ ಗಿಡ), ನ್ಯಗ್ರೋಧ(ಆಲದಮರ), ಅಪಮಾರ್ಗ(ಉತ್ತರೇಣಿಗಿಡ), ಅಶ್ವವಾಲ, ಉದುಂಬರ(ಅತ್ತಿಮರ), ಕಶ್ಮರೀ(ಕುಂಕುಮಗಿಡ), ಪಲಾಶ (ಮುತ್ತುಗದ ಮರ), ಪ್ಲಕ್ಷ(ಬಸರಿಮರ), ವೇಣು(ಬಿದುರು), ಖದಿರ(ಕಗ್ಗಲಿ ಮರ), ಶಮೀ(ಬನ್ನಿ ಮರ), ಖದಿರದ(ಕಗ್ಗಲಿ) ಮರವು ದೃಢವಾಗಿರುತ್ತದೆ ಎಂಬುದು ತಿಳಿದಿತ್ತು. ಔದುಂಬರ ಅತ್ತಿಮರವನ್ನು ಸಭಾಮಂಟಪದ ಕಂಬಗಳಿಗೆ ಬಳಸುತ್ತಿದ್ದರು. ಮಡಿಗೆ ಜಂತೆಗಳಗೆ, ತೊಲೆಗಳಿಗೆ, ಬಿದುರಿನ ಬೊಂಬನ್ನು ಬಳಸುತ್ತಿದ್ದರು. ಶತಪಥ ಬ್ರಾಹ್ಮಣದ ಕಾಲಕ್ಕೇ ಕಾಷ್ಠಶಿಲ್ಪವು ಬಹುವಾದ ಪ್ರಗತಿಯನ್ನು ಸಾಧಿಸಿತ್ತು, ಮರದ ಶಿಲ್ಪಗಳು ಹೆಚ್ಚಾಗಿ ರೂಢಿಯಲ್ಲಿದ್ದವು. ಋಗ್ವೇದ ಮತ್ತು ಯಜುರ್ವೇದದ ಕಾಲದಲ್ಲಿಯೇ ರಥವನ್ನು ನಿರ್ಮಿಸುವ ಶಿಲ್ಪಿಯನ್ನು ರಥಕಾರ ಎಂದು ಕರೆಯುತ್ತಾರೆ. ತಕ್ಷಕ ಬಹುಪ್ರಖ್ಯಾತ ಕಾಷ್ಠಶಿಲ್ಪಿಯಾಗಿದ್ದ. ಆದ್ದರಿಂದ ಬ್ರಾಹ್ಮಣಗಳ ಕಾಲಕ್ಕೆ ಮರದ ಬಳಕೆಯು ಬಹುವಾಗಿದ್ದರೆ, ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಮರವನ್ನು ವಯೋಮಾನ, ದೋಷಗಳು ಮತ್ತು ಲಿಂಗ ಇವುಗಳ ಆಧಾರದಿಂದ ವರ್ಗೀಕರಿಸ ಲಾಗುತ್ತದೆ.

**ವಯೋಮಾನ:** ಸಾಧಾರಣವಾಗಿ ಒಂದು ಮರದ ವಯಸ್ಸು ೧೦೩ ವರ್ಷಗಳು. ೧೬ ವರ್ಷಗಳಿಗೂ ಕಡಿಮೆ ವಯಸ್ಸಿನ ಮರವು ಬಾಲವೃಕ್ಷ, ೫೦ವರ್ಷಕ್ಕೆ ಹೆಚ್ಚಾಗಿರುವುದನ್ನು ವೃದ್ಧ ವೃಕ್ಷವೆಂದು ಪರಿಗಣಿಸಲಾಗುತ್ತದೆ. ಆದ್ದರಿಂದ ೧೬ರಿಂದ ೫೦ ವರ್ಷಗಳ ಮಧ್ಯೆ ವಯಸ್ಸಿನ ಮರಗಳು ದೇವಾಲಯ ನಿರ್ಮಾಣ ಮತ್ತು ಗೃಹ ನಿರ್ಮಾಣಗಳಿಗೆ ಪ್ರಯೋಜನಕಾರಿಯಾದುವು.

**ದೋಷಗಳು:** ಮರವನ್ನು ಕತ್ತರಿಸಿದ ನಂತರ ಧ್ವಜ, ಛತ್ರ, ಚಾಮರ, ಕುಂಭ, ವೃತ್ತ ಮುಂತಾದ ಆಕೃತಿಗಳು ಇದ್ದರೆ ಆ ಮರವು ಶುಭಕರವಾದುದು. ಸ್ತ್ರೀ, ಸರ್ಪ, ದುಂಬಿ, ಕಾಗೆ, ಶಿರರಹಿತ ಪುರುಷ ಮುಂತಾದ ಆಕೃತಿಗಳು ಸಿಕ್ಕರೆ ಆ ಮರವು ಅಶುಭಕರವಾದದ್ದು. ಮರದಲ್ಲಿ ರಂಧ್ರಗಳು ಇರಬಾರದು. ರಂಧ್ರಗಳಲ್ಲಿ ಹಲವು ಬಗೆಗಳಿವೆ–ನಿಷ್ಕುಟ, ಕೋಲ, ಘೃಷ್ಟಿನೇತ್ರ, ವತ್ಸಕ, ಬಂಧುಕ ಮತ್ತು ಸುಕ್ಷಿರ. ತುಂಬಾ ದೊಡ್ಡ ರಂಧ್ರವನ್ನು ನಿಷ್ಕುಟ ಎನ್ನುತ್ತಾರೆ. ಚಿಕ್ಕದಾಗಿರುವ ರಂಧ್ರವನ್ನು ಕೋಲ ಅಥವಾ ಅರ್ಧಕೋಲ ಎನ್ನುತ್ತಾರೆ. ಕೋಲ ಎಂದರೆ ಹಂದಿಯ ಕಣ್ಣಿನಂತಹ ರಂಧ್ರ ಎಂದು ಅರ್ಥ. ವೃತ್ತಾಕಾರವಾಗಿರುವ ಮತ್ತು ಕಣ್ಣಿನಂತೆ ಕಾಣಿಸುವ ರಂಧ್ರ ಘೃಷ್ಟಿನೇತ್ರವೆಂದು ಕರೆಯಲ್ಪಡುತ್ತದೆ. ಬಣ್ಣಗೆಟ್ಟಿರುವ ದೊಡ್ಡದಾದ ಮತ್ತು ಎಡ ಸುತ್ತಿನ ರಂಧ್ರವನ್ನು ವತ್ಸಕ ಎನ್ನುತ್ತಾರೆ. ಹುಳುಗಳಿಂದ ದೊಡ್ಡದಾಗಿರುವ ರಂಧ್ರವನ್ನು ಕಾಲಬಂಧೂಕ ಅಥವಾ ಬಂಧೂಕ ಎನ್ನುತ್ತಾರೆ. ಸಣ್ಣ ಸಣ್ಣ ರಂಧ್ರಗಳಿದ್ದರೆ ಅದನ್ನು ಸುಷಿರ ಎನ್ನುತ್ತಾರೆ. ರಂಧ್ರವುಳ್ಳ ಮತ್ತು ಗಂಟುಗಳು ಇರುವ ಮರವನ್ನು ಕಟ್ಟಡ ರಚನೆಗೆ ಬಳಸಬಾರದು.

**ಲಿಂಗಭೇದ:** ಬುಡದಿಂದ ತುದಿಯ ತನಕ ದಪ್ಪವಾಗಿ ಕೊಳವೆಯ ಆಕಾರದಲ್ಲಿದ್ದು ಎಲ್ಲಾ ಕಡೆಗಳಿಂದಲೂ ಒಂದೇ ರೀತಿಯಾಗಿ ಇದ್ದರೆ, ಬಹು ಶಾಖೆಗಳೊಂದಿಗೆ ವ್ಯಾಪಿಸಿದ್ದರೆ, ಒಳ್ಳೆಯ ನೆಲದಲ್ಲಿ ಆ ಮರ ಬೆಳೆದಿದ್ದರೆ, ಆ ಮರದ ಬೇರುಗಳು ಭೂಮಿಯಲ್ಲಿ ಆಳವಾಗಿ ಇಳಿದಿದ್ದರೆ,

ಆ ಮರದ ಹೂ-ಹಣ್ಣುಗಳ್ಳಿಂದ ನವುರಾದ ಸುಗಂಧ ಹೊಮ್ಮುತ್ತಿದ್ದರೆ, ಮುಟ್ಟಿದರೆ ಸಮ ಶೀತೋಷ್ಣವಾಗಿದ್ದರೆ ಆ ಮರವನ್ನು ಪುಲ್ಲಿಂಗವೆಂದು ಪರಿಗಣಿಸಲಾಗುತ್ತದೆ. ಬುಡವು ದಪ್ಪವಾಗಿದ್ದು, ತುದಿಯು ತೆಳವಾಗಿದ್ದರೆ ಮೆದುವಾಗಿ, ಬಹು ಸುಗಂಧವನ್ನು ಸೂಸುತ್ತಿದ್ದರೆ ಮುಟ್ಟಿದರೆ ತಂಪಾಗಿದ್ದು, ಒಳಗೆ ದ್ರವಪದಾರ್ಥವನ್ನು ತುಂಬಿಕೊಂಡಿದ್ದರೆ ಅಂತಹ ಮರವನ್ನು ಸ್ತ್ರೀಲಿಂಗವೆಂದು ಪರಿಗಣಿಸಲಾಗಿದೆ. ತುದಿಯು ವಿಶಾಲವಾಗಿದ್ದು ಬುಡವು ಕೃಶಿಸಿದ್ದರೆ ಬುಡ, ಹೂ, ಹಣ್ಣು ದುರ್ಬಲವಾಗಿದ್ದು ಕೃಶಿಸಿರುವ ಮರವು ನಪುಂಸಕಲಿಂಗದ ಮರವು ಕನಿಷ್ಠ. ಮುಹೂರ್ತ ಮತ್ತು ಗರ್ಭ ಸ್ಥಂಭಕ್ಕೆ ಪುಲ್ಲಿಂಗ ಮರವೇ ಬಳಸಬೇಕು. ಕಟ್ಟಡ ರಚನೆಗೆ ಮೂರು ವರ್ಗಗಳ ಮರಗಳನ್ನೂ ಬಳಸಬಹುದು.

ತ್ಯಾಜ್ಯ ಮತ್ತು ಗ್ರಾಹ್ಯ ಮರಗಳ ವಿವರ ಮತ್ತು ಯಾವ ಮರಗಳು ಯಾವ ಕೆಲಸಕ್ಕೆ ಬಳಸಬಹುದು ಎಂಬ ವಿವರಗಳು ಶಿಲ್ಪಶಾಸ್ತ್ರಗಳಲ್ಲಿ ವಿವರವಾಗಿ ಲಭಿಸುತ್ತವೆ: ಅಶ್ವತ್ಥ(ಅರಳಿಮರ), ಔದುಂಬರ(ಅತ್ತಿಮರ), ಪ್ಲಕ್ಷ(ಬಸರಿಮರ), ಶಿಲೀಂಧ್ರ, ಸರ್ಪಮಾರ, ಶಾಲ್ಮಲೀ(ಬೂರುಗ), ವಟ (ಆಲದಮರ), ಸಪ್ತಪರ್ಣೀ, ಬೇಲ, ಪಲಾಶ(ಮುತ್ತುಗ), ಕುಟಚ(ಗಿರಿಮಲ್ಲಿಗೆ), ಪೀಲು, ಶ್ಲೇಷ್ಮಾತಕೀ, ಲೋಧ್ರ, ಕದಂಬ(ಕಡಹದಮರ), ಪಾರಿಜಾತಕ, ಶಿರೀಷ(ಬಾಗೆಮರ), ಕೋವಿದಾರ(ಕಂಚವಾಳ), ತಿಂತ್ರಿಣಿ(ಹುಣಿಸೆಮರ), ಸರಳ(ದೇವದಾರು), ಕಿಂಶುಕ(ಮುತ್ತುಗದಮರ), ಅರಿಮೇದ, ಅಭಯಾಕ್ಷ, ಆಮಲಕ(ನೆಲ್ಲಿಗಿಡ), ಕಪಿತ್ಥ(ಬೇಲ), ಕಂಟಕಾ(ಹಲಸು), ಪುತ್ರಜೀವ, ಡುಂಡುಕ, ಕಾರಸ್ಕರ, ಕರಂಜ(ಹುಲಗಿಲಮರ), ವರಣ, ಅಶ್ವಮಾರೀ, ಬದರಿ(ಬೋರೇಮರ), ಬಕುಳ(ನಾಗಕೇಸರ), ಪಿಂಡೀ, ಪದ್ಮಕ, ತಿಲಕ, ಪಾಟಲೀ(ಪಾದರಿಮರ), ಅಗರು(ಸುಗಂಧವೃಕ್ಷ), ಕರ್ಪೂರ ಈ ಮರಗಳು ದೇವ ಸಮಾನವಾದುವು. ಆದ್ದರಿಂದ ಪೂಜ್ಯ. ಇವನ್ನು ಮಾನವ ಗೃಹಗಳ ನಿರ್ಮಾಣಕ್ಕಾಗಿ ಬಳಸಬಾರದು.

ಪುರುಷ, ಖದಿರ(ಕಗ್ಗಲಿ), ಶಾಲ, ಮಧೂಕ(ಇಪ್ಪೆ), ಚಂಪಕ(ಸಂಪಿಗೆ), ಸ್ತಂಬಕ, ಶಿಂಶುಪ (ಅಶೋಕವೃಕ್ಷ), ಅರ್ಜುನ(ಮತ್ತಿಮರ), ಆಜಕರ್ಣಿ, ಕ್ಷೀರಿಣೀ, ಪದ್ಮ ಚಂದನ, ಪಿಶಿತ, ಧನ್ವನ, ಪಿಂಡಿ, ಸಿಂಹ, ರಾಜಾದನ, ಶಮೀ(ಬನ್ನಿ), ತಿಲಕ ಈ ಮರಗಳು ಕಂಬಗಳಿಗೆ ತುಂಬ ಒಳ್ಳೆಯದು. ನಿಂಬಕ(ಬೇವು), ಆಸನ, ಶಿರೀಷ, ಏಕ, ಕಾಲ, ಕಟ್ಫಲ, ತಿಮಿಸ, ಲಿಕುಚ(ಗಜನಿಂಬೆ), ಪನಸ (ಹಲಸು), ಸಪ್ತಪರ್ಣಿಕಾ, ಭೌಮ, ಗವಾಕ್ಷೀ(ಬುಡುಮೆ) ಇವು ಸಮಾನವಾಗಿ ಕಂಬಗಳಿಗೆ ಮತ್ತು ಸೂರಿಗೆ ತೊಲೆಗಳಾಗಿ ಬಳಸಲು ಸೂಕ್ತವಾದ ಮರಗಳು. ಖದಿರ, ವಹ್ನಿ, ನಿಂಬ, ಶಾಲ, ಶಿಲೀಂಧ್ರ, ಪಿಶಿತ, ತಿಂದುಕ, ರಾಜಾಧನ ಮಧೂಕ ಇವು ಕಂಬಗಳಿಗೆ ಸೂಕ್ತವಾಗಿದ್ದು ಎಲ್ಲಾ ನಿರ್ಮಾಣಗಳಲ್ಲೂ ಬಳಸಬಹುದು. ತಾಳೆ ಮರ, ತೆಂಗಿನ ಮರ, ಕ್ರಮುಕ, ಬೊಂಬು, ಕೇತಕಿ ಈ ಮರಗಳು ಗುಡಿಸಿಲುಗಳ ಕಂಬಗಳಾಗಿ ಬಳಸಬಹುದು. ಇವು ಎಲ್ಲಾ ವರ್ಣಗಳವರಿಗೂ ಬಳಸಬಹುದು. ಒಂದೇ ಬಗೆಯ ಮರವನ್ನು ಬಳಸುವುದು ಕಟ್ಟಡ ನಿರ್ಮಾಣದಲ್ಲಿ ಉತ್ತಮ.

ಮಾವು, ತಿಂದುಕ, ಖದಿರ(ಕಗ್ಗಲಿ), ಬೊಂಬು, ಪಟಲ(ಪದ್ರಿಮರ), ಕರ್ಣಿಕಾರ(ಬೆಟ್ಟದಾವರೆ ಮರ), ಸರಲ(ದೇವದಾರೂ), ಕರ್ಕಂಧೂ, ಕಶ್ಮೀರೀ(ಕುಂಕುಮ), ಪಾರಿಭದ್ರ, ಶ್ರೀಪರ್ಣ(ಅರಳಿ),

ತಿಲಕ, ನಕ್ತಮಾಲ, ಭದ್ರಕ, ಬೇವು ಈ ಮರಗಳು, ಕಿಟಕಿ, ಸೂರಿನ ತೊಲೆ, ಜಂತಿಗೆ, ಬಾಗಿಲ ಚೌಕಟ್ಟು, ಕಂಬಗಳಿಗಾಗಿಯೂ ಮತ್ತು ನಕಾಶೆಯ ಕೆಲಸಕ್ಕಾಗಿಯೂ ಬಳಸಬಹುದು. ಮಧೂಕ(ಇಪ್ಪೆ), ತಿನಿಶ, ಪೂತಕ ಮತ್ತು ಕ್ಷೀರವೃಕ್ಷಗಳು ಸೂರಿನ ತೊಲೆಗಳಿಗಾಗಲಿ ಮತ್ತು ನಕಾಶೆಗಾಗಲಿ ಸೂಕ್ತವಾದುವಲ್ಲ. ಆದುದರಿಂದ ಇವನ್ನು ಬಳಸಬಾರದು. ದೃಢವಾದ, ವಯಸ್ಸು ಹೆಚ್ಚಾಗಲಿ ಕಡಿಮೆಯಾಗಲಿ ಆಗಿಲ್ಲದ, ನೇರವಾದ ವರ್ಣರಹಿತವಾದ ಪವಿತ್ರವಾದ ಬೆಟ್ಟ, ಕಾಡು, ತೀರ್ಥಸ್ಥಾನ ಮುಂತಾದ ಸ್ಥಳಗಳಲ್ಲಿ ಬೆಳೆದಿರುವ, ನೋಡಲು ಮನೋಹರವಾದ ವೃಕ್ಷದ ಮರವು ಕಂಬಗಳಿಗೆ ಉತ್ತಮವಾದುದಾಗಿರುತ್ತದೆ. ಮರದ ಒಳಭಾಗ ಬಿಳುಪಾಗಿದ್ದರೆ ಆ ಮರವು ಸರ್ವೋತ್ತಮವಾದುದು. ಕೆಂಪು, ಹಳದಿ ಮತ್ತು ಕಪ್ಪಾಗಿದ್ದರೆ ಆ ಮರದ ಶ್ರೇಷ್ಠತೆಯು ಅದೇ ಕ್ರಮದಲ್ಲಿ ಕಡಿಮೆಯಾಗುತ್ತದೆ. ನೇರವಾಗಿ, ದೃಢವಾಗಿ, ಗಟ್ಟಿಯಾಗಿ, ಗಾಳಿ ಮತ್ತು ಮಳೆಗಳ ಪ್ರಭಾವ ಯಾವುದರ ಮೇಲೆ ಇರುವುದಿಲ್ಲವೋ, ನೀರು ಎಲ್ಲಿ ಸಮೃದ್ಧವಾಗಿರುವುದೋ ಅಲ್ಲಿ ಬೆಳೆದಿರುವ ಮರವು ಒಳ್ಳೆಯದಾದುದು. ಇಂತಹ ಮರವು ಗ್ರಾಹ್ಯವಾದುದು. ಮರವನ್ನು ಕಡಿದ ನಂತರ ಅದರಿಂದ ನೀರು, ಹಾಲು ಅಥವಾ ದ್ರವವು ಸುರಿದರೆ ಆ ಮರವು ಒಳ್ಳೆಯದು ಎಂದು ಗ್ರಹಿಸಬೇಕು. ಆದರೆ ಕೆಂಪು ದ್ರವವನ್ನು ಸುರಿಸಿದರೆ ಅ ಮರವು ತ್ಯಾಜ್ಯ.

ದೇವಾಲಯಗಳ ಬಳಿ ಇರುವ, ಸಿಡಿಲು, ಬೆಂಕಿ ಇವುಗಳಿಂದ ಸುಟ್ಟು ಹೋಗಿರುವ, ಪೊಟರೆಗಳು, ಟೊಳ್ಳು ಇರುವ, ರಸ್ತೆಯ ಬದಿಗಳಲ್ಲಿ ಇರುವ, ಯಾವ ಮರಗಳ ಮೇಲೆ ಹಕ್ಕಿಗಳು, ಆ ಮರದ ನೆರಳಿನಲ್ಲಿ ಪಶುಗಳು ಇರುತ್ತವೆಯೋ, ಗಾಳಿ–ಬೆಂಕಿಗಳಿಂದ ಹಾಳಾಗಿ ಭಗ್ನವಾಗಿರುವ, ಚಂಡಾಲರ ಮನೆಗಳು ಇರುವ ಎಡೆ ಇರುವ, ಯಾವ ಮರಕ್ಕೆ ಬಳ್ಳಿಗಳು ಹಬ್ಬಿಕೊಂಡಿದೆಯೋ, ಯಾವುದರ ಕೊಂಬೆಗಳ ಮೇಲೆ ಬೇರೆಯ ಗಿಡಗಳ ಮೊಳಕೆಗಳು ಇವೆಯೋ, ಒಳಗೆಲ್ಲಾ ಯಾವ ಮರ ಟೊಳ್ಳಾಗಿದೆಯೋ, ಯಾವ ಮರದಲ್ಲಿ ಪುಷ್ಪ ಫಲಗಳು ಮೂಡು ವುದಿಲ್ಲವೋ, ಸ್ಮಶಾನ, ಚೈತ್ಯ ಮುಂತಾದ ಸ್ಥಳಗಳಲ್ಲಿ ಇರುವ, ಸಭಾಮಂಟಪ, ಪವಿತ್ರಸ್ಥಳದ ವೃಕ್ಷಗಳು ಕೆರೆ, ಕುಂಟೆಗಳ ಮಧ್ಯ ಅಥವಾ ಅಂಚಿನಲ್ಲಿರುವಂತಹ ಮರವು ಕಟ್ಟಡ ರಚನೆಯಲ್ಲಿ ಬಳಕೆಗೆ ಸೂಕ್ತವಾದುದಲ್ಲ ಎಂಬುದು ತಿಳಿಯಬೇಕು.

ದುರ್ಬಲವಾದ, ಎಲೆಗಳೆಲ್ಲಾ ಹಾಳಾಗಿರುವ, ಮುರಿದಿರುವ, ಹೆಚ್ಚು ಗಂಟುಗಳುಳ್ಳ ಮರವು ತ್ಯಾಜ್ಯ. ಬಹುವಾಗಿ ಕೊಂಬೆಗಳುಳ್ಳ, ಆನೆಯ ಕೊಂಬಿನಿಂದ ಛಿನ್ನ ಭಿನ್ನವಾದ, ಗಿಡ್ಡಾಗಿ ವಿಕಾರ ವಾಗಿರುವ, ಅಶುಭ ಪಕ್ಷಿಗಳ ವಾಸವಾಗಿರುವ, ಬೇಟೆಗಾರರ ಬಾಣಗಳಿಂದ ಛಿದ್ರವಾಗಿರುವ, ಮುಳ್ಳುಗಳು ಹೆಚ್ಚಾಗಿರುವ, ದುರ್ಬಲವಾದ ತೊಗಟೆ ಇರುವ ಮರವು ತ್ಯಾಜ್ಯ. ಕಹಿ, ಉಪ್ಪು, ಖಾರ ರುಚಿಯ ಮಣ್ಣಿನಲ್ಲಿ ಬಿಲಗಳಿರುವ ನೆಲದಲ್ಲಿ ಬೆಳೆದಿರುವ ಮರಗಳು ತ್ಯಾಜ್ಯವಾಗಿರುತ್ತವೆ. ಮುರಿದಿರುವ, ಛಿದ್ರಗಳಿರುವ, ಹಂದಿಯ ಕಣ್ಣಿನಂತೆ ಕಾಣಿಸುವ ರಂಧ್ರ ಉಳ್ಳ, ಒಣ ತೊಗಟೆಯ, ಮುಳ್ಳಿನ ಮರಗಳು ತ್ಯಾಜ್ಯ. ಹಾಲು ಒಸರುವ, ರುಚಿಯಾದ ಹಣ್ಣುಗಳನ್ನು ಕೊಡುವ, ಸುಗಂಧ ಭರಿತವಾದ ಮರ, ಕ್ರಿಮಿ ಕೀಟಗಳನ್ನು ಆಕರ್ಷಿಸುವಂತಹ ಮರಗಳು. ಶಾಲ(ಸರ್ಜವೃಕ್ಷ),

ಜಂಬುಕ(ನೇರಳೆ), ಸರಲ(ದೇವದಾರು), ಬಕುಲ(ನಾಬಕೇಸರ), ಮಧೂಕ(ಇಪ್ಪೆ), ತಿಂತ್ರಿಣಿ(ಹುಣಸೆ), ಬರ್ಬರ, ವ್ಯಾಘ್ರ (ಕೆಂಪಿನೌಡಲ), ಕ್ಷೀರಿಣೀ, ಖದಿರ(ಖಗ್ಗಲಿ) ಮತ್ತು ಶಮೀ(ಬನ್ನಿ) ವೃಕ್ಷಗಳು, ಸಾಕ(ತೇಗ), ದೀರ, ಶಿರೀಷ(ಬಾಗೆಮರ), ಅರ್ಜುನ(ಮತ್ತಿಮರ), ನಿಂಬ(ಬೇವು), ಕಟ್ಫಲ, ಮಾವು, ನಾಗ(ಸುರಹೊನ್ನೆ) ವೃಕ್ಷಗಳು ರಥ ನಿರ್ಮಾಣಕ್ಕಾಗಿ ಶ್ರೇಷ್ಠವಾದುವು. ಹಡಗನ್ನು ತಯಾರಿಸಲು ಮರವು ಹಗುರವೂ, ಮೃದುವೂ ಆಗಿರಬೇಕು. ಪಲಾಶಾ, ಚಂದನ, ಬಕುಳ, ಪನಸ(ಹಲಸು) ಈ ಮರಗಳು ಈ ಕೆಲಸಕ್ಕಾಗಿ ಸೂಕ್ತವಾದುವು. ಮೃದುವಾಗಿರುವ, ಹಗುರವಾದ ಆದರೆ ದೃಢವಾಗಿರುವ ಈ ಮರವು ನಾವೇ ತಯಾರಿಸಲು ಸೂಕ್ತವಾದುದು.

ಮರವನ್ನು ಕತ್ತರಿಸಿದ ನಂತರ ತೊಗಟೆಯನ್ನು ತೆಗೆದು ಮರವನ್ನು ಚೌಕಾಕಾರವನ್ನಾಗಿ ಮಾಡಿ ಶಿಲ್ಪಿಯ ಕಾರ್ಯಾಗಾರದಲ್ಲಿ ಮರಳಿನ ಮೇಲೆ ಮರದ ಅಗ್ರಭಾಗವು ಪೂರ್ವಕ್ಕೆ ಅಥವಾ ಉತ್ತರಕ್ಕೆ ಇರುವಂತೆ ಇರಿಸಬೇಕು. ಹೀಗೆ ಎಂಟು, ಆರು ಅಥವಾ ಮೂರು ತಿಂಗಳು ಒಣಗಲು ಬಿಡಬೇಕು. ತರುವಾಯ ಇದನ್ನು ಕಟ್ಟಡಕ್ಕೆ ಬಳಸಬಹುದು. ಈ ಬಗ್ಗೆ ಆತುರ ಮಾಡಬಾರದು. ಮರವನ್ನು ಒಣಗಿಸುವ(ಮಾಡುವ) ಕ್ರಮದ ವಿವರಣೆಯು ಆಧುನಿಕರಿಗೂ ಗ್ರಾಹ್ಯವಾಗಿರುವ ಶ್ರೇಷ್ಠ ವಿವರಣೆ. ಮರವನ್ನು ಕತ್ತರಿಸುತ್ತಲೇ ಮೂಲ ಮತ್ತು ಅಗ್ರಗಳನ್ನು ಗುರ್ತಿಸಲು ಸಾಧ್ಯವಾಗುವಂತೆ ಸೂಕ್ತ ಗುರ್ತು ಮಾಡಬೇಕು. ಒಂದು ವೇಳೆ ಕಂಬಕ್ಕೆ ಈ ಮರವನ್ನು ಬಳಸಿದರೆ ಆಗ ಮೂಲವು ಕೆಳಭಾಗದಲ್ಲಿದ್ದು ಅಗ್ರವು ಮೇಲ್ಭಾಗದಲ್ಲಿರುವಂತೆ ಇರಿಸ ಬೇಕಾದದ್ದು ಮುಖ್ಯ. ಒಂದೇ ಬಗೆಯ ಮರವನ್ನು ಬಳಸಿ ನಿರ್ಮಿಸುವ ವಾಸ್ತುರಚನೆಯು ಅತ್ಯುತ್ತಮವಾದುದಾಗಿರುತ್ತದೆ. ಕಟ್ಟಡ ನಿರ್ಮಾಣದಲ್ಲಿ ಯಾವ ಕಾರಣದಿಂದಲಾದರೂ ಸರಿಯೇ ಮೂರು ಬಗೆಯ ಮರಗಳಿಗಿಂತಲೂ ಹೆಚ್ಚು ಬಗೆಯನ್ನು ಬಳಸದಿರುವುದು ಶ್ರೇಷ್ಠ. ಭಾರತೀಯ ಮಾನಕ ಸಂಸ್ಥೆ ಇವರು ಭಾ.ಮ.ಸಂ ೮೮೮–೧೯೫೭ರ ಪ್ರಕಾರ ಕಟ್ಟಡದಲ್ಲಿ ಮರವನ್ನು ಬಳಸುವಂತಿದ್ದರೆ ಆ ಮರವು ಮರದ ಒಳಭಾಗದಿಂದ ತೆಗೆದಿರಬೇಕು(ಇದನ್ನು ಸೇಗು ಎನ್ನುತ್ತಾರೆ) ಎಂದು ಹೇಳುತ್ತದೆ.

ಮರದ ವಯಸ್ಸು ಕಡಿಮೆಯೂ ಆಗಿರಬಾರದು ಹೆಚ್ಚೂ ಆಗಿರಬಾರದು. ಮರವನ್ನು ಚೆನ್ನಾಗಿ ಒಣಗಿಸಿ ತೇವವಿಲ್ಲದಂತೆ ಮಾಡಬೇಕು. ಮರವು ನೇರವಾಗಿ, ಒಂದೇ ಸಮನಾಗಿರಬೇಕು. ಅದರಲ್ಲಿ ಗಂಟುಗಳು ಇರಬಾರದು. ಮರದಲ್ಲಿ ಛಿದ್ರಗಳು, ಪೊಟರೆಗಳು, ಓರೆ–ಕೋರೆಗಳು ಇರಬಾರದು. ಮರದಲ್ಲಿ ಯಾವುದೇ ದ್ರವ ಪದಾರ್ಥ ಉಳಿದಿರಬಾರದು. ಕೀಟಗಳಿಂದ ಮುಕ್ತವಾಗಿರ ಬೇಕು. ಎಲ್ಲಾ ಬಗೆಯ ಮರಗಳು ಚೆನ್ನಾಗಿ ಒಣಗಿರಬೇಕು. ಮರದಲ್ಲಿ ಕೆಟ್ಟಿರುವ, ಕೊಳೆತಿರುವ ಭಾಗ ಇರಬಾರದು. ಮರದ ಬಣ್ಣವು ಎಲ್ಲಾ ಭಾಗಗಳಲ್ಲೂ ಒಂದೇ ಆಗಿರಬೇಕು. ಭಾರತೀಯ ಮಾನಕ ಸಂಸ್ಥೆಯು ಉತ್ತಮ ಮರದ ಬಗ್ಗೆ ಹೇಳಿರುವ ಲಕ್ಷಣಗಳು ಇವು ಇವೇ ಗುಣ ಲಕ್ಷಣ ಗಳನ್ನು ಸಾವಿರಾರು ವರ್ಷಗಳ ಹಿಂದೆಯೇ ಭಾರತೀಯ ಶಿಲ್ಪಿಗಳು ಕಟ್ಟಡ ರಚನೆಗೆ ಮರವನ್ನು ಆಯ್ಕೆ ಮಾಡುವಾಗಲೂ ಇರಿಸಿಕೊಂಡಿದ್ದರು. ಶಿಲ್ಪಶಾಸ್ತ್ರದಲ್ಲಿ ವರ್ಜ್ಯ–ತ್ಯಾಜ್ಯಗಳ ಪಟ್ಟಿಯು ಅತ್ಯಂತ ವೈಜ್ಞಾನಿಕತೆಯನ್ನು, ಭಾರತೀಯ ಶಿಲ್ಪಿಯ ವಿಜ್ಞಾನವನ್ನು ತೋರುವ ಕೈಗನ್ನಡಿಯಾಗಿದೆ.

**೪.೧.೪. ಲೋಹ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಕಲೆ**

ಪ್ರಾಚೀನ ಮಾನವನ ಸೃಜನಶೀಲ ಮನಸ್ಸು, ಅಭಿವ್ಯಕ್ತಿಗಾಗಿ ಆರಿಸಿಕೊಂಡ ಮಾಧ್ಯಮಗಳಲ್ಲಿ ಮಣ್ಣು, ಕಟ್ಟಿಗೆ(ಮರ), ಲೋಹಗಳು ಪ್ರಮುಖವಾದವುಗಳು. ಪ್ರಾಚೀನ ಕಾಲದಿಂದಲೂ ಹಲವಾರು ನಂಬಿಕೆ, ಆಚರಣೆ, ಮತಧರ್ಮಗಳ ಹಿನ್ನೆಲೆಯಲ್ಲಿ, ವಿವಿಧ ಶೈಲಿಗಳಲ್ಲಿ, ಮಾಧ್ಯಮಗಳಲ್ಲಿ, ಆಕಾರಗಳಲ್ಲಿ, ಶಿಲ್ಪಗಳು ಸೃಷ್ಟಿಯಾಗುತ್ತಾ ಬಂದಿವೆ. ಶಿಲ್ಪ ಸೃಷ್ಟಿ ಮುಖ್ಯವಾಗಿ ನಾಲ್ಕು ಬಗೆಯಲ್ಲಿ ಆಗುತ್ತದೆ. ಕೆತ್ತಿ ತೆಗೆಯುವುದು, ಮೆತ್ತಿ ರೂಪಿಸುವುದು, ಎರಕ ಹೊಯ್ಯುವುದು ಹಾಗೂ ಹಲವಾರು ವಸ್ತುಗಳನ್ನು ಜೋಡಿಸಿ ಅಂಟಿಸುವುದು. ಈ ಕ್ರಿಯೆಗೆ ಶಿಲೆ, ಧಾತು, ದಂತ, ಮರ, ಮಣ್ಣು ಮುಖ್ಯವಾಗಿವೆ. ಈ ಎರಕ ಹೊಯ್ಯುವ ಕ್ರಿಯೆ ಕೇಂದ್ರವಾಗಿಟ್ಟುಕೊಂಡು ಸೃಷ್ಟಿಯಾಗುವುದೇ ಲೋಹಶಿಲ್ಪ ಕಲೆ.[೧೯]

ಹರಪ್ಪ-ಮೊಹೆಂಜೋದಾರೊಗಳಲ್ಲಿ ದೊರೆತ ಕಂಚಿನ ಶಿಲ್ಪಗಳು, ಲೋಹಶಿಲ್ಪಕಲೆಯ ಪ್ರಾಚೀನತೆಯನ್ನು ತಿಳಿಸುತ್ತವೆ. ಸುಮಾರು ಐದು ಸಾವಿರ ವರ್ಷಗಳ ಹಿಂದಿನ ಈ ಸಂಸ್ಕೃತಿಯಲ್ಲಿ ಲೋಹ ಶಿಲ್ಪಗಳ ತಯಾರಿಕೆ ಇದ್ದುದು ಕಂಡುಬರುತ್ತದೆ. ದೆಹಲಿಯ ರಾಷ್ಟ್ರೀಯ ವಸ್ತು ಸಂಗ್ರಹಾಲಯದಲ್ಲಿರುವ ತಾಮ್ರದ ಎಮ್ಮೆ, ನಾಯಿ ಹಾಗೂ ಕಂಚಿನ ನೃತ್ಯಭಂಗಿಯ ಶಿಲ್ಪಗಳು ಶಿಲ್ಪಿಗಳ ಕರಕೌಶಲ್ಯಕ್ಕೆ ಸಾಕ್ಷಿಯಾಗಿವೆ. ಕ್ರಿಪೂ. ಒಂದು ಸಾವಿರಕ್ಕೂ ಹಿಂದಿನ ತಾಮ್ರ ಶಿಲಾಯುಗದಿಂದ ಈ ಲೋಹಶಿಲ್ಪ ಕಲೆಯ ಸೃಷ್ಟಿ ರೂಢಿಯಲ್ಲಿತ್ತೆಂಬುದು ಹಳ್ಳೂರು, ತೆಕ್ಕಲಕೋಟೆಗಳಲ್ಲಿ ಜರುಗಿದ ಉತ್ಖನನಗಳಿಂದ ಸಾಬೀತಾಗಿದ್ದು, ಪ್ರಾಚೀನ ಸ್ವರೂಪವನ್ನು ಈ ಲೋಹಶಿಲ್ಪಕಲೆಯಲ್ಲಿ ಕಾಣಬಹುದು. ಅಲ್ಲದೆ ಪಿಕ್ಲಿಹಾಳ, ಮಸ್ಕಿ, ಸಂಗನಕಲ್ಲು, ಸಂಡೂರು, ಹಟ್ಟಿ, ಕೋಲಾರಗಳಲ್ಲಿ ಲೋಹದ ಕುಲುಮೆಗಳು ಇದ್ದುವೆಂದು ಸಂಶೋಧನೆಯಿಂದ ತಿಳಿದುಬಂದಿದೆ.[೨೦]

ಭಾರತೀಯ ಪ್ರಾಚೀನ ಕೃತಿಗಳಾದ ರಾಮಾಯಣ, ಮಹಾಭಾರತಗಳಲ್ಲಿ, ಲೋಹಶಿಲ್ಪಕಲೆಯ ಕುರಿತು ಉಲ್ಲೇಖಗಳಿವೆ. ವೈದಿಕ ಯುಗದಲ್ಲೂ ಲೋಹಶಿಲ್ಪಕಲೆ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ಗೊತ್ತಾಗುತ್ತದೆ. ಯಜುರ್ವೇದದಲ್ಲಿಯೇ ಅಲ್ಲದೆ, ಶಿಲ್ಪಕಶ್ಯಪ, ಶಿಲ್ಪಶಾಸ್ತ್ರ, ಶಿಲ್ಪರತ್ನ, ಸಮರಾಂಗಣ ಸೂತ್ರಧಾರ, ಮಯವೃತ, ಮಾನಸಾರ ಮುಂತಾದ ಶಾಸ್ತ್ರಗ್ರಂಥಗಳಲ್ಲಿ ಲೋಹದ ಮೂರ್ತಿಶಿಲ್ಪಗಳನ್ನು ಕುರಿತಂತೆ ವಿವರಗಳಿವೆ. ಕರ್ನಾಟಕದಲ್ಲಿ ಲೋಹಶಿಲ್ಪಕಲೆಯ ಪರಂಪರೆಯನ್ನು ಶಾತವಾಹನರ ಕಾಲದಿಂದಲೇ ಕಾಣಬಹುದು, ಇವರ ಕಾಲದಲ್ಲಿ ಸೃಷ್ಟಿಯಾದ ಲೋಹಶಿಲ್ಪಗಳಲ್ಲಿ ಮುಖ್ಯವಾಗಿ (ಕೊಲ್ಲಾಪುರದ ವಸ್ತುಸಂಗ್ರಹಾಲಯದಲ್ಲಿರುವ) ಕ್ರಿ.ಶ. ಮೂರನೇ ಶತಮಾನಕ್ಕೆ ಸೇರಿದ ನಾಲ್ಕು ಜನ ಯೋಧರ ಶಿಲ್ಪ, ಗರುಡ ತಲೆ, ಸಿಂಹ ದೇಹದ ಉಬ್ಬುಗೆತ್ತನೆಯ ಲೋಹಶಿಲ್ಪ, ಇವು ಉಲ್ಲೇಖಾರ್ಹವಾಗಿವೆ.[೨೧]

ವಿಜಯನಗರದ ಅರಸರ ಕಾಲದಲ್ಲಿ ಈ ಶಿಲ್ಪಕಲೆ ತೀವ್ರಗತಿಯಲ್ಲಿ ಮುಂದುವರಿಯಿತು. ದಕ್ಷಿಣ ಭಾರತದಾದ್ಯಂತ ಹರಡಿದ್ದ ವಿಜಯನಗರ ಸಾಮ್ರಾಜ್ಯದಲ್ಲಿ ಹಿಂದೂಧರ್ಮ ಪುನಶ್ಚೇತನ

---

೧೯. ಕರೀಗೌಡ ಬೀಚನಹಳ್ಳಿ (ಸಂ.) : ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ: ೨, ಕರಕುಶಲ ಕಲೆಗಳು, ಪು-೨೧೮

೨೦. ಅದೇ.

೨೧. ಅದೇ.

ಪಡೆಯಿತು. ಕ್ರಿ.ಶ. ೧೪ನೇ ಶತಮಾನದ ವೇಳೆಗಾಗಲೇ ಸತತ ಮುಸ್ಲಿಮರ ದಾಳಿಯಿಂದ ತಲ್ಲಣಗೊಂಡಿದ್ದ ಸ್ಥಳೀಯ ಹಿಂದೂಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಪ್ರಯತ್ನ ನಡೆಸಿದರು. ಅಂತಾಗಿ ಪ್ರಬಲ ಹಾಗೂ ಪರ್ಯಾಯವಾದ ಸಾಮ್ರಾಜ್ಯವನ್ನು ಕಟ್ಟಲು ನೆರವಾದರು. ಈ ನಿಟ್ಟಿನಲ್ಲಿ ತಲೆ ಎತ್ತಿದ್ದ ವಿಜಯನಗರ ಸಾಮ್ರಾಜ್ಯದಲ್ಲಿ ಹಿಂದೂಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ದೊರಕಿತು. ಜೊತೆಗೆ ಸ್ಥಳೀಯ ಕರ್ನಾಟಕ ಹಾಗೂ ತಮಿಳು ಸಂಸ್ಕೃತಿಗಳು ಸಮ್ಮಿಳಿತಗೊಂಡು ಅನೇಕ ದೇವಾಲಯಗಳ ರಚನೆ, ಅಲ್ಲಿ ಮೂರ್ತಿಶಿಲ್ಪದ ಆರಾಧನೆ, ಜೊತೆಗೆ ಉತ್ಸವಮೂರ್ತಿ ಪೂಜೆಗಳು ಪ್ರಾರಂಭವಾದವು. ಹಾಗಾಗಿ ಶಿವ-ವಿಷ್ಣುಯಾದಿಯಾಗಿ ಎಲ್ಲಾ ವಿಧದ, ಆಕಾರದ ಮೂರ್ತಿಗಳು ಹಿಂದೆಂದೂ ಕಾಣದಷ್ಟು ಸಂಖ್ಯೆಯಲ್ಲಿ ರೂಪ ತಳೆದವು ಎನ್ನಬೇಕು. ಅಲ್ಲದೆ, ದೇವತಾಮೂರ್ತಿಗಳ ಜೊತೆಗೆ ವ್ಯಕ್ತಿಶಿಲ್ಪಗಳೂ ಸಹ ಇವರ ಕಾಲದಲ್ಲಿ ನಿರ್ಮಾಣಗೊಂಡವು.

ಹಂಪಿಯ ವಸ್ತುಸಂಗ್ರಹಾಲಯದಲ್ಲಿರುವ ಲಕ್ಷ್ಮೀ, ಲಕ್ಷ್ಮೀನರಸಿಂಹ, ಪಾರ್ವತಿ ಮೂರ್ತಿಗಳು, ಮೂಡುಬಿದ್ರೆಯಲ್ಲಿ ದೊರೆತ ಬೃಹತ್ ಪ್ರಭಾವಳಿಯ ಹಿನ್ನೆಲೆಯಲ್ಲಿ ಸಪ್ತ ಸರ್ಪಗಳ ಎಡೆಯಿಂದ ಅಲಂಕೃತವಾಗಿರುವ ಗಣೇಶನ ವಿಗ್ರಹ ಇವರ ಕಾಲದಲ್ಲಿ ನಿರ್ಮಾಣಗೊಂಡಂತವು. ಶಿಲ್ಪರಚನೆಯಲ್ಲಿ ಮುಖಚರ್ಯೆ, ಆಭರಣಾಲಂಕಾರ, ನಿಲುವು ಏಕಮುಖವಾಗಿದ್ದು, ದೃಢಕಾಯವಾದ ಪುರುಷ ಸೌಂದರ್ಯವತಿಯಾಗಿ ಸ್ತ್ರೀಯ ದೇವತಾಮೂರ್ತಿಗಳನ್ನು ಎರಕ ಹೊಯ್ಯುವ ಪದ್ಧತಿ ರೂಢಿಯಲ್ಲಿ ರುವಂತೆ ಕಂಡುಬರುತ್ತದೆ. ಅಂತೆಯೇ ವ್ಯಕ್ತಿಶಿಲ್ಪಗಳಲ್ಲೂ ಇದೇ ರೀತಿಯ ವಿನ್ಯಾಸ ಒಡಮೂಡಿದ್ದು, ತಿರುಮಲ ಬೆಟ್ಟದ ಮೇಲಿರುವ ಕೃಷ್ಣದೇವರಾಯ ಮತ್ತು ಆತನ ಇಬ್ಬರು ರಾಣಿಯರಾದ ತಿರುಮಲಾಂಬ ಮತ್ತು ಚೆನ್ನಾದೇವಿ ಅವರ ಶಿಲ್ಪಗಳ ಎರಕ ಸ್ವರೂಪತೆಯ ಸ್ವಾಭಾವಿಕತೆಯನ್ನು ಕಂಡೇ ತಿಳಿಯಬೇಕಾಗುತ್ತದೆ.[೨೨]

ಲೋಹ ಮಾಧ್ಯಮದ ವಿವಿಧ ಬಗೆಯ ಲೋಹಗಳನ್ನು ಬಳಸಿ ರಚಿಸಿರುವ ಸಾಂಪ್ರದಾಯಿಕ ಶಿಲ್ಪಗಳ ಬಗ್ಗೆ ಅಧ್ಯಯನ ಮಾಡಲಾಗಿದ್ದು, ಲೋಹ ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಕಲೆಯ ಸೌಂದರ್ಯ, ಧರ್ಮ ಹಾಗೂ ಆಚರಣೆ ಸಂದರ್ಭದ ಶಿಲ್ಪಗಳು ಮತ್ತು ವ್ಯಕ್ತಿಮೂಲ ಹಿನ್ನೆಲೆಯಿಂದ ಬೆಳೆದುಬಂದ ಲೋಹಮಾಧ್ಯಮದ ಸಾಂಪ್ರದಾಯಿಕ ಶಿಲ್ಪಗಳು ಸ್ಪಷ್ಟ ರೂಪರೇಷೆಗಳ ಬಗ್ಗೆ ವಿಶ್ಲೇಷಣಾತ್ಮಕವಾಗಿ ಚರ್ಚಿಸಲಾಗಿದೆ. ಲೋಹಗಳ ಎರಕದಲ್ಲಿ ಆಯ್ದುಕೊಂಡಿರುವ ಭೌಗೋಳಿಕ ವಿವಿಧ ಭಾಗಗಳ ಆಯಾ ಪ್ರದೇಶಕ್ಕನುಗುಣವಾದ ಎರಕ ಶೈಲಿಗಳನ್ನು ವಿಭಿನ್ನವಾಗಿಯೇ ಅಧ್ಯಯನಕ್ಕೆ ಒಳಪಡಿಸಿಕೊಂಡು ತ್ರಿಮಾನ ಶಿಲ್ಪಗಳು, ದ್ವಿಮಾನ ಶಿಲ್ಪಗಳು ಹಾಗೂ ಲೋಹದ ಹಾಳೆಯ ಶಿಲ್ಪಗಳನ್ನು ವಿಭಾಗಿಸಿಕೊಂಡು ಇವುಗಳ ತಯಾರಿಕಾ ವಿಧಾನಗಳನ್ನು ಸೂಕ್ತ ಸಲಕರಣೆಗಳೊಂದಿಗೆ ದಾಖಲು ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಸಾಂಪ್ರದಾಯಿಕ ಎರಕ ರೀತಿಯ ಶೈಲಿ ಗಳನ್ನು ಇನ್ನಿತರೇ ಮುಂದುವರಿದ ಆಧುನಿಕ ತಂತ್ರಗಾರಿಕೆಯ ಎರಕ ಶೈಲಿಗಳ ವ್ಯತ್ಯಾಸಗಳನ್ನು ಇಲ್ಲಿ ಸಾಂದರ್ಭಿಕವಾಗಿ ಚರ್ಚೆಗೆ ಒಳಪಡಿಸಿ ಅಧ್ಯಯನ ನಡೆಸಲಾಗಿದೆ.

ಗಾಜರಕೋಟ್ ಮತ್ತು ಸುರಪುರ ವಿನ್ಯಾಸದ ಸಾಂಪ್ರದಾಯಿಕ ಶಿಲ್ಪಗಳ, ಉಬ್ಬುಶಿಲ್ಪ ತಯಾರಿಕಾ ಶೈಲಿ, ಎರಕದ ಶೈಲಿ(ಸ್ಯಾಂಡ್ ಕಾಸ್ಟಿಂಗ್) ಮುಂತಾದ ಶೈಲಿಗಳಲ್ಲಿ ನಿರ್ಮಾಣಗೊಂಡ

೨೨. ಪಿ.ಆರ್. ತಿಪ್ಪೇಸ್ವಾಮಿ(ಪ್ರ.ಸಂ.): ಶಿಲ್ಪಕಲಾ ಪ್ರಪಂಚ, ಪು-೪೩೮, ೪೩೯

ಧಾರ್ಮಿಕ, ಸೌಂದರ್ಯ ವೃತ್ತಿ ಮೂಲದ ಲೋಹಶಿಲ್ಪಗಳನ್ನು ಸಂಕ್ಷಿಪ್ತವಾಗಿ ಅಧ್ಯಯನ ನಡೆಸಲಾಗಿದೆ. ಲೋಹಮಾಧ್ಯಮದಲ್ಲಿನ ಅಷ್ಟಲೋಹ, ಪಂಚಲೋಹ(ಮಿಶ್ರಲೋಹ), ತ್ರಿಲೋಹ, ದ್ವಿಲೋಹ, ಏಕಲೋಹದ ಎರಕಗಳು ವಿಶಿಷ್ಟವಾದ ಪ್ರಯೋಗಗಳ ಅವಶ್ಯಕತೆಗಳಲ್ಲಿನ ಪ್ರಾಮುಖ್ಯತೆಯನ್ನು ವಿಶ್ಲೇಷಿಸಲಾಗಿದೆ. ಎರಕದಲ್ಲಿ ಬಳಸುವ ಸಂವಾಹಕ ಮೂಲವಸ್ತುಗಳ ಪ್ರಯೋಗ ವಿಭಿನ್ನತೆಗಳನ್ನು ಅಧ್ಯಯನ ಮಾಡಲಾಗಿದೆ.

ಪ್ರಾಣಿ, ಪಕ್ಷಿಗಳ ವಿಶೇಷ ಪೌರಾಣಿಕ ಮತ್ತು ಐತಿಹಾಸಿಕ ಕಥಾರೂಪಗಳ ಹಿನ್ನೆಲೆಯೊಂದಿಗೆ, ಪ್ರಭಾವಳಿಗಳು, ಮುಖವಾಡಗಳು, ಪರಿವಾರದ ಮೂರ್ತಿಗಳು, ಆಭರಣಗಳ ವಿವಿಧ ರೀತಿಯ ವಿನ್ಯಾಸಗಳನ್ನು ಕುರಿತಾಗಿ ವಿಶ್ಲೇಷಣಾತ್ಮಕವಾಗಿ ಅಧ್ಯಯನ ನಡೆಸಲಾಗಿದೆ, ನೆಲದ ಮೂರ್ತಿಗಳು, ಉತ್ಸವದ ಮೂರ್ತಿಗಳು ಅವುಗಳ ಸಂಯೋಜನಾ ವೈಖರಿಗಳ, ದೇವಾಲಯಗಳಲ್ಲಿ ಪಟ್ಟಿಕೆಗಳು, ಕಂಬಗಳ ಹೊದಿಕೆಯ ಕವಚಗಳು, ಆಯುಧಗಳು, ಗೃಹಬಳಕೆಯ ವಸ್ತುಗಳಲ್ಲಿನ ವಿಶೇಷ ವಿನ್ಯಾಸಗಳು ಅಧ್ಯಯನದಲ್ಲಿ ಕ್ರೋಡೀಕರಿಸಲಾಗಿದೆ.

**ಲೋಹವನ್ನು ಬೆಸೆಯುವ ಕ್ರಮ:** ಹಿತ್ತಾಳೆ, ತಾಮ್ರ, ಬೆಳ್ಳಿ, ಬಂಗಾರ, ಕಂಚು(ಪಂಚಲೋಹ) ಮುಂತಾದ ಲೋಹಗಳನ್ನು ವಿಗ್ರಹದ ಅಳತೆಗೆ ಮತ್ತು ತೂಕಕ್ಕೆ ತಕ್ಕಂತೆ ನಿರ್ಮಿಸಲಾಗುತ್ತದೆ. ವಿಗ್ರಹವು ಅತಿ ಚಿಕ್ಕ ಪ್ರಮಾಣದ್ದು ಮತ್ತು ಕಡಿಮೆ ತೂಕದ್ದು ಆಗಿದ್ದರೆ, ಗಟ್ಟಿಯಾದ ಘನವಾದ ವಿಗ್ರಹವನ್ನು ಎರಕ ಹೊಯ್ಯುವುದು ಮಾಡಲಾಗುತ್ತದೆ. ಕಡಿಮೆ ತೂಕದ ಲೋಹದಲ್ಲಿ ದೊಡ್ಡಗಾತ್ರದ ವಿಗ್ರಹವನ್ನು ಮಾಡಬೇಕಾದರೆ ಘನವಾಗಿ ಎರಕ ಹೊಯ್ದು ಮಾಡಲಾಗುವುದಿಲ್ಲ. ಅದರ ಬದಲಾಗಿ ಒಳಗೆ ಪೊಳ್ಳಿರುವಂತೆ(ಟೊಳ್ಳು) ವಿಗ್ರಹವನ್ನು ಮಾಡಲಾಗುತ್ತದೆ. ಮತ್ತು ದೊಡ್ಡಗಾತ್ರದ ವಿಗ್ರಹವಾಗಿದ್ದರೆ ಬೆಳ್ಳಿ, ಹಿತ್ತಾಳೆ, ತಾಮ್ರ(ಬ್ರಾಸ್) ಮುಂತಾದ ಲೋಹಗಳನ್ನು ತೆಳುವಾದ ತಗಡು ಗಳನ್ನಾಗಿ ಪರಿವರ್ತಿಸಿಕೊಂಡು ಉಬ್ಬುಲೋಹದ ವಿಗ್ರಹಗಳನ್ನು ಮಾಡಿಕೊಂಡು ಆಕಾರಕ್ಕೆ ತಕ್ಕಂತೆ ಲೋಹದ ತಗಡುಗಳನ್ನು ಉಳಿ ಮತ್ತು ಸುತ್ತಿಗೆಗಳ ಮೂಲಕ ತಿದ್ದಿಕೊಂಡು ಒಡತದ ಕೆಲಸವನ್ನು ಮಾಡಿ ಒಂದು ವಿಗ್ರಹದಲ್ಲಿ ಆಕೃತಿಗೆ ತಕ್ಕಂತೆ ಅನೇಕ ಭಾಗಗಳನ್ನಾಗಿ ಮಾಡಿಕೊಂಡು ನಂತರ ಒಂದಕ್ಕೊಂದು ಕೂಡಿರುವಂತೆ ಬೆಸೆಯಲಾಗುತ್ತದೆ. ಹಾಗೆ ಬೆಸಿಯುವಾಗ ಎರಡು ಕ್ರಮವಿದೆ. ಒಂದು ಹಿತ್ತಾಳೆ ಮತ್ತು ಬೆಳ್ಳಿಯ ಮಿಶ್ರಣವನ್ನು ಉಪಯೋಗಿಸಿ ಮಾಡುವ ಈ ಕ್ರಮದಲ್ಲಿ ಹಿತ್ತಾಳೆ ಮತ್ತು ಬೆಳ್ಳಿಯ ಮಿಶ್ರಣದಲ್ಲಿ ಬೆಸುಗೆ ಮಾಡುವಾಗ ಹಿತ್ತಾಳೆ ಬಣ್ಣ ಎದ್ದು ಕಾಣುತ್ತದೆ. ಇದರ ಬದಲಾಗಿ ಸತುವು(ತವರ) ಮತ್ತು ಬೆಳ್ಳಿ ಮಿಶ್ರಣದ ಬೆಸುಗೆಯಲ್ಲಿ ಸತುವು ಆವಿಯಾಗಿ ಹೋಗುವುದರಿಂದ ಬೆಳ್ಳಿ ಅಷ್ಟೇ ಪ್ರಧಾನವಾಗಿ ಗೋಚರಿಸುತ್ತದೆ.

ಬೆಸುಗೆ ಹಾಕಿದ ಬಾಗದಲ್ಲಿ ಬೆಸುಗೆಯು ಪ್ರತ್ಯೇಕವಾಗಿ ಕಾಣುವುದಿಲ್ಲ. ನಾವು ಯಾವ ಲೋಹದಲ್ಲಿ ವಿಗ್ರಹ ಮಾಡುತ್ತವೆಯೋ ಆ ಲೋಹವನ್ನು ಬೆಸುಗೆಯಲ್ಲಿ ಅದರ ಬಣ್ಣಕ್ಕೆ ಅನುಗುಣ ವಾಗಿ ಲೋಹ ಮಿಶ್ರಣವನ್ನು ಹೆಚ್ಚಿಗೆ ಮಾಡಿಕೊಳ್ಳಬೇಕು. ಬೆಸುಗೆಗೆ ಬೇಕಾದ ಮಿಶ್ರಲೋಹದ ಪದಾರ್ಥವನ್ನು ಮಾಡಿಕೊಳ್ಳುವ ಒಂದು ಕಮ್ರವಿದೆ. ಒಂದು ಭಾಗ ಹಿತ್ತಾಳೆ, ಎರಡು ಭಾಗ ಬೆಳ್ಳಿಯನ್ನು ತೆಗದುಕೊಂಡು ಕರಗಿಸಿ ಅದನ್ನು ಗಟ್ಟಿ ಮಾಡಿಕೊಳ್ಳಬೇಕು. ನಂತರ ಅದನ್ನು

ಪಟ್ಟಿಯಂತೆ, ಅಥವಾ ಸರಳಿನಂತೆ ಮಾಡಿಕೊಂಡು ಬೆಸೆಯಲು ಉಪಯೋಗಿಸಬೇಕು. ಇತ್ತೀಚಿನ ದಿನಗಳಲ್ಲಿ ಬೆಳ್ಳಿ ಹಿತ್ತಾಳೆಯ ಮಿಶ್ರಣದ ಕರಗಿದ ಗಟ್ಟಿಯನ್ನು ಕೊಟ್ಟರೆ ಯಂತ್ರಗಳ ಮೂಲಕ ಸಣ್ಣ ಸಣ್ಣ ರೇಖೆ, ಪಟ್ಟಿಗಳನ್ನಾಗಿ ಮಾಡಿಕೊಡುತ್ತಾರೆ. ಅದನ್ನು ನಮ್ಮ ಅನುಕೂಲಕ್ಕೆ ತಕ್ಕಂತೆ ಕತ್ತರಿಸಿಕೊಂಡು ಲೋಹವಿಗ್ರಹದಲ್ಲಿ ಬೆಸುಗೆ ಮಾಡಲಾಗುತ್ತದೆ.

ಲೋಹಶಿಲ್ಪ ರಚನೆ ಮಾಡುವಾಗ ಮಣ್ಣಿನ ಬಳಕೆಯನ್ನು ಮಾಡುತ್ತಾರೆ. ಮೊದಲು ಮೇಣದ ಮೂರ್ತಿಯನ್ನು ರಚನೆ ಮಾಡಿಕೊಳ್ಳುವ ಪೂರ್ವದಲ್ಲಿ ಜೇನು ಮೇಣವನ್ನು ಬಹಳ ಪ್ರಮಾಣದಲ್ಲಿ ಸಂಗ್ರಹಿಸಿಕೊಂಡು ದೊಡ್ಡ ಪಾತ್ರೆಯಲ್ಲಿಟ್ಟು ಬೆಂಕಿಯ ಮೇಲೆ ನಿಧಾನವಾಗಿ ಕಾಯಿಸುತ್ತಾರೆ. ಮೇಣವು ಮೆಲ್ಲಗೆ ಕಾದು ನೀರಿನಂತೆ ಆದ ಮೇಲೆ ಮತ್ತೊಂದು ಪಾತ್ರೆಯಲ್ಲಿ ಬಟ್ಟೆಯನ್ನು ಹಾಕಿ ಅಥವಾ ಜರಡಿಯಲ್ಲಿ ಸೋಸುತ್ತಾರೆ ಹಾಗೂ ಜೇನು ಮೇಣವು ಶುದ್ಧವಾಗಿ ದೊರೆಯುತ್ತದೆ. ಬಹಳ ದಿನಗಳವರೆಗೆ ಗಟ್ಟಿಯಾದ ಮೇಣವನ್ನು ಕಾಯಿಸುವಾಗ ಶುದ್ಧವಾದ ಕೊಬ್ಬರಿ ಎಣ್ಣೆಯನ್ನು ಪ್ರಮಾಣಕ್ಕೆ ಸರಿಯಾಗಿ ಬೆರೆಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಶುದ್ಧವಾದ ಮೇಣವು ಅಂಗಡಿಯಲ್ಲಿ ಸಿಗುವುದರಿಂದ ಕೆ.ಜಿ. ಗಟ್ಟಲೇ ಮೇಣವನ್ನು ತಂದು ಮೂರ್ತಿ ತಯಾರಿಸಲು ಬಳಸುತ್ತಾರೆ. ಮೇಣಗಳಲ್ಲಿ ಎರಡು ಪ್ರಕಾರದ ಮೇಣ ಸಿಗುತ್ತದೆ. ಬಿಳಿಯ ಮೇಣ, ಇನ್ನೊಂದು ಹಳದಿ ವರ್ಣದ ಜೇನು ಮೇಣ. ಹೆಚ್ಚಿನ ಪ್ರಮಾಣದಲ್ಲಿ ಜೇನು ಮೇಣವನ್ನು ಬಳಕೆ ಮಾಡಲಾಗುತ್ತದೆ. ಏಕೆಂದರೇ ಇದು ಚಿಕ್ಕ ಚಿಕ್ಕ ಗಾತ್ರದ ಎಳೆ ಎಳೆಗಳನ್ನಾಗಿ ಮಾಡಿಕೊಂಡು ಸೂಕ್ಷ್ಮ ಗಾತ್ರದ ನಕ್ಷೆಗಳನ್ನು, ಕಣ್ಣು, ಮೂಗು, ಕಿವಿ, ಕೇಶಗಳು, ಉಂಗುರ, ಸರಗಳು. ಕೀರಿಟದ ಆಭರಣಗಳು, ಬಟ್ಟೆಯಲ್ಲಿ ನೇರಿಗೆಗಳು, ಮುಂತಾದ ಅಯುಧಗಳನ್ನು ಕೊಡ ಮಾಡಿಕೊಳ್ಳಲು ಈ ಮೇಣವನ್ನು ಬಳಕೆ ಮಾಡಲಾಗುತ್ತದೆ.

ಮೇಣದ ಮೂರ್ತಿಯು ಅಥವಾ ವಿಗ್ರಹವೂ ಪೂರ್ಣವಾದ ನಂತರ ಇದನ್ನು ಒಂದು ಪಾತ್ರೆಯಲ್ಲಿ ಇಟ್ಟು ಅದರ ತುಂಬ ನೀರನ್ನು ಹಾಕಿ ಇಡಲಾಗುತ್ತದೆ. ಹೀಗೆ ಮಾಡುವುದರಿಂದ ತೇವಾಂಶದಿಂದಿರುವ ಮೇಣದ ಮೂರ್ತಿಯು ಒಂದು ಅಥವಾ ಎರಡು ದಿನಗಳಲ್ಲಿ ಗಟ್ಟಿಯಾಗಿ ರುತ್ತದೆ. ನಂತರ ಅದನ್ನು ನೀರಿನಿಂದ ತೆಗೆದು ಮುಟ್ಟಿದರು ಯಾವುದೇ ವ್ಯತ್ಯಾಸವಾಗುವುದಿಲ್ಲ. ಈ ರೀತಿ ಗಟ್ಟಿಯಾದ ಮೇಣದ ಮೂರ್ತಿಯ ಮೇಲೆ ಮೃದುವಾದ ಮತ್ತು ನಯವಾದ ಜೇಡಿಮಣ್ಣನ್ನು ಸುತ್ತಲೂ ಒಂದು ಇಂಚು ದಪ್ಪಗಾತ್ರದಲ್ಲಿ ಮೆತ್ತಿ ಅದರ ಮೇಲೆ ತೆಳ್ಳನೆಯ ಗೋಣಿತಟ್ಟನ್ನು ಹಾಕಿ ಮತ್ತೆ ಅದರ ಮೇಲೆ ಕೆಂಪು ಉಸುಕು ಮಿಶ್ರಿತ ಕೆಮ್ಮಣ್ಣು ಪದರನ್ನು ಮೆತ್ತಲಾಗುತ್ತದೆ. ನಂತರ ಇದರ ಮೇಲೆ ಕೆಲವು ಚಿಕ್ಕ ಪ್ರಮಾಣದ ತೆಳ್ಳನೆ ತಂತಿಗಳನ್ನು ಸುತ್ತಲೂ ಸುತ್ತಲಾಗುತ್ತದೆ. ಈ ಮಣ್ಣಿನ ಮುದ್ದೆಯ ಆಕಾರವನ್ನು ಬಿಸಿಲಿನಲ್ಲಿ ಒಣಗಿಸಲು ಇಡಬೇಕಾಗುತ್ತದೆ. ಈ ಸಂದರ್ಭದಲ್ಲಿ ಗಾತ್ರಕ್ಕೆ ಅನುಗುಣವಾಗಿ ಎರಕ ಹೊಯ್ಯುವಾಗ ಗಾಳಿ ಹೊರಗೆ ಹೋಗುವಂತೆ ರಂಧ್ರಗಳನ್ನು ಮಾಡಲು ಕೆಲವು ಮೊಳೆಗಳನ್ನಾಗಲಿ, ಸಲಕೆಗಳನ್ನಾಗಲಿ ಮಣ್ಣಿನ ಆಕೃತಿಯಲ್ಲಿ ಚುಚ್ಚಲಾಗುತ್ತದೆ. ಈ ಮಣ್ಣಿನ ಅಚ್ಚು ಒಣಗಿದ ಮೇಲೆ ಬೆಂಕಿಯಲ್ಲಿ ಬಿಸಿ ಮಾಡುತ್ತ ಮಣ್ಣಿನ ಒಳಗೆ ಇರುವ ಮೇಣದ ಮೂರ್ತಿಯನ್ನು ಕಾಯಿಸಿ ನೀರಾದ ಮೇಣವನ್ನು

ಪಾತ್ರೆಯಲ್ಲಿ ಪುನಃ ಸಂಗ್ರಹಿಸಲಾಗುತ್ತದೆ. ಹೆಚ್ಚಿನ ಪ್ರಮಾಣದಲ್ಲಿ ಮಣ್ಣಿನ ಅಚ್ಚನ್ನು ಕಾಯಿಸಿದಾಗ ಒಂದು ಹನ ಮೇಣವು ಒಳಗೆ ಉಳಿಯದಂತೆ ಬಂದುಬಿಡುತ್ತದೆ.

ಮಣ್ಣಿನಲ್ಲಿ ಇರುವ ಮೊಳೆಗಳ ರಂಧ್ರಗಳನ್ನು ಪುನಃ ಪರಿಶೀಲಿಸಿ ನಂತರ ಮಣ್ಣಿನ ಅಚ್ಚನ್ನು ನೆಲದಲ್ಲಿ ತಗ್ಗು ತೆಗೆದು ಅಂಗಾತ ಹೂಳಬೇಕು. ಲೋಹವು ಕೆಂಪಗೆ ಕಾದು ರಸವಾದ ಮೇಲೆ ಅದರಲ್ಲಿ ಬೆಳಗಾರ, ನವಸಾಗರವನ್ನು ಹಾಕಿ ಶುದ್ಧೀಕರಿಸಿಕೊಂಡು ನೀರಿನಂತಾಗಿರುವ ಲೋಹದ ರಸವನ್ನು ನೆಲದಲ್ಲಿ ಹುಗಿದ ಎರಕದ ಅಚ್ಚಿನಲ್ಲಿ ಸುರಿಯಬೇಕು. ಮೂರರಿಂದ ನಾಲ್ಕು ತಾಸು ಬಿಟ್ಟು ತಣ್ಣಗಾದ ನಂತರ ಮಣ್ಣಿನ ಅಚ್ಚನ್ನು ಹೊಡದು ತೆರೆದರೆ ಅದರಲ್ಲಿ ಶುದ್ಧವಾದ ಲೋಹದ ಆಕೃತಿ ದೊರೆಯುತ್ತದೆ. ಇದೂ ಕೂಡ ಸ್ವಲ್ಪ ಆರಿದ ನಂತರ ಹುಣಿಸೆ ಹಣ್ಣಿನ ಹುಳಿಯಿಂದ ತಿಕ್ಕಿ ತೊಳೆದರೆ ಮೂರ್ತಿಯ ಹೊಳಪು ಕಂಡುಬರುತ್ತದೆ. ಚಿಕ್ಕಪುಟ್ಟ ಕೆಲಸಗಳನ್ನು ಅರಗಳಿಂದ ಮತ್ತು ಸೂಕ್ಷ್ಮ ರೀತಿಯ ಉಳಿಗಳಿಂದ ಕೆತ್ತಿ ತೆಗದು ಲೋಹದ ವಿಗ್ರಹವನ್ನು ನಯಗಾರಿಕೆ ಹೊಳಪು ಬರುವಂತೆ ಉಜ್ಜಿ ಲೋಹದ ಕಲಾಕೃತಿ ಸಂಪೂರ್ಣ ಗೊಳಿಸಲಾಗುತ್ತದೆ. ಅಮೇಲೆ ಅಂಟುವಾಳದ ಹಣ್ಣನ್ನು ಕುಟ್ಟಿ ನೀರಿನಲ್ಲಿ ನೆನೆ ಹಾಕಿ ದ್ರಾವಣವನ್ನು ವಿಗ್ರಹದ ಮೇಲೆ ಹಾಕಿ ಶುದ್ಧ ನೀರಿನಿಂದ ಹತ್ತಿಯನ್ನು ತಗೆದುಕೊಂಡು ಉಜ್ಜಿ ತೊಳೆಯುವುದರಿಂದ ಲೋಹದ ವಿಗ್ರಹವು ಎಲ್ಲ ಮಲಿನತೆಯನ್ನು ಕಳೆದುಕೊಂಡು ಶುಭ್ರವಾಗಿ ಪ್ರಕಾಶಿಸುತ್ತದೆ.

**ಟಂಕ ಬೆಸೆವ ಪದ್ಧತಿ:** ಬಿಡಿ ಬಿಡಿ ಮಾಡಿಕೊಂಡ ಲೋಹದ ಕಲಾಕೃತಿಯ ಭಾಗಗಳನ್ನು ಕೂಡಿಸುವುದಕ್ಕೆ ಉಪಯೋಗಿಸುವ ಮಾಧ್ಯಮವಿದು. ಶುದ್ಧವಾದ ದ್ರಾವಣ ಮಾಡಿಕೊಳ್ಳಬೇಕು. ಇದು ಹದವರಿತು ಆಗಬೇಕಾದ ಕೆಲಸ. ಇಲ್ಲವಾದಲ್ಲಿ ಹೊಡೆದುಹೋಗುವ ಅವಕಾಶಗಳುಂಟು. ದ್ರಾವಣ ಜಾಸ್ತಿ ಆದರೂ ಅಥವಾ ಕಡಿಮೆ ಆದರೂ ಅಂಟುಬರುವುದಿಲ್ಲ. ಹೆಚ್ಚಿನ ಜಿಗುಟು ಬರುವುದಿಲ್ಲ. ಕೆಲವು ಶಿಲ್ಪಿಗಳಿಗೆ ಇದರ ಅನುಭವದ ಕೊರತೆಯಿಂದಾಗಿ ಅನೇಕ ಲೋಹಶಿಲ್ಪಗಳು ದಿನಕಳೆದಂತೆ ಆಯುಧ ಹಿಡಿದ ಕೈ ಭಾರದಿಂದ ಕಳಚಿಬಿದ್ದಂತೆ ಆಗುತ್ತವೆ. ಈ ಶಿಲ್ಪಗಳಲ್ಲಿ ಚೌಕ ಆಕಾರದ ಅಳತೆಗಳು ಇರುತ್ತವೆ. ಹಾಗಾಗಿ ಸರಿಯಾದ ರೀತಿಯಲ್ಲಿ ಟಂಕ ಮಾಡಬೇಕು.

**ಶಿಲಾಟಂಕ:** ಶಿಲೆಯಲ್ಲಿ ಮಾಡಿದ ಮೂರ್ತಿಗಳು ಮತ್ತು ಶಿಲ್ಪಗಳಲ್ಲಿ ಮತ್ತು ದೇವಾಲಯದ ಬಾಗಿಲು, ನವರಂಗ, ಕೀರ್ತಿ ಮುಖ, ಪ್ರತ್ಯೇಕ ಮೂರ್ತಿಗಳನ್ನು ಹಾಗೂ ಅವುಗಳ ಪೀಠಗಳನ್ನು ಜೋಡಿಸುವಾಗ ಕೆಲವು ಮುಖ್ಯವಾದ ಖನಿಜ ವಸ್ತುಗಳುನ್ನು ಮಿಶ್ರಣ ಮಾಡಿಕೊಂಡು ಅದರ ಜಿಗುಟಾದ ಮೇಣದಂತಹ ವಸ್ತುವನ್ನು ರಾಳದಿಂದ ಕೂಡಿದ ಸಾಮಗ್ರಿಯನ್ನು ಶಿಲಾಟಂಕದಲ್ಲಿ ಬಳಸಿ ಟಂಕ ಮಾಡಲಾಗುತ್ತದೆ. ಕೆಲವು ದೊಡ್ಡ ದೊಡ್ಡ ವಾಸ್ತುದೇವಾಲಯಗಳ ಜೋಡಣೆಗಳಲ್ಲಿ ಕಬ್ಬಿಣದ ಸಲಾಕೆಯನ್ನು ಶಿಲೆಯಲ್ಲಿ ರಂಧ್ರ ಕೊರೆದು ಜೋಡಿಸುವ ಕಾರ್ಯವನ್ನು ಮಾಡಲಾಗುತ್ತದೆ. ಮತ್ತೆ ಕೆಲವೆಡೆ ಕಬ್ಬಿಣದ ಸಲಾಕೆಯ ಜೋಡಣೆ ಗಟ್ಟಿಯಾಗಲು ಸೀಸದ ಲೋಹವನ್ನು ಕೂಡ ಕಾಯಿಸಿ ಹೊಯ್ಯಲಾಗುತ್ತದೆ. ಕೆಲವು ಸಣ್ಣಪುಟ್ಟ ವಿಗ್ರಹಗಳು, ಬಾಗಿಲುಗಳಲ್ಲಿ ಕಬ್ಬಿಣದ ನಟ್ಟು ಬೋಲ್ಟ್‌ಗಳನ್ನು ಅಳವಡಿಸಲಾಗುತ್ತದೆ.

### ೪.೧.೫. ಗಾರೆ-ಗಚ್ಚು(ಸಿಮೆಂಟ್, ಪಿ.ಓ.ಪಿ.) ಮಾಧ್ಯಮದ ಸಾಂಪ್ರದಾಯಿಕ ಶಿಲ್ಪಗಳು

ಶಿಲ್ಪಗಳನ್ನು ರೂಪಿಸುವಲ್ಲಿ ಗಾರೆ-ಗಚ್ಚಿನ ಬಳಕೆಯ ಮಾಧ್ಯಮವೂ ಒಂದು. ಇದಲ್ಲದೇ ಶಿಲೆ, ಮರ, ಲೋಹ, ದಂತ, ಜೇಡಿಮಣ್ಣು ಮೊದಲಾದವುಗಳನ್ನು ಸಹ ಬಳಸಿಕೊಳ್ಳಬಹುದು. ಭಾರತೀಯ ದೇವಾಲಯಗಳ ವಾಸ್ತು-ಶಿಲ್ಪ ನಿರ್ಮಾಣದಲ್ಲಿ ಶಿಲೆಯ ಬಳಕೆಯೇ ಹೆಚ್ಚು. ಗಾರೆ-ಗಚ್ಚಿನ ಶಿಲ್ಪಗಳ(Stucco Figures)ನ್ನು ನಿರ್ಮಿಸಲು ಸುಣ್ಣ, ಮರಳು ಸರಿಗೆಗಳಿಂದ ಮಾಡಿದ ಮಿಶ್ರಣವನ್ನು ತಯಾರಿಸಿಕೊಳ್ಳಬೇಕಾಗುತ್ತದೆ. ಈ ರೀತಿಯ ಮಿಶ್ರಣಗಳ ಅಳತೆ, ಪ್ರಮಾಣಗಳಿಗೆ ಸಂಬಂಧಪಟ್ಟಂತೆ ಸಂಸ್ಕೃತದಲ್ಲಿನ ಆಗಮಗಳು, ಶಿಲ್ಪಶಾಸ್ತ್ರ ಕೃತಿಗಳು ಮಾಹಿತಿಗಳನ್ನು(ಉಲ್ಲೇಖಗಳನ್ನು) ನೀಡಿವೆ. 'ಕಾಮಿಕಾಗಮ', 'ಹರಿಭಕ್ತವಿಲಾಸ' ಮೊದಲಾದ ಕೃತಿಗಳಲ್ಲಿ ಗಾರೆ-ಗಚ್ಚಿನ ಬಗ್ಗೆ ಮಾಹಿತಿಗಳು ಲಭ್ಯ. ಕಾಶ್ಯಪ'ಶಿಲ್ಪ'ದಂಥ ಕೃತಿಯಲ್ಲಿರುವಂತೆ ಗಚ್ಚಿನ ಶಿಲ್ಪಗಳ ನಿರ್ಮಾಣ ಕಲೆಯ ನೈಪುಣ್ಯತೆಯ ಅಂಶಗಳು(techniques) ಬೇರೆ ಇನ್ನಾವುದೇ ಕೃತಿಯಲ್ಲೂ ದೊರೆಯಲಾರದಷ್ಟು ವಿಪುಲವಾಗಿದೆ. ನಮ್ಮಲ್ಲಿ ದೊರೆಯುವ ಬಹುಪಾಲು ಶಿಲ್ಪಶಾಸ್ತ್ರ ಕೃತಿಗಳು ಅಥವಾ ಇನ್ನಾವುದೇ ಧಾರ್ಮಿಕ ಆಕರಗಳು ಮೂರ್ತಿಶಿಲ್ಪ(ಶಿಲೆಯ ವಿಗ್ರಹ)ಗಳಿಗೆ ಹೆಚ್ಚು ಸಂಬಂಧಿಸಿವೆ. ಆದರೂ ಇವುಗಳಲ್ಲಿ ದೊರೆಯುವ ವಿಗ್ರಹಗಳ ನಿರ್ಮಾಣದ ಮಾನ, ಪ್ರಮಾಣ, ಉನ್ಮಾನ, ಪರಿಮಾಣ, ಉಪಮಾನ, ಲಂಬಮಾನ, ಮೊದಲಾದ ಲಕ್ಷಣಗಳನ್ನು ಗಾರೆ-ಗಚ್ಚು ಶಿಲ್ಪಗಳ ನಿರ್ಮಾಣದಲ್ಲೂ ಅಭಿವ್ಯಕ್ತಗೊಂಡಿರುವುದನ್ನು ಗಮನಿಸಬಹುದು. ನಿರ್ದಿಷ್ಟ ದೇವ-ದೇವತೆಯರಿಗೆ ಅಥವಾ ಇನ್ನಾವುದೇ ರೀತಿಯ ವಿಗ್ರಹಗಳಿಗೂ ಇಂತಿಷ್ಟೇ ಅಳತೆ-ಅಲಂಕಾರಗಳು ಇರಬೇಕು ಎಂಬ ನಿಯಮಗಳಿವೆ. ಭಾರತದಲ್ಲಿ ಗಾರೆ-ಗಚ್ಚು ಶಿಲ್ಪಕಲೆಯು ವಿಪುಲವಾಗಿ ಹರಡಿದೆಯಾದರೂ ದಕ್ಷಿಣದಲ್ಲಿ ವಿಶೇಷವಾಗಿ, ವ್ಯಾಪಕವಾಗಿ ಹರಡಿದೆ. ದಕ್ಷಿಣ ಭಾರತದ ದೇವಾಲಯಗಳ ಶಿಖರ ಹಾಗೂ ಗೋಪುರಗಳಲ್ಲಿ ಈ ರೀತಿಯ ಶಿಲ್ಪಗಳ ವೈಶಿಷ್ಟ್ಯತೆಯನ್ನು ವಿದ್ವಾಂಸರು ಗುರುತಿಸುತ್ತಾರೆ. ಇದಕ್ಕೆ ದ್ರಾವಿಡ ಶೈಲಿಯ ನಿರ್ಮಾಣ ಸ್ವರೂಪವೇ ಕಾರಣ ಎನ್ನಲಾಗಿದೆ. ಇಲ್ಲಿ ಪಾಕ್ಚಾರಿತ್ರಿಕ ಕಾಲದ ಮಣ್ಣಿನ ಮೂರ್ತಿಗಳಿಂದ ಆರಂಭವಾಗಿ ಶಿಲೆಗಳವರೆಗೆ ಹಾಗೂ ಶಿಲೆಯಿಂದ ಗಾರೆಗಚ್ಚಿನವರೆಗೆ ಹೇಗೆ ಶಿಲ್ಪಶೈಲಿ ಬೆಳೆಯಿತು ಎಂಬುದನ್ನು ಗಮನಿಸುವುದು ಸಹ ಮುಖ್ಯವಾಗಿರುತ್ತದೆ.[೨೩]

ಕರ್ನಾಟಕದ ಸಂದರ್ಭದಲ್ಲೂ ಪಾಕ್ಚಾರಿತ್ರಿಕ ಕಾಲದಿಂದ ಹಿಡಿದು ಮೈಸೂರು ಒಡೆಯರ ಕಾಲದವರೆಗೂ ಶಿಲ್ಪಕಲೆಯ ವಿವಿಧ ಹಂತಗಳನ್ನು ಗುರುತಿಸಬಹುದು. ಆರಂಭದಿಂದ ಶಾತವಾಹನ ಕಾಲದವರೆಗೂ ಹಲವು ರೀತಿಯ ಮಣ್ಣಿನ ಮೂರ್ತಿಗಳು ದೊರೆತಿವೆ. ಇಂಥ ಮೂರ್ತಿಗಳು ಹೆಚ್ಚಾಗಿ ಜೇಡಿಮಣ್ಣಿನವು, ಗಾರೆ-ಗಚ್ಚಲ್ಲ. ಕಪ್ಪಗಲ್ಲು, ಬ್ರಹ್ಮಗಿರಿ, ಪಿಕ್ಲಿಹಾಳ್, ಸಂಗನಕಲ್ಲು, ತೆಕ್ಕಲ ಕೋಟೆ, ಹರವಗೇರಿ, ಬೋರ್ಗಿ ಮೊದಲಾದ ಕಡೆಗಳಲ್ಲಿ ನಡೆಸಿದ ಉತ್ಖನನಗಳಲ್ಲಿ ಪ್ರಾಣಿ-ಪಕ್ಷಿ, ಮಾನವ ಮೃಣ್ಮೂರ್ತಿಗಳು ದೊರೆತಿವೆ. ಇವುಗಳನ್ನು ಹಸಿಮಣ್ಣಿನಿಂದ ತಯಾರಿಸಿ, ಆ ನಂತರ ಆವುಗೆಯಲ್ಲಿ ಸುಟ್ಟು ಗಟ್ಟಿಗೊಳಿಸಲಾಗುತ್ತಿತ್ತು. ಇವುಗಳಲ್ಲಿನ ಕಲಾನೈಪುಣ್ಯತೆ ಗಮನ ಸೆಳೆಯುವಂಥದ್ದು.

---

೨೩. ಪಿ.ಆರ್. ತಿಪ್ಪೇಸ್ವಾಮಿ(ಪ್ರಸಂ.): ಶಿಲ್ಪಕಲಾ ಪ್ರಪಂಚ, ಪು-೪೪೭

ಆದರೆ ಉತ್ತರ ಭಾರತಕ್ಕೆ ಹೋಲಿಸಿದರೆ ದಕ್ಷಿಣದಲ್ಲಿ ದೊರೆತ ಇಂಥ ಮೂರ್ತಿಗಳು ಕಡಿಮೆ ಎನಿಸುತ್ತವೆ. ನವ ಮತ್ತು ಬೃಹತ್ ಶಿಲಾಯುಗಗಳಲ್ಲಿ ಶಿಲೆಯನ್ನು ಆರಂಭದ ದೆಸೆಯಲ್ಲಿ ಶಿಲ್ಪ ನಿರ್ಮಾಣಕ್ಕೆ ಬಳಸಲಾಗಿದೆ. ಆದರೆ ಈ ಕಾಲದಲ್ಲೂ ಅಂಥ ವಿಶೇಷವಾದ ಗಾರೆ-ಗಚ್ಚು ಶಿಲ್ಪಗಳು ಕಂಡುಬರುವುದಿಲ್ಲ.[೨೪]

## ೪.೨. ಕಲಾವಿನ್ಯಾಸದ ವೈಶಿಷ್ಟ್ಯ

ಕಲೆಯು ದೇಶ, ಕಾಲ, ಭಾಷೆ, ಧರ್ಮಗಳನ್ನು ಒಳಗೊಂಡಂತೆ ಅನೇಕ ರೀತಿಯಲ್ಲಿ ಬದಲಾವಣೆಯನ್ನು ಕಾಣುತ್ತಾ ಬಂದಿದೆ. ರಾಜಾಡಳಿತ ಮಾಡುತ್ತಿದ್ದ ರಾಜರು ತಮ್ಮ ಧರ್ಮಗಳನ್ನು ಪ್ರಚಾರ ಮಾಡಲು ಮತ್ತು ತಮ್ಮ ಆಡಳಿತದ ನೆನಪಿಗಾಗಿ ಶಿಲಾಶಾಸನಗಳು, ದೇವಾಲಯಗಳ ಗೋಪುರಗಳು ಅಲ್ಲದೇ ವಿವಿಧ ರೀತಿಯ ಅರಮನೆ, ಗುರುಮನೆ, ಮಠ ಮಂದಿರಗಳನ್ನು ನಿರ್ಮಿಸುವಲ್ಲಿ ಅನೇಕ ವಿಧವಾದ ಶಿಲೆ, ಲೋಹ, ಮರ, ಗಾರೆ(ಸಿಮೆಂಟ್)ಗಳಿಂದ ಬೃಹತ್ತಾಕಾರದ ಕಲಾಕೃತಿಗಳನ್ನು ಸಾವಿರಾರು ಶಿಲ್ಪಿಗಳನ್ನು ಬಳಕೆ ಮಾಡಿಕೊಂಡು ಕಲಾಸಂಸ್ಕೃತಿಯ ಕಾಣಿಕೆಯನ್ನು ನೀಡಿದ್ದಾರೆ. ಅನೇಕ ಶಿಲ್ಪಿಗಳ ಅವಿರತವಾದ ಪ್ರಯತ್ನದಿಂದ ನಮ್ಮ ನಾಡಿನಲ್ಲಿ ರಥಶಿಲ್ಪ, ವಾಸ್ತುಶಿಲ್ಪ ಮತ್ತು ಲೋಹಶಿಲ್ಪಗಳು ಇಂದಿಗೂ ಪ್ರಾಚೀನ ಪರಂಪರೆಯಾಗಿ ಕಂಡುಬರುತ್ತವೆ. ಇಂತಹ ಸಾಲಿನಲ್ಲಿ ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲೆ ಮತ್ತು ಶಿಲ್ಪ ಕಲಾವಿದರು ದೇಶ ವಿದೇಶಗಳಲ್ಲಿ ತಮ್ಮ ಕಲಾಕೃತಿಗಳನ್ನು ನಿರ್ಮಿಸಿ ಮುಂಚೂಣಿಯಲ್ಲಿದ್ದಾರೆ. ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ಅನೇಕ ರಾಜರು ಆಳಿದ್ದಾರೆ.

ಕಲ್ಯಾಣದ ಚಾಲುಕ್ಯರು, ಗಂಗರು, ಗುಪ್ತರು, ಹೈದರಾಬಾದ್‌ನ ನವಾಬರು, ವಿಜಯನಗರ ಸಾಮ್ರಾಜ್ಯಶಾಹಿಗಳು, ಬಹಮನಿ ಸುಲ್ತಾನರು, ಮೌರ್ಯರು ಹಾಗೂ ಬಾದಾಮಿ ಚಾಲುಕ್ಯರು ಕೂಡ ಈ ಪ್ರದೇಶವನ್ನು ಆಳಿದ್ದಾರೆ. ಇವರ ಕಾಲದಲ್ಲಿ ಬೌದ್ಧ, ಜೈನ, ಪಾರ್ಸಿ, ಸಿಕ್ ಮತ್ತು ಇಸ್ಲಾಮಿಕ್ ಹಾಗೂ ಹಿಂದೂಧರ್ಮಗಳು ಅತ್ಯಂತ ಪ್ರಭಾವಶಾಲಿಯಾದದ್ದು ಕಂಡುಬರುತ್ತದೆ. ಈ ಎಲ್ಲ ಧರ್ಮಗಳ ಪ್ರಭಾವವು ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲೆಯಲ್ಲಿ ಕಂಡುಬರುತ್ತದೆ.

ಸಾಂಪ್ರದಾಯಿಕ ಶಿಲ್ಪಕಲಾವಿದರು ಸಮಾಜಮುಖಿಯಾಗಿ ಕಾರ್ಯ ನಿರ್ವಹಿಸುವಾಗ ಅನೇಕ ಕಲಾಕೃತಿಗಳು ಪ್ರದೇಶವಾರು ಸಂಪ್ರದಾಯವನ್ನು ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ಬೀದರ್ ಜಿಲ್ಲೆಯ ಬಿದರಿಕಲೆ, ಕಿನ್ನಾಳದ ಸಾಂಪ್ರದಾಯಿಕ ಕಲೆ, ಸುರಪುರದ ವಾಸ್ತುಶಿಲ್ಪ, ತಿಂಥಿಣಿ ಮೌನೇಶ್ವರ ದೇವಾಲಯವು, ಕಲಬುರ್ಗಿಯ ಖಾಜಾಬಂದಿ ನವಾಜ್, ಹಿಂದೂ ಮುಸ್ಲಿಂ ಧರ್ಮಗಳ ಭಾವೈಕ್ಯತೆಯನ್ನು ಬಿಂಬಿಸುತ್ತದೆ. ಬಸವಕಲ್ಯಾಣದ ೬೪ ಪುರಾತನರ ಮಹಾಮನೆ, ವಚನ ಸಾಹಿತ್ಯ, ಸೂಫಿ ಸಂತರು, ಶರಣರು, ಪವಾಡ ಪುರುಷರು, ಇವರೆಲ್ಲರ ಧಾರ್ಮಿಕ ಪ್ರಭಾವ ಈ ನಾಡಿನ ಸಾಂಪ್ರದಾಯಿಕ ಶಿಲ್ಪಕಲಾವಿದರಲ್ಲಿ ಮತ್ತು ಅವರ ಕಲೆಗಳಲ್ಲಿ ಕಂಡುಬರುವುದು ವೈಶಿಷ್ಟ್ಯ ಪೂರ್ಣವಾಗಿದೆ.

---

೨೪. ಪಿ.ಆರ್. ತಿಪ್ಪೇಸ್ವಾಮಿ(ಪ್ರ.ಸಂ.): ಶಿಲ್ಪಕಲಾ ಪ್ರಪಂಚ, ಪು-೪೪೮

‘ಶಿಲ್ಪ ಎಂಬ ಪದವನ್ನು ಹಲವು ಬಗೆಯ ಕಸಬುಗಾರಿಕೆಗಳಿಗೆ, ವಿದ್ಯೆಗಳಿಗೆ ಬಳಸುತ್ತ ಬಂದಿದ್ದಾರೆ. ಇದನ್ನು ನಾವು ಒಂದು ನಿರ್ದಿಷ್ಟವಾದ ಅರ್ಥದಲ್ಲಿಯೇ ಬಳಸಬೇಕಾಗಿದೆ. ಯಾವುದೇ ಒಂದು ವಾಸ್ತವಿಕ ಇಲ್ಲವೆ ಕಾಲ್ಪನಿಕ ಆಕೃತಿಯನ್ನು ಹೊಂದುವಿಕೆ ಇಲ್ಲವೆ ಕಾಲ್ಪನಿಕ ಆಕೃತಿಯನ್ನು ಒಂದು ಮಾಧ್ಯಮದ ಮೂಲಕ ರೂಪಿಸುವ ಕಲೆಗೆ ಶಿಲ್ಪ ಎಂಬ ಶಬ್ದವನ್ನು ಬಳಸಬಹುದು. ಈ ದೃಷ್ಟಿಯಿಂದ ಮೂರ್ತಿಶಿಲ್ಪ ಎಂಬ ಮಾತು ಅದೇ ಅರ್ಥವನ್ನು ಕೊಡು ತ್ತಾದರೂ, “ಮೂರ್ತಿ” ಎಂಬ ಪದವನ್ನು ನಾವು ದೇವತಾವಿಗ್ರಹಗಳಿಗೆ ಪರ್ಯಾಯವಾಗಿ ಬಳಸುತ್ತೇವೆ. ಆದರೆ “ಶಿಲ್ಪ” ದೇವತೆಗಳ ವಿಗ್ರಹಗಳನ್ನು ರೂಪಿಸುವ ಒಂದು ಕಲೆಯೇ ಆಗಬೇಕಿಲ್ಲ ಅಥವಾ ಅದು ಪ್ರತಿಮೆ (ಪ್ರತಿರೂಪ) ಎಂಬ ಅರ್ಥದಲ್ಲಿಯೂ ಇರಬೇಕಾಗಿಲ್ಲ. ಅಸ್ತಿತ್ವದಲ್ಲಿರುವ ಅಥವಾ ಇಲ್ಲದೇ ಇರುವ ಜೀವಂತ ಇಲ್ಲವೇ ಜಡವಸ್ತುಗಳ ಬಾಹ್ಯ ಆಕೃತಿಯನ್ನು ಸೂಚಿಸುವುದು, ಅದರ ಒಂದು ರೀತಿ. ಆ ಕೆಲಸವನ್ನು ಅದು ಉದ್ದ, ಅಗಲ, ದಪ್ಪಗಳೆಂಬ ಮೂರು ಮಾನಗಳುಳ್ಳ ನಿರ್ಮಾಣದ ಮೂಲಕ ತೋರಿಸಬಲ್ಲದು. ಈ ದೃಷ್ಟಿಯಲ್ಲಿ ಅದು ಚಿತ್ರಕಲೆಗಿಂತಲೂ ಬೇರೆಯಾದದ್ದು. ಚಿತ್ರಕಲೆ, ಉದ್ದ ಮತ್ತು ಅಗಲಗಳೆಂಬ ಎರಡೇ ಎರಡು ಮಾನಗಳಿದ್ದು, ಅದು ಒಂದೇ ತಳದ ಮೇಲೆ ಆಕೃತಿಯನ್ನು ಬರೆದು ತೋರಿಸುವ ಕಲೆಯಾಗಿದೆ. ಶಿಲ್ಪಕ್ಕೆ “ದಪ್ಪ” ಎಂಬ ಮೂರನೇ ಅಂಗವಾಗಿ ಬೇಕಿಲ್ಲ. ಹೀಗಾಗಿ “ಆಕಾರಿಕೆ”, “ಆಕೃತಿಕೆ” ಎಂಬ ಪದಗಳನ್ನು ಶಿಲ್ಪಕ್ಕೆ ಬಳಸುವುದು ಸಾಧ್ಯ. ಶಿಲ್ಪಿಯಾದವನು ಮೂರು ಮಾನಗಳುಳ್ಳ ಒಂದು ನಿರ್ಮಾಣವನ್ನು ಅನೇಕ ಬಗೆಯ ವಸ್ತುಗಳಿಂದ ರೂಪಿಸಬಹುದು. ಮೇಣ, ಜೇಡಿಮಣ್ಣಿನಂತಹ ವಸ್ತುಗಳನ್ನು ಸ್ವಲ್ಪ ಸ್ವಲ್ಪವಾಗಿ ಒಂದಕ್ಕೊಂದು ಸೇರಿಸಿ, ತಿದ್ದಿ ತೀಡಿ, ಅದಕ್ಕೆ ಒಂದುಗೂಡಿದ ಆಕೃತಿ ಬರುವಂತೆ ಮಾಡುತ್ತಾನೆ. ಈ ಕೆಲಸವನ್ನು ನಾವು “ರೂಪಣಿ”, “ಆಕೃತಿಕೆ” ಎಂಬ ಪದಗಳಿಂದ ಕರೆಯಬಹುದು’.[೨೫]

ಶಿಲ್ಪಿಯು ತಾನು ಕಲ್ಲು ಅಥವಾ ಇತರ ಮಾಧ್ಯಮದಲ್ಲಿ ಕೆತ್ತಬೇಕಾಗಿರುವ ಅಲಂಕಾರವನ್ನು ಅಥವಾ ಪ್ರತಿಮೆಯನ್ನು ಮೊದಲಿಗೆ ರೇಖಾಚಿತ್ರವಾಗಿ ರೂಪಿಸಿಕೊಳ್ಳಬೇಕು. ನಂತರವೇ ಅದನ್ನು ಇತರ ಮಾಧ್ಯಮದಲ್ಲಿ ರೂಪಿಸಬೇಕಾಗುತ್ತದೆ. ಆದ್ದರಿಂದ ಶಿಲ್ಪಿಯಾಗಬಯಸುವವನು ಮೊದಲಿಗೆ ರೇಖಾಚಿತ್ರಕಲೆಯಲ್ಲಿ ಅನಭವ ಗಳಿಸಬೇಕಾದುದು ಅನಿವಾರ್ಯ.

ಭಾರತೀಯ ಶಿಲ್ಪಿಯು ಬದುಕನ್ನು ಹೆಚ್ಚು ಕಾವ್ಯಮಯವಾಗಿ ಕಂಡಿದ್ದಾನೆ. ಆದ್ದರಿಂದ ಬದುಕಿನ ಸತ್ಯಾಂಶವನ್ನು ಪ್ರತಿಪಾದಿಸಲು ಪ್ರಯತ್ನಿಸಿದ್ದಾನೆ. ಪಂಚೇಂದ್ರಿಯಗಳಿಂದ ನೋಡಿ, ಕೇಳಿ, ಉಂಡು, ಸ್ಪರ್ಶಿಸಿದ್ದನ್ನು ಜೀವನದ ಸತ್ಯವೆಂದು ಶಿಲ್ಪಿಯು ಅಂಗೀಕರಿಸಲಿಲ್ಲ. ಅವನ್ನು ವಾಸ್ತವ ಸಂಗತಿಗಳೆಂದು ಗುರ್ತಿಸಿದ್ದರೂ ಅವರು ಅಂತರಾತ್ಮ ಮತ್ತು ಮನಸಾಕ್ಷಿಯನ್ನು ಬದುಕಿನ ಸತ್ಯವೆಂದು ನಂಬಿದ್ದರು. ಇದರಿಂದ ನಿಸರ್ಗ ಸೌಂದರ್ಯವನ್ನು ಕಂಡಾಗ ಮನದಲ್ಲುಂಟಾದ ಭಾವನೆಗಳನ್ನು ಕಲೆಯಲ್ಲಿ ಬಿಂಬಿಸಲು ಪ್ರಯತ್ನಿಸಿದರು. ಕಲ್ಪನೆಯೆಂಬ ಸಹಜ ಗುಣದೊಂದಿಗೆ ಪ್ರತಿಭಾ ಪ್ರಸನ್ನ ಭಾವನೆಯು

---

೨೫. ಡಾ. ಶಿವರಾಮ ಕಾರಂತ: ಭಾರತೇಯ ಶಿಲ್ಪ, ಪು-೧

ಸೇರಿ ಉನ್ನತವಾಗಿ ಬೆಳೆದು, ಆದರ್ಶ ಮತ್ತು ದೈವೀಕ ಸೌಂದರ್ಯಗಳನ್ನು ಮೈಗೂಡಿಸಿಕೊಂಡು ಅಭಿವ್ಯಕ್ತಗೊಡಾಗ ಪ್ರಭಾವಶಾಲಿಯಾದ ಕಲಾಮಾರ್ಗವನ್ನು ನಿರ್ಮಿಸುತ್ತದೆ. ಆಗ ಸಂಕೇತಗಳು, ಭಾವಗಳು, ಪ್ರಭಾವಗಳು, ಆದರ್ಶಗಳು ಎಲ್ಲಾ ಅದರಲ್ಲಿ ಚೊಕ್ಕ ಕಲೆಯೇ ಆಗಿರುತ್ತದೆ.

ದೇವಮೂರ್ತಿಗಳನ್ನು, ಮಾನುಷ ಪ್ರತಿಮೆಗಳನ್ನು, ಪ್ರಾಣಿಗಳನ್ನು, ಪಕ್ಷಿಗಳನ್ನು, ಎಲೆ–ಬಳ್ಳಿ–ಹೂಗಳನ್ನು ಶಿಲ್ಪಕಲೆಯಲ್ಲಿಯೇ ಚಿತ್ರಿಸುವುದು ಮೂರ್ತಿ ನಿರ್ಮಾಣದಷ್ಟೇ ಅವಶ್ಯಕ. ಆದರೆ ಭಾರತೀಯ ಶಿಲ್ಪಿ ಇವ್ಯಾವನ್ನೂ ಪ್ರತಿಕೃತಿಗಳನ್ನಾಗಿ ರೂಪಿಸದೆ ಇವಕ್ಕೆ ಹೊಸ ಆಯಾಮವನ್ನೇ ತಂದುಕೊಡುತ್ತಾನೆ. ಬಳ್ಳಿಗಳಲ್ಲಿ ಬಳುಕು, ಎಲೆಗಳಲ್ಲಿ ಕೋಮಲತೆ, ಹೂಗಳಲ್ಲಿ ಸೌಂದರ್ಯ, ಚಿತ್ರದಲ್ಲಿ ಹೊಳಪು ಮುಂತಾದ ಅನೇಕವನ್ನು ಸೇರಿಸುತ್ತಾನೆ. ಈ ಕೆಲಸದಲ್ಲಿ ಅವನ ಕಲ್ಪನಾಶಕ್ತಿ, ಕುಶಲತೆ ಕಂಡುಬರುತ್ತದೆ. ಇಂತಹ ಕಲ್ಪನಾಮಯವು, ನೈಪುಣ್ಯದ ಫಲವೂ ಆದ ಇವನ್ನು ಸಾಧಾರಣವಾಗಿ ನಕಾಸೆ ಅಥವಾ ಅಲಂಕಾರ ಎನ್ನುತ್ತಾರೆ.

ಪ್ರತಿಮೆಗಳಲ್ಲಿ ಕಂಡುಬರುವ ವಸ್ತ್ರಾಲಂಕಾರ, ಪ್ರಾಣಿಗಳು, ಆಭರಣ, ಆಯುಧಗಳು, ಕಿರೀಟಗಳು ಇವುಗಳಲ್ಲಿ ಆಲಂಕಾರಿಕ ನಕಾಶೆಗಳನ್ನು ಬಳಸಬೇಕಾಗಿರುತ್ತದೆ. ಈ ನಕಾಶೆಯಲ್ಲಿ ಒಂಬತ್ತು ಬಗೆ–

೧. ಪ್ರಭಾವಳಿ
೨. ಕುದುರೆಬಾಲದನಕಾಶೆ
೩. ಹಂಸಬಾಲದನಕಾಶೆ
೪. ಕೂಡುನಕಾಶೆ
೫. ಮಧ್ಯನಕಾಶೆ
೬. ಮಿಶ್ರನಕಾಶೆ
೭. ಬಳ್ಳಿನಕಾಶೆ
೮. ಅಂಚುನಕಾಶೆ
೯. ಗುಂಡುನಕಾಶೆ
೧೦. ತುಂಬುನಕಾಶೆ

೧. **ಪ್ರಭಾವಳಿ:** ದೇವಮೂರ್ತಿಯ ಹಿಂಭಾಗದಲ್ಲಿ ರೂಪಿಸುವ ಇದನ್ನು ತೋರಣವಾಗಿಯೂ ಪರಿಗಣಿಸಲಾಗುತ್ತದೆ. ಇದರಲ್ಲಿ ಪ್ರಮುಖವಾದುದು ಕೀರ್ತಿಮುಖ ಎಂದು ಕರೆಯಲ್ಪಡುವ ಸಿಂಹದ ಮುಖ ಮತ್ತು ಮಕರ ಪಕ್ಷಿಗಳು. ಇತರ ನಕಾಶೆ ಅಲಂಕಾರಗಳು. ಮಕರ ಪಕ್ಷಿಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಬೇಕಾಗಿದೆ. ಆದರೆ ಕೀರ್ತಿಮುಖವನ್ನು ತಿಳಿದುಕೊಳ್ಳಲು ಇದೇ ಸಂದರ್ಭ.

ಕೀರ್ತಿಮುಖವು ಸಿಂಹದ ತಲೆಯುಳ್ಳ ಪರಾಕ್ರಮಿಯಾದ ರಾಕ್ಷಸ. ಶಿವನು ಈತನನ್ನು ಬಹು ಅಹಂಕಾರಿಯಾಗಿದ್ದು ಮೂರು ಲೋಕಗಳನ್ನು ಗೆದ್ದಿದ್ದ ಜಲಂಧರನೆಂಬ ಗೃಹಸ್ಥನ ವಧೆ ಮಾಡುವಾಗ ಸೃಷ್ಟಿ ಮಾಡಿದನು(ಶಿವಪುರಾಣ, ಶತರುದ್ರ ಸಂಹಿತೆ, ೧೫:೧೭). ಇವನ ಚಟ ಸದಾ ತಿನ್ನುತ್ತಿರುವುದು. ಇವನು ಶಿವನ ಜಟೆಗಳಿಂದ ಹುಟ್ಟಿದ ಒಬ್ಬ ಶಿವಗಣವೆಂದು ಪದ್ಮಪುರಾಣ(ಉ. ೫೦) ಹೇಳುತ್ತದೆ. ಇವನಿಗೆ ದೊರೆಯಬೇಕಾಗಿದ್ದ ಆಹಾರವು ದೊರೆಯದಿದ್ದಾಗ ಶಿವನ ಅಪ್ಪಣೆಯಂತೆ ತನ್ನ ಕೈಕಾಲುಗಳನ್ನು ಮೈಯನ್ನು ತಾನೇ ತಿಂದುಕೊಂಡನು. ಕೊನೆಗೆ ಅವನ ಮುಖ ಮಾತ್ರವೇ ಉಳಿದು ಕೊಂಡಿತು. ಶಿವನು ಇವನ ಆದೇಶಪಾಲನೆಯನ್ನು ಮೆಚ್ಚಿ ಕೀರ್ತಿಮುಖ ಎಂದು ಕರೆದನು.

ಇದು ಯಶಸ್ಸಿನ ಮುಖವಾದ್ದರಿಂದ ಇದನ್ನು ಎಲ್ಲರೂ ಪೂಜಿಸಬೇಕೆಂದು ಆಶಿಸಿದನು. ಇದು ಸಕಲ ದೇವರಿಗೂ ಗ್ರಾಹ್ಯವಾಗಿರುವ ಅಲಂಕಾರವಾಗಿದೆ. ಇದರ ದರ್ಶನದಿಂದಲೇ ಭಕ್ತರಿಗೆ ಶುಭವಾಗುತ್ತದೆ.

ಶಿಲ್ಪದಲ್ಲಿ ಇದನ್ನು ಒಂದು ಕಾಲಮಾನಕ್ಕೆ ಮಾಡಬೇಕೆಂದು ಹೇಳಲಾಗಿದೆ. ಎಂದರೆ ಇದು ಚೌಕದಲ್ಲಿರುತ್ತದೆ. ಇದಕ್ಕೆ ಕೆಳದವಡೆ ಇರುವುದಿಲ್ಲ. ನಾಲಿಗೆ ಮಾತ್ರವೇ ಇರುತ್ತದೆ. ಇದು ಪ್ರಭಾವಳಿಯ ತುದಿಭಾಗದ ಮಧ್ಯದಲ್ಲಿರುತ್ತದೆ. ಕಟಿಸೂತ್ರದ ಕೆಳಗೆ ಮೇಲ್ಗಡೆ ಮುಂಭಾಗದಲ್ಲಿ ದೇವತೆಗಳಿಗೆ ಅಲಂಕಾರವಾಗಿ ಈ ಮುಖವನ್ನು ತೂಗಿಹಾಕುವುದುಂಟು. ಗೋಪುರದ ಮಹಾನಾಸಿಯಲ್ಲೂ ಕೀರ್ತಿಮುಖದೊಂದಿಗೆ ಅಲಂಕರಣವನ್ನು ರೂಪಿಸುತ್ತಾರೆ. ಎಲೆಯ ಆಕಾರದಲ್ಲಿ, ಜ್ವಾಲೆಗಳ ಆಕಾರದಲ್ಲಿ, ವೃತ್ತಾಕಾರದ ಜ್ವಾಲೆಗಳ ಆಕಾರದಲ್ಲಿ ಹಲವು ಬಗೆಯ ನಕಾಶೆಗಳು ಇವೆ.

೨. **ಕುದುರೆಬಾಲದ ನಕಾಶೆ:** ಕುದುರೆ ಬಾಲದ ರೀತಿಯ ಆಕಾರವಿರುವ ನಕಾಶೆ. ಇದು ಒಂದು ಕುಚ್ಚು ಕೆಳಗೆ ಜೋತು ಬಿದ್ದಿರುವಂತೆ ಕಾಣಿಸುವುದು. ಇದು ದಪ್ಪವಾದ ಆಕಾರದಲ್ಲಾಗಲಿ ಸಣ್ಣಗೆ ಉದ್ದವಾಗಿರುವಂತಾಗಲಿ ಮಾಡಬಹುದು. ನವಿಲು, ಮಕರ ಮೊದಲಾದವುಗಳ ಬಾಲದ ನೇತಾಡುವ ಭಾಗವನ್ನು ಹೀಗೆಯೇ ಚಿತ್ರಿಸಬೇಕು.

೩. **ಹಂಸಬಾಲದನಕಾಶೆ:** ಕಲ್ಪನೆಯ ಹಂಸದ ಬಾಲವು ಚಿತ್ರವಿಚಿತ್ರವಾದ ಬಳ್ಳಿಗಳನ್ನು ಹಬ್ಬಿಸಿಕೊಂಡು ಎಲೆಗಳನ್ನು ಕೂಡಿಸಿಕೊಂಡು ಸುಂದರವಾಗಿರುತ್ತವೆ. ಇದನ್ನು ಮಕರದ ಬಾಲದಲ್ಲಿ, ಕಂಬಗಳ ಕಪೋತಗಳಲ್ಲಿ, ನವಿಲಿನ ಬಾಲದಲ್ಲಿ, ಶಂಖದ ಕೊನೆಯಲ್ಲಿ ಇಂತಹ ಅಲಂಕಾರವನ್ನು ಅಳವಡಿಸಬಹುದು. ಇದರಲ್ಲಿ ಹಲವು ಬಗೆಗಳಿರುವುದನ್ನು ಗಮನಿಸಿ.

೪. **ಕೂಡುನಕಾಶೆ:** ಎರಡು ಬೇರೆ ಬೇರೆ ಸಮತಲಗಳು ಕೂಡುವ ಸ್ಥಳದಲ್ಲಿ ರೂಪಿಸಬಹುದಾದ ನಕಾಶೆ ಇದು. ಇದರಲ್ಲಿ ಬಳ್ಳಿ, ಎಲೆ ಹರಡಿಕೊಂಡು ಚೆನ್ನಾಗಿರುತ್ತದೆ. ಈ ನಕಾಶೆಯ ಅಂದವು ಕೂಡುಸೀಳನ್ನು ಮರೆಯಾಗಿಸುತ್ತದೆ. ಕಪೋತ ಅಥವಾ ಬೇರೆಬೇರೆ ಕಡೆಯಿಂದ ನಿರ್ಮಿತವಾಗಿ ಎರಡು ಶಿಲಾಭಾಗಗಳು ಕೂಡುವ ಸ್ಥಳದಲ್ಲಿ ಕೂಡುಸೀಳನ್ನು ಮರೆಮಾಡುತ್ತದೆ. ಶಿಲ್ಪಶಾಸ್ತ್ರದಲ್ಲಿ ಇದನ್ನು ಕರ್ಣಪಾಲಿಕಾ ಎಂದು ಕರೆಯುತ್ತಾರೆ.

೫. **ಮಧ್ಯನಕಾಶೆ:** ಕೂಡು ನಕಾಶೆಯಂತೆಯೇ ಕಟ್ಟಡ ಮಧ್ಯದಲ್ಲಿ ಕೀರ್ತಿಮುಖವನ್ನು ರೂಪಿಸಿ ಅದರಿಂದ ಎಲೆ ಬಳ್ಳಿ ಹೂಗಳು ಹಬ್ಬಿಕೊಂಡು ಬಂದಿರುವಂತೆ ಚಿತ್ರಿಸುತ್ತಾರೆ. ವಿಮಾನ ಶಿಖರಗಳಲ್ಲಿ, ಶಿಖರಗಳ ಅಂಚು, ಪಟ್ಟಿಗಳಲ್ಲಿ, ಕಪೋತಗಳಲ್ಲಿ ಈ ರೀತಿಯ ಅಲಂಕರಣ ಮಾಡಬಹುದು.

೬. **ಮಿಶ್ರನಕಾಶೆ:** ಕುದುರೆ ಮತ್ತು ಹಂಸ ಬಾಲಗಳ ನಕಾಶೆಯನ್ನು ಬೆರೆಸಿ ರೂಪಿಸಿರುವ ನಕಾಶೆ ಇದು. ನಿಜವಾಗಿ ಹೆಚ್ಚು ಬಳಕೆಯಲ್ಲಿ ಇರುವವು ಈ ನಕಾಶೆಗಳೇ. ಅಲಂಕರಣ ಕೆಳಮುಖವಾಗಿ ಬೆಳೆದ ಕುದುರೆಬಾಲ, ಮೇಲ್ಮುಖವಾಗಿ ಬೆಳೆದ ಹಂಸದ ಬಾಲ ಬೆರೆಸಿ ಒಂದಾಗಿ ರೂಪಿಸುವ ನಕಾಶೆ, ಇವನ್ನು ಮಧ್ಯ ನಕಾಶೆಗಳನ್ನಾಗಿಯೂ ಬಳಸಿಕೊಳ್ಳಬಹುದು.

**೭. ಬಳ್ಳಿನಕಾಶೆ:** ಪಟ್ಟಿಕೆಗಳಲ್ಲಿ, ಕಂಬಗಳಲ್ಲಿ, ದ್ವಾರಬಂಧಗಳಲ್ಲಿ ಉದ್ದವಾಗಿ ಸ್ಥಳ ಸಿಕ್ಕ ಕಡೆ ಇದನ್ನು ರೂಪಿಸುತ್ತಾರೆ. ಇದರಲ್ಲಿ ಹಲವು ಬಗೆಗಳು ವಿಧಗಳು ಇವೆ. ಬಳ್ಳಿ ಎಲೆಗಳು ಹೂಗಳು ಮಿಶ್ರ ಮಾಡಿ ಅಥವಾ ಪ್ರತ್ಯೇಕವಾಗಿ ರೂಪಿಸಬಹುದು. ಕೇವಲ ಬಳ್ಳಿಗಳೇ ಇರುವಾಗ ಬಳ್ಳಿಗಳ ಸುತ್ತುಗಳ ಮಧ್ಯೆ ಹಂಸಗಳನ್ನು, ನಾಟ್ಯಶಿಲ್ಪಗಳನ್ನು, ಇತರ ದೇವಮೂರ್ತಿಗಳನ್ನು ಚಿತ್ರಿಸಬಹುದು. ಬೇಲೂರು–ಹಳೇಬೀಡು–ಸೋಮನಾಥಪುರಗಳ ಬಳ್ಳಿ, ಆನೆ, ಕುದುರೆ ಇತ್ಯಾದಿ ಅಲಂಕಾರಗಳು ವಿಶ್ವವಿಖ್ಯಾತವಾಗಿವೆ.

**೮. ಅಂಚುನಕಾಶೆ:** ವಿಮಾನಗಳಲ್ಲಿ, ಕಟ್ಟಡಗಳ ಒಳಭಾಗಗಳಲ್ಲಿ ಅಲಂಕಾರ ಮಾಡಲು ಬಳಸುವ ದೊಡ್ಡ ನಕಾಶೆ ಇದು. ಒಂದೇ ಬಳ್ಳಿಯಿಂದ ಪ್ರಾರಂಭವಾಗಿ ಮುಂದೆ ಸಾಗುತ್ತಾ ಸ್ಥಳವನ್ನು ಆವರಿಸುವ ನಕಾಶೆ. ಇದರಲ್ಲಿ ಚಲನೆ ಕಂಡುಬರುತ್ತದೆ. ಆದ್ದರಿಂದ ಇದನ್ನು ವೃದ್ಧಿ ಅಲಂಕಾರ ಎಂದು ಹೇಳುತ್ತಾರೆ. ಇದನ್ನು ಎಷ್ಟು ವ್ಯಾಪಕವನ್ನಾದರೂ ಮಾಡಬಹುದು. ಒಂದು ರೀತಿಯಲ್ಲಿ ಇವು ಅಲಂಕಾರದ ಅಂಚುಗಳು.

**೯. ಗುಂಡುನಕಾಶೆ:** ಒಂದು ವೃತ್ತದಲ್ಲಿ ಆಲಂಕಾರಿಕ ನಕಾಶೆ ಇದ್ದರೆ ಅದನ್ನು ಗುಂಡು ನಕಾಶೆ ಎನ್ನುತ್ತಾರೆ. ಇದನ್ನು ಸಿಂಹ, ಕುದುರೆ ಮೊದಲಾದವುಗಳ ತೊಡೆಗಳ ಮೇಲೂ, ಕಂಬ ಗಳ ಮೇಲೂ, ಬೋದಿಗೆಗಳ ಮೇಲೂ ರೂಪಿಸುತ್ತಾರೆ.

**೧೦. ತುಂಬುನಕಾಶೆ:** ಕಟ್ಟಡಗಳಲ್ಲಿ ಖಾಲಿಯಾಗಿರುವ ಸ್ಥಳಗಳಲ್ಲಿ ಎಲೆ, ಬಳ್ಳಿ, ಹೂಗಳನ್ನು ತುಂಬುವುದು ಅಲಂಕಾರದ ಒಂದು ಕ್ರಮ. ಇದನ್ನು ತುಂಬುನಕಾಶೆ ಎನ್ನುತ್ತಾರೆ. ದೊರೆತ ಸ್ಥಳಕ್ಕೆ ಸೂಕ್ತವಾಗುವ ಅಲಂಕಾರವನ್ನು ರೂಪಿಸುವುದು. ಲವಂಗದ ಹೂ, ತಾವರೆಗಳನ್ನು ಬಳಸುತ್ತಾರೆ. ಮೂಲೆಗಳು ಕೂಡುವ ಸ್ಥಳಗಳಲ್ಲಿ ಹಲವು ಬಗೆಯ ಹೂಮಾಲೆಗಳನ್ನು ರೂಪಿಸುವುದುಂಟು.

ಉಪರೋಕ್ತ ವರ್ಗೀಕರಣವು ಕೇವಲ ಪ್ರಾಥಮಿಕ ಹಂತದಲ್ಲಿ ಮಾತ್ರವೇ ಕಲಿಯಲು ಅನುಕೂಲವಾಗಿರುತ್ತದೆ. ನಿಜವಾದ ಅಲಂಕರಣದ ಸಂದರ್ಭದಲ್ಲಿ ಈ ವಿಭಜನೆಗಿಂತಲೂ ಅಲಂಕರಣವೇ ಮುಖ್ಯವಾದುದು. ಆದ್ದರಿಂದ ಮಿಶ್ರರೂಪಗಳೇ ಹೆಚ್ಚು ರೂಢಿಯಲ್ಲಿವೆ. ಶಿಲ್ಪದ ಎಲ್ಲಾ ವಿಭಾಗಗಳಲ್ಲೂ ಈ ಅಲಂಕರಣಗಳು ವ್ಯಾಪಕವಾಗಿವೆ. ಈ ನಕಾಶೆಗಳು ಆಲಯ ಮತ್ತು ಮೂರ್ತಿಶಿಲ್ಪಗಳ ಪ್ರಖ್ಯಾತಿಗೆ ಈ ಅಲಂಕರಣಗಳ ಕುಸುರಿ ಕೆಲಸವೇ ಪ್ರಧಾನ ಕಾರಣ ಎಂಬುದನ್ನು ನಾವು ಗುರ್ತಿಸಿದಾಗ ಅಲಂಕರಣಗಳು ಶಿಲ್ಪದಲ್ಲಿ ವಹಿಸುವ ಪ್ರಾಧಾನ್ಯತೆಯ ಮನವರಿಕೆಯಾದೀತು. ಈ ಅಲಂಕಾರಿಕ ನಕಾಶೆ ಬಹು ವ್ಯಾಪಕವಾದ ವಿಷಯ. ಇದರಲ್ಲಿ ಶಿಲ್ಪಿಯ ಕಲ್ಪನಾಸಾಮರ್ಥ್ಯಕ್ಕೆ ಬಹುವಾದ ಅವಕಾಶವಿದೆ.

ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು ಅನೇಕ ರೀತಿಯ ಶಿಲ್ಪಗಳನ್ನು ರಚನೆ ಮಾಡಿದ್ದಾರೆ. ಮಾನವಶಿಲ್ಪ, ದೇವಶಿಲ್ಪ, ಪ್ರಾಣಿ-ಪಕ್ಷಿ ಶಿಲ್ಪ ಮತ್ತು ವಸ್ತುವಿಷಯ ಶಿಲ್ಪವನ್ನು ಕೆತ್ತಿ ನಿರ್ಮಿಸುವುದರಲ್ಲಿ ಪ್ರಸಿದ್ಧರು, ದೇವದೇವಿಯರು, ಶರಣ ಶರಣೆಯರ, ಪವಾಡಪುರುಷರ,

ಕವಿ, ಕಲಾವಿದರ ಮತ್ತು ರಾಜಕೀಯ ಗಣ್ಯರ, ಹುತಾತ್ಮರ, ವೀರಯೋಧಜ, ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದವರ, ದಾಸವರೇಣ್ಯರ ಮತ್ತು ಗುರುಪರಂಪರೆಯವರ ಅಲ್ಲದೇ ಸಾಂದರ್ಭಿಕ ಆಚರಣೆ ತಕ್ಕಂತೆ ಧಾರ್ಮಿಕ ಶಿಲ್ಪಗಳನ್ನು ಮರ, ಶಿಲೆ, ಲೋಹ, ಮೃತ್ತಿಕೆ, ಗಾರೆಗಳಿಂದ ನಿರ್ಮಿಸಿರುವುದು ಕಂಡುಬರುತ್ತದೆ. ಇದುವರೆಗಿನ ವಿವರಣೆಯಿಂದ ಸ್ಪಷ್ಟವಾಗಿರುವ ಅಂಶವೆಂದರೆ ಶಿಲ್ಪವೆಂಬುದು ವೇದ ಮಂತ್ರಗಳಿಂದಲೇ ನೆರವೇರುವಂತಹುದು. ಶಿಲ್ಪಸಂಬಂಧಿ ಸಾಹಿತ್ಯವು ಅಥರ್ವ ವೇದಕ್ಕೆ ಉಪವೇದವೆಂದು ಪರಿಗಣಿತವಾಗಿದ್ದು ಅದನ್ನು ಸ್ಥಾಪತ್ಯವೇದವೆಂದು ಕರೆಯುತ್ತಾರೆ. ಆದ್ದರಿಂದ ಇದು ವೇದ ಸಂಬಂಧವನ್ನು ಬಲವಾಗಿ ಹೊಂದಿರುವ ಮತ್ತು ಯಜ್ಞಕರ್ಮಕ್ಕೆ ಸಮಾನಾಂತರವಾಗಿರುವ ಬಹು ಮುಖ್ಯವಾದ ಮತ್ತು ಯಜ್ಞಕರ್ಮದ ಸಿದ್ಧಿಗೆ ಅತ್ಯವಶ್ಯಕವಾಗಿರುವ ಕರ್ಮ. ಇದನ್ನು ವಿಜ್ಞಾನವೆಂದು ವೇದರ್ಷಿಗಳು ಪರಿಗಣಿಸಿದ್ದಾರೆ. ಪಾರಂಪರಿಕ ಪ್ರತಿಮಾಶಿಲ್ಪಕ್ಕೆ ವೇದವೇ ಮೂಲಾಧಾರ. ಅದು ವೇದಗಳಿಂದಲೇ ಪ್ರಾದುರ್ಭಾವಗೊಂಡು ವಿಕಸಿಸಿ ವರ್ಧಿಸಿದೆ. ಹೀಗೆ ಶಿಲ್ಪ ಎಂದರೆ ಮತ್ತು ಶಿಲ್ಪಕಲಾವಿದನಾಗಲು ಬೇಕಾದ ಅರ್ಹತೆಗಳು, ಶೈಲಿ, ವೈಶಿಷ್ಟ್ಯಗಳ ಕುರಿತಂತೆ ಹಲವು ವೇದ, ಶಾಸ್ತ್ರ, ಪುರಾಣ ಗ್ರಂಥಗಳಲ್ಲಿ ಮಾಹಿತಿಗಳು ಇಂದು ಲಭ್ಯವಿವೆ.

ಪ್ರಸ್ತುತ ಈ ಅಧ್ಯಾಯದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕಂಡುಬರುವ ಸಾಂಪ್ರದಾಯಿಕ ಶಿಲ್ಪಕಲಾವಿದರು ರಚಿಸಿರುವ ಶಿಲ್ಪಕಲಾಕೃತಿಗಳ ವೈಶಿಷ್ಟ್ಯಗಳನ್ನು ವ್ಯವಸ್ಥಿತವಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ರಾಜಕುಮಾರ ಪಂಚಾಳ ಅವರ ಕಲಾಕೃತಿಗಳು(ಬೀದರ ಜಿಲ್ಲೆ)**

೧. **ದೇವಿಯ ಉಬ್ಬುಶಿಲ್ಪ:** ಸಾಗುವಾನಿ ಮರದಿಂದ ನಾಲ್ಕು ಇಂಚು ದಪ್ಪದ ನಾಲ್ಕು ಫೂಟ್ ಎತ್ತರ ಮೂರು ಫೂಟ್ ಅಗಲದಲ್ಲಿ ತೇಗದ ಹಲಗೆಯ ಮೇಲೆ ದೇವಿಯ ಉಬ್ಬುಶಿಲ್ಪವನ್ನು ಕೆತ್ತನೆ ಮಾಡಲಾಗಿದೆ. ಕಿರೀಟವೂ ಸೂಕ್ಷ್ಮ ನಕ್ಷೆಗಳಿಂದ ಕೂಡಿದ್ದು, ಕಿರೀಟದಿಂದ ಭುಜದವರೆಗೂ ಕೇಶ ವಿನ್ಯಾಸಗೊಳಿಸಲಾಗಿದೆ. ಅಷ್ಟಭುಜಗಳಿಂದ ದೇವಿಯನ್ನು ಕೆತ್ತನೆ ಮಾಡಲಾಗಿದೆ. ತ್ರಿಶೂಲ, ಢಮರುಗ, ಖಡ್ಗ, ಸರ್ಪಾಸ್ತ್ರ ಇದೆ. ಖಡ್ಗ ಢಕ್ಕೆ ಪಿನಾಕಪಾಣಿ ಬರ್ಚಿ ಕೈಯಲ್ಲಿ ಬಟ್ಟಲನ್ನು ಹಿಡಿದಿದ್ದಾಳೆ. ದೇವಿಯ ವಸ್ತ್ರಾಲಂಕಾರ ಆಭರಣ ಗೆಜ್ಜೆ ಪಟ್ಟಿ ಆಭರಣ ಕುಪ್ಪಸ ಸೀರೆಯ ನೇರಿಗೆಯ ವಿನ್ಯಾಸವನ್ನು ನೈಜವಾಗಿ ಕೆತ್ತಲಾಗಿದೆ. ದೇವಿಯ ಕಿರೀಟ ಹಿಂಭಾಗದಲ್ಲಿ ಪ್ರಭಾವಲಯ ವನ್ನು ಕೆತ್ತನೆ ಮಾಡಲಾಗಿದೆ. ದೇವಿಯ ಮುಖವು ತೇಜಸ್ಸಿನಿಂದ ಭಾವಸೂಚನೆಯನ್ನು ಪ್ರತಿ ಬಿಂಬಿಸುತ್ತದೆ.

ದೇವಿಯ ಉಬ್ಬುಶಿಲ್ಪದ ಮೇಲ್ಭಾಗದಲ್ಲಿ ಕಮಾನಿನಂತೆ ವಿನ್ಯಾಸ ಮಾಡಿದ್ದು ಅದರ ಮೇಲ್ಭಾಗದಲ್ಲಿ ಪುನರಾವರ್ತಿತ ನಕ್ಷೆಗಳಿಂದ ಕೆತ್ತನೆ ಮಾಡಲಾಗಿದೆ. ದೇವಿಯ ಆಭರಣಗಳು ಸೂಕ್ಷ್ಮ ಕೆತ್ತನೆಗಳಿಂದ ಕೂಡಿರುವುದು ಒಂದು ವೈಶಿಷ್ಟ್ಯಪೂರ್ಣವೇ ಸರಿ.

೨. **ಮರದ ಪಟ್ಟಿಕೆಯ ಬಾಗಿಲ ನಕ್ಷಾವಿನ್ಯಾಸ:** ಸುಮಾರು ಐದು ಫೂಟ್ ಉದ್ದ ಒಂದು ಫೂಟ್ ಅಗಲದಲ್ಲಿ ಸರಳ ಕೈನಕ್ಷೆಯನ್ನು ರಚನೆ ಮಾಡಲಾಗಿದೆ. ಮಧ್ಯಭಾಗದಲ್ಲಿ ವೃತ್ತವನ್ನು

ನಿರ್ಮಿಸಿಕೊಂಡು ಅದರಲ್ಲಿ ಎರಡು ತ್ರಿಕೋನಗಳನ್ನು ಸಂಯೋಜನೆ ಮಾಡಲಾಗಿದೆ. ಒಂದು ತ್ರಿಕೋನವು ಅಧೋಮುಖವಾಗಿದ್ದು ಶಕ್ತಿಯ ಸಂಕೇತವಾಗಿದೆ. ಇನ್ನೊಂದು ತ್ರಿಕೋನವು ಊರ್ಧ್ವ ಮುಖವಾಗಿದ್ದು ಶಿವನ ಸಂಕೇತವಾಗಿದೆ. ಎರಡು ತ್ರಿಕೋನಗಳ ಸಂಯೋಜನೆಯು ಅಷ್ಟಕೋನಗಳನ್ನು ನಿರ್ಮಿಸುತ್ತದೆ. ಮಧ್ಯಭಾಗದಲ್ಲಿ ಷಟ್‌ಭುಜಾಕೃತಿ ಇದ್ದು ಇದರ ಮಧ್ಯದಲ್ಲಿ ಕನ್ನಡದ "ಓಂ" ಅಕ್ಷರವನ್ನು ಸುಂದರವಾಗಿ ನಯವಾಗಿ ಕೆತ್ತನೆ ಮಾಡಲಾಗಿದೆ. ಅಷ್ಟಕೋನದ ಈ ಸಂಕೇತವು ಬಸವತತ್ವದ ಚಿನ್ಹೆಯಾಗಿದೆ. ಹೈದರಾಬಾದ್ ಕರ್ನಾಟಕದ ಬೀದರ್ ಜಿಲ್ಲೆ ಬಸವಕಲ್ಯಾಣದಲ್ಲಿ ಗುರು ಬಸವಣ್ಣನವರ ಬಸವತತ್ವ ಅನುಯಾಯಿಗಳು ಸಾಕಷ್ಟು ಜನರಿದ್ದಾರೆ. ಇವರು ತಮ್ಮ ಮನೆ ಮುಖ್ಯ ಬಾಗಿಲ ಮೇಲೆ ಬಸವತತ್ವದ ಲಾಂಛನವನ್ನು ಕೆತ್ತಿಸಿದ್ದಾರೆ. ಇದರ ಎಡಬಲ ಬದಿಯಲ್ಲಿ ಶ್ರೀ ಗುರು ಬಸವಲಿಂಗಾಯ ನಮಃ ಎಂದು ಮೂರು ಇಂಚು ಅಳತೆಯ ಕನ್ನಡ ಅಕ್ಷರಗಳನ್ನು ಕೆತ್ತನೆ ಮಾಡಲಾಗಿದೆ. ಬಾಗಿಲ ಹಣೆ ಪಟ್ಟಿಯ ಸಂಪೂರ್ಣ ಸುಂದರವಾದ ಆಲಂಕಾರಿಕ ನಕ್ಷೆಗಳಿಂದ ಕೆತ್ತನೆ ಮಾಡಲಾಗಿರುವುದು ಒಂದು ವೈಶಿಷ್ಟ್ಯಪೂರ್ಣವಾಗಿದೆ.

೩. **ರೇವಣಸಿದ್ಧೇಶ್ವರ ಉಬ್ಬುಶಿಲ್ಪ:** ಸಾಗುವಾನಿ ಮರದಿಂದ ಬಾಗಿಲ ಹಣೆಪಟ್ಟಿಯಲ್ಲಿ ಸುಮಾರು ಎರಡು ಫೂಟ್ ಗಾತ್ರದಲ್ಲಿ ಕೊಲ್ಲಿಪಾಕಿ ರೇವಣಸಿದ್ಧೇಶ್ವರ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಈ ಶಿಲ್ಪದ ಸುತ್ತಲೂ ಪಟ್ಟಿಕೆಯ ಸ್ತಂಭ ಅವುಗಳ ಮೇಲೆ ಕಮಾನಿನ ಆಕಾರದಲ್ಲಿ ಪ್ರಭಾವಳಿಯನ್ನು ನಿರ್ಮಿಸಲಾಗಿದೆ. ಪ್ರಭಾವಳಿಯ ಮೂರು ಹಂತಗಳಲ್ಲಿ ಪುನರಾವರ್ತಿತ ನಕ್ಷೆಗಳು ಕಂಡುಬರುತ್ತವೆ. ಪ್ರಭಾವಳಿಯ ಶಿಖರ ಭಾಗದಲ್ಲಿ ಪದ್ಮವಿನ್ಯಾಸವನ್ನು ಮಾಡಲಾಗಿದೆ. ಈಶ್ವರನ ಲಿಂಗದ ಪ್ರತೀಕವಿದೆ. ಲಿಂಗದ ಹಿಂಭಾಗದಲ್ಲಿ ಕೈಯಲ್ಲಿ ಕಮಂಡಲವನ್ನು ಧರಿಸಿ ಎಡಕೈಯಲ್ಲಿ ದಂಡಕ ಲಾಂಛನವನ್ನು ಹಿಡಿದಿರುವ ಶಿಲ್ಪವಿದೆ. ರೇವಣಸಿದ್ಧರು ಜಟೆಯನ್ನು ಕಟ್ಟಿದ್ದು ಅದಕ್ಕೆ ರುದ್ರಾಕ್ಷಿ ಸರವನ್ನು ಸುತ್ತಿರುವುದು ಕಂಡುಬರುತ್ತದೆ. ಕೊರಳಲ್ಲಿ ಕಂಠಾಭರಣ ಸರಗಳಿದ್ದು ಮುಂಗೈಗಳಲ್ಲಿ ರುದ್ರಾಕ್ಷಿ ಸರ ಭುಜಪಟ್ಟಿಗಳು ಇವೆ. ಇವರ ತಲೆ ಹಿಂಭಾಗದಲ್ಲಿ ಪ್ರಭಾವಲಯವನ್ನು ಕೆತ್ತನೆ ಮಾಡಲಾಗಿದೆ. ಈಶ್ವರ ಲಿಂಗದ ಮೇಲೆ ರುದ್ರಾಕ್ಷಿ ಮಾಲೆ ಅಧಿಷ್ಠಾನದಲ್ಲಿ ಪುನರಾವರ್ತಿತ ನಕ್ಷೆಗಳು ಕಂಡುಬರುತ್ತವೆ.

ಶಿವನ ಲಿಂಗುವಿಗೆ ರೇಖೆಗಳ ಮೂಲಕ ವಿಭೂತಿ ಕೆತ್ತನೆ ಮಾಡಲಾಗಿದೆ. ಹೈದರಾಬಾದ್ ಕರ್ನಾಟಕ ಪ್ರಾಂತದಲ್ಲಿ ಬೀದರ, ರಾಯಚೂರು, ಯಾದಗಿರಿ, ಕಲುಬುರ್ಗಿ ಜಿಲ್ಲೆಗಳಲ್ಲಿ ರೇವಣ ಸಿದ್ಧೇಶ್ವರ ಭಕ್ತರು ಹೆಚ್ಚಾಗಿ ಕಂಡುಬರುತ್ತಾರೆ. ಆಂಧ್ರದಲ್ಲಿರುವ ಕೊಲ್ಲಿಪಾಕಿಯ ರೇವಣಸಿದ್ಧೇಶ್ವರ ದೇವರನ್ನು ಕೆಲವರು ಮನೆ ದೇವರೆಂದು ಆರಾಧಿಸುತ್ತಾ ಬಂದಿರುವ ರೂಢಿಯಿದೆ. ಈ ಮೇಲಿನ ಕೆಲವು ಜಿಲ್ಲೆಗಳಲ್ಲಿ ಮನೆಯ ದೇವರಾದ ರೇವಣಸಿದ್ಧೇಶ್ವರರ ಉಬ್ಬುಶಿಲ್ಪವನ್ನು ಮನೆಯ ಬಾಗಿಲನ ಮೇಲೆ ಕದಗಳ ಮೇಲೆ ಕೆತ್ತಿಸಿ ತಮ್ಮ ದೈವಭಕ್ತಿಯನ್ನು ಮೆರೆಯುತ್ತಾರೆ. ಹೀಗಾಗಿ ಹೈದರಾಬಾದ್ ಕರ್ನಾಟಕದ ಜನಪದ ಹಾಗೂ ಶಿಷ್ಟಪದ ಶಿಲ್ಪಕಲೆಗಳು ದೈವಭಕ್ತಿಯಿಂದ ಪ್ರತಿಬಿಂಬಿಸುತ್ತಿರುವುದು ಒಂದು ವೈಶಿಷ್ಟ್ಯವೇ ಸರಿ.

೪. **ಸಿದ್ಧಾರೂಢ ಸ್ವಾಮಿಗಳ ಉಬ್ಬುಶಿಲ್ಪ:** ಹೈದರಾಬಾದ್ ಕರ್ನಾಟಕದ ಪ್ರಾಂತ್ಯದ ಆರು ಜಿಲ್ಲೆಗಳಲ್ಲಿ ಅನೇಕ ಮಹಾನುಭಾವರು ಶರಣರು, ಸಂತರು, ದಾಸವರೇಣ್ಯರು ಮತ್ತು ಸಿದ್ಧಿ

ಪುರುಷರು, ಮಹಾತ್ಮರು, ಪವಾಡಪುರುಷರು ಜನಿಸಿರುವುದು ಇತಿಹಾಸದಿಂದ ಕಂಡುಬರುತ್ತದೆ. ಇಂತಹ ಅನೇಕ ಮಹಾತ್ಮರಲ್ಲಿ ಒಬ್ಬರಾದ ಬೀದರ ಜಿಲ್ಲೆಯ ಚಳಕಾಪುರದ ಸಿದ್ಧಾರೂಢರು ಒಬ್ಬರು. ಇವರು ಹುಬ್ಬಳ್ಳಿಯಲ್ಲಿ ಐಕ್ಯವಾಗಿ ನಾಡಿನ ತುಂಬಾ ಭಕ್ತರ ಕೋರಿಕೆಯನ್ನು ಈಡೇರಿಸುತ್ತಿದ್ದಾರೆ. ಬೀದರ ಜಿಲ್ಲೆಯಲ್ಲಿ ಅನೇಕ ಜನ ಸಿದ್ಧಾರೂಢರ ಭಕ್ತರಿದ್ದಾರೆ. ಭಕ್ತಿಯ ಸಂಕೇತರೂಪವಾಗಿ ತಮ್ಮ ಮನೆಯ ಬಾಗಿಲಿನ ಮುಖ್ಯದ್ವಾರದ ಕದಗಳ ಮೇಲೆ ಹಾಗೂ ಪೂಜಾ ಮಂದಿರದ ಕದಗಳ ಮೇಲೆ ಸಿದ್ಧಾರೂಢರ ಉಬ್ಬುಶಿಲ್ಪವನ್ನು ಕೆತ್ತನೆ ಮಾಡಿಸುವುದು ಕಂಡುಬರುತ್ತದೆ.

ಮೂರು ಫೂಟ್ ಅಗಲ ನಾಲ್ಕು ಫೂಟ್ ಎತ್ತರದ ಸಾಗುವಾನಿ ಮರದ ಹಲಗೆಯಲ್ಲಿ ಸಿದ್ಧಾರೂಢರ ಉಬ್ಬುಶಿಲ್ಪವನ್ನು ಕೆತ್ತನೆ ಮಾಡಲಾಗಿದೆ. ಸಿದ್ಧಾರೂಢರ ಸುತ್ತಲೂ ಪ್ರಭಾವಳಿಯನ್ನು ಆಲಂಕಾರಿಕ ನಕ್ಷೆಗಳಿಂದ ಕೆತ್ತನೆ ಮಾಡಲಾಗಿದೆ. ಮಧ್ಯ ಭಾಗದಲ್ಲಿ ಪದ್ಮ ಚಿನ್ನೆ ವಿನ್ಯಾಸಗೊಳಿಸಲಾಗಿದೆ. ಪೀಠದ ಮೇಲೆ ಆಸಿನರಾಗಿರುವ ಸಿದ್ಧಾರೂಢರು ಎರಡು ಪಾದಗಳನ್ನು ಕೆಳಗಿನ ಮಣೆಯ ಮೇಲೆ ಇಟ್ಟಿರುವುದು ಕಂಡುಬರುತ್ತದೆ ಪಂಜೆ ವಸ್ತ್ರವನ್ನು ನೇರಿಗೆ ವಿನ್ಯಾಸದಿಂದ ಮುದುಡಿಕೊಂಡಂತೆ ಕೆತ್ತನೆ ಮಾಡಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಸಿದ್ಧಾರೂಢರ ಮುಖದಲ್ಲಿ ಬ್ರಹ್ಮ ತೇಜಸ್ಸು ನೈಜ ಕಳೆ ಕಂಡುಬರುತ್ತದೆ.

**೫. ಚಳಕಾಪುರ ಹನುಮಂತ ದೇವರ ಕಲಾತ್ಮಕ ಬಾಗಲು:** ಭಾಲ್ಕಿ ತಾಲೂಕಿನ ಚಳಕಾಪುರದ ಹನುಮನಿಗೆ ಕಲಾತ್ಮಕ ಬಾಗಿಲು ಸಿದ್ಧವಾಗಿದೆ. ರಾಜಕುಮಾರ ಅವರ ಕೈಚಳಕದಲ್ಲಿ ಅರಳಿದ ಈ ಬಾಗಿಲು ಎರಡುವರೆ ಲಕ್ಷ ಮೌಲ್ಯದ್ದಾಗಿದೆ. ದಾನಿ ಶಿವರಾಜ ಪಾಟೀಲ್ ಅಯಾಸಪೂರ ಇದರ ಸಂಪೂರ್ಣ ವೆಚ್ಚ ಭರಿಸಿದ್ದಾರೆ. ನೋಡುಗರ ಕಣ್ಮನ ಸೆಳೆಯುವಂತೆ ಬಾಗಿಲಿಗೆ ರೂಪು ನೀಡಿದವರು ರಾಜಕುಮಾರ ಪಂಚಾಳರು. ಬೃಹತ್ ಆಕಾರದ ಚೌಕಟ್ಟಿನಲ್ಲಿ ನಾಲ್ಕು ಬಾಗಿಲುಗಳು ಇವೆ. ಮೇಲುಗಡೆ ದೊಡ್ಡದಾದ ಗಣೇಶನ ವಿಗ್ರಹ ಕೆತ್ತಲಾಗಿದೆ. ವಿಗ್ರಹ ಇರುವಷ್ಟು ಭಾಗವನ್ನು ತೆರೆಯಬಹುದು. ಕೆಳಗಡೆ ರಾಮ ಲಕ್ಷ್ಮಣ ಸೀತೆ ಮತ್ತು ಹನುಮನ ಮೂರ್ತಿಗಳನ್ನು ಸೃಷ್ಟಿಸಲಾಗಿದೆ. ಇದಲ್ಲದೇ ಶಿವ, ಪಾರ್ವತಿ, ಲಕ್ಷ್ಮೀ ಸರಸ್ವತಿ ಅವರ ಚಿತ್ರಗಳನ್ನೂ ಇದರಲ್ಲಿ ಕೆತ್ತಲಾಗಿದೆ.

ಚಳಕಾಪುರದ ಆಂಜನೇಯನ ಮುಖ್ಯ ಬಾಗಿಲಿಗೆ ನಾಲ್ಕು ವಿಭಾಗದ ಕದಗಳಿವೆ. ಒಂದೇ ಮಹಾಬಾಗಿಲಿನಲ್ಲಿ ಮೂರು ಬಾಗಿಲುಗಳು ಬರುವಂತೆ ನಿರ್ಮಾಣ ಕಾರ್ಯ ಮಾಡಲಾಗಿದೆ. ಒಂದು ಬಾಗಿಲಿನಿಂದ ಭಕ್ತರು ಒಳಗೆ ಹೋಗುವುದು ದರ್ಶನ ಮಾಡಿ ಬಲ ಬಾಗಿಲಿನಲ್ಲಿ ಹೊರಗೆ ಬರುವಂತೆ ಕೆತ್ತನೆ ಮಾಡಲಾಗಿದೆ. ಆದರೆ ಮಧ್ಯ ಭಾಗದ ಬಾಗಿಲು ಯಾವಾಗಲೂ ತೆರೆದಿರುತ್ತದೆ. ಇದರಲ್ಲಿ ಯಾರಿಗೂ ಪ್ರವೇಶವಿರುವುದಿಲ್ಲ. ಈ ಮೂರು ಬಾಗಿಲನ್ನು ಸೇರಿಸಿ ಒಂದು ಬಾಗಿಲು ಮಾಡಿರುವುದು ವಿಶೇಷವೇ ಸರಿ. ಹಣೆಪಟ್ಟಿಕೆಯಲ್ಲಿ ಮೂರು ಭಾಗಗಳನ್ನು ಮಾಡಿಕೊಂಡು ಕಮಾನಿನಂತೆ ವಿನ್ಯಾಸ ಮಾಡಲಾಗಿದೆ. ಗಣೇಶನ ಉಬ್ಬುಶಿಲ್ಪ ಮತ್ತು ಎಡಬಲ ಬದಿಯಲ್ಲಿ ಆನೆಗಳ ಉಬ್ಬುಶಿಲ್ಪವಿದೆ. ಇದರ ಕೆಳಭಾಗದಲ್ಲಿ ಸಂಪೂರ್ಣ ಆಲಂಕಾರಿಕ ನಕ್ಷೆಗಳಿದ್ದು ಮಧ್ಯದಲ್ಲಿ ಶ್ರೀ ರಾಮಚಂದ್ರ ಬಲ ಬದಿಯಲ್ಲಿ ಲಕ್ಷ್ಮಣ ಎಡಬದಿಯಲ್ಲಿ ಸೀತಾಮಾತೆ ಕೆಳಗಡೆ,

ಎರಡು ಕೈಗಳನ್ನು ಮುಗಿದು ಮಂಡಿಯನ್ನೂರಿದ ಆಂಜನೇಯನ ಉಬ್ಬುಶಿಲ್ಪವು ಕೆತ್ತಲ್ಪಟ್ಟಿದೆ. ಮೂರುಬಾಗಿಲಿನ ನಾಲ್ಕು ಕದಗಳನ್ನು ಮಾಡಿರುವುದು ಶಾಸ್ತ್ರಸಮ್ಮತವಾದುದು ವೈಶಿಷ್ಟ್ಯ ಕದಗಳಲ್ಲಿ ಶಿವ, ಪಾರ್ವತಿ, ಲಕ್ಷ್ಮೀ ಸರಸ್ವತಿ ಅವರ ಉಬ್ಬುಶಿಲ್ಪಗಳನ್ನು ಇದರಲ್ಲಿ ಕೆತ್ತನೆ ಮಾಡಲಾಗಿದೆ.

**ಲೋಹಶಿಲ್ಪಿ ಮಹಮ್ಮದ್ ಮೈಬುದ್ದೀನ್ ಅವರ ಕಲಾಕೃತಿಗಳು(ಬೀದರ ಜಿಲ್ಲೆ)**

೧. **ದೊಡ್ಡ ಹೂದಾನಿ:** ಈ ಹೂದಾನಿಯು ದೊಡ್ಡದಾದ ಆಕಾರದಲ್ಲಿದೆ. ಇದನ್ನು ತಯಾರಿಸಲು ೨೨ ದಿನಗಳನ್ನು ತೆಗೆದುಕೊಂಡರು. ಹೂದಾನಿ ಕೆಳಭಾಗದಲ್ಲಿ ಎಲೆಗಳ ಸರಮಾಲೆಯು ಬೆಳ್ಳಿಯ ತಂತಿಯಲ್ಲಿ ನಿರ್ಮಾಣಗೊಂಡಿದೆ. ಹೂದಾನಿ ನಡುವೆ ಎಲೆಗಳನ್ನು ಸುರುಳಿ ಆಕಾರದಲ್ಲಿ ಕಾಣಬಹುದು. ಇಲ್ಲಿಯ ಬಿದ್ರಿಕಲೆಯು ಅತಿ ಸೂಕ್ಷ್ಮವಾದ ರೇಖೆಗಳಿಂದ ಕೂಡಿದೆ. ಕುತ್ತಿಗೆಯ ಹಿಂಭಾಗದಲ್ಲಿ ಸುಂದರವಾದ ಹೂವಿನ ಸರಪಳಿ ನೋಡಬಹುದು. ಕುತ್ತಿಗೆ ಮುಂಭಾಗದಲ್ಲಿ ಹೂವಿನ ದಳಗಳ ಆಕಾರದ ನಕ್ಷೆಗಳಿವೆ. ಚೌಕಾಕಾರದ ಹೂ ಗೋಲಾಕಾರದಲ್ಲಿಯೂ ರೇಖೆಗಳ ಸೂಕ್ಷ್ಮತೆಯನ್ನು ಕಾಣಬಹುದು.

೨. **ಸಣ್ಣ ಹೂದಾನಿ:** ಈ ಹೂದಾನಿಯಲ್ಲಿ ಕೆಳಭಾಗದಲ್ಲಿ ಕರಕುಶಲೆಯನ್ನು ಕಾಣಬಹುದು. ಇದರ ಹೊಟ್ಟೆಯ ಹಿಂಭಾಗದಲ್ಲಿ ಚೌಕ್ ಡಿಸೈನ್ ಮಾಡಲಾಗಿದೆ. ಹೂದಾನಿಯ ಮಧ್ಯಭಾಗದಲ್ಲಿ ನಾಲ್ಕು ಎಲೆಯ ಆಕಾರದ ಮನೆಗಳನ್ನು ಗುರುತಿಸಿ ಅದರ ಮಧ್ಯದಲ್ಲಿ ಬಿಚ್ಚಿದ ಕಮಲದ ಹೂವು ಗಳನ್ನು ಅರ್ಧರೂಪದಲ್ಲಿ ಚಿತ್ರಿಸಿದ್ದಾರೆ. ಮುಂಭಾಗದ ಬಾಯಿ ಸ್ವಲ್ಪ ಅಗಲವಾಗಿದ್ದು ಅದರ ಮೇಲೆ ಜ್ಯಾಮಿತಿ ಹೂವಿನ ದಳಗಳನ್ನು ಕತ್ತರಿಸಿ ಒಂದೊಂದು ಕೂಡಿಸಿದ ಹಾಗೆ ಕೂಡಿಸಿದ್ದಾರೆ. ನೋಡಲು ಬಹಳ ಸುಂದರವಾಗಿ ಕಾಣುತ್ತದೆ. ಇಂತಹ ಹೂದಾನಿಯನ್ನು ಆರು ದಿವಸಗಳಲ್ಲಿ ತಯಾರು ಮಾಡುತ್ತಾರೆ.

೩. **ಪಾತ್ರೆ:** ಈ ಪಾತ್ರೆಯನ್ನು ಮನೆ ಅಲಂಕಾರದ ಸಲುವಾಗಿ ಉಪಯೋಗಿಸುತ್ತಾರೆ. ಇದರ ತಳಭಾಗವು ಗೋಲಾಕೃತಿಯಿಂದ ಕೂಡಿದೆ. ಇದರ ಮೇಲೆ ರಚಿತಗೊಂಡ ಡಿಸೈನು ಹಾಗೆಯೇ ಇದ್ದು, ಉಳಿದ ಭಾಗವೆಲ್ಲ ಬೆಳ್ಳಿಯ ತಗಡಿನಿಂದ ತುಂಬಿದೆ. ಮೇಲ್ಭಾಗದಲ್ಲಿ ನಕ್ಷೆಯ ಒಳಗಡೆ ಬೆಳ್ಳಿ ಲೇಪನ ತುಂಬಿದೆ. ಪಾತ್ರೆಯ ನಡುವಿನ ಭಾಗದಲ್ಲಿ ಹತ್ತಾರು ವಿಭಾಗ ಮಾಡಿ ನಕ್ಷೆಯನ್ನು ರಚಿಸಿದೆ. ಮೇಲ್ಭಾಗದ ಆಕಾರ ತಂಬಿಗೆ ರೂಪದ ಹಾಗೆ ಇದೆ. ಇದರ ಮೇಲೆ ಮತ್ತು ಸ್ವಲ್ಪ ಒಳಭಾಗವೆಲ್ಲ ಜ್ಯಾಮಿತಿಯ ಎಲೆಗಳ ಆಕಾರದಲ್ಲಿ ಇರುತ್ತದೆ. ಕೊಳಲನ್ನು ಪೂರ್ತಿ ಬೆಳ್ಳಿಯ ಲೇಪನ ಮಾಡಿದ್ದಾರೆ. ಕೃಷ್ಣನ ಬಟ್ಟೆಯ ಆಕಾರಕ್ಕೆ ಕೂಡ ಬೆಳ್ಳಿಯ ತಾರು ಹಾಕಿದ್ದಾರೆ. ಮೂರ್ತಿ ನೋಡಲು ತುಂಬಾ ಮನಮೋಹಕವಾಗಿವೆ.

೪. **ಗಿಫ್ಟ್‌ಬಾಕ್ಸ್:** ಇವರು ಅನೇಕ ರೀತಿಯ ಗಿಫ್ಟ್‌ಬಾಕ್ಸ್‌ಗಳನ್ನು ತಯಾರಿಸಿದ್ದಾರೆ. ಒಂದು ಗಿಫ್ಟ್‌ಬಾಕ್ಸ್ ತಯಾರಿಸಲು ಅವರಿಗೆ ಮೂರು ಅಥವಾ ನಾಲ್ಕು ದಿವಸ ಬೇಕಾಗುತ್ತದೆ. ಒಂದು ಗಿಫ್ಟ್‌ಬಾಕ್ಸ್ ಮೇಲೆ ತುಂಬಾ ಸುಂದರವಾದ ಮಹತಾಬಿ ವರ್ಕ್ ಪ್ರಕಾರವಾಗಿ ಬೆಳ್ಳಿಯನ್ನು

ತುಂಬಿದ್ದಾರೆ. ನೋಡಲು ತುಂಬಾ ಸುಂದರವಾಗಿದೆ. ಇದರಲ್ಲಿ ರೇಖೆಗಳು ಅಡ್ಡ-ಅಡ್ಡಲಾಗಿ ಜ್ಯಾಮಿತಿಕ ನಕ್ಷೆಗಳಿಂದ ಸರಳ ರೇಖೆಗಳನ್ನು ಬಳಸಿಕೊಂಡು ರಚಿಸಿರುವುದು ವೈಶಿಷ್ಟ್ಯಪೂರ್ಣವಾಗಿದೆ.

**೫. ಬಳೆ:** ಇವರು ಚಿಕ್ಕ ಮಕ್ಕಳ ಸಲುವಾಗಿ ತುಂಬಾ ಚೆನ್ನಾಗಿ ಬಳೆಗಳನ್ನು ತಯಾರಿಸಿದ್ದಾರೆ. ಅದಕ್ಕೆ ಚೆನ್ನಾಗಿ ಅಲಂಕೃತವಾಗಿರುವ ಡಿಸೈನ್ ಕೊರೆದು ಅದಕ್ಕೆ ಬೆಳ್ಳಿಯನ್ನು ಕೂಡಿಸಿದ್ದಾರೆ. ಅವರು ಮಾಡಿರುವಂತಹ ಡಿಸೈನ್ ಹೆಸರು ಬೆಲ್‌ವರ್ಕ್ ಎನ್ನುವರು. ಹೆಣ್ಣುಮಕ್ಕಳ ಕೈ ಬಳೆಗಳು ನೋಡಲು ತುಂಬ ಸುಂದರವಾಗಿದ್ದು, ಅವುಗಳಲ್ಲಿ ಚಿಕ್ಕ ಚಿಕ್ಕ ರೇಖೆಗಳಿಂದ ಎಲೆ, ಬಳ್ಳಿ, ಜ್ಯಾಮಿತಿಕ ನಕ್ಷೆಗಳನ್ನು ಬಳಸಿಕೊಂಡು ವಿನ್ಯಾಸ ಮಾಡಿರುವುದು ಕಂಡುಬರುತ್ತದೆ.

**೬. ಕಿವಿಯ ಓಲೆ:** ಇವರು ಕಿವಿಯ ಓಲೆಗಳನ್ನು ಸಹ ತಯಾರಿಸುತ್ತಾರೆ. ಓಲೆ ಮೇಲೆ ಶೀಟ್‌ವರ್ಕ್ ವೈರ್‌ವರ್ಕ್ ಮುಂತಾದ ವರ್ಕ್‌ಗಳು ಹಾಕಿ ಅದನ್ನು ನೋಡಲು ಅತ್ಯಾಕರ್ಷಕವಾಗಿ ಕಾಣುತ್ತವೆ. ಇವರು ತಯಾರಿಸಿದಂತಹ ವಸ್ತುಗಳ ಬೇಡಿಕೆ ಅಪಾರವಿದೆ. ದೂರ ದೂರದಿಂದ ಬಂದು ಜನರು ಖರೀದಿಸುತ್ತಾರೆ. ದಿಲ್ಲಿ, ಪಂಜಾಬ್, ಅಮೆರಿಕದಿಂದ ಬಂದ ಜನರು ಇವರಲ್ಲಿ ತುಂಬಾ ವಸ್ತುಗಳನ್ನು ಖರೀದಿಸಿದ್ದಾರೆ. ಹೊರಗಿನಿಂದ ಬಂದ ಜನರು ಇವರ ಕುಟುಂಬವನ್ನು ಹಾಗೂ ಇವರ ಕಲೆಯನ್ನು ಪ್ರಶಂಸಿಸದೆ ಹೋಗಲಾರರು. ವಂಶಪರಂಪರಾಗತವಾಗಿ ಈ ವೃತ್ತಿಯನ್ನು ಮಾಡುತ್ತಿದ್ದಾರೆ. ಇಲ್ಲಿ ಕಲಾಕೃತಿ ರಚಿಸಲು ಬೇಕಾದ ಕಚ್ಚಾ ಸಾಮಗ್ರಿಗಳು ತಯಾರಿಸುವ ವಿಧಾನ, ಅದರ ಅಂದಾಜು ಬೆಲೆ, ತಯಾರಿಸಲು ತಗಲುವ ವೆಚ್ಚ, ಮಾರಾಟದ ಬೆಲೆ, ಕಲಾಕೃತಿ ತಯಾರಿಸುವಲ್ಲಿ ಬೇಕಾಗುವ ಅವಧಿ ಮುಂತಾದ ಅಂಶಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಇದರ ಜೊತೆಗೆ ಕಲಾತ್ಮಕ ಹಿನ್ನೆಲೆ, ನಕ್ಷೆಗಳು ಮುಂತಾದ ಕಲಾತ್ಮಕ ವಸ್ತುಗಳನ್ನು ರಚಿಸಿದ್ದಾರೆ. ಅವುಗಳ ವಿವರಗಳು ಈ ಕೆಳಗಿವೆ.

**ಕಲಾಕೃತಿಗಳ ತಯಾರಿಕಯ ವಿವರ**

**ಸುರಾಯಿ:** ಸುರಾಯಿ ಕಲಾಕೃತಿ ಮೇಲೆ ೧೯೬೫ರಲ್ಲಿ ರಾಜ್ಯಪ್ರಶಸ್ತಿ ಇವರಿಗೆ ದೊರೆಯಿತು. ಇದರ ಎತ್ತರದ ಅಳತೆ ೧೩ ಮತ್ತು ಅದರ ಅಗಲ ಆಗಿರುತ್ತದೆ. ಜಿಂಕ್–೨ ಕೆ.ಜಿ; ಕಾಪರ್–೧೨೦ ಗ್ರಾಂ; ಬೆಳ್ಳಿ–೧೫೦ ಗ್ರಾಂ; ಸೋಲ್ಡರ್–೫೦ ಗ್ರಾಂ. ಇದಕ್ಕೆ ಬೇಕಾಗುವ ಉತ್ಪನ್ನಗಳು.

**ಪದ್ಧತಿ:** ಗಾರೆಮಣ್ಣಿನ ಆಕೃತಿಯನ್ನು ಪ್ರಥಮ ಹಂತದಲ್ಲಿ ತಯಾರಿಸಲಾಗುತ್ತದೆ. ಕೆಂಪು ಮಣ್ಣಿನಿಂದ ಗೆರೆಗಳ ಸಾಂಚಾವನ್ನು ತಯಾರಿಸಲಾಗುತ್ತದೆ. ಅದರಲ್ಲಿ ರೌಜನ್ ಕಾಯಿಸಿ, ಮಣ್ಣಿನಲ್ಲಿ ಬೆರೆಸಲಾಗುತ್ತದೆ. ತಂಪಾದ ತಕ್ಷಣ ಗೋಲಾಕಾರದ ಸಾಂಚಾದಲ್ಲಿ ಹಾಕಿ ಇಡಲಾಗುತ್ತದೆ. ಆದರೆ ಅವಧಿ ಒಂದು ವಾರವಾಗಿರುತ್ತದೆ. ಒಣಗಿದ ಮೇಲೆ ಡೈಯಲ್ಲಿ ಹಾಕಿಕೊಂಡು ಜಿಂಕ್ ಹಾಗೂ ಕಾಪರನ್ನು ಅಇಲಗೊಳಿಸಿ ಎರಡರ ಮಿಶ್ರಣವನ್ನು ಸಾಂಚಾದಲ್ಲಿ ಹಾಕಲಾಗುತ್ತದೆ. ಇದರಂತೆ ಸುರಾಯಿಯು ತನ್ನ ಮೂಲ ಆಕಾರವನ್ನು ಪಡೆಯುತ್ತದೆ. ಇದರ ನಂತರ ಡೈಯಿಂದ ಹೊರಗೆ ತೆಗೆದು ಒಳಗಿನ ಮಣ್ಣು ತೆಗೆಯಲಾಗುತ್ತದೆ,

ಫ್ಲೈಟ್ ಫೈಲ್ ಹಾಗೂ ಹಾಫ್ ರೌಂಡ್ ಫೈಲ್‌ನಿಂದ ಈ ಕಲಾಕೃತಿಯ ಮೇಲೆ ಒರೆಸಿ ಅದನ್ನು ಸಪಾಟಾಗಿ ಮಾಡಲಾಗುತ್ತದೆ. ತದನಂತರ ಬಫ್ ಯಂತ್ರದ ಮೇಲೆ ಇಮ್ರಿಯಿಂದ ಇದನ್ನು ಪಾಲಿಶ್ ಮಾಡಲಾಗುತ್ತದೆ. ಇದರಿಂದ ಅದರ ಮೇಲೆ ವಿಶಿಷ್ಟ ಆಕೃತಿಗಳನ್ನು ನಿರ್ಮಿಸುವಲ್ಲಿ ಸಹಕಾರಿಯಾಗುತ್ತದೆ. ಸದರಿ ಆಕೃತಿಯ ಮೇಲೆ ವಿಶಿಷ್ಟ ಆಕೃತಿ ಮಾಡುವುದಕ್ಕಿಂತ ಸಾದಾ ಬಣ್ಣವನ್ನು ಹಚ್ಚಲಾಗುತ್ತದೆ. ತದನಂತರ ಆ ಆಕೃತಿಯ ಮೇಲೆ ಕೆತ್ತನೆ ಮಾಡಲಾಗುತ್ತದೆ. ಅಂದರೆ ಛಿಲವಾಯಿ ಖಲಮ್, ಖುದಾಯಿಕಾ ಖಲಮ್, ಖಜಾನೆ ಖಲಮ್, ಚುರಾ ಖಜಾನಾ, ಪರದಾಶ ಕಾ ಖಲಮ್, ಖಜನಾ ಖಲಮ್, ಪತರಾ ಕೂಡಿಸುವ ಖಲಮ್, ಡಿಸೈನ ಕೂಡಿಸುವ ಖಲಮ್ ಇತ್ಯಾದಿ ಸಾಮಗ್ರಿಗಳನ್ನು ಉಪಯೋಗಿಸಲಾಗುತ್ತದೆ. ಈ ಕಲಾಕೃತಿಗಾಗಿ ೧೯೯೬ನೇ ಸಾಲಿನಲ್ಲಿ ರಾಷ್ಟ್ರೀಯ ಇಂದಿರಾಗಾಂಧಿ ಪ್ರಿಯದರ್ಶಿನಿ ಪ್ರಶಸ್ತಿ ನೀಡಿ ಇವರನ್ನು ಗೌರವಿಸಲಾಯಿತು. ಇದೇ ಕಲಾಕೃತಿಗಾಗಿ ೧೯೯೬ ಡಿಸೆಂಬರ್‌ನಲ್ಲಿ ಅಂತಾರಾಷ್ಟ್ರೀಯ ಎಕ್ಸಲೆನ್ಸ್ ಪ್ರಶಸ್ತಿಯನ್ನು ನೀಡಿ ನವದೆಹಲಿಯಲ್ಲಿ ಗೌರವಿಸಲಾಗಿದೆ.

**ಗಂಗಾ ಜಮುನ ಕೊಡ:** ಇದು ಘುಲೈಡಿ ಹಾಗೂ ಮೆಹೆತಾಬಿ ಕಲಾಕೃತಿಯೆಂದು ಹೆಸರುವಾಸಿಯಾಗಿದೆ. ಈ ಕಲಾಕೃತಿ ಮೇಲೆ ೨೦೦೨ರಲ್ಲಿ ರಾಜ್ಯಪ್ರಶಸ್ತಿ ಇವರಿಗೆ ದೊರೆಯಿತು. ಇದರ ಅಳತೆ ೧೧ ಮತ್ತು ಅದರ ಅಗಲ ೨೨ ಆಗಿರುತ್ತದೆ. "ಜಿಂಕ್–೮ ಕೆಜಿ; ಕಾಪರ್–೫೦೦ ಗ್ರಾ.; ಬೆಳ್ಳಿ–೫೦೦ ಗ್ರಾ.; ಸೋಲ್ಡರ್– ೧೫೦ ಗ್ರಾಂ". ಇದಕ್ಕೆ ಬೇಕಾಗುವ ಉತ್ಪನ್ನಗಳು.

**ಪದ್ಧತಿ:** ಗಾರೆಮಣ್ಣಿನ ಆಕೃತಿಯನ್ನು ಪ್ರಥಮ ಹಂತದಲ್ಲಿ ತಯಾರಿಸಲಾಗುತ್ತದೆ. ಕೆಂಪು ಮಣ್ಣಿನಿಂದ ಗೆರೆಗಳ ಸಾಂಚಾವನ್ನು ತಯಾರಿಸಲಾಗುತ್ತದೆ. ಅದರಲ್ಲಿ ರೌಜನ್ ಕಾಯಿಸಿ ಮಣ್ಣಿನಲ್ಲಿ ಬೆರೆಸಲಾಗುತ್ತದೆ. ತಂಪಾದ ತಕ್ಷಣ ಗೋಲಾಕಾರದ ಸಂಚಾದಲ್ಲಿ ಹಾಕಿ ಇಡಲಾಗುತ್ತದೆ. ಅದರ ಅವಧಿ ಒಂದು ವಾರವಾಗಿರುತ್ತದೆ. ಒಣಗಿದ ಮೇಲೆ ಡೈಯಲ್ಲಿ ಹಾಕಿಕೊಂಡು ಜಿಂಕ್ ಹಾಗೂ ಕಾಪರನ್ನು ಅನಿಲಗೊಳಿಸಿ ಎರಡರ ಮಿಶ್ರಣವನ್ನು ಸಾಂಚಾದಲ್ಲಿ ಹಾಕಲಾಗುತ್ತದೆ. ಇದರಂತೆ ಸುರಾಯಿ ತನ್ನ ಮೂಲ ಆಕಾರವನ್ನು ಪಡೆಯುತ್ತದೆ. ಇದರ ನಂತರ ಡೈಯಿಂದ ಹೊರಗೆ ತೆಗೆದು ಒಳಗಿನ ಮಣ್ಣು ತೆಗೆಯಲಾಗುತ್ತದೆ,

ಪ್ಲೈಟ್ ಫೈಲ್ ಹಾಗೂ ಹಾಫ್ ರೌಂಡ್ ಫೈಲ್‌ನಿಂದ ಈ ಕಲಾಕೃತಿಯ ಮೇಲೆ ಒರೆಸಿ ಅದನ್ನು ಸಪಾಟಾಗಿ ಮಾಡಲಾಗುತ್ತದೆ. ತದನಂತರ ಬಫ್ ಯಂತ್ರದ ಮೂಲಕ ಮೇಲೆ ಇಮ್ರಿಯಿಂದ ಇದನ್ನು ಪಾಲಿಶ್ ಮಾಡಲಾಗುತ್ತದೆ. ಇದರಿಂದ ಅದರ ಮೇಲೆ ವಿಶಿಷ್ಟ ಆಕೃತಿ ಗಳನ್ನು ನಿರ್ಮಿಸುವಲ್ಲಿ ಸಹಕಾರಿಯಾಗುತ್ತದೆ. ಸದರಿ ಆಕೃತಿಯ ಮೇಲೆ ವಿಶಿಷ್ಟ ಆಕೃತಿ ಮಾಡು ವುದಕ್ಕಿಂತ ಮೊದಲು ಸಾದಾ ಬಣ್ಣವನ್ನು ಹಚ್ಚಲಾಗುತ್ತದೆ. ತದನಂತರ ಆ ಆಕೃತಿಯ ಮೇಲೆ ಕೆತ್ತನೆ ಮಾಡಲಾಗುತ್ತದೆ. ಅಂದರೆ ಛಿಲವಾಯಿ ಖಲಮ್, ಖುದಾಯಿಕಾ ಖಲಮ್, ಖಜಾನೆ ಕಾ ಖಲಮ್, ಬೆಳ್ಳಿ ಕೂಡಿಸುವ ಖಲಮ್ ಇತ್ಯಾದಿ ಸಾಮಗ್ರಿಗಳನ್ನು ಉಪಯೋಗಿಸಲಾಗುತ್ತದೆ.

**ಗೋಬಲೆಟ್:** ಗೋಬಲೆಟ್ ಪಾಯಿಂಟ್ ಕಿ ತಾರಕಶಿ ಎಂದೇ ವಿಖ್ಯಾತಿ ಪಡೆದ ಈ ಕಲಾಕೃತಿಯು ಅತ್ಯದ್ಭುತವಾಗಿದೆ. ಈ ಕಲಾಕೃತಿಯನ್ನು ತಯಾರಿಸುವಲ್ಲಿ ಸದರಿಯವರು ತಮ್ಮ ಜೀವನದ ಅಮೂಲ್ಯವಾದ ೧೨ ತಿಂಗಳ ಪ್ರಯತ್ನ ಹಾಗೂ ಹಗಲು ರಾತ್ರಿಯೆನ್ನದೇ ದುಡಿದ ಫಲವಾಗಿದೆ. ಇದರ ಎತ್ತರ ೧೩ ಮತ್ತು ಅಗಲ ೨೦ ಆಗಿರುತ್ತದೆ. ಸುರಾಯಿಯು ತನ್ನ ಮೂಲ ಆಕಾರವನ್ನು ಪಡೆಯುತ್ತದೆ ಇದರ ನಂತರ ಡೈಯಿಂದ ಹೊರಗೆ ತೆಗೆದು ಒಳಗಿನ ಮಣ್ಣು ತೆಗೆಯಲಾಗುತ್ತದೆ.

**ಸಾಮಗ್ರಿಗಳು:** ಜಿಂಕ್–೨.೫೦ ಕೆಜಿ; ಕಾಪರ್–೧೫೦ ಗ್ರಾಂ.; ಬೆಳ್ಳಿ–೧೨೫ ಗ್ರಾಂ.; ಸೋಲ್ಡರ್–೧೦೦ ಗ್ರಾಂ.

**ಪದ್ಧತಿ:** ಗಾರೆಮಣ್ಣಿನ ಆಕೃತಿಯನ್ನು ಪ್ರಥಮ ಹಂತದಲ್ಲಿ ತಯಾರಿಸಲಾಗುತ್ತದೆ. ಕೆಂಪು ಮಣ್ಣಿನಿಂದ ಗೆರೆಗಳ ಸಾಂಚಾವನ್ನು ತಯಾರಿಸಲಾಗುತ್ತದೆ. ಅದರಲ್ಲಿ ರೌಜನ್ ಕಾಯಿಸಿ ಮಣ್ಣಿನಲ್ಲಿ ಬೆರೆಸಲಾಗುತ್ತದೆ. ತಂಪಾದ ತಕ್ಷಣ ಗೋಲಾಕಾರದ ಸಾಂಚಾದಲ್ಲಿ ಹಾಕಿ ಇಡಲಾಗುತ್ತದೆ. ಅದರ ಅವಧಿ ಒಂದು ವಾರವಾಗಿರುತ್ತದೆ. ಒಣಗಿದ ಮೇಲೆ ಡೈಯಲ್ಲಿ ಹಾಕಿಕೊಂಡು ಜಿಂಕ್ ಹಾಗೂ ಕಾಪರನ್ನು ಅನಿಲಗೊಳಿಸಿ ಎರಡರ ಮಿಶ್ರಣವನ್ನು ಸಾಂಚಾದಲ್ಲಿ ಹಾಕಲಾಗುತ್ತದೆ. ಇದರಂತೆ ಗೋಬಲೇಟ್ ತನ್ನ ಮೂಲ ಆಕಾರವನ್ನು ಪಡೆಯುತ್ತದೆ. ಇದರ ನಂತರ ಡೈಯಿಂದ ಹೊರಗೆ ತೆಗದು ಒಳಗಿನ ಮಣ್ಣು ತೆಗೆಯಲಾಗುತ್ತದೆ. ಪ್ಲೈಟ್ ಫೈಲ್ ಹಾಗೂ ಹಾಫ್ ರೌಂಡ್ ಫೈಲ್ ನಿಂದ ಈ ಕಲಾಕೃತಿಯ ಮೇಲೆ ಒರೆಸಿ ಅದನ್ನು ಸಪಾಟಾಗಿ ಮಾಡಲಾಗುತ್ತದೆ. ತದನಂತರ ಬಫ್ ಯಂತ್ರದ ಮೇಲೆ ಇಮ್ರಿಯಿಂದ ಇದನ್ನು ಪಾಲಿಶ್ ಮಾಡಲಾಗುತ್ತದೆ. ಇದರಿಂದ ಅದರ ಮೇಲೆ ವಿಶಿಷ್ಟ ಆಕೃತಿಗಳನ್ನು ನಿರ್ಮಿಸುವಲ್ಲಿ ಸಹಕಾರಿಯಾಗುತ್ತದೆ. ಸದರಿ ಆಕೃತಿಯ ಮೇಲೆ ವಿಶಿಷ್ಟ ಆಕೃತಿ ಮಾಡುವುದಕ್ಕಿಂತ ಮೊದಲು ಸಾದಾ ಬಣ್ಣವನ್ನು ಹಚ್ಚಲಾಗುತ್ತದೆ. ತದನಂತರ ಆ ಆಕೃತಿಯ ಮೇಲೆ ಕೆತ್ತನೆ ಮಾಡಲಾಗುತ್ತದೆ. ಅಂದರೆ ಛಿಲವಾಯಿ, ಖಲಮ್, ಖುದಾಯಿಕಾ ಖಲಮ್, ಖಜಾನೆ ಕಾ ಖಲಮ್, ಚುರಾ ಬೆಳ್ಳಿ ಕೂಡಿಸುವ ಖಲಮ್ ಕಾರಕಶಿ ಕುಡಿಸುವ ಖಲಮ್, ಪತರಾ ಕೂಡಿಸುವ ಡಿಸೈನ್ ಕೂಡಿಸುವ ಖಲಮ್ ಇತ್ಯಾದಿ ಸಾಮಗ್ರಿಗಳು ಉಪಯೋಗಿಸಲ್ಪಡುತ್ತದೆ.

ಕಲಾಕೃತಿ ತಯಾರಿಕೆಗಾಗಿ ತಗಲುವ ವೆಚ್ಚ: ೫೬೫೦/– ಸದರಿ ಕಲಾಕೃತಿಯ ಮಾರಾಟದ ಬೆಲೆ: ೧೧೭೫೦/– ಕಲಾಕೃತಿ ತಯಾರಿಸಲು ತಗಲುವ ಅವಧಿ ಕನಿಷ್ಠ ಎರಡು ತಿಂಗಳು. ಈ ಕಲಾಕೃತಿಗಾಗಿ ಸದರಿಯವರಿಗೆ ೨೦೦೦ನೇ ಸಾಲಿನಲ್ಲಿ ರಾಷ್ಟ್ರೀಯ ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು. ಅಲ್ಲದೇ ೨೦೦೪ರಲ್ಲಿ ಸಾರಸ್ ಉತ್ತಮ ಬಿದ್ರಿ ಪ್ರದರ್ಶನವೆಂದು ಇವರಿಗೆ ಪ್ರಶಸ್ತಿ ನೀಡಿ ಗೌರವಿಸಲಾಯಿತು.

**ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ ಅವರ ಕಲಾಕೃತಿಗಳು(ಕಲಬುರ್ಗಿ ಜಿಲ್ಲೆ)**

೧. **ಶನೇಶ್ವರ ಶಿಲಾಶಿಲ್ಪ:** ಶಿಲೆಯಿಂದ ನಿರ್ಮಿಸಿರುವ ಕಲಾಕೃತಿಯು ಏಕಶಿಲೆಯಿಂದ ಕೆತ್ತಲ್ಪಟ್ಟಿದೆ. ವಿಗ್ರಹದ ಹಿಂದಿನ ಭಾಗದಲ್ಲಿ ಮಂಟಪದ ಕಮಾನು ಇದೆ. ಕಮಾನಿನ ಎಡಬಲ ಪಟ್ಟಿಕೆಗಳಲ್ಲಿ ನಕ್ಷಾವಿನ್ಯಾಸ ಕೆತ್ತಲಾಗಿದೆ. ಮೇಲ್ಭಾಗದಲ್ಲಿ ಒಂದು ಅಂತಸ್ತನ್ನು ನಿರ್ಮಿಸಿ ಅದರಲ್ಲಿ

ಪುನರಾವರ್ತಿತ ನಕ್ಷೆಗಳನ್ನು ರಚನೆ ಮಾಡಲಾಗಿದೆ. ಇದರ ಮೇಲೆ ಗೋಪುರದಂತೆ ವಿನ್ಯಾಸ ಕೆತ್ತಿ ಮಧ್ಯಭಾಗದಲ್ಲಿ ಕಾಕರಾಜನನ್ನು ಆಲಂಕಾರಿಕ ಶೈಲಿಯಲ್ಲಿ ಕೆತ್ತಿಲಾಗಿದೆ. ಗೋಪುರಕ್ಕೆ ಹೊಂದಿಕೊಂಡಂತೆ ಎಡಬಲ ಬದಿಯಲ್ಲಿ ಬದಿಯ ನೋಟದ ಕಾಕರಾಜನನ್ನು ಆಲಂಕಾರಿಕ ಶೈಲಿಯಲ್ಲಿ ಕೆತ್ತಲಾಗಿದೆ.

ಗೋಪುರಕ್ಕೆ ಹೊಂದಿಕೊಂಡಂತೆ ಎಡಬಲ ಬದಿಯಲ್ಲಿ ಬದಿಯ ನೋಟದ ಕಾಕರಾಜನ ವಿನ್ಯಾಸ ಕಂಡುಬರುತ್ತದೆ. ಅಧಿಷ್ಠಾನದ ಮೇಲೆ ಕಾಕರಾಜನು ತನ್ನ ರೆಕ್ಕೆ ಬಿಚ್ಚಿ ನಿಂತಿರುವುದು ಆದರ ಮೇಲೆ ಶನೇಶ್ವರನು ನಿಂತ ಭಂಗಿ ಅತ್ಯಂತ ಗಂಭೀರ ಸ್ವರೂಪವನ್ನು ಬಿಂಬಿಸುವಂತಿದೆ. ಎಡ ಕೈಯಲ್ಲಿ ರಾಕ್ಷಸನನ್ನು ಹಿಡಿದು ಬಲಕೈ ಮೇಲೆತ್ತಿ ಗದೆಯಿಂದ ಅವನಿಗೆ ಭಾರಿ ಹೊಡೆತ ಕೊಡುವ ಭಂಗಿ ಭಾವನಾತ್ಮಕವಾಗಿ ಕೆತ್ತಲ್ಪಟ್ಟಿದೆ. ಶನೇಶ್ವರ ಸ್ವಾಮಿಯು ನಿಂತಿರುವ ಭಂಗಿ ಭಾರಿ ರಭಸವನ್ನು ಸೂಚಿಸುತ್ತದೆ. ತಲೆಯಲ್ಲಿ ಕಿರೀಟ, ಕಾಲು ಕೈಗಳಲ್ಲಿ ಕಡಗ, ಕೊರಳಲ್ಲಿ ಮಣಿಗಳ ಸರಗಳು ಸುಂದರವಾಗಿ ರಚನೆಗೊಂಡಿವೆ. ಕಿವಿಯಲ್ಲಿ ಕುಂಡಲ ವಸ್ತ್ರ ವಿನ್ಯಾಸ ಆಕರ್ಷಕವಾಗಿ ಕಂಡುಬರುತ್ತವೆ. ಕೆಳಭಾಗದಲ್ಲಿ ರಾಕ್ಷಸನು ಒಂದು ಕೈಯಲ್ಲಿ ಹಕ್ಕಿಯನ್ನು ಹಿಡಿದು ಗದೆಯ ಹೊಡೆತವನ್ನು ತಪ್ಪಿಸಿಕೊಳ್ಳುತ್ತಾನೆ ಎನ್ನುವಂತೆ ಶಿಲ್ಪದಲ್ಲಿ ಭಾವವೂ ಇದೆ. ಪೀಠದ ಕೆಳಗಿನ ಪಟ್ಟಿಕೆಗಳಲ್ಲಿ ಆಲಂಕಾರಿಕ ನಕ್ಷೆಗಳು ಸುಳಿವು ಕುಸುರಿ ಸೂಕ್ಷ್ಮ ಕೆತ್ತನೆ ಕಂಡುಬರುತ್ತದೆ, ಶನೇಶ್ವರನ ಹಿಂದಿನ ಮಂಟಪದ ಹಿಂಭಾಗದಲ್ಲಿ ಪ್ರಭಾವಳಿಯ ರಚನೆ ಇರುವುದು ಒಂದು ವೈಶಿಷ್ಟ್ಯ ಪೂರ್ಣವಾಗಿದೆ. ಪ್ರಭಾವಳಿಯ ಮೇಲೆ ಮಾವಿನಕಾಯಿ ಬಳ್ಳಿ ಹೂ ನಕ್ಷೆ ನೈಸರ್ಗಿಕ ಸ್ವರೂಪದಿಂದ ಕೂಡಿದೆ. ಕಲ್ಯಾಣ ಚಾಲುಕ್ಯರ ವಾಸ್ತುಶಿಲ್ಪದಲ್ಲಿ ಬಾಗಿಲುಗಳ ಮೇಲೆ ಇಂತಹ ನಕ್ಷೆಗಳು ಇರುವುದು ಕಂಡುಬರುತ್ತವೆ. ಸ್ಥಳೀಯ ವಾಸ್ತುಶಿಲ್ಪದ ಶೈಲಿಯ ಪ್ರಭಾವ ಕಲಾವಿದ ಮೇಲೆ ಪ್ರೇರಣೆ ಆಗಿರುವುದು ಕಂಡುಬರುತ್ತದೆ.

೨. **ತಾಯಿ ಮಹಿಷಮರ್ದಿನಿ ಶಿಲಾಶಿಲ್ಪ:** ಸುಮಾರು ಐದು ಪೂಟ್ ಎತ್ತರವಿರುವ ತಾಯಿ ಮಹಿಷಮರ್ಧಿನಿಯ ಶಿಲಾಶಿಲ್ಪ ಅತ್ಯಂತ ಆಕರ್ಷಣೀಯವಾಗಿದೆ. ಅಧಿಷ್ಠಾನದ ಪೀಠದ ಮೇಲೆ ಎಡಕಾಲನ್ನು ಇಟ್ಟಿದ್ದಾಳೆ. ಬಲಕಾಲನ್ನು ಕೋಣದ ರೂಪದಲ್ಲಿರುವ ಮಹಿಷಾಸುರನ ಮೇಲೆ ಕಾಲಿನಿಂದ ಮೆಟ್ಟಿ ನಿಂತಿರುವಂತೆ ಶಿಲ್ಪರಚನೆ ಮಾಡಲಾಗಿದೆ.

ಮಹಿಷಾಸುರನು ಕೋಣದಲ್ಲಿ ಪ್ರವೇಶವಾಗಿ ಕೋಣನಾಗಿ ಬಂದು ದೇವಿಯನ್ನು ಯುದ್ಧದಲ್ಲಿ ಸೋಲಿಸಲು ಬರುತ್ತಾನೆ. ದೇವಿಯು ಅಷ್ಟಭುಜಗಳನ್ನು ತಾಳಿ ಗದೆ, ಶಂಕ, ಭರ್ಚಿ ಪಾಶ, ಧನಸ್ಸು, ಡಕ್ಕೆ, ಕೈಯಲ್ಲಿ ಕರಪಾತ್ರ, ಎಲ್ಲವನ್ನೂ ಧರಿಸಿ ತ್ರಿಶೂಲದಿಂದ ಮಹಷಾಸುರನಿಗೆ ಎದೆಗೆ ತಿವಿದು ಕೊಲ್ಲುತ್ತಾಳೆ. ಮಹಿಷಾಸುರನನ್ನು ಸಂಹರಿಸಲು ಮೊದಲು ದೇವಿಯು ಕೋಣನ ಶಿರಸ್ಸನ್ನು ಕಡಿಯುತ್ತಾಳೆ ಆಗ ಕೋಣನ ಶಿರಸ್ಸಿನಂದ ಮಹಿಷ ಹೊರಗೆ ಬರುತ್ತಾನೆ. ನಂತರ ದೇವಿಯಿಂದ ಮಹಿಷನ ವಧೆಯಾಗುತ್ತದೆ. ಆಗ ದೇವಿಗೆ ಮಹಿಷನನ್ನು ಕೊಂದಿದ್ದಕ್ಕಾಗಿ ಮಹಿಷಾಸುರ ಮರ್ಧಿನಿ ಎಂದು ದೇವತೆಗಳ ನಾಮವನ್ನು ಕರೆಯತ್ತಾರೆ. ದೇವಿಯು ಮಾಡಿರುವ ಒಂದೊಂದು ಅವತಾರಗಳಿಗೂ ಒಂದಂದು ಹೆಸರು ಬಂದಿದೆ.

ಮಹಿಷಾಸುರ ಮರ್ಧಿನಿಯ ಶಿಲ್ಪದ ಹಿಂದೆ ಪ್ರಭಾವಳಿ ಇದೆ. ಪ್ರಭಾವಳಿಯ ಸುತ್ತಲೂ ಪುನರಾವರ್ತಿತ ನಕ್ಷಾವಿನ್ಯಾಸ ಕಂಡುಬರುತ್ತದೆ. ದೇವಿಯ ಬಲಭಾಗದಲ್ಲಿ ಸಿಂಹವು ನಾಲಿಗೆ ಚಾಚಿಕೊಂಡು ನಿಂತಿದೆ. ಸಿಂಹದ ಕೆಳಭಾಗದಲ್ಲಿ ಕೈ ಮುಗಿದು ರಕ್ಷಣೆ ಕೋರುವ ಒಬ್ಬ ರಾಕ್ಷಸನು ಕುಳಿತಿದ್ದ ಶಿಲ್ಪವಿದೆ. ದೇವಿಶಿಲ್ಪದ ಎಡಭಾಗದಲ್ಲಿ ಕೈ ಮುಗಿದು ತಲೆಕೆಳಗೆ ಮಾಡಿ ಕಾಲು ಮೇಲೆ ಮಾಡಿ ಕೆಳಗೆ ಬೀಳುತ್ತಿರುವಂತೆ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ದೇವಿಯು ಎಡಕೈಯಿಂದ ಮಹಿಷಾಸುರನನ್ನು ವಧೆ ಮಾಡುವ ದೃಶ್ಯ ನಯನಮನೋಹರವಾಗಿದೆ. ಪ್ರಭಾವಳಿಯ ಎಡಬಲ ಬದಿಯಲ್ಲಿ ಸೂರ್ಯ ಚಂದ್ರರರ ಸಾಂಕೇತಿಕ ಉಬ್ಬುಶಿಲ್ಪಗಳಿರುವುದು ಒಂದು ವೈಶಿಷ್ಟ್ಯವಾಗಿದೆ.

೩. **ಶಿವಲಂಗು ಶಿಲಾಶಿಲ್ಪ:** ಶಿಲೆಯಿಂದ ನಿರ್ಮಿತವಾದ ಶಿವಲಿಂಗ ಮೂರು ಪೂಟ್ ಒಂಬತ್ತು ಇಂಚು ಗಾತ್ರದಲ್ಲಿ ಇದೆ. ಇದರಲ್ಲಿ ಮೂರು ಭಾಗಗಳನ್ನಾಗಿ ವಿವರಿಸಲಾಗಿದೆ. ಕೆಳಗಿನ ವೃತ್ತಾಕಾರದಲ್ಲಿರುವ ಬ್ರಹ್ಮಸ್ಥಾನ, ಮಧ್ಯದಲ್ಲಿ ವಿಷ್ಣುಸ್ಥಾನ, ಪಾಣಿಬಟ್ಟಲು ಶಕ್ತಿಸ್ಥಾನ. ಅದರ ಮೇಲೆ ಇರುವ ಗೋಲಾಕಾರದ ಶಿವ ಸ್ಥಾನ ಮಧ್ಯಭಾಗದಲ್ಲಿ ಜಲಹರಿ ಇದೆ. ನೋಡಲು ಏಕರೂಪದಲ್ಲಿ ಶಿಲೆ ಇದ್ದರೂ ಇದರ ಭಾಗಗಳು ಈ ರೀತಿ ಇವೆ. ಲಿಂಗ ಎಂದರೆ ಆಕಾರ ರೂಪಿ ಯಾದ ಶಿವನು ನಿರಾಕಾರ ಸಾಕಾರದಿಂದ ಲಿಂಗ ರೂಪ ಧರಿಸಿದ್ದಾನೆ. ಲೀನತ್ವಾತ್ ಲಿಂಗಂ ಸಕಾಲವೂ ಯಾವುದರಲ್ಲಿ ಲೀನವಾಗಿರವುದೋ ಅದೇ ಲಿಂಗ ಎಂಬುದು ಶಬ್ದದ ಉತ್ಪತ್ಯಾರ್ಥ ಜಗತ್‌ಸೃಷ್ಟಿಯು ನಡೆದಿದೆ. ಲಿಂಗವು ಈ ಜಗತ್ತಿನ ನಿಷ್ಕಲ ಶಾಂತವಾಜ್ಮನೋತೀತ ಗೋಚರವಾದ ಶಕ್ತಿಯುಳ್ಳದೆಂದು ಹೇಳಬಹುದು. ನಾದವು ಲಿಂಗ ರೂಪವಾಗಿರುತ್ತದೆ. ಬಿಂದುವು ಪೀಠಾಕಾರ ವಾಗಿರುತ್ತದೆ. ಲಿಂಗ ಶಿವಾತ್ಮಕವಾದರೆ ಅದರ ವೇತವು ಶಕ್ತಾತ್ಮಕವಾದದ್ದು ಎಂಬುದನ್ನು ಗ್ರಹಿಸಬೇಕು ಆದ್ದರಿಂದ ಸಕಲವೂ ಶಿವಮಯವಾಗಿರುತ್ತದೆ. ನಾದ ಬಿಂದುಗಳು ಸಮಾನ ಎಂಬುದನ್ನು ಅರಿತುಕೊಳ್ಳಬೇಕು. ಶಿವಲಿಂಗಗಳನ್ನು ಲೋಹದಿಂದ ಮೃತ್ತಿಕೆಯಿಂದ ಮರದಿಂದ ಶಿಲೆಯಿಂದ ರಚನೆ ಮಾಡಲಾಗುತ್ತದೆ. ಶಿವಲಿಂಗವು ಶೈವರಿಗೆ ಶಿವನನ್ನು ಆರಾಧಿಸಲು ಸ್ಥಾಪಿಸಲ್ಪಟ್ಟದ್ದಾಗಿದೆ. ಇಷ್ಟಲಿಂಗ, ಪ್ರಾಣಲಿಂಗ, ಸ್ಥಾವರಲಿಂಗ ಎಂದು ಆರಾಧಿಸುತ್ತಾರೆ.

ಶಿವನು ಲಿಂಗರೂಪದಲ್ಲಿ ಪ್ರಕಾಶಿಸುತ್ತಾನೆ. ಶಿವಲಿಂಗವನ್ನು ಪ್ರಮಾಣಪೂರಕವಾಗಿ ಕೆತ್ತನೆ ಮಾಡಲಾಗಿದೆ. ಪಾಣಿಪೀಠ ಜಲಪೀಠ ನಂತರ ಶಿವನ ಓಂಕಾರ ರೂಪ, ಹೀಗೆ ತಾಲಮಾನಗಳನ್ನು ಆಯಾದಿ ವರ್ಗಗಳನ್ನು ಬಳಸಿಕೊಂಡು ಸಾಂಪ್ರದಾಯಿಕ ಶೈಲಿಯಲ್ಲಿ ಶಿವಲಿಂಗ ಕೆತ್ತನೆ ಮಾಡಲಾಗಿದೆ. ಲಿಂಗದ ಹೊಂದಾಣಿಕೆ ನೋಡಿದರೆ ಇದನ್ನು ಜಂತ್ರ ಹಾಕುವ ಮೂಲಕ ತಿರುಗುಣಿಯಿಂದ ಕೆತ್ತನೆ ಮಾಡಿರಬಹುದೇನೋ ಅನ್ನಿಸುತ್ತದೆ. ಏಕಶಿಲೆಯಲ್ಲಿ ವೃತ್ತಾಕಾರವಿರುವಂತೆ ರಚನೆ ಮಾಡುವುದಕ್ಕೆ ಬಹಳ ತಾಳ್ಮೆ ಬೇಕಾಗುತ್ತದೆ.

೪. **ಗಣೇಶನ ಶಿಲಾಶಿಲ್ಪ:** ಗಣೇಶನ ಶಿಲ್ಪವು ಒಂದು ಪೂಟ್ ಆರು ಇಂಚು ಎತ್ತರದಲ್ಲಿ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಗಣೇಶನ ಸೊಂಡಿಲು ಎಡಬದಿಗೆ ವಾಲಿಕೊಂಡು ಮೋದಕವನ್ನು ಸ್ಪರ್ಶಿಸುವಂತಿದೆ. ಪದ್ಮಪೀಠದ ಮೇಲೆ ಕುಳಿತಿರುವ ಗಣೇಶನು ಎರಡು ಕಾಲುಗಳನ್ನು ಮಡಿಸಿಕೊಂಡು

ಪೀಠಸ್ಥನಾಗಿದ್ದಾನೆ. ಹಿಂದಿನ ಎರಡು ಕೈಗಳಲ್ಲಿ ತ್ರಿಶೂಲ, ಪಾಶವನ್ನು ಹಿಡಿದಿರುವುದು ಕಂಡು ಬರುತ್ತದೆ. ಗಣೇಶನ ಕಿರೀಟವೂ ವಿಜಯನಗರ ಶೈಲಿಯಿಂದ ಕೂಡಿದ್ದಾಗಿದೆ. ಆದರೆ ಗಣೇಶನ ಎಡಬುಜದಿಂದ ಹೊಟ್ಟೆಯ ಕೆಳಭಾಗದವರೆಗೂ ಬಂದು ಮುಂದೆ ಬಲಬದಿಗೆ ಜನಿವಾರದಂತೆ ವೈಜಂತಿ ಮಾಲೆಯನ್ನು ಕೆತ್ತನೆ ಮಾಡಿರುವುದರಿಂದ ಇದು ಹೊಯ್ಸಳ ಶೈಲಿಯನ್ನು ಪ್ರತಿಬಿಂಬಿಸುವಂತೆ ಕಾಣುತ್ತದೆ. ಗಣೇಶನ ಆಭರಣಗಳು ಅಧಿಷ್ಠಾನದ ನಕ್ಷಾವಿನ್ಯಾಸಗಳನ್ನು ನೋಡಿದರೆ ವಿಜಯನಗರ, ಹೊಯ್ಸಳ ಶೈಲಿಯು ಎರಡೂ ಮೇಳೈಸಿದಂತೆ ಶಿಲ್ಪ ಕೆತ್ತನೆ ಮಾಡಿರುವುದು ವೈಶಿಷ್ಟ್ಯಪೂರ್ಣವಾಗಿದೆ. ವಸ್ತ್ರವಿನ್ಯಾಸ ವಿಗ್ರಹದ ಹಿಂದಿನ ಪ್ರಭಾವಳಿ, ಕೀರ್ತಿ ಮುಖ ಅನೇಕ ಪುನರಾವರ್ತಿತ ನಕ್ಷೆಗಳಿಂದ ಕೂಡಿವೆ. ನಕ್ಷಾವಿನ್ಯಾಸಗಳು ಅತ್ಯಂತ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಗಣೇಶನ ವಿಗ್ರಹದ ಪ್ರಮಾಣವನ್ನು ನೋಡಿದರೆ ವಿಜಯನಗರ ಶೈಲಿಯು ಸ್ಪಷ್ಟವಾಗಿ ಕಂಡುಬರುತ್ತದೆ.

೫. **ಏಕಶಿಲೆಯ ಸೂರ್ಯ ರಥಶಿಲ್ಪ:** ಸೂರ್ಯ ರಥವು ಏಕಶಿಲೆಯಲ್ಲಿ ನಿರ್ಮಿತವಾಗಿರುವುದು ಕಲಾವಿದರ ಜಾಣ್ಮೆ ಮತ್ತು ತಾಳ್ಮೆಯನ್ನು ಪ್ರತಿಬಿಂಬಿಸುತ್ತದೆ. ಅಶ್ವಾರೂಢನಾದ ಸೂರ್ಯದೇವನು ರಥವನ್ನೇರಿ ಸಪ್ತ ಅಶ್ವಗಳನ್ನು ರಥಕ್ಕೆ ಹೂಡಿ ಆತನ ಸಾರಥಿಯಾದ ಅರುಣನೊಂದಿಗೆ ಶಿಲ್ಪ ಕೆತ್ತನೆ ಮಾಡಲಾಗಿದೆ. ಎಡ–ಬಲ ಬದಿಯಲ್ಲಿ ಛಾಯಾ ಸಂಧ್ಯಾ ದೇವಿಯರ ವಿಗ್ರಹಗಳನ್ನು ಕೆತ್ತಿರುವುದು ಒಂದು ವಿಶೇಷವೆನಿಸುತ್ತದೆ. ಸೂರ್ಯನು ರಥವನ್ನೇರಿ ಒಳಗೆ ಕುಳಿತಿದ್ದಾನೆ. ರಥದ ಹಿಂಭಾಗದಲ್ಲಿ ಪ್ರಭಾವಳಿಯನ್ನು ಬಹು ಸೂಕ್ಷ್ಮ ಕೆತ್ತನೆಯಲ್ಲಿ ಕೆತ್ತಿ ಚಿತ್ರಿಸಲಾಗಿದೆ.

ಸೂರ್ಯನ ಕಿರಣಗಳು ಆತನ ಸುತ್ತಲೂ ಪ್ರಭೆಯನ್ನು ಸೂಸುವಂತೆ ವೃತ್ತಾಕಾರದಲ್ಲಿ ಕಿರಣಗಳನ್ನು ಮಾಡಿರುವುದು ಒಂದು ಮಹತ್ವವೇ ಆಗಿದೆ. ಎದುರುನೋಟದಲ್ಲಿ ಸೂರ್ಯನ ರಥ ಬರುತ್ತದೆಯೇನೊ ಎನ್ನುವಂತೆ ಕೆತ್ತನೆ ಮಾಡಲಾಗಿದೆ. ಅಶ್ವಗಳಿಗೆ ಮುಕುಟ, ಜೂಲ, ನಡುಪಟ್ಟಿ, ಹಣೆಗೆಡುರಾಯಿ, ಮುಂತಾದ ಸೂಕ್ಷ್ಮ ಕೆತ್ತನೆ ಆಶ್ಚರ್ಯವನ್ನು ಉಂಟುಮಾಡುತ್ತದೆ. ೧೭ ಸೆಂಟಿ ಮೀಟರ್ ಎತ್ತರದಲ್ಲಿ ೯ ಸೆಂಟಿಮೀಟರ್ ಅಗಲದಲ್ಲಿ ಇಷ್ಟು ಮೂರ್ತಿಗಳನ್ನು ಕೆತ್ತನೆ ಮಾಡುವುದೆಂದರೆ ಅಸಾಧ್ಯವೇ ಸರಿ. ಅಶ್ವಗಳ ಕೆಳಗೆ ನಕ್ಷಾವಿನ್ಯಾಸಗಳು, ಅದರ ಕೆಳಗೆ ಪೀಠವನ್ನು ರಚನೆ ಮಾಡಿ ಕೆತ್ತನೆ ಮಾಡಲಾಗಿದೆ. ಅತ್ಯಂತ ಚಿಕ್ಕ ಗಾತ್ರದ ಕಲ್ಲಿನಲ್ಲಿ ಸೂರ್ಯ ರಥವನ್ನು ಏಕಶಿಲೆಯಲ್ಲಿ ಕೆತ್ತಿರುವುದನ್ನು ನೋಡಿದರೆ ಕಲಾವಿದರಿಗೆ ಕೊನಾರ್ಕ್ ಸೂರ್ಯ ದೇಗುಲದ ಪ್ರಭಾವ ಇದರ ಮೇಲೆ ಆದಂತೆ ಕಾಣುತ್ತದೆ. ಕೊನಾರ್ಕ್‌ನಲ್ಲಿ ಏಕಶಿಲೆಯಲ್ಲಿ ಸೂರ್ಯ ರಥ ಸಮೇತ ಸೂರ್ಯ ದೇವಾಲಯವಿರುವುದನ್ನು ನಾವೂ ಗಮನಿಸಬಹುದು ಇದರ ಪ್ರೇರಣೆಯಂತೆಯೇ ಏಕಶಿಲೆಯಲ್ಲಿಯೇ ಸೂರ್ಯ ರಥ ಸಮೇತ ಪತ್ನಿಯರ ಸಮೇತನಾಗಿ ಸೂರ್ಯನು ಸಪ್ತ ಅಶ್ವಾರೂಢನಾಗಿ ಶಿಲೆಯಿಂದ ಕೆತ್ತಲ್ಪಟ್ಟ ಕಲಾಕೃತಿ ಒಂದು ವೈಶಿಷ್ಟ್ಯಪೂರ್ಣ ದಾಖಲೆಯೇ ಆಗಿದೆ.

**ಲೋಹಶಿಲ್ಪಿ ಮಾನಯ್ಯ ಬಡಿಗೇರ ಅವರ ಕಲಾಕೃತಿಗಳು(ಕಲಬುರ್ಗಿ ಜಿಲ್ಲೆ)**

೧. **ಪ್ರತಿಷ್ಠಾಪಿತ ನೂತನ ವಿಗ್ರಹಗಳ ಸಮೂಹ ಮಂಟಪ:** ತಿಂಥಿಣಿ ಮೌನೇಶ್ವರ ಐಕ್ಯ ಸ್ಥಾನದಲ್ಲಿ ಕಂಡುಬರುವ ಸಾಂಕೇತಿಕ ಹೂಜಿ, ಚಪಗೊಡಲಿ ಮಾದರಿಯಲ್ಲಿ ಪಂಚಲೋಹದ

ಪೀಠ, ಪ್ರಭಾವಳಿ ಮತ್ತು ಬೆಳ್ಳಿಯಲ್ಲಿ ಹೂಜ, ಚಪಗೊಡಲಿಗಳನ್ನು ನಿರ್ಮಿಸಲಾಗಿದೆ. ಹೂಜಿಯ ಮೇಲೆ ಸದಾ ನೆರಳಾಗಿ ನಿಂತಿರುವ ಏಳು ಹೆಡೆ ನಾಗದೇವನು ಭೂಷಿತನಾಗಿದ್ದಾನೆ. ಪ್ರಭಾವಳಿಯ ಅರ್ಧ ವೃತ್ತಾಕಾರದ ಭಾಗವನ್ನು ದೇವಲೋಕವೆಂದು ಪರಿಗಣಿಸಿ ಕಮಲ ದಳಗಳಿಂದ ಅಲಂಕರಿಸ ಲಾಗಿದೆ. ಶಿವನ ಪರಮಭಕ್ತನಾದ ಕೀರ್ತಿಮುಖನು ಎಲ್ಲಾ ದೇವತೆಗಳನ್ನು ಆಹ್ವಾನಿಸುವಂತೆ ಪ್ರಭಾವಳಿಯ ಮೇಲಿನ ಮಧ್ಯಭಾಗದಲ್ಲಿ ಹೊಂದಿಸಲಾಗಿದೆ. ಭಕ್ತನ ಆಹ್ವಾನದಂತೆ ಪಂಚಮುಖಿ ಗಾಯತ್ರಿದೇವಿ, ಕಾಳಿಕಾದೇವಿ, ಮನುಬ್ರಹ್ಮ, ಮಯಬ್ರಹ್ಮ, ತ್ವಷ್ಟುಬ್ರಹ್ಮ, ಶಿಲ್ಪಿ ಬ್ರಹ್ಮ, ವಿಶ್ವಜ್ಞಬ್ರಹ್ಮ, ವೀರಭದ್ರ ಮತ್ತು ಪಂಚಮುಖಿ ವಿಶ್ವಕರ್ಮರೆಲ್ಲರೂ ಆಸೀನರಾಗಿರುವಂತೆ ಹೊಂದಿಸಲಾಗಿದೆ. ಇಂತಹ ಸುಂದರ ದೇವಲೋಕಕ್ಕೆ ಆಧಾರವೆಂಬಂತೆ ಎರಡೂ ಬದಿಗಳಲ್ಲಿ ಆನೆಗಳು ತನ್ನ ವೈರಿ ಗಳಾದ ಸಿಂಹಗಳಿಗೆ ಸೊಂಡಿಲಿನಿಂದ ಮೇಲಕ್ಕೆತ್ತಿ ದೇವಲೋಕದ ದರುಶನ ಮಾಡಿಸಲು ಸಹಕರಿಸುವ ರೀತಿಯಲ್ಲಿ ಭೂ ಕೈಲಾಸದ ಕಂಬಗಳಿಗೆ ಒರಗಿ ನಿಂತಿವೆ. ಬಲ ಕಂಬದಲ್ಲಿ ವೇದದ ಸಾಂಕೇತಿಕವಾದ ನಾಯಿಯೊಂದಿಗೆ, ಹಾವಿನಾಳದ ಕಲ್ಲಪ್ಪಯ್ಯನವರು, ಅವರಿಂದ ಶಾಪವಿಮೋಚಿತರಾದ ಶೇಷಮ್ಮ, ಶೇಷಪ್ಪರೆಂಬ ಸದ್ಭಕ್ತ ದಂಪತಿಗಳು. ಹೀಗೆ ಜಗದ್ಗುರು ಮೌನೇಶ್ವರರ ಅವತಾರಕ್ಕೆ ಕಾರಣೀಭೂತರಾದ ಇವರೆಲ್ಲರ ಕಲ್ಪನಾಮೂರ್ತಿಗಳನ್ನು ಸಂಯೋಜಿಸಲಾಗಿದೆ. ಅದೇ ರೀತಿ ಎಡಭಾಗದಲ್ಲಿ ಜಗತ್ಕಲ್ಯಾಣ ಕ್ಕಾಗಿ ಸಂಚರಿಸಿ ತಿಂಥಿಣಿ ಕ್ಷೇತ್ರದಲ್ಲಿ ಹೂಜಿ ಚಪಗೊಡಲಿಯನ್ನಿಟ್ಟು ಐಕ್ಯರಾದ ಮೌನೇಶ್ವರರ ಮೂರ್ತಿಯನ್ನು ಹೊಂದಿಸಲಾಗಿದೆ. ಪಂಚ ಉದ್ಯೋಗಗಳನ್ನು ಪ್ರಾರಂಭಿಸಿದ ಮೂಲ ಗೋತ್ರ ಪುರುಷರಾದ ಸಾನಗ ಋಷಿ(ಕಬ್ಬಿಣದ ಶಿಲ್ಪ ಪ್ರವರ್ತಕ), ಸನಾತನ ಋಷಿ(ಕಾಷ್ಠ ಶಿಲ್ಪ ಪ್ರವರ್ತಕ), ಅಹಭೂನ ಋಷಿ(ಕಂಚಿನ ಶಿಲ್ಪ ಪ್ರವರ್ತಕ), ಪ್ರತ್ನ ಋಷಿ(ಶಿಲೆ ಶಿಲ್ಪ ಪ್ರವರ್ತಕ), ಸುಪರ್ಣ ಋಷಿ(ಸುವರ್ಣ ಶಿಲ್ಪ ಪ್ರವರ್ತಕ)ರ ಮೂರ್ತಿಗಳನ್ನು ಪೀಠದ ಮುಂಭಾಗದಲ್ಲಿ ಸಂಯೋಜಿಸಲಾಗಿದೆ.

ಪ್ರಭಾವಳಿ ಕಮಲ ದಳಗಳಲ್ಲಿದ್ದ ಲಿಂಗ ಮತ್ತು ನಂದಿಯ ಚಿಕ್ಕ ಶಿಲ್ಪಗಳು ಶಿವಭಕ್ತರ ಸಾಂಕೇತಿಕವಾಗಿವೆ. ಭಕ್ತಿ ಭಾವದಿಂದ ಆರಾಧನೆ ಮಾಡುತ್ತಿರುವ ಹೆಚ್.ಕೆ. ಸೀತನೂರ ಮನೆತನ ಅಜರಾಮರವಾಗಿರಲೆಂಬ ಆಶಯದಿಂದ ಸಾಂಕೇತಿಕವಾಗಿ ಸೂರ್ಯ ಚಂದ್ರರ ಚಿಕ್ಕ ಶಿಲ್ಪಗಳನ್ನು ಹೊಂದಿಸಲಾಗಿದೆ. ಸುಂದರವಾದ ಚಿಕ್ಕ ಚಿಕ್ಕ ೨೮ ರಜತ ಶಿಲ್ಪಗಳಿಂದ ಅಲಂಕೃತಗೊಂಡ ಅಪರೂಪದ ಪೀಠ ಪ್ರಭಾವಳಿಯ ಮಧ್ಯದಲ್ಲಿ ಪ್ರಜ್ವಲಿಸುತ್ತಿರುವ ಮೌನೇಶ್ವರರ ಹೂಜಿಯನ್ನು ಪ್ರತಿಷ್ಠಾಪಿಸಲಾಗಿದೆ. ಇಂತಹ ಸುಂದರ ಸಮಗ್ರ ಶಿಲ್ಪ ಕಲಾಕೃತಿಯ ಮೆಲ್ಭಾಗದಲ್ಲಿ ಐದು ಛತ್ರಿಗಳನ್ನು ಎಲ್ಲಾ ದೇವತೆಗಳಿಗೆ ನೆರಳು ನೀಡುವಂತೆ ತೋರಿಸಲಾಗಿದೆ. ಈ ಶಾಸ್ತ್ರೋಕ್ತ ಶಿಲ್ಪ ಕಲಾಕೃತಿ ನಿರ್ಮಾಣಕ್ಕೆ ಕಾರಣೀ ಭೂತರಾದ ಸೋನುಬಾಯಿ ಹಾವಣ್ಣಪ್ಪ ಸೀತನೂರು ಅವರ ಸಂಕಲ್ಪದಂತೆ ಈ ಶಿಲ್ಪ ನಿರ್ಮಾಣವಾಗಿದ್ದು ಇಂತಹ ಅದ್ಭುತ ಕಲಾಕೃತಿಯನ್ನು ಹೆಚ್. ಕೆ. ಸೀತನೂರು ಮನೆತನಕ್ಕೆ ನಾಡೋಜ ನಾಗಣ್ಣ ಶಿಲ್ಪಿ ಬಳಗದ ವತಿಯಿಂದ ಅರ್ಪಿಸಲಾಗಿದೆ.

**ಪೂಜಾ ಮಂಟಪದಲ್ಲಿರುವ ರಜತ ಶಿಲ್ಪಗಳು:** ೧. ವಿಶ್ವಕರ್ಮ, ೨. ಗಾಯತ್ರಿದೇವಿ, ೩. ಪಂಚಬ್ರಹ್ಮರು–ಸದ್ಯೋಜಾತ–ವಾಮನ–ಅಘೋರ–ತತ್ಪುರುಷ–ಈಶಾನ, ೪. ಪಂಚರ್ಷಿಗಳು– ಸಾನಗ–

ಸನಾತನ–ಅಹಭೂನ–ಪ್ರತ್ನಸ–ಸುಪರ್ಣ; ೫. ವೀರಭದ್ರ, ೬. ಹಾವಿನಾಳ ಕಲ್ಲಪ್ಪಯ್ಯ ೭. ಮಲ್ಲಯ್ಯ. ಸಕಲ ಶಿಲ್ಪಿಗಳ ಮೂಲಪುರುಷ, ವೈವಿಧ್ಯಮಯವಾದ ಈ ಜಗತ್‌ಶಿಲ್ಪಗಳನ್ನು ನಿರ್ಮಿಸಿದಾತ, ಎಲ್ಲಾ ರೂಪ ನಾಮ ಕ್ರಿಯೆಗಳ ಮೂಲದ್ರವ್ಯನೂ ಆಗಿರುವ ಶ್ರೀ ವಿಶ್ವಕರ್ಮನು ತನ್ನೆರಡು ಚರಣ ಕಮಲಗಳಲ್ಲಿ ಸರಸ್ವತಿ ದೇವತೆಗೆ ಆಶ್ರಯ ನೀಡಿದ್ದಾನೆ. ಮಧುರ ಮಾತಿನ ಒಡೆಯನೆಂದು ವೇದ ಋಷಿಗಳು ಕೊಂಡಾಡಿದ್ದಾರೆ. ಸಕಲ ಸೃಷ್ಟಿಯ ಪೋಷಣೆ ಮಾಡುತ್ತಿದ್ದಾನೆ. ಮೇರು ಪರ್ವತ ದಂತಹ ಮೆರವಣಿಗೆ ಪೀಠವನ್ನಲಂಕರಿಸಿ ಶೋಭಿಸುತ್ತಿದ್ದಾನೆ. ದೇವ, ಋಷಿ, ಸಿದ್ಧ, ಯಕ್ಷ, ಗಂಧರ್ವ, ಕಿನ್ನರ, ಕಿಂಪುರುಷ, ನಾರದಾದಿಯಾಗಿ ಸಕಲರಿಂದಲೂ ಪೂಜಿಸಲ್ಪಡುತ್ತಿರುವವನಾದ ಪಂಚಾನನ ಮಹಾಪ್ರಭುವು ಸಕಲರಿಗೂ ಇಷ್ಟಾರ್ಥಗಳನ್ನು ಪೂರೈಸುವ ಕಲ್ಪವೃಕ್ಷವಾಗಿದ್ದಾನೆ. ತನ್ನ ಕಿರುನಗೆಯಿಂದ ಸರ್ವ ಲೋಕಗಳಲ್ಲಿ ಶೋಭಿಸುತ್ತಿರುವ ಶ್ರೀ ವಿಶ್ವಕರ್ಮ ಪ್ರಭುವಿಗೆ ಸಾಷ್ಟಾಂಗ ನಮಸ್ಕಾರಗಳು.

ಶಂಕರನು ಹೇಳುತ್ತಾನೆ: "ಎಲೈ ಪಾರ್ವತಿ, ವಟವೃಕ್ಷದ ಕೆಳಗೆ ದಿವ್ಯ ಸಿಂಹಾಸನದ ಮೇಲೆ ಮಂಡಿಸಿರುವ ವಿಶ್ವಕರ್ಮ ಪರಮೇಶ್ವರನನ್ನು ಧ್ಯಾನ ಮಾಡಬೇಕು. ಆತನ ಸುತ್ತಲೂ ಮನು, ಮಯ, ತ್ವಷ್ಟ್ರ, ಶಿಲ್ಪಿ ವಿಶ್ವಜ್ಞರೆಂಬ ಪಂಚಬ್ರಹ್ಮರು, ಸಾನಗ, ಸನಾತನ ಅಹಭೂನ, ಪ್ರತ್ನ, ಸಪರ್ಣರೆಂಬ ಆದಿ ಪಂಚಶಿಲ್ಪರ್ಷಿಗಳು, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನರೆಂಬ ಆದಿ ಪಂಚಬ್ರಹ್ಮಕವು, ಶಿವ, ಕೇಶವ, ಬ್ರಹ್ಮ, ಇಂದ್ರ, ಸೂರ್ಯರೆಂಬ ದೇವತಾಪಂಚಕ ಧ್ಯಾನಮಗ್ನರಾಗಿ ಒಂದು ಕಡೆ ಕುಳಿತಿರುತ್ತಾರೆ. ಇನ್ನೊಂದು ಬದಿಗೆ ಎಲ್ಲಾ ದೇವತೆಗಳೂ ಸೇವಾಸಕ್ತರಾಗಿರುತ್ತಾರೆ. ಮತ್ತೊಂದು ಕಡೆಯಲ್ಲಿ ಸಪ್ತರ್ಷಿಗಳು ಈ ದೇವನ ಸ್ತವನವನ್ನು ಮಾಡುತ್ತಿರುತ್ತಾರೆ".

ವಿಶ್ವಕರ್ಮ ಪರಮೇಶ್ವರನಿಗೆ ಐದು ಮುಖಗಳು, ಹತ್ತು ತೋಳುಗಳು, ಲೋಕಸೇವಾ ವ್ರತ ದೀಕ್ಷೆಯನ್ನು ಧಾರಣೆ ಮಾಡಿ ಕುಳಿತಿರುವ ಆತನ ಪಾದಗಳನ್ನು ಲಕ್ಷ್ಮೀ ಸರಸ್ವತಿಯರು ತೊಳೆಯುತ್ತಿದ್ದಾರೆ. ಆತನ ವಕ್ಷಸ್ಥಳದಲ್ಲಿ ಮೂರ್ತಿವೆತ್ತ ಬ್ರಹ್ಮವಿದ್ಯೆ ಇದೆ. ಕೊರಳಲ್ಲಿ ಬಗೆಬಗೆಯ ದಿವ್ಯ ರತ್ನಮಾಲೆಗಳು, ಯಜ್ಞೋಪವೀತ, ಮಣಿಖಚಿತ ಹಾರಗಳು, ಪುಷ್ಪಮಾಲೆಗಳು ಕಂಗೊಳಿಸುತ್ತಿವೆ. ಬಾಹುಗಳಲ್ಲಿ ಕೇಯೂರ, ಮುಂಗೈಗಳಲ್ಲಿ ಕಟಕಗಳು, ಕರ್ಣಗಳಲ್ಲಿ ತೇಜಸ್ವಿ ಕುಂಡಲಗಳು ಹೀಗೆ ಸರ್ವಾಲಂಕಾರಪೂರ್ಣನಾಗಿರುತ್ತಾನೆ. ಸರ್ವಾಂಗಗಳಿಗೆ ಭಸ್ಮದಿಂದ ಲೇಪಿತನಾಗಿರುವ ಈ ಸ್ವಾಮಿಯು ತನ್ನ ಬಹು ಸುಂದರವಾದ ಮುಖದಲ್ಲಿ ಕಿರುನಗೆಯನ್ನು ಅರಳಿಸಿದ್ದು ಶೋಭಾಯಮಾನವಾಗಿರುತ್ತಾನೆ. "ಎಲೈ ದೇವಿ, ಅವಿನಾಶಿಯಾದ ಈ ವಿಶ್ವಕರ್ಮ ಪರಮಾತ್ಮನ ಮೂರ್ತಿರೂಪವನ್ನು ಈ ರೀತಿ ಯಾಗಿ ಧ್ಯಾನಿಸಬೇಕು".

*ಪಂಚ ವಕ್ತ್ರಂ ಜಟಾಧಾ(ಬಾ) ರಂ ಪಂಚಾದಶ ವಿಲೋಚನಮ್*
*ಸದ್ಯೋಜಾತಾನನಂ ಶ್ವೇತಂ ವಾಮದೇವಂ ತು ಕೃಷ್ಣಕಮ್*
*ಅಘೋರಂ ಶ್ಯಾಮವರ್ಣಂ ಚ ಶಿರೀರಂ ಹೇಮವರ್ಣಕಮ್*
*ದಶಬಾಹುಂ ಮಹಾಕಾಯಂ ಕರ್ಣಕುಂಡಲ ಶೋಭಿತಮ್*
*ಪೀತಾಂಬರಧರಂ ದೇವಂ ನಾಗಯಜ್ಞೋಪವೀತಮ್*
*ರುದ್ರಾಕ್ಷಹಾರಂ ಸಂಯುಕ್ತಂ ವ್ಯಾಘ್ರಚರ್ಮೋತ್ತರೀಕಮ್*

*ಅಕ್ಷಮಾಲಾಬ್ಜ ನಾಗೇಂದ್ರ ಶೂಲಾಯುಧ ಪಿನಾಕಿನಮ್*
*ವೀಣಾಂ ಡಮರುಗಂ ಬಾಣಂ ಶಂಕ ಚಕ್ರ ಕರಾನ್ವಿತಮ್*
*ದೇವ ದೇವಂ ಮಹಾದೇವಂ ವಿಶ್ವಕರ್ಮಾಣ ಮವ್ಯಯಮ್*
*ಪ್ರಾಗ್ದಕ್ಷಿಣ ಪ್ರತಿಚ್ಯೋದಜ್ಞ ಊರ್ಧ್ವವಕ್ತ್ರಂ ಜಗದ್ಗುರುಮ್*
*ನಮಸ್ಕರೋಮ್ಯಹಂ ಭಕ್ತ್ಯಾ ಭುಕ್ತಿ ಮುಕ್ತಿ ಪ್ರದಾಯಕಮ್*

ವಿಶ್ವಕರ್ಮ ಪರಮೇಶ್ವರನಿಗೆ ಐದು ಮುಖಗಳು. ಪ್ರತಿಮುಖದಲ್ಲೂ ಮೂರು ಕಣ್ಣುಗಳು. ಒಟ್ಟು ಹದಿನೈದು ಕಣ್ಣುಗಳು. ಜಟಾಮುಕುಟ ಅಥವಾ ಜಟಾಭಾರಗಳಿಂದ ಅಲಂಕೃತನಾಗಿರುವ ಈ ದೇವನ ಐದು ಮುಖಗಳಿಗೂ ಬೇರೆ ಬೇರೆ ಬಣ್ಣಗಳಿವೆ. ಮೈಯೆಲ್ಲಾ ಚಿನ್ನದ ಬಣ್ಣದ ಕಾಂತಿಯಿಂದ ಕಂಗೊಳಿಸುತ್ತಿರುತ್ತದೆ. ಪೂರ್ವದಿಕ್ಕಿಗೆ ಅಭಿಮುಖವಾಗಿರುವ ಮುಖವನ್ನು ಸದ್ಯೋಜಾತ ಎಂದು ಕರೆಯುತ್ತಾರೆ. ಇದರ ಬಣ್ಣ ಬಿಳುಪು. ದಕ್ಷಿಣ ದಿಕ್ಕಿಗೆ ಅಭಿಮುಖವಾಗಿರುವ ವಾಮದೇವ ಮುಖವು ಕಪ್ಪು ಬಣ್ಣದ್ದಾಗಿರುತ್ತದೆ. ಪೂರ್ವದಿಕ್ಕಿಗೆ ಎದುರಾಗಿರುವ ಮುಖವು ಅಘೋರ. ಇದರ ಬಣ್ಣ ಕೆಂಪು, ಉತ್ತರದಿಕ್ಕಿಗೆ ಎದುರಾಗಿರುವ ಮುಖವನ್ನು ಈಶಾನ ಎನ್ನುತ್ತಾರೆ. ಊರ್ಧ್ವ ಎಂದು ನಾಲ್ಕು ದಿಕ್ಕುಗಳ ಮಧ್ಯೆ ಇರುವ ಸ್ಥಾನದಲ್ಲಿದ್ದು, ಮೇಲಕ್ಕೆ ನೋಡುತ್ತಿರುತ್ತದೆ. ಈ ಮುಖದ ವರ್ಣವು ಶ್ಯಾಮಲ.

ಈ ಸ್ವಾಮಿಗೆ ಹತ್ತು ಬಾಹುಗಳು. ಪೀತಾಂಬರಧಾರಿಯಾಗಿದ್ದು ಯಜ್ಞೋಪವೀತವಾಗಿ ನಾಗನನ್ನೇ ಧರಿಸಿರುತ್ತಾನೆ. ಉತ್ತರೀಯವಾಗಿ ಹುಲಿಯ ಚರ್ಮವನ್ನು ಧರಿಸಿರುತ್ತಾನೆ. ರುದ್ರಾಕ್ಷಿ ಮಾಲೆಗಳನ್ನು ಧರಿಸಿರುತ್ತಾನೆ. ಬಲ ಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಧರಿಸಿರುತ್ತಾನೆ. ರುದ್ರಾಕ್ಷಿ ಮಾಲೆಗಳನ್ನು ಧರಿಸಿರುತ್ತಾನೆ. ಬಲಪಾರ್ಶ್ವನ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಧರಿಸಿರುವ ಆಯುಧಗಳು ಅಕ್ಷಮಾಲೆ, ನಾಗ, ಬಾಣ, ಚಕ್ರ, ತ್ರಿಶೂಲ, ಇದೇ ರೀತಿಯಾಗಿ ಎಡಪಾರ್ಶ್ವದಲ್ಲಿ ಕೆಳಗಿನಿಂದ ಮೇಲಕ್ಕೆ ತಾವರೆ, ವೀಣೆ, ಬಿಲ್ಲು, ಶಂಖ, ಡಮರುಗ, ಈ ಸ್ವಾಮಿಯು ಎಲ್ಲಾ ದೇವತೆ ಗಳಿಗೂ ದೇವನಾಗಿರುತ್ತಾನೆ. ಸಕಲ ಜಗತ್ತುಗಳಿಗೆ, ವಿದ್ಯೆಗಳಿಗೆ ಮೂಲ. ಆದ್ದರಿಂದ ಈತನೆ ಗುರು ಸ್ವರೂಪನು. ಈತನು ವಾಕ್‌ಪತಿಯಾಗಿದ್ದಾನೆ. ಇಹದಲ್ಲಿ ಸುಖ, ಪರದಲ್ಲಿ ಮುಕ್ತಿಯನ್ನು ಕರುಣಿಸಬಲ್ಲ ಈ ಸ್ವಾಮಿಗೆ ಭಕ್ತಿಯಿಂದ ನಮಸ್ಕರಿಸುತ್ತೇವೆ.

* **ಗಾಯತ್ರಿದೇವಿ**

*ಪಂಚಾಸ್ಯಾಂ ನವಯೌವನಾಂ ದಶಭುಜಾಂ ವಿದ್ಯನ್ನಿಭಾಂ ಸುಂದರೀಮ್*
*ನಾನಾಶಕ್ತಿ ಸಮುದ್ಭವಾತ್ಮಕತನುಂ ವೇದಸ್ತುತಾಂ ಚಿನ್ಮಯೀಮ್*
*ಗಾಯತ್ರೀಂ ಕನಕಾಂಬರಾ ತ್ರಿನಯನಾಂ ಹಂಸಾಧಿರೂಢಾಂ ಪರಾಮ್*
*ಸಾಷ್ಟಾಂಗೈ ಪ್ರಮಾಮ್ಯಹಂ ನಿಖಿಲದಾಂ ದೇವೀಂ ಜಗನ್ಮಾತರಮ್*

ಐದು ಮುಖಗಳು, ಹತ್ತು ತೋಳುಗಳು, ಪ್ರತಿಮುಖದಲ್ಲೂ ಮೂರು ಕಣ್ಣುಗಳು ಮತ್ತು ನವ ಯೌವ್ವನ ಉಜ್ವಲ ವಿದ್ಯುತ್‌ಕಾಂತಿಯುಕ್ತಳಾದ ಅಪೂರ್ವ ಸುಂದರಿಯಾಗಿರುವ ಗಾಯತ್ರಿ ಮಾತೆಯು ಆದಿಶಕ್ತಿ ಇಚ್ಛಾಶಕ್ತಿ, ಕ್ರಿಯಾಶಕ್ತಿ, ಮಾಯಾಶಕ್ತಿ ಮತ್ತು ಜ್ಞಾನಶಕ್ತಿಗಳೆಂಬ ಐದು ಶಕ್ತಿ

ಸ್ವರೂಪಳಾಗಿದ್ದಾಳೆ. ಈ ಮಾತೆಯು ವೇದಗಳ ಹೊಗಳಿಕೆಗೆ ಪಾತ್ರಳಾಗಿದ್ದಾಳೆ. ಹಂಸವಾಹನ ಹೊಂದಿದ್ದು, ಕನಕಾಭರಣಗಳಿಂದ ಅಲಂಕೃತಳಾದ ಜಗತ್‌ಜನನಿ ಜಗನ್ಮಾತೆ ಗಾಯತ್ರಿದೇವಿಗೆ ಸಾಷ್ಟಾಂಗ ಪ್ರಣಾಮಗಳು. ವಿಶ್ವಕರ್ಮನಿಂದ ಪ್ರತ್ಯೇಕವಾಗದ ಗಾಯತ್ರಿ ಮಾತೆಯು ದೇವಿರೂಪದಲ್ಲಿ ಸಿಹಿ-ಫಲಗಳನ್ನು ನೀಡುತ್ತಿದ್ದು, ಮಧುರ-ಮಾತಿನ ಒಡೆಯನಾದ ವಿಶ್ವಕರ್ಮನ ಅಂತರಂಗದಲ್ಲಿ ನೆಲೆಸಿರುವ ಗಾಯತ್ರಿ ಮಾತೆಯನ್ನು ಭಜಿಸುತ್ತೇವೆ.

*ಶ್ರೀಯಂ ಕಟಾಕ್ಷೇಕ್ಷೇಣೇನ ಜಗದಾನಂದ ಕಾರಿಣೀಮ್*
*ವಂದೇ ಮರ ಶ್ರೀರೋರತ್ನ ನೀರಾಜಿತ ಪದಾಂಬುಜಮ್*

ಸಕಲ ಸಂಪತ್ತುಗಳ ಗಣಿಯಾಗಿರುವ, ಜಗತ್ತಿನ ಚೇತನಾಪೂರ್ಣ ಮನಸ್ಸಿನಂದಕ್ಕೆ ಕಾರಣವಾಗಿರುವ, ಗಾಯತ್ರಿ ಮಾತೆಯ ಪಾದಸ್ಪರ್ಶದ ರತ್ನಖಚಿತ ಕಿರೀಟಗಳು, ಸಕಲ ದೇವತೆಗಳ ಶಿರದ ಮೇಲೇರಿ ಕಾಂತಿಯಿಂದ ಕಂಗೊಳಿಸುತ್ತಿವೆ. ಇಂತಹ ಗಾಯತ್ರಿ ಮಾತೆಯನ್ನು ವಂದಿಸುತ್ತೇವೆ.

*ಶ್ರೀವಾಣ್ಯಾಶ್ರಿತ ಪಾದಪದ್ಮ ಯುಗಳಂ ವಿದ್ಯುತ್ಪ್ರಭಾ ಭಾಸುರಮ್*
*ಗಾಯತ್ರೀಯುತ ಮವ್ಯಯಂ ದಶಭುಜಂ ಮೇರ್‍ವಗ್ರ ಪೀಠೋಜ್ಜ್ವಲಮ್*
*ದೇವರ್ಷಿಸ್ತುತ ಪಂಚವಕ್ತ್ರಮಭವಂ ಮಂದಸ್ಮಿತಾಸ್ಯಂಶಿವಮ್*
*ವಂದೇ ಶಿಲ್ಪ ಸಹಸ್ರ ಮೂಲ ಪುರುಷಂ ಶ್ರೀ ವಿಶ್ವಕರ್ಮ ಪ್ರಭುಮ್*

* ಸದ್ಯೋಜಾತ(ಮನುಬ್ರಹ್ಮ)

*ಸದ್ಯೋಜಾತ ಮುಖಾಜ್ಞಾತಂ ಶುದ್ಧ ಸ್ಪಟಿಕ ಸನ್ನಿಭಮ್*
*ಆದಿಶಕ್ತಿಯುತಂ ಶಾಂತಂ ಋಗ್ವೇದಸ್ಯಾಧಿ ನಾಯಕಮ್*
*ಲೋಹಕೃನ್ಮೂಲ ಪುರುಷಂ ಮನುಂ ಧ್ಯಾತ್ವರ್ಚಯಾಮ್ಯಹಮ್*

ವಿಶ್ವಕರ್ಮ ಪರಮೇಶ್ವರನಿಗೆ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಐದು ಮುಖಗಳಂಟು. ಅವುಗಳಲ್ಲಿ ಸದ್ಯೋಜಾತ ಮುಖದಿಂದ ಆವಿರ್ಭವಗೊಂಡವನು ಪಂಚಬ್ರಹ್ಮರೆಂದು ಕರೆಯಲ್ಪಡುವವರಲ್ಲಿ ಮೊದಲನೆಯವನಾದವನು ಮನುಬ್ರಹ್ಮ. ಶುದ್ಧ ಸ್ಫಟಿಕವರ್ಣದ ಈತನು ಆದಿಶಕ್ತಿ ಸಮಾಯುಕ್ತನಾಗಿ, ಶಾಂತ ಸ್ವರೂಪನು, ಋಗ್ವೇದ ದ್ರಷ್ಟಾರನಾಗಿದ್ದು ಋಕ್ ಶಾಖೆಯ ಆದಿ ಪ್ರವರ್ತಕನು ಆಗಿದ್ದಾನೆ. ಸಾನಗ, ರುದ್ರನೆಂಬ ಪರ್ಯಾಯ ನಾಮಗಳನ್ನು ಹೊಂದಿರುವ ಈತನು ತ್ರಿಕೋಣಯಜ್ಞಕುಂಡದ ಅಧಿಪತಿಯಾಗಿರುವನು. ಆಯಸ್(ಕಬ್ಬಿಣ) ಶಿಲ್ಪದ ಆದಿ ಪ್ರವರ್ತಕನಾಗಿರುವ ಪಾಂಚಾದ್ಯ ಬ್ರಹ್ಮರಲ್ಲಿ ಮೊದಲಿಗನಾಗಿರುವ ಈತನು ಕಾರ್ಮೋಡಗಳನ್ನೆ ವಾಹನವನ್ನಾಗಿ ಪಡೆದುಕೊಂಡಿರುತ್ತಾನೆ. ಪೂರ್ವ ದಿಕ್ಕಿನ ಅಧಿಪತಿಯಾಗಿದ್ದಾನೆ. ಇಂತಹ ಸ್ವಾಮಿಯನ್ನು ಮನಸಾಪೂರ್ವಕವಾಗಿ ಧ್ಯಾನಿಸಿ ಪೂಜಿಸುತ್ತೇವೆ.

* ವಾಮದೇವ(ಮಯಬ್ರಹ್ಮ)

*ವಾಮದೇವ ಮುಖೋದ್ಭುತಃ ಮೇಘವರ್ಣೋ ಮಹಾದ್ಯುತಿ:*
*ಪರಾಶಕ್ತಿಯುತೋ ದೇವೋ ಯಜರ್ವೇದಾಧಿನಾಯಕ:*
*ಧೀಮಾನ್ ಚತುಷ್ಕೋಣಕುಂಡ ಹೋತಾ ನೀಲಾಭ್ರವಾಹನ:*
*ದಾರುಕೃನ್ಮೂಲ ಪುರುಷಃ ಪಾತುಮಾಂ ಸರ್ವದಾ ಮಯಃ*

ವಾಮದೇವ ಮುಖದಿಂದ ಆವಿರ್ಭವಗೊಂಡ ಪಂಚಬ್ರಹ್ಮರಲ್ಲಿ ಎರಡನೆಯವನಾದ ಮಯ ಬ್ರಹ್ಮನು ನೀಲವರ್ಣದವನಾಗಿದ್ದು, ಪರಾಶಕ್ತಿಯೊಂದಿಗೆ ಕೂಡಿಕೊಂಡಿದ್ದು ಸಕಲ ಲೋಕಗಳ ಪೋಷಣಾ ಕರ್ತನಾಗಿದ್ದಾನೆ. ಯಜುರ್ವೇದವನ್ನು ಕೊಟ್ಟಿರುವ ಈ ಮಯಬ್ರಹ್ಮನೇ ಅದರ ಆದಿ ಪ್ರವರ್ತಕನೂ ಆಗಿದ್ದಾನೆ. ಚತುಷ್ಕೋಣಕುಂಡದಲ್ಲಿ ಯಜನಾದಿಗಳಿಗೆ ಅಧಿಪತಿ ಇವನು. ಈತನಿಗೆ ಸನಾತನ, ವಿಷ್ಣು ಎಂಬ ಪರ್ಯಾಯ ನಾಮಗಳು ಇವೆ. ದಾರುಶಿಲ್ಪ ಮತ್ತು ನೌಕಾಶಿಲ್ಪಗಳ ಮೂಲ ಪ್ರವರ್ತಕನಾಗಿದ್ದು ಸಕಲ ಲೋಕಗಳನ್ನು ಕಾಪಾಡುತ್ತಿದ್ದಾನೆ. ಈತನು ದಕ್ಷಿಣ ದಿಕ್ಕಿನ ಅಧಿಪತಿ. ಇಂತಹ ಪ್ರಭುವು ನಮ್ಮನ್ನು ಸರ್ವದಾ ಕಾಪಾಡಲಿ.

* **ಅಘೋರ(ತ್ವಷ್ಟ ಬ್ರಹ್ಮ)**

*ಅಘೋರ ಮುಖ ಸಂಜಾತಂ ಮಹಾ ಮಾಣಿಕ್ಯ ಸನ್ನಿಭಮ್*
*ಇಚ್ಛಾಶಕ್ತಿಯುತಂ ವ್ರತಂ ಕುಂಡ ಹೋತಾರ ಮವ್ಯಯಮ್*
*ಸಾಮವೇದಾಧಿಪಂ ರಕ್ತ ಮೇಘವಾಹನ ಸಂಸ್ಥಿತಮ್*
*ತಾಮ್ರಕೃನ್ಮೂಲ ಪುರುಷಂ ತ್ವಷ್ಟಾರಂ ಪೂಜಯಾಮ್ಯಹಮ್*

ಪಂಚಬ್ರಹ್ಮರಲ್ಲಿ ಮೂರನೆಯವನಾದ ತ್ವಷ್ಟ ಬ್ರಹ್ಮನು ವಿಶ್ವಕರ್ಮ ಪರಮೇಶ್ವರನ ಅಘೋರ ಮುಖದಿಂದ ಆವಿರ್ಭವಿಸಿ ಬಂದವನು. ರಕ್ತವರ್ಣದವನಾದ ಈತನು ಪಶ್ಚಿಮ ದಿಕ್ಕಿನ ಅಧಿಪತಿ. ಈತನಿಗೆ ಅಹಭೂನ, ಬ್ರಹ್ಮನೆಂಬ ಪರ್ಯಾಯ ನಾಮಗಳು ಉಂಟು. ಸಾಮವೇದವನ್ನು ಕೊಟ್ಟಿರುವ ಈತನು ಸಾಮಶಾಲೆಯ ಆದಿ ಪ್ರರ್ವತಕನು. ಕಾಂಸ್ಯ ಮತ್ತು ತಾಮ್ರಶಿಲ್ಪದ ಮೂಲ ಪ್ರವರ್ತಕನಾಗಿ ದ್ದಾನೆ. ಇಂತಹ ಪಂಚಾದ್ಯ ಬ್ರಹ್ಮರಲ್ಲಿ ಮೂರನೆಯವನಾದ ಈತನನ್ನು ಅರ್ಚಿಸಿ ಧ್ಯಾನಿಸುತ್ತೇನೆ.

* **ತತ್ಪುರುಷ(ಪ್ರತ್ನಬ್ರಹ್ಮ)**

*ತತ್ಪುರುಷ ಮುಖಜ್ಞಾತಂ ಶ್ಯಾಮ ವರ್ಣ ಮಹೌಜಸಮ್*
*ಷಟ್ಕೋಣಕುಂಡ ಹೋತಾರಂ ಕ್ರಿಯಾಶಕ್ತಿಯುತ ಪ್ರಭುಮ್*
*ಅಥರ್ವಾಮ್ನಾಯ ನೇತಾರಂ ಶ್ವೇತಮೇಘೋಪರಿಸ್ಥಿತಮ್*
*ಶಿಲಾಕೃನ್ಮೂಲ ಪುರುಷಂ ಶಿಲ್ಪನಂ ಪ್ರಣಮಾಮ್ಯಹಮ್*

ವಿಶ್ವಕರ್ಮನ ತತ್ಪುರುಷ ಮುಖದಿಂದ ಆವಿರ್ಭಾವಗೊಂಡ ಶಿಲ್ಪಿ ಬ್ರಹ್ಮನು ಪಂಚಾದ್ಯರಲ್ಲಿ ನಾಲ್ಕನೆಯವನು. ಧೂಮ್ರವರ್ಣದ ಮೈಕಾಂತಿಯ ಈತನಿಗೆ ಪ್ರತ್ನ, ಇಂದ್ರನೆಂಬ ಪರ್ಯಾಯ ನಾಮಗಳಿವೆ. ಕ್ರಿಯಾಶಕ್ತಿಯುತನಾಗಿರುವ ಈತನು ಷಟ್ಕೋಣ ಹೋಮಕುಂಡದ ಅಧಿಕಾರಿ. ಉತ್ತರ ದಿಕ್ಕಿನ ಅಧಿಪತಿ. ಅಥರ್ವವೇದವನ್ನು ತಂದುಕೊಟ್ಟಿರುವ ಈತನು ಅಥರ್ವ ಶಾಖೆಯ ಮೂಲ ಪ್ರವರ್ತಕನು ಶಿಲಾಶಿಲ್ಪದ ಮೂಲ ಪ್ರವರ್ತಕನು. ಇಂತಹ ಶಿಲ್ಪಿ ಬ್ರಹ್ಮನಿಗೆ ಪೊಡಮಡುತ್ತೇನೆ.

* **ಇಶಾನ(ವಿಶ್ವಜ್ಞಬ್ರಹ್ಮ)**

*ಈಶಾನ ಮುಖ ಸಂಜಾತಃ ತಪ್ತಕಾಂಚನ ಸನ್ನಿಭಃ*
*ಜ್ಞಾನಶಕ್ತಿಯುತಃ ಪೀತ ಮೇಘ ಪೃಷ್ಠೋ ಪರಿಸ್ಥಿತಃ*

**ಪ್ರಣವ ಶೃತೀಶಾಷ್ಟಾಸ್ತ್ರ ಕುಂಡ ಹೋತಾ ಮಹಾಮತಿಃ**
**ಸ್ವರ್ಣಕೃನ್ಮೂಲ ಪುರುಷೋ ವಿಶ್ವಜ್ಞಃ ಪಾತು ಮಾಂ ಸದಾ**

ವಿಶ್ವಕರ್ಮನು ಇಶಾನ ಮುಖದಿಂದ ಅವಿರ್ಭವಿಸಿರುವ ಈತನು ಚಿನ್ನದ ಮೈಕಾಂತಿಯುಳ್ಳವನು. ಪಂಚಾದ್ಯಬ್ರಹ್ಮರಲ್ಲಿ ಐದನೆಯವನು. ಊರ್ಧ್ವದಿಕ್ಕಿನ ಅಧಿಪತಿಯಾಗಿರುವ ಈತನಿಗೆ ಸುಪರ್ಣ ಸೂರ್ಯನೆಂಬ ಪರ್ಯಾಯ ನಾಮಗಳಿವೆ. ಹಳದಿ ಬಣ್ಣದ ಮೇಘದ ಮೇಲೆ ಆಸೀನನಾಗಿರುವ ಈತನು ಪ್ರಣವ ವೇದವನ್ನು ತಂದು ಕೊಟ್ಟವನು. ಅಷ್ಟಕೋನ ಹೋಮಕುಂಡದ ಅಧಿಕಾರಿಯಾಗಿರುವ ಈತನು ಜ್ಞಾನಶಕ್ತಿ ಸಮಾಯುತನಾಗಿದ್ದಾನೆ. ಸ್ವರ್ಣಶಿಲ್ಪದ ಮೂಲಪ್ರವರ್ತಕನಾಗಿರುವ ಈ ವಿಶ್ವಜ್ಞ ಬ್ರಹ್ಮನು ನಮ್ಮನ್ನೆಲ್ಲ ಸದಾ ಚೆನ್ನಾಗಿ ಕಾಪಾಡಲಿ.

**ಪಂಚರ್ಷಿಗಳು:** ಮನು, ಮಯ, ತ್ವಷ್ಟ, ಶಿಲ್ಪಿ ಮತ್ತು ವಿಶ್ವಜ್ಞರು ಪಂಚಬ್ರಹ್ಮರೆಂದು ಖ್ಯಾತರಾಗಿದ್ದಾರೆ. ಇವರ ಮುಖೋದ್ಭವರಾದ ಋಷಿಗಳು ಐವರು ಸಾನಗ, ಸನಾತನ, ಅಹಭೂನ, ಪ್ರತ್ನ ಮತ್ತು ಸುಪರ್ಣರು, ಇವರು ಶಾಖಾಪುರುಷರೆಂದು ಹೆಸರಾಗಿದ್ದಾರೆ. ಇವರೇ ಪಂಚ ಆದ್ಯ ಶಿಲ್ಪರ್ಷಿಗಳು. ಇವರಿಂದಲೇ ಜಗತ್ತಿನಲ್ಲಿ ಪಂಚಶಿಲ್ಪಗಳು ರೂಢಿಗೆ ಬಂದದ್ದು. ಇವರೇ ಶಿಲ್ಪಿಗಳ ಗೋತ್ರಪುರುಷರು. ಇವರ ಮುಖೋದ್ಭವರಾಗಿ ಉಪಸಾನಗ ಇತ್ಯಾದಿ ಇಪ್ಪತ್ತೈದು ಮಂದಿ ಋಷಿಗಳು ಉದ್ಭವಿಸಿದರು. ಇವರು ಊರ್ಧ್ವರೇತಸ್ಕರಾಗಿದ್ದು ಇವರಿಂದ ಶಿಲ್ಪಿ ಬ್ರಾಹ್ಮಣವಂಶ ಪರಂಪರೆಯ ವ್ಯಾಪಕಗೊಂಡಿತು. ಇವರಲ್ಲಿ ಉಪಸಾನಗ, ಉಪಸನಾತನ, ಉಪಾಹಭೂನ, ಉಪಪ್ರತ್ನ ಮತ್ತು ಉಪಸುಪರ್ಣರು ತಮ್ಮ ತಂದೆಗಳ ತತ್ಸಮರಾಗಿದ್ದರಿಂದ ರೂಢಿಯಲ್ಲಿ ಸಾನಗ, ಸನಾತನ, ಅಹಭೂನ, ಪ್ರತ್ನ, ಸುಪರ್ಣರೆಂದೇ ಕರೆಯಲ್ಪಟ್ಟರು. ಯಜುರ್ವೇದದಲ್ಲಿ ಇಷ್ಟಕೋಪಧಾನ ಮಂತ್ರಗಳಲ್ಲಿ ಇವರನ್ನು ಶಿಲ್ಪರ್ಷಿಗಳಾಗಿ ಆವಾಹಿಸಿ ಪೂಜಿಸಲಾಗುತ್ತದೆ. ಇವರನ್ನು ಹೀಗೆ ಸ್ತುತಿಸಲಾಗುತ್ತದೆ.

**೧. ಸಾನಗ ಋಷಿ:** ವಿಶ್ವಕರ್ಮ ಪರಮೇಶ್ವರನ ಪೂರ್ವ ದಿಕ್ಕಿನ ಮುಖದಿಂದ ಉದ್ಭವಿಸಿದ ಮನುಬ್ರಹ್ಮನು ಮುಖ್ಯೋದ್ಭವನಾಗಿದ್ದು ಸಮಸ್ತ ಭೂತನಿರ್ಮಾತೃವಾದ ಚಿದ್ರೂಪನಾದ ಸಾನಗ ಮಹರ್ಷಿಯೇ ನಿನಗೆ ನಮಸ್ಕಾರ. ಯಾವ ಉಪಕರಣವೂ ಇಲ್ಲದೆ ಬರಿದಾಗಿದ್ದ ಪ್ರಪಂಚದಲ್ಲಿ ಸರ್ವಲೋಕ ಸಾಧಕನಾಗಿ ಕಬ್ಬಿಣದ ಕೆಲಸದ ಆದ್ಯ ಪ್ರವರ್ತಕನಾಗಿ ಲೋಕವನ್ನು ಸಾನಗ ಬ್ರಹ್ಮರ್ಷಿಯು ರಕ್ಷಿಸುತ್ತಿದ್ದಾನೆ. ಈತನು ದುಷ್ಟನಿಗ್ರಹಕ್ಕಾಗಿ ದೇವತೆಗಳಿಗೆ ಶಸ್ತ್ರಾಸ್ತ್ರಗಳನ್ನು ದಯಪಾಲಿಸಿದ ಸಕಲ ಲೋಕಗಳ ಸೃಷ್ಟಿಕರ್ತ ಈತನೇ ಶಿವನಿಗೆ ತ್ರಿಶೂಲವನ್ನು, ವಿಷ್ಣುವಿಗೆ ಚಕ್ರವನ್ನು ಬ್ರಹ್ಮನಿಗೆ ಪಾಶವನ್ನು ಕೊಟ್ಟವನು. ಈತನೇ ಲೋಹ ಸಂಬಂಧವಾದ ಎಲ್ಲಾ ಶಿಲ್ಪಗಳನ್ನು ರೂಪಿಸಿ ಜನರ ಬದುಕು ಸುಖವಾಗಲು ಕಾರಣನಾಗಿದ್ದಾನೆ. ಈತನು ತ್ರಿಮೂರ್ತ್ಯಾತ್ಮಕನಾದ ಸಾನಗ ಬ್ರಹ್ಮರ್ಷಿ.

**೨. ಸನಾತನ ಋಷಿ:** ಈ ಋಷಿಯು ದಕ್ಷಿಣ ದಿಶಾಧಿಪತಿ. ಋತುಗಳಲ್ಲಿ ಶ್ರೇಷ್ಠ ದೇವತೆಗಳಲ್ಲಿ ಇಂದ್ರ ಧನಗಳಲ್ಲಿ ಕ್ಷೇತ್ರರೂಪಿ. ಸ್ತೋಮಗಳಲ್ಲಿ ಪಂಚಮದ ಸ್ತೋಮ, ಯುಗಗಳಲ್ಲಿ ತ್ರೇತಾಯುಗ, ವಾಯುಗಳಲ್ಲಿ ದಕ್ಷಿಣವಾಯು. ಈತನ ಮೈಕಾಂತಿ ನೀಲ ಈತನು ಕಾಷ್ಠಶಿಲ್ಪದ ಆದ್ಯಪ್ರವರ್ತಕ. ಪಂಚಾಂಗಗಳಲ್ಲಿ ವಾರದ ನಿರ್ಮಾಣವೂ ಈತನಿಂದ ಆದದ್ದು. ಚತುಷ್ಕೋಣಯಜ್ಞ ಕುಂಡದ

ಅಧಿಪತಿ. ಬಿದುರಿನ ದಂಡ ಹಿಡಿದಿರುತ್ತಾನೆ. ಬಿದಿರಿನ ದಾರದ ಯಜ್ಞೋಪವೀತ ಧರಿಸಿರುತ್ತಾನೆ. ಈತನು ಕೃಷ್ಣಾಯಜುರ್ವೇದಾಧಿಪತಿ. ಪಂಚಭೂತಗಳಲ್ಲಿ ಜಲದ ಅಧಿಪತಿ. ಈತನು ಆದಿಶಕ್ತಿ ಸಮಾಯಕ್ತನಾಗಿರುತ್ತಾನೆ. ಸನಾತನ ಋಷಿಯೂ, ಬ್ರಹ್ಮವಿದ್ಯಾ ಸಂಪ್ರದಾಯ ಆದ್ಯ ಪ್ರವರ್ತಕವಾಗಿ ಪ್ರಖ್ಯಾತನಾಗಿದ್ದಾನೆ. ಸಾನಗ ಮತ್ತು ಸನಾತನ ಋಷಿಗಳು ಬ್ರಹ್ಮವಿದ್ಯಾ ಸಂಪ್ರದಾಯ ಪ್ರವರ್ತಕರಲ್ಲಿ ಅಗ್ರಗಣ್ಯರಾಗಿ ಬೃಹದಾರಣ್ಯಕೋಪನಿಷತ್ತಿನ ಚತುರ್ಥಾಧ್ಯಾಯದ ಅಂತ್ಯದಲ್ಲಿ ಉಲ್ಲೇಖಿತರಾಗಿದ್ದಾರೆ.

**೩. ಅಹಭೂನ ಋಷಿ:** ದಿಕ್ಕುಗಳಲ್ಲಿ ಈತನು ಪಶ್ಚಿಮ ದಿಕ್ಕು. ಋತುಗಳಲ್ಲಿ ಈತನು ವರ್ಷ ಋತು. ದೇವತೆಗಳಲ್ಲಿ ಈತನು ವಿಶ್ವದೇವತೆ, ಧನದಲ್ಲಿ ವೈಶ್ಯರೂಪಿ, ಸ್ತೋಮಗಳಲ್ಲಿ ಸಪ್ತದಶಸ್ತೋಮ. ಯುಗಗಳಲ್ಲಿ. ದ್ವಾಪರಯುಗ, ವಾಯುಗಳಲ್ಲಿ ಪಶ್ಚಿಮ ದಿಶೆಯ ವಾಯು. ಈತನ ಮೈಕಾಂತಿ ತಾಮ್ರ, ಈತನು ಕಾಂಸ್ಯಶಿಲ್ಪದ(ಕಂಚಿನ ಕೆಲಸ) ಆದಿ ಪ್ರವರ್ತಕ. ಪಂಚಾಂಗದಲ್ಲಿ ನಕ್ಷತ್ರದ ನಿರ್ಮಾತೃ. ಈತನೇ ವೃತ್ತಾಕಾರದ ಯಜ್ಞಕುಂಡದ ಅಧಿಪತಿ. ಈತನು ತಾಮ್ರದ ದಂಡವನ್ನು ತಾಮ್ರದ ಯಜ್ಞೋಪವೀತವನ್ನು ಧರಿಸಿರುತ್ತಾನೆ. ಪಂಚಭೂತಗಳಲ್ಲಿ ಭೂಮಿಯ ಅಧಿಪತಿ, ಇಚ್ಛಾಶಕ್ತಿ ಸಮಾಯಕ್ತನಾದ ಈತನು ಸಾಮವೇದಾಧಿಪತಿ.

ನಾರದಾದಿಗಳಿಂದ ಸುತ್ತಿನಲ್ಲಿಟ್ಟು ಸರ್ವಮುನಿಕೋಟಿಗೂ ಪೂಜ್ಯನಾದ ಅಹಭೂನ ಋಷಿಯು ವಿಶ್ವಕರ್ಮ ಪಶ್ಚಿಮ ಮುಖವಾದ ಅಘೋರ ಮುಖದಲ್ಲಿ ಹುಟ್ಟಿದ ತ್ವಷ್ಟಬ್ರಹ್ಮನ ಮುಖೋದ್ಭವನು. ಜಗತ್ಪ್ರಭುವಾದ ಈತನೇ ಗೃಹಸ್ಥ ಧರ್ಮವನ್ನು ಸೃಷ್ಟಿಸಿ ಸ್ಥಾಪಿಸಿದನು. ತ್ವಷ್ಟ ಬ್ರಹ್ಮಸ್ವರೂಪನಾದ ಈತನು ಬಂಗಾರ, ಕಂಚು ಮುಂತಾದ ಲೋಹಗಳಿಂದ ಯಜ್ಞಗಳಲ್ಲಿ ಮನೆಗಳಲ್ಲಿ ಉಪಯೋಗಿ ಸಲ್ಪಡುವ ಪಾತ್ರೆಗಳು ಮುಂತಾದವುಗಳನ್ನು ನಿರ್ಮಿಸಿಕೊಟ್ಟು ಲೋಕೋಪಕಾರವನ್ನು ಮಾಡುತ್ತಿದಾನೆ. ಹಿತ್ತಾಳೆ, ತಾಮ್ರ, ಕಂಚು ಮುಂತಾದ ಲೋಹಗಳಿಂದ ಮಾಡುವ ಶಿಲ್ಪದ ಆದ್ಯ ಪ್ರವರ್ತಕನಾಗಿದ್ದಾನೆ.

**೪. ಪ್ರತ್ನಋಷಿ:** ಈ ಋಷಿಯು ಉತ್ತರದಿಶಾಧಿಪತಿ, ಋತುಗಳಲ್ಲಿ ಶರದೃತು, ದೇವತೆಗಳಲ್ಲಿ ಮಿತ್ರಾವರುಣ, ಧನಗಳಲ್ಲಿ ಶೂದ್ರರೂಪಿ, ಧನ, ಸೋಮಗಳಲ್ಲಿ ಏಕವಿಂಶತ್‌ಸ್ತೋಮ ಮತ್ತು ಸಪ್ತವಿಂಶಸ್ತೋಮ. ವಯಸ್ಸಿನಲ್ಲಿ ಮೂರುವರೆ ವರ್ಷ, ಯುಗಗಳಲ್ಲಿ ಕಲಿಯುಗ, ವಾಯುಗಳಲ್ಲಿ ಉತ್ತರವಾಯು. ಈತನು ಧೂಮವರ್ಣದ ಮೈಕಾಂತಿಯವನು. ಶಿಲಾಶಿಲ್ಪದ ಆದ್ಯ ಪ್ರವರ್ತಕ ಹಾಗೂ ಪಂಚಾಂಗದಲ್ಲಿ ಯೋಗವನ್ನು ರೂಪಿಸಿದನು. ಷಟ್‌ಕೋಣಯಜ್ಞ ಕುಂಡದ ಅಧಿಪತಿ. ಬಲತ್ತದ ದಂಡವನ್ನು ಯಜ್ಞೋಪವೀತವನ್ನು ಧರಿಸಿರುತ್ತಾನೆ. ಈತನು ಅಥರ್ವವೇದದ ಅಧಿಪತಿ, ಪಂಚಭೂತಗಳಲ್ಲಿ ವಾಯುವು ಈತನ ವಶವರ್ತಿ, ಜ್ಞಾನಶಕ್ತಿಯೊಂದಿಗೆ ಕೂಡಿರುತ್ತಾನೆ. ಶಿಲಾ ಶಿಲ್ಪದ ಆದಿ ಪ್ರವರ್ತಕರು ವಿಶ್ವಕರ್ತನೂ ಜಗದ್ರಕ್ಷಾಪರನೂ ಆದ ಪ್ರತ್ನೃಷಿಯ ವಿಶ್ವಕರ್ಮನ ಉತ್ತರ ಮುಖದಿಂದ ಜನಿಸಿದ ಈತನೇ ಪ್ರತ್ನಸ ಶಾಖೆಯ ಮೂಲ ಪುರುಷ.

ಶಿಲ್ಪಕರ್ಮಾ ಚ ಶಿಲ್ಪಿನಾಂ ಎಂಬ ವಚನದ ಪ್ರಕಾರದ ಶಿಲಾಶಿಲ್ಪದ ಆದ್ಯ ಪ್ರವರ್ತಕರು ದೇವತಾಮೂರ್ತಿಗಳನ್ನು ದೇವಾಲಯ ಮಂಟಪ, ಗೋಪುರ, ಪ್ರಾಕಾರಾದಿಗಳನ್ನು ನಿರ್ಮಿಸಿ ಲೋಕವನ್ನು ಉದ್ಧರಿಸಿದ ಮಹಾತ್ಮ.

೫. **ಸುಪರ್ಣ ಋಷಿ:** ಈ ಋಷಿಯು ಊರ್ಧ್ವಧಿಶಾಧಿಪತಿ, ಋತುಗಳಲ್ಲಿ ಹೇಮಂತ, ಶಿಶಿರ ಋತು, ದೇವತೆಗಳಲ್ಲಿ ಬೃಹಸ್ಪತಿ, ಧನಗಳಲ್ಲಿ ಚತುರ್ವರ್ಣಗಳಲ್ಲಿ ಯಾವುದು ಬಲವಾದುದೋ ಅದೇ ಧನ, ಸ್ತೋಮಗಳಲ್ಲಿ ಸಪ್ತವಿಂಶಸ್ತೋಮ ಮತ್ತು ತ್ರಯತ್ರಿಂಶತಿ ಸ್ತೋಮ ವಯಸ್ಸಿನಲ್ಲಿ ನಾಲ್ಕು ವರ್ಷಗಳು, ಯುಗಗಳಲ್ಲಿ ಕಲಿಯುಗದ ಅವಸಾನಕಾಲವು, ಈತನೇ ವಾಯುಗಳಲ್ಲಿ ಸುಳಿಗಾಳಿ. ಈತನು ಋಷಿಗಳಲ್ಲಿ ಸುಪರ್ಣ ಋಷಿ. ಈತನು ಸ್ವರ್ಣವರ್ಣದ ಮೈಕಾಂತಿಯವನು, ಸ್ವರ್ಣಶಿಲ್ಪದ ಆದ್ಯ ಪ್ರವರ್ತಕನು. ಪಂಚಾಂಗದಲ್ಲಿ ಕರಣವನ್ನು ರೂಪಿಸಿಕೊಟ್ಟಿರುವವನು ಈತನೇ. ಅಷ್ಟಕೋನ ಯಜ್ಞಕುಂಡದ ಅಧಿಪತಿ. ಸುವರ್ಣದಂಡವನ್ನು, ಸುವರ್ಣ ಯಜ್ಞೋಪವೀತವನ್ನು ಧರಿಸಿರುತ್ತಾನೆ. ಈತನು ಪ್ರಣವ ವೇಧಾದಿಪತಿ. ಶಿಲ್ಪ ಬ್ರಾಹಣ ಸಂಪ್ರದಾಯಸ್ಥ. ಶುಕ್ಲಯಜುರ್ವೇದ ವನ್ನು ಪ್ರಣವದೇವ ಎಂದು ಕರೆಯುವುದು ರೂಢಿಯಲ್ಲಿದೆ. ಪಂಚಭೂತಗಳಲ್ಲಿ ಆಕಾಶವು ಈತನದು. ಈ ಋಷಿಯು ಕ್ದರಿಯಾಶಕ್ತಿಯೊಂದಿಗೆ ಕೂಡಿರುತ್ತಾನೆ. ಸ್ವರ್ಣಶಿಲ್ಪದ ಆದಿ ಪ್ರವರ್ತಕ.

**ಶ್ರೀ ವೀರಭದ್ರ:** ವೈದಿಕ ಪರಂಪರೆಯಲ್ಲಿ ಆತನ ಬಗ್ಗೆ ಉಲ್ಲೇಖವಿರದಿದ್ದರೂ, ಎಲ್ಲಾ ಜನಾಂಗದವರಲ್ಲಿಯೂ ಕುಲದೇವರು, ಆರಾಧ್ಯ ದೇವತೆಗಳು, ಹರಕೆಯ ದೇವತೆಗಳು ಗ್ರಾಮದೇವತೆ ಗಳು ಇತ್ಯಾದಿ ಬಳಕೆಗೆ ಬಂದವು. ಗಿರಿಜಾ ಕಲ್ಯಾಣ ಮತ್ತು ಕುಮಾರ ಸಂಭವ ಕವಿರತ್ನ ಕಾಳಿದಾಸನ  ಕವಿ ರಾಘವಾಂಕನ ಕಾವ್ಯಗಳಲ್ಲಿ ಶೈವ ಗ್ರಂಥಗಳಲ್ಲಿ ಅಲ್ಲಲ್ಲಿ ಮೂಡಿನಿಂತ ಈ ವೀರಭದ್ರನ ಶಿವನ ಮಾನಸಪುತ್ರರಲ್ಲಿ ಒಬ್ಬ. ಶ್ರೀ ದೇವಿ ಪುರಾಣ ಶಿವನ ಮೊದಲನೆಯ ಪತ್ನಿ ಯಾದ ದಾಕ್ಷಾಯಣಿಯು ದಕ್ಷಬ್ರಹ್ಮನ ಸುಪುತ್ರಿಯು. ಒಂದು ಸಂದರ್ಭದಲ್ಲಿ ಶಿವನ ಅಪಾರ ಮಹಿಮೆಯನ್ನು ಅರಿಯದ ಅಹಂಕಾರದ ಮದವೇರಿದ ದಕ್ಷಬ್ರಹ್ಮ ಎಲ್ಲಾ ದೇವತೆಗಳನ್ನು ಆಮಂತ್ರಿಸಿ ಋಷಿಮುನಿಗಳನ್ನು ಕರೆಯಿಸಿ ತನ್ನ ಮಗಳಾದ ದಾಕ್ಷಾಯಣಿಯನ್ನು ಮಂಗಳಸ್ವರೂಪಿಯಾದ ಶಿವನನ್ನು ಬಿಟ್ಟು ಯಜ್ಞ ಪ್ರಾರಂಭಿಸಿದರು.

ದೇವತೆಗಳು ಋಷಿಗಳು ಕುಪಿತರಾದರೂ ದೇವಿ ದಾಕ್ಷಾಯಣಿಯು ತವರುಮನೆ ತಾಯಿ ತಂದೆಯ ವ್ಯಾಮೋಹದಿಂದ ಶಿವನು ಎಷ್ಟು ಹೇಳಿದರೂ ಕೇಳದೆ ನಂದಿಯನ್ನೇರಿ ದಕ್ಷಬ್ರಹ್ಮನ ಯಜ್ಞಶಾಲೆಗೆ ಬರುತ್ತಾಳೆ. ದೇವತೆಗಳು ಎದ್ದು ನಿಂತು ನಮಸ್ಕರಿಸಿದರೂ, ದಕ್ಷಬ್ರಹ್ಮ ಮತ್ತು ಹೆಂಡತಿ ಮಗಳನ್ನು ಬರಮಾಡಿಕೊಳ್ಳಲಾರದೇ ಆಸನವನ್ನು ನೀಡಲಿಲ್ಲ. ತಂದೆಯಿಂದ ಅವಮಾನಿತ ಳಾದ ದಾಕ್ಷಾಯಣಿಯು ಖಿನ್ನವದನಳಾಗಿ ಬೇಡವೆಂದರೂ ಹಠ ಹಿಡಿದು ಬಂದ ಕಾರಣ ತಿರುಗಿ ಹೋಗದೆ ಯಜ್ಞಕುಂಡ ಜ್ವಾಲೆಗಳಲ್ಲಿ ಪ್ರವೇಶಿಸಿದಳು. ಲೋಕಗಳೆಲ್ಲಾ ಅಲ್ಲೋಲ ಕಲ್ಲೋಲಗಳಾದವು. ಇದನ್ನು ಮೊದಲೇ ಊಹಿಸಿದ್ದ ಶಿವನು ರೌದ್ರರೂಪವನ್ನು ತಾಳಿ ತನ್ನ ಜಡೆಗಳನ್ನು ಬಿಚ್ಚಿ ಅಪ್ಪಳಿಸಿದಾಗ ವೀರಭದ್ರನು ಮಹಾಶಕ್ತಿಯಾಗಿ ನಿಂತು ಕೈ ಜೋಡಿಸಲು, ಆಗ ಶಿವನು ಮಗನೇ ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸ ಮಾಡಿ ದಕ್ಷನ ಶಿರಚ್ಛೇದನ ಮಾಡಿ ಬಾ ಎಂದು ಆಜ್ಞಾಪಿಸಲು ಆಗ ವೀರಭದ್ರನು ದೇವಾ ಅವನು ಮಹಾ ಮಾಯಾದೇವಿ, ಮತ್ತೆ ಮತ್ತೆ ಜನ್ಮ ತಾಳುವ ವಿದ್ಯೆ ಯಕ್ಷರಿಗೆ, ದಕ್ಷರಿಗೆ ಗೊತ್ತು. ನಾನು ಅವರನ್ನು ನನ್ನ ಖಡ್ಗದಿಂದ ಕೊಚ್ಚುತ್ತಾ ಹೋದಾಗ ಅವರ

ರಕ್ತವೂ ಕೆಳಗೆ ಬೀಳದಂತೆ ಮಾಡಲು, ತಮೋಗುಣದ ಪ್ರತೀಕಳಾದ ಒಬ್ಬ ಮಾಯಾಶಕ್ತಿಯನ್ನು ಕಳಿಸು ಎಂದಾಗ, ತನ್ನಿಂದ ಪ್ರಕಟವಾದ ತಮೋಗುಣದ ಮಹಾದೇವತೆಯನ್ನು ಉಗ್ರರೂಪದಿಂದ ಕಳಿಸುತ್ತಾನೆ. ಅವಳೇ ಭದ್ರಕಾಳಿ, ಅವರಿಬ್ಬರಿಂದ ದಕ್ಷಬ್ರಹ್ಮನ ಸೈನ್ಯಸಹಿತ ನಾಶವಾದ.

ಮುಂದೆ ತಾರಕಾಸುರನ ಸಂಹಾರಕ್ಕಾಗಿ ಶಿವನ ಪುತ್ರನೇ ಆಗಬೇಕೆಂದು ಸಕಲದೇವತೆಗಳು ಪ್ರಾರ್ಥಿಸಿಕೊಂಡಾಗ, ಆ ದ್ರಾಕ್ಷಾಯಣಿಯ ಪ್ರತಿರೂಪವು ಹಿಮಗಿರಿರಾಜನ ಪುತ್ರಿಯಾಗಿ ಬೆಳೆದು, ಪಾರ್ವತಿಯಾಗಿ ಬಹಳ ಉಗ್ರ ತಪಸ್ಸನ್ನು ಮಾಡಿ ಶಿವನು ಮೆಚ್ಚುವಂತೆ ಮಾಡಿ ಅವನಲ್ಲಿ ಅನುರಾಗ ಬೆಳೆಸಲು ರತಿಯ ಬೇಡಿಕೆಯಂತೆ ಅವನು ಅನಂಗರಂಗನಾದ. ನಂತರ ಎಲ್ಲರ ಬೇಡಿಕೆ ಯಂತೆ ತಾರಕಾಸುರನ ಸಂಹಾರಕ್ಕಾಗಿ ಗಿರಿರಾಜ ಪುತ್ರಿ ಗಿರಿಜೆಯನ್ನು ವಿವಾಹವಾದ. ಇದೇ ಪಾರ್ವತಿ ಕಲ್ಯಾಣ. ಇತ್ತೀಚೆಗೆ ಈ ವೀರಭದ್ರದೇವನು ಉತ್ತರ ಕರ್ನಾಟಕದಲ್ಲಿ ವಿಶ್ವಬ್ರಾಹ್ಮಣ ಶಿಲ್ಪಗಳ ಸಾಂಪ್ರದಾಯಿಕ ಮನೆಗಳಲ್ಲಿ ವ್ಯಾಪಿಸಿಕೊಂಡು ಬೆಳಗುತ್ತಿರುವುದನ್ನು ಕಾಣುತ್ತೇವೆ. ಬಲವಾದ ಕಾರಣ ಇಲ್ಲದೆ ತಿಂಥಿಣಿ ಶ್ರೀ ಮೌನೇಶ್ವರರ ವಿಜಯ ಬಾಲಲೀಲೆ, ಚರಿತಾಮೃತ, ಜ್ಞಾನನಿಧಿಗಳಾದ ಶ್ರೀಶ್ರೀಶ್ರೀ ದೇವೇಂದ್ರ ಮಹಾಸ್ವಾಮಿಗಳವರು ಶ್ರೀ ವಿಶ್ವಕರ್ಮ ಏಕದಂಡಿಗಿಮಠ ಶಹಪೂರ ಇವರು ಭಾಮಿನಿ ಷಟ್ಪದಿಯಲ್ಲಿ ರಚಿಸಿದ ಶ್ರೀ ಮೌನೇಶ್ವರ ಪುರಾಣ ಗ್ರಂಥದಲ್ಲಿ ಮತ್ತು ಇನ್ನೂ ಹಲವಾರು ಚರಿತಾಮೃತಗಳಲ್ಲಿ ಬರುವಂತೆ–ಗೋನಾಳದಲ್ಲಿ ಬಾಲ ಮೌನೇಶ್ವರನು ತಮ್ಮ ಪಕ್ಕದ ಮನೆಯ ಅಜ್ಜ ಅಜ್ಜಿಯರಂತೆ ಸಜ್ಜನಶೆಟ್ಟಿ ಗಾಣಿಗೇರ ಪರಪ್ಪ ಮತ್ತು ಮೇನಕಾದೇವಿಯವರ ಪರಮಭಕ್ತಿಗೆ ಮೆಚ್ಚಿ ಮಧ್ಯರಾತ್ರಿಯಲ್ಲಿ ದುಃಖಿಸುತ್ತಿರುವ ಸಂಪತ್ತನ್ನು ಕಳೆದುಕೊಂಡು ಉಪವಾಸದಿಂದ ತನಗಾಗಿ ಹಂಬಲಿಸುತ್ತಿರುವ ದಂಪತಿಗಳಿಗೆ ಸಂತೈಯಿಸುತ್ತಾ ಕೋಟಿ ಸೂರ್ಯ ಪ್ರಕಾಶಿತನಾಗಿ ಅದೇ ಮನೆಯಲ್ಲಿ ಪ್ರತ್ಯಕ್ಷನಾಗಿ ಕಳೆದುಕೊಂಡಿರತಕ್ಕಂತ ಸಂಪತ್ತನ್ನು ಇಮ್ಮಡಿಯಾಗಿ ದಯೆಪಾಲಿಸುತ್ತಾನೆ. ಇದರ ಹಿನ್ನೆಲೆಯಲ್ಲಿ ಆ ವೃದ್ಧ ದಂಪತಿಗಳು ತಮ್ಮ ಮನೆಯ ದೇವರಾದ ರಾಚೋಟಿ ಶ್ರೀ ವೀರಭದ್ರೇಶ್ವರ ಕ್ಷೇತ್ರದಲ್ಲಿ ನೂರೊಂದು ಜಂಗಮರಿಗೆ ಪಾದ ತೊಳೆದು ಅನ್ನ ಸಂತರ್ಪಣೆಯನ್ನು ಮಾಡಿಸಲು ಹೊರಡುವ ಮುನ್ನ ಮೌನೇಶ್ವರನು ಮನಗೆ ಬಂದು ತಾಯಿ ತಂದೆಗಳಿಗೂ, ಬಾಲ ಮೌನೇಶ್ವರನಿಗೂ ರಾಚೋಟಿ ಕ್ಷೇತ್ರಕ್ಕೆ ಬರುವಂತೆ ಬಿನ್ನಯಿಸಿಕೊಳ್ಳುತ್ತಾರೆ. ಅದಕ್ಕೆ ಬಾಲ ಮೌನೇಶ್ವರನ ತಾಯಿ "ಅಜ್ಜನ ಜೊತೆಗೆ ಹೋಗಿ ಬಾ ಕಂದ ಮೌನೇಶ, ನಾನು ಕೂಡ ಮೀಸಲು ತುಪ್ಪವನ್ನು ಕೊಡುವೆ ದೇವರಿಗೆ ಸಮರ್ಪಿಸಿ ಬಾ" ಎಂದು ಹೇಳಿದಾಗ ಬಾಲ ಮೌನೇಶ್ವರನು ಅಜ್ಜಾ ಅವ್ವನ ಮಾತಿನಂತೆ "ಅಜ್ಜಾ ನೀವು ಮುಂದೆ ಹೋಗಿರಿ ಜಂಗಮ ದಾಸೋಹದ ದಿವಸವೇ ನಾನು ಅಲ್ಲಿಗೆ ಬರುತ್ತೇನೆಂದು" ಹೇಳಿದಾಗ ಮೌನನ ಮಾತುಗಳನ್ನು ಕೇಳಿ ಅವನ ಮಹಿಮೆಯನ್ನು ತಿಳಿದ ವೃದ್ಧ ದಂಪತಿಗಳು ಬಂದು ಬಾಂಧವರಿಂದ ಕೂಡಿಕೊಂಡು ಅನೇಕ ಬಂಡಿಗಳಲ್ಲಿ ಧಾನ್ಯ ಸಂಗ್ರಹವನ್ನು ಸಾಹಿತ್ಯವನ್ನು ಹೇರಿಕೊಂಡು ಪ್ರಯಾಣ ಮಾಡುತ್ತಾರೆ.

ರಾಚೋಟಿ ವೀರಭದ್ರ ದೇವರ ಕ್ಷೇತ್ರಕ್ಕೆ ತಲುಪಿದ ಕೂಡಲೇ ಅಡುಗೆಯ ನಡೆದು ನಾನಾ ತರಹದ ಪಾಯಸದ ಕರಿಗಡಬು ತುಪ್ಪವನ್ನು ಅನೇಕ ತರಹದ ಅಡುಗೆಗಳಿಂದ ಸಿದ್ಧನಾಗಿ

ಪರ್ವತಪ್ಪ ಅಜ್ಜ ನೂರೊಂದು ಜಂಗಮರಿಗೆ ಬೋಜನಕ್ಕೆ ಕರೆದು ಮೌನೇಶ್ವರನು ಬರುವ ದಾರಿಯನ್ನೇ ಕಾಯುತ್ತಿರುವಾಗ ಮೌನೇಶ್ವರನು ಪ್ರಕಟನಾಗಿ ಕಾಣಿಸಿಕೊಂಡು ಜಂಗಮರ ಮಧ್ಯ ಬಂದು ನಿಲ್ಲುತ್ತಾನೆ. ಸಿಟ್ಟಿಗೆದ್ದ ಜಂಗಮರು ಅವನನ್ನು ಹಿಯಾಳಿಸಿ ಇಷ್ಟ ಲಿಂಗವಿರದ ಇವನೊಬ್ಬ ಭವಿಯೆಂದು ಹೊರಕ್ಕೆ ತಳ್ಳುತ್ತಾರೆ. ಪರ್ವತಪ್ಪಜ್ಜ ಮೇನಕಾದೇವಿ ಇವನು ಸಾಮಾನ್ಯನಲ್ಲ, ಲಿಂಗ ರೂಪದ ಶಿವನೇ ಅವನಾಗಿದ್ದಾನೆ ಎಂದು ಎಷ್ಟು ಅಂಗಲಾಚಿ ಬೇಡಿದರೂ ಬಾಲ ಮೌನೇಶ್ವರನಿಗೆ ಹೀಯಾಳಿಸಿ ನುಡಿಯಲು ಮೌನೇಶ್ವರನು ತಕ್ಷಣ ಮಾಯವಾಗುತ್ತಾನೆ.

ತಕ್ಷಣವೇ ನೂರೊಂದು ಜಂಗಮರ ಕೈಯಲ್ಲಿದ್ದ ಇಷ್ಟ ಲಿಂಗಗಳೆಲ್ಲವೂ ಪಟ ಪಟನೇ ಪುಷ್ಕರಿಣೀ ನೀರಿನಲ್ಲಿ ಬಿದ್ದು ಹೋಗುತ್ತವೆ. ಜಂಗಮರು ತಮ್ಮ ತಪ್ಪಿನ ಅರಿವಾಗಿ ತಾವೆ ಭವಿಗಳಾಗಿ ಪರಿತಪಿಸುತ್ತಾ ಬಾಲ ಮೌನೇಶ್ವರನನ್ನು ಹುಡುಕಾಡಿ ಬೇಸತ್ತು ಪರ್ವತಪ್ಪನ ಸಲಹೆಯಂತೆ ಶ್ರೀ ಮೌನೇಶ್ವರನನ್ನು ಪ್ರಾರ್ಥಿಸಿ ನೀನೆ ಸಾಕ್ಷಾತ್ ಶಿವನೆಂದು ಪರಿಪರಿಯಾಗಿ ಬೇಡಿಕೊಳ್ಳುತ್ತಾ ದುಃಖಿಸುತ್ತಿರುವಾಗ ಅಲ್ಲೇ ಪ್ರತ್ಯಕ್ಷನಾದ ಬಾಲ ಮೌನೇಶ್ವರನು ತನ್ನ ಅನೇಕ ವಚನಗಳ ಮೂಲಕ ಲಿಂಗ ಮಹಿಮೆಯನ್ನು ಹೇಳಿ ಅವರವರ ಲಿಂಗಗಳನ್ನು ಅವರಿಗೆ ಕೊಟ್ಟು ಪರ್ವತಪ್ಪಜ್ಜ ಮೇನಕಾದೇವಿಯರೊಡನೆ ಜೊತೆಗೂಡಿ ಪರಮಾನ್ನದ ಜೊತೆಗೆ ವೀರಭದ್ರದೇವರ ಗುಡಿಗೆ ಹೋಗಿ ನೋಡಲು ಸಾಯಂಕಾಲದ ಸಮಯವಾಗಿದ್ದರಿಂದ ಗುಡಿಯನ್ನು ಮುಚ್ಚಿ ದೊಡ್ಡ ದೊಡ್ಡ ಕೀಲಿಗಳನ್ನು ಹಾಕಿದ ಪೂಜಾರಿಗಳನ್ನು ಬಾಗಿಲನ್ನು ತೆರೆಯಿರೆಂದು ಹೇಳಿದಾಗ ಈಗ ತೆರೆಯುವುದಿಲ್ಲ ಎಂದು ಸೊಕ್ಕಿನಿಂದ ಹೋದ ಪೂಜಾರಿಗಳು ನೋಡು ನೋಡುತ್ತಿರುವಂತೆಯೇ ಬಾಲ ಮೌನೇಶ್ವರನು ವೀರಬದ್ರ ನಾನು ಬಂದಿದ್ದೇನೆ ನಿನಗೂ ಈ ಬಿದ್ದು ಬಾಗಿಲುಗಳು ತೆರದುಕೊಂಡಿವೆ.

ಬಾಲ ಮೌನೇಶ್ವರನು ಗುಡಿಯಲ್ಲಿ ಹೀಗಿ ನಿಂತಾಗ ಸಿಡಿಲು ಮಿಂಚುಗಳಾಗಿ ಶಿಲಾ ರೂಪಿನಿಂದ ನಿಂತಿದ್ದ ವೀರಭದ್ರದೇವನು ಪ್ರಕಟನಾಗಿ ಶಂಭೋ ಶಂಕರಾ ಹೇ ನನ್ನ ತಂದೆಯೇ ಈ ರೂಪದಿಂದ ಬಂದ ನಿನ್ನನ್ನು ನನ್ನ ಭಕ್ತರಾದ ಈ ಪಾಮರರು ಹೇಗೆ ಗುರುತಿಸುವರು, ಅವರ ತಪ್ಪನ್ನು ಕ್ಷಮಿಸು ತಂದೆ ನನಗೆ ಹಸಿವಾಗಿದೆ. ನೀನು ತಂದ ಮೀಸಲು ತುಪ್ಪ ಬೆರೆಸಿದ ಪರಮಾನ್ನವನ್ನು ನಿನ್ನ ಕೈಯಿಂದಲೇ ಉಣ್ಣಿಸು ಎಂದು ಕೈ ಮುಗಿದುಕೊಂಡು ನಿಂತಾಗ ಬಾಲ ಮೌನೇಶ್ವರನು ಬಾಯಿ ತೆರೆದುಕೊಂಡು ನಿಂತ ವೀರಭದ್ರದೇವನಿಗೆ ತುತ್ತುಗಳನ್ನು ಮಾಡಿ ಉಣಿಸುತ್ತಾನೆ. ತನ್ನ ಕೈಯಲ್ಲೆ ಗಂಗೆಯನ್ನು ತರಿಸಿ ಕುಡಿಸುತ್ತಾನೆ.

**೨. ಹಾವಿನಾಳ ಕಲ್ಲಪ್ಪಯ್ಯನವರು:** ಜಗದ್ಗುರು ಶ್ರೀ ಮೌನೇಶ್ವರರ ಭಾಮಿನಿ ಪಟ್ಪದಿ ಪುರಾಣ ರೂಪದ ಈ ಗ್ರಂಥದಲ್ಲಿ ಪೂಜ್ಯ ಶ್ರೀಶ್ರೀಶ್ರೀ ದೇವೇಂದ್ರ ಮಹಾಸ್ವಾಮಿಗಳ ಪೀಠಿಕಾಧ್ಯಾಯದಲ್ಲಿ ಬರುವ ಒಂದನೇ ಅಧ್ಯಾಯದ ಪ್ರಾರಂಭ. ಭೂಲೋಕದ ಕೃಷ್ಣಾ ಮತ್ತು ಭೀಮಾ ನದಿಗಳ ಮಧ್ಯ ಇರುವ ಸಾಗರ ನಾಡೆಂಬುದು ಪ್ರಸಿದ್ಧವಾದ ದೇಶ. ಪೂರ್ವದಲ್ಲಿ ಯವನ ವಂಶದ ಮೊಘಲರು, ವಿಜಾಪುರದ ಆದಿಲಾಹಿ, ದಖ್ಖನ್ನಿನ ನಿಜಾಮರು ಬಹಮನಿ ರಾಜ್ಯದ ಕ್ರಾಂತಿಕಾರರು ಪರಸ್ಪರರು ಹೋರಾಟದಿಂದ ಅನೇಕ ರಕ್ತಪಾತಗಳು ಹಿಂಸಾಚಾರಗಳು ಶಿಶುಗಳ ಹತ್ಯಾ ಮಹಿಳೆಯರ

ಮಾನಭಂಗ ಇತ್ಯಾದಿ ಪಾಪಕೃತ್ಯಗಳು ನಡೆಯುತ್ತಿರುವಾಗ ಭೂತಾಯಿಯ ಪಾಪದ ಭಾರ ತಾಳಲಾರದೆ ಕೈಲಾಸಕ್ಕೆ ಹೋಗಿ ಪಾರ್ವತಿ ಸಮೇತನಾಗಿ ಕುಳಿತಿರುವ ಶಿವನನ್ನು ಶಿಷ್ಟರನ್ನು ರಕ್ಷಿಸಲು ನೀನು ಅವತರಿಸಿ ಧರೆಗಿಳಿದು ಬರಬೇಕೆಂದು ದುಃಖಿತಪ್ತಳಾಗಿ ಪ್ರಾರ್ಥಿಸಿದಾಗ ಇಬ್ಬರಿಗೂ ನಡೆದ ಸಂಭಾಷಣೆಯಲ್ಲಿ ಶಿವನ ಕಂಟಕದಲ್ಲಿದ್ದ ಸರ್ಪರಾಜನಿಗೂ ನಂದೀಶ್ವರನಾದ ಬಸವೇಶನಿಗೆ ವಾದ ವಿವಾದಗಳು ನಡೆಯುತ್ತಿವೆ. ನಂದಿಯನ್ನು ನಿಂದಿಸಿದ ಸರ್ಪರಾಜನು ಅಹಂಕಾರದ ಮೇರೆಯನ್ನು ಮೀರಿ ನನ್ನಿಂದಲೇ ಶಿವ ಎಂದು ಕಿರುಚಿ ಶಿವನಿಂದನೆಯನ್ನು ಮಾಡುತ್ತಾನೆ. ಪತಿದೇವರ ನಿಂದನೆಯನ್ನು ಸಹಿಸದ ಪಾರ್ವತಿ ಸರ್ಪರಾಜನಿಗೆ ಶಾಪವನ್ನು ಕೊಡುತ್ತಾಳೆ. ಕ್ಷುದ್ರಜಂತುವಾಗಿ ಭೂಮಿಯಲ್ಲಿ ಬಿಲದೊಳಗೆ ಬಿದ್ದಿರು ಎಂದು ನುಡಿದ ಪಾರ್ವತಿಯ ಶಾಪದ ಪರಿಣಾಮವಾಗಿ ಸರ್ಪರಾಜ ಶಿವನ ಕಂಠವನ್ನು ಬಿಟ್ಟು ಧರೆಗೆ ಬರುತ್ತಿರುವಾಗ ದಯಾಭರಿತನಾದ ನಂದೀಶ್ವರನು ಸ್ವಾಮಿ ಪ್ರಭು ಶಂಕರ ನಿನ್ನ ಅವತಾರಕ್ಕೆ ಇದು ನಾಂದಿಯಾಗಲಿ ಈ ಶಾಪಕ್ಕೆ ವಿಮೋಚನೆ ಎಂದು ಹೇಳಬೇಕೆಂದು ಕೇಳಿದಾಗ ನಂದೀಶ ಕೇಳು ಪಾರ್ವತಿಯ ಶಾಪ ಸುಳ್ಳಾಗದು. ಮುಂದೆ ಈ ಸರ್ಪವು ಸಗರನಾಡಿನಲ್ಲಿ ತಿರುಗಾಡುತ್ತಿರುವಾಗ ಸದಾ ನನ್ನನ್ನು ಧ್ಯಾನಿಸುವ ಶಿವಪಂಚಾಕ್ಷರಿ ಮಂತ್ರವನ್ನು ಪುನಶ್ಚರಣ ಮಾಡುತ್ತ ಅಷ್ಟಾಂಗಯೋಗ ನಿರತನಾದ ಹಾವಿನಾಳದ ಕಲ್ಲಪ್ಪಯ್ಯನೆಂಬ ಮಹಾಯೋಗಿ ಹಳ್ಳದ ದಡದಲ್ಲಿ ದಕ್ಷಿಣ ಭಾಗದಲ್ಲಿರುವ ಶಿವಾಲಯದಲ್ಲಿ ಸಮಾಧಿ ಸ್ಥಿತಿಯಲ್ಲಿ ಕುಳಿತಿರುತ್ತಾನೆ. ಈ ಶಾಪಗ್ರಸ್ತನಾದ ಸರ್ಪರಾಜನು ಸಳಸಳನೇ ಹೋಗಿ ಅವನ ಅಂಗುಷ್ಟವನ್ನು ಹಿಡಿದು ಕಚ್ಚಿಬಿಡುತ್ತಾನೆ. ತಕ್ಷಣವೇ ಆ ಶಿವಯೋಗಿಯ ತಪೋಭಂಗವಾಗಿ ವಿಷವೇರದೆ ಸರ್ಪವನ್ನು ಹಿಡಿದು ಎರಡು ಹೋಳನ್ನಾಗಿ ಮಾಡಿ ಸೀಳಿಬಿಡುತ್ತಾನೆ. ಸ್ತ್ರೀ ಆಕೃತಿಯನ್ನು ಸಂಬೋಧಿಸಿ ತಾಯಿ ನೀನು ಯಾದಗಿರಿ ನಗರದ ಪೂರ್ವಕ್ಕಿದ್ದ ಕೋಟರಕಿ(ಗಾಜರಕೋಟ) ಎಂಬ ಗೋನಾಳ ಗ್ರಾಮದಲ್ಲಿ ವಿಶ್ವಬ್ರಾಹ್ಮಣ ತ್ವಷ್ಟ ಬ್ರಹ್ಮನ ವಂಶದಲ್ಲಿ ಶೇಷಮ್ಮಳಾಗಿ ಜನ್ಮ ತಾಳಿ. ನೀವಿಬ್ಬರು ದೈವಯೋಗದಿಂದ ದಂಪತಿಗಳಾಗಿ ದೇವಾಪುರದ ಮಂಚೆ ಬರುವ ಕವಲು ದಾರಿ ಬಲಕ್ಕೆ ಎಂಟು ಹತ್ತು ಮೈಲುಗಳಷ್ಟು ಅಂತರದಲ್ಲಿ ಇದೆ. ಇಂದಿಗೂ ಹಳ್ಳದ ದಡದಲ್ಲಿ ಶಿವಾಲಯವು ಕಂಗೋಳಿಸುತ್ತಿದೆ. ಸಂಶೋಧಕರು ಅಭಿಪ್ರಾಯದಂತೆ ಹಾವಿನಾಳ ಕಲ್ಲಪ್ಪಯ್ಯನವರು ಕೂಡ ವಿಶ್ವಕರ್ಮ ವಂಶದ ಯೋಗಿಗಳೆಂದು ಗುರುತಿಸಿದ್ದಾರೆ.

**೩. ಮಲ್ಲಯ್ಯ:** ಶಿವನ ಅಂತಾವಿತಾರಿಯಾದ ಮೈಲಾರ ಮಲ್ಲಯ್ಯನು, ಸರ್ವ ಮತಾಚಾರಗಳಲ್ಲಿ ಆರಾಧ್ಯ ದೈವನಾಗಿ ನಿಂತಿದ್ದಾನೆ. ಪೂರ್ವದಲ್ಲಿ ಮಲ್ಲಾಸುರ ಎಂಬ ದೈತ್ಯನು ಸ್ತ್ರೀಯಿಂದಲೇ ನನಗೆ ಮರಣವಾಗಬೇಕೆಂದು ದೇವರನ್ನು ಕುರಿತು ಉಗ್ರ ತಪಸ್ಸನ್ನು ಮಾಡಿ ವರ ಪಡೆದುಕೊಂಡು ಮನುಕುಲವನ್ನೆ ನಾಶ ಮಾಡುತ್ತಾ ನಡೆಯಲು ಪರಶಿವನೇ ಅಶ್ವಾರೂಢನಾಗಿ ಶಿವ ಗಣಗಳನ್ನು ರುದ್ರಗಣಗಳನ್ನು ನಾಯಿಗಳನ್ನಾಗಿ ಮಾಡಿಕೊಂಡು ತನ್ನ ಜಡೆಯಲ್ಲಿದ್ದ ಗಂಗೆಯನ್ನು ಮಾಳಮ್ಮನನ್ನಾಗಿ ಮಾಡಿಕೊಂಡು ಬೆನ್ನ ಹಿಂದೆ ಕುಳಿತಿದ್ದ ಗಂಗೆ ಮಾಳಮ್ಮಳಿಗೆ ತನ್ನ ತ್ರಿಶೂಲವನ್ನು ಕೊಟ್ಟು ಕುದುರೆಯನ್ನೇರಿ ಮಲ್ಲಾಸುರನ ತಾಣಕ್ಕೆ ಬಂದು ಅವನೊಡನೆ ಯುದ್ಧ ಮಾಡಿ ಅವನ ಜೊತೆಯಲ್ಲಿದ್ದ ನಾಯಿಗಳಿಂದ ಮಲ್ಲಾಸುರನ ಸೈನ್ಯವನ್ನು ಬಾಯಿಯಿಂದ ಕತ್ತರಿಸಿ ಹಾಕಿ ಮಹಾರಾಕ್ಷಸನ

ಎದೆಯ ಮೇಲೆ ಕುದುರೆಯನ್ನು ನಿಲ್ಲಿಸಿ ಗಂಗೆ ಮಾಳಮ್ಮನಿಂದ ತ್ರಿಶೂಲದಿಂದ ವಧೆ ಮಾಡಿಸುತ್ತಾನೆ. ಅಂದಿನಿಂದ ಮಲ್ಲಾಸುರನನ್ನು ಸಂಹಾರ ಮಾಡಿದ್ದರಿಂದ ಈ ದೇವನಿಗೆ ಮೈಲಾರದ ಮಲ್ಲಯ್ಯನೆಂದು ಪ್ರಸಿದ್ಧನಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ನೆಲೆಸಿದ್ದಾನೆ. ವಿಶೇಷವಾಗಿ ಹಾಲುಮತದ ಕುರುಬ ಜನಾಂಗದ ಅಧಿದೇವತೆಯಾಗಿ ನಿಂತಿದ್ದಾನೆ. ಈ ದೇವರಿಂದಲೇ ಆ ಜನಾಂಗದ ಬೀರಪ್ಪ, ಮಾಳಿಂಗ ರಾಯ, ಜಟ್ಟಿಂಗರಾಯ, ಹುಲಿಕಂಠರಾಯ ಎಂಬ ನಾಲ್ವರು ಮಹಾತ್ಮರು ಪ್ರಸಿದ್ಧರಾಗಿದ್ದಾರೆ. ಈ ಮೈಲಾರ ಮಲ್ಲಯ್ಯನೇ ಮೈಲಾಪುರದ ಮಲ್ಲಯ್ಯನಾಗಿ ಕೆಲವು ಬ್ರಾಹ್ಮಣರಿಗೆ ಮೈಲಾರ ಮಾರ್ತಾಂಡನಾಗಿ ಕ್ಷತ್ರಿಯರಿಗೆ ಮತ್ತು ದರ್ಜಿ ಜನಾಂಗಕ್ಕೆ ಮಾಳಸಾ ಮಾರ್ತಾಂಡನಾಗಿ ಮತ್ತು ಮಹಾರಾಷ್ಟ್ರದಲ್ಲಿ ಖಂಡೋಬನಾಗಿ ಅನೇಕ ನಾಮಗಳನ್ನು ಧರಿಸಿದ್ದು ಹೈದರಾಬಾದ್ ಕರ್ನಾಟಕದಿಂದ ಉತ್ತರ ಕರ್ನಾಟಕ ಚಿತ್ರದುರ್ಗ ಜಿಲ್ಲೆಗಳಲ್ಲಿಯೂ ಇವನ ದೇವಸ್ಥಾನಗಳಿವೆ.

**೪. ಮಹಾತ್ಮ ಗಾಂಧೀಜಿ ಶಿಲ್ಪ:** ಓರಾಯಿನ್ ಮಾಲ್ ಬ್ರಿಗೇಡ್ ಗ್ರೂಪ್ ಬೆಂಗಳೂರು ಕಟ್ಟಡದ ಸಭಾಂಗಣ ಮುಂಭಾಗದಲ್ಲಿ ಗಾಂಧೀಜಿಯ ೧೫ ಫೂಟ್ ಎತ್ತರದ ಕಂಚಿನ ಪುತ್ಥಳಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿಲ್ಪವನ್ನು ಒಂದು ಸಾವಿರ ಕೆ.ಜಿ. ತೂಕದ ಪ್ರಮಾಣದಲ್ಲಿ ನಿಂತ ಭಂಗಿಯಲ್ಲಿ ಮೂರ್ತಿಯನ್ನು ನಿರ್ಮಾಣ ಮಾಡಲಾಗಿದೆ. ಬಲಗಾಲನ್ನು ಮುಂದೆ ಇಟ್ಟು ಕೈಯಲ್ಲಿ ಕೋಲು ಹಿಡಿದುಕೊಂಡು ನಡೆಯುತ್ತಾರೆ ಎನ್ನುವಂತೆ ಕಾಣುತ್ತಾರೆ. ಗಾಂಧೀಜಿಯ ಶಿಲ್ಪದಲ್ಲಿ ಶರೀರ ಪ್ರಮಾಣ ಶಾಸ್ತ್ರ ಮತ್ತು ಅವರ ಕಾಲಿನಲ್ಲಿ ಕೈಗಳಲ್ಲಿ ಮುಖದಲ್ಲಿ ನರನಾಡಿಗಳು ಕಾಣು ವಂತೆ ನೈಜ ಶಿಲ್ಪವನ್ನು ನಿರ್ಮಿಸಿದ್ದಾರೆ. ಪಂಚೆ ಮೈಮೇಲಿನ ವಸ್ತ್ರ ನೇರಿಗೆಗಳನ್ನು ನೋಡಿದರೆ, ತೆಳುವಾದ ಬಟ್ಟೆಯನ್ನು ಹೊದ್ದುಕೊಂಡಿದ್ದಾರೆ ಎನ್ನುವಂತೆ ಭಾಸವಾಗುತ್ತದೆ. ಟೊಂಕದಲ್ಲಿ ತೂಗು ಗಡಿಯಾರವು ಸ್ಪಷ್ಟವಾಗಿ ಕಂಡುಬರುತ್ತದೆ. ಗಾಂಧೀಜಿಯವರ ಪಾದಗಳಲ್ಲಿ ಹಾಕಿಕೊಂಡಿರುವ ಪಾದರಕ್ಷೆಗಳು ಕೂಡ ಸೂಕ್ಷ್ಮ ಕೆತ್ತನೆಯಿಂದ ಕೂಡಿವೆ. ಗಾಂಧೀಜಿಯವರ ಮುಖಭಾವದಲ್ಲಿ ಮಂದಹಾಸ ನಗು ತನ್ಮಯತೆ ಮತ್ತು ಶಾಂತ ಚಿತ್ತತೆಯ ಭಾವ ಪ್ರತಿಬಿಂಬಿಸುತ್ತದೆ, ತ್ಯಾಗದ ಮೂರ್ತಿಯಾದ ಗಾಂಧೀಜಿಯವರ ಪ್ರತಿಮೆ ನೋಡಿದರೆ ದೇಶಕ್ಕಾಗಿ ಅವರು ಮಾಡಿದ ತ್ಯಾಗ ಮತ್ತು ಬಲಿದಾನ ನೆನಪಿಗೆ ಬರುತ್ತದೆ. ಗಾಂಧೀಜಿಯವರ ದುಂಡುಶಿಲ್ಪವೂ ಮನುಷ್ಯನ ಗಾತ್ರಕ್ಕಿಂತಲೂ ಮೂರು ಪಟ್ಟು ಎತ್ತರ ಗಾತ್ರವಿದ್ದು ಸಾವಿರ ಕೆ.ಜಿ. ತೂಕದ ವಿಗ್ರಹವನ್ನು ಹೈದರಾಬಾದ್ ಕರ್ನಾಟಕ ಸಾಂಪ್ರದಾಯಿಕ ಶಿಲ್ಪಕಲಾವಿದರು ಮಾಡಿರುವುದು ವೈಶಿಷ್ಟ್ಯಪೂರ್ಣ ಮಹತ್ವವಾಗಿದೆ.

**೫. ಶಿವ ಮತ್ತು ನಂದಿ:** ಶಿವನ ಮೂರ್ತಿಯನ್ನು ಪಂಚಲೋಹದಿಂದ ನಿರ್ಮಿಸಲಾಗಿದೆ. ಶಂಕರನು ಕೈಯಲ್ಲಿ ಡಮರುಗ ತ್ರಿಶೂಲವನ್ನು ಧರಿಸಿದ್ದಾನೆ. ಬಲದ ಹಸ್ತವೂ ಜ್ಞಾನಮುದ್ರೆಯನ್ನು ಸೂಚಿಸುತ್ತದೆ. "ತತ್ವಂ ಅಸಿ" ಮಹಾವಾಕ್ಯವನ್ನು ಜಗತ್ತಿನ ಮೊದಲ ಗುರುವಾದ ಶಂಕರನು ಧ್ಯಾನಾಸಕ್ತನಾಗಿ ಪ್ರತೀಕ್ಷೆ ಮಾಡುವಂತೆ ಕಂಡುಬರುತ್ತದೆ. ಎಡಭಾಗದ ಕೈಯಲ್ಲಿ ಓಲೆ ಗ್ರಂಥಗಳನ್ನು ಹಿಡಿದುಕೊಂಡಿರುವಂತೆ ನಿರ್ಮಿಸಲಾಗಿದೆ. ತಲೆಯ ಕಿರೀಟವು ಅತ್ಯಂತ ಸೂಕ್ಷ್ಮ ರೇಖೆಗಳಿಂದ ನಕ್ಷೆಯನ್ನು ರಚನೆ ಮಾಡಲಾಗಿದೆ. ಕಿರೀಟವೂ ವಿಜಯನಗರ ಶೈಲಿಯನ್ನು ಪ್ರತಿಬಿಂಬಿಸುವಂತಿದೆ.

ಅದರ ಮೇಲಿನ ಜಟೆಯು ಸುರುಳಿ ಸುತ್ತಿದಂತೆ ನೀಳವಾಗಿ ಅಡ್ಡಲಾಗಿ ಅಲಂಕೃತಗೊಂಡಿದೆ. ಮುಡಿಯ ಮೇಲೆ ಚಿಕ್ಕ ಗಾತ್ರದ ಗಂಗೆಯ ಶಿಲ್ಪವಿದೆ. ಕೊರಳಲ್ಲಿ ರುದ್ರಾಕ್ಷಿ ಆಭರಣ, ಕಿವಿಯಲ್ಲಿ ಕರ್ಣಕುಂಡಲ, ಭುಜ ನಡು ಕಟಿ ಕಾಲ್ಗಳಲ್ಲಿ ಕಡಗ ಮತ್ತು ಗೆಜ್ಜೆ ಸರಗಳಿವೆ. ಗಜ ಚರ್ಮಾಂಬರನಾದ ಶಿವನು ತನ್ನ ಶಿಷ್ಯನಾದ ನಂದಿಯ ಭುಜದ ಮೇಲೆ ತನ್ನ ಬಲಪಾದವನ್ನು ಇರಿಸಿದ್ದು ವೈಶಿಷ್ಟ್ಯ ವೆನಿಸುತ್ತದೆ. ಅಧಿಷ್ಠಾನದ ಪೀಠದ ಮೇಲೆ ಶಿವನು ಆಸೀನವಾಗಿದ್ದಾನೆ. ಢಮರುಗದ ಮೇಲೆ ಕೀರ್ತಿ ಮುಖವನ್ನು ವಿನ್ಯಾಸಗೊಳಿಸಲಾಗಿದೆ ಹಾಗೆಯೇ ಶಿವನ ಸೊಂಟದ ಭಾಗದಲ್ಲಿ ಕೀರ್ತಿ ಮುಖದ ಸರವಿದೆ. ಪೀಠದ ಕೆಳಗಡೆ ನಂದಿಯ ಶಿಲ್ಪವೂ ದುಂಡುಶಿಲ್ಪವಾಗಿ ರಚನೆ ಮಾಡಲಾಗಿದೆ. ನಂದಿಯ ಕೊರಳಲ್ಲಿ ಮತ್ತು ಭುಜದ ಮೇಲೆ ಗೆಜ್ಜೆಯ ಸರಗಳನ್ನು ನಿರ್ಮಿಸಲಾಗಿದೆ. ನಂದಿಯ ಹಣೆಯಲ್ಲಿ ಗೆಜ್ಜೆಪಟ್ಟಿಯನ್ನು ಕೆತ್ತನೆ ಮಾಡಿರುವುದು ಕಂಡುಬರುತ್ತದೆ. ಶಿವನ ಪೀಠವನ್ನು ಮೂರು ಹಂತದಲ್ಲಿ ಆಯತಾಕಾರವಾಗಿ ನಿರ್ಮಿಸಲಾಗಿದೆ. ಶಿವನ ಎರಡು ಕಣ್ಣುಗಳು ಅರೆನಗ್ನ ಆಕಾರದಲ್ಲಿ ವಿನ್ಯಾಸ ಮಾಡಿದ್ದು ಶಿವನ ಮೂರನೇ ಕಣ್ಣನ್ನು ಸ್ಪಷ್ಟವಾಗಿ ಕೆತ್ತಲಾಗಿದೆ. ಶಿವನು ಮೊಣಕೈ ಭಾಗಗಳಲ್ಲಿ ರುದ್ರಾಕ್ಷಿ ಸರಗಳು ಕಂಡುಬರುತ್ತವೆ. ಶಿವನ ಯಜ್ಞೋಪವಿತ ಜನಿವಾರ ಧರಿಸಿರುವುದು ಅತ್ಯಂತ ವೈಶಿಷ್ಟ್ಯಪೂರ್ಣವಾಗಿದೆ.

**ಕಲಾವಿದ ಭೀಮಣ್ಣ ಮೋನಪ್ಪ ಕಂಬಾರ ಅವರ ಕಲಾಕೃತಿಗಳು(ಯಾದಗಿರಿ ಜಿಲ್ಲೆ)**

೧. **ಆಂಜನೇಯನ ಲೋಹಶಿಲ್ಪ:** ನಿಂತಿರುವ ಭಂಗಿಯಲ್ಲಿ ಆಂಜನೇಯನ ದುಂಡುಶಿಲ್ಪವನ್ನು ಪಂಚಲೋಹದಿಂದ ಎರಕ ಹೊಯ್ದು ನಿರ್ಮಿಸಲಾಗದೆ. ಪದ್ಮಪೀಠದ ಮೇಲೆ ನಿಂತಿರುವ ಆಂಜನೇಯನು ಬಲಗೈ ವರದಾಹಸ್ತ ಎಡಗೈಯಲ್ಲಿ ಗದೆಯನ್ನು ಧರಿಸಿದ್ದಾನೆ. ಕಿರೀಟವು ಮೂರು ಹಂತಗಳಿಂದ ಕೂಡಿದ್ದು ನಯವಾಗಿ ಕೆತ್ತನೆ ಮಾಡಲಾಗಿದೆ. ಆಂಜನೇಯನ ಬಾಲವು ಅರ್ಧ ವರ್ತುಲಾಕಾರದಲ್ಲಿ ಮೇಲಿಂದ ಬಂದು ಗದೆಗೆ ಸ್ಪರ್ಶಿಸುವಂತೆ ಇದೆ. ಆಂಜನೇಯನ ಕರ್ಣಕುಂಡಲಗಳು, ಕೊರಳಲ್ಲಿ ಆಭರಣ, ನಡುವಿನವಸ್ತ್ರ, ಕೈಕಾಲುಗಳಲ್ಲಿ ಕಡಗಗಳನ್ನು ಧರಿಸಿದ್ದಾನೆ. ರಾಮನಾಮವನ್ನು ಧ್ಯಾನಿಸುವಂತೆ ಅರೆನಗ್ನ ಸ್ಥಿತಿಯಲ್ಲಿ ಕಂಡುಬರುತ್ತವೆ.

೨. **ನಂದಿಯ ಮೇಲೆ ಆಸೀನರಾದ ಶಿವಪಾರ್ವತಿ ಲೋಹಶಿಲ್ಪ:** ಪಂಚಲೋಹದಿಂದ ನಿರ್ಮಿಸಿರುವ ದುಂಡುಶಿಲ್ಪ. ನಂದಿ ವಾಹನನಾಗಿ ಶಿವನು ಕುಳಿತಿದ್ದಾನೆ. ಮುಂದೆ ಪಾರ್ವತಿ ಆಸೀನಳಾಗಿದ್ದಾಳೆ. ಶಿವನು ಒಂದು ವರದಾಹಸ್ತ ಇನ್ನೊಂದು ಕೈಯಲ್ಲಿ ಗೌರಿಯನ್ನು ಹಿಡಿದುಕೊಂಡಿದ್ದಾನೆ. ಶಿವನ ಹಿಂಬದಿಯ ಎರಡು ಕೈಗಳಲ್ಲಿ ತ್ರಿಶೂಲ ಡಮರುಗವಿದೆ. ಶಿವನು ಜಟಾಧಾರಿಯಾಗಿದ್ದು ಗಂಗೆಯನ್ನು ಧರಿಸಿದ್ದಾನೆ. ನಂದಿಯ ಕೊರಳಲ್ಲಿ ಗೆಜ್ಜೆಯ ಎರಡು ಸರಗಳಿವೆ ನಾಲ್ಕು ಕಾಲನ್ನು ಸಮಸ್ಥಿತಿಯಲ್ಲಿ ಊರಿ ನಿಂತಿರುವ ನಂದಿಯು ಜನಪದ ಶೈಲಿಯಲ್ಲಿ ರಚನೆ ಯಾಗಿರುವುದು ಒಂದು ವೈಶಿಷ್ಟ್ಯವಾಗಿದೆ.

೩. **ಆನೆಯ ದುಂಡುಶಿಲ್ಪ(ಲೋಹ ಮಾಧ್ಯಮ):** ಹಿತ್ತಾಳೆ, ತಾಮ್ರ, ಸತುವು ಮುಂತಾದ ಲೋಹಗಳನ್ನು ಸಮ್ಮಿಶ್ರಣ ಮಾಡಿ, ಬೆಂಕಿಯಲ್ಲಿ ಕರಗಿಸಿ, ಎರಕ ಮಾಡಿಕೊಂಡು ಆನೆಯ

ದುಂಡು ಶಿಲ್ಪಕಲಾಕೃತಿಯನ್ನು ಮಾಡಲಾಗಿದೆ. ಮೊದಲು ಮೇಣದಿಂದ ಕಲಾಕೃತಿಯನ್ನು ರಚನೆ ಮಾಡಿಕೊಂಡು, ಅದಕ್ಕೆ ಮೃತ್ತಿಕೆಯನ್ನು ಲೇಪನ ಮಾಡಿ ಅದು ಆರಿದ ನಂತರ ಬೆಂಕಿಯ ಒಲೆಯಲ್ಲಿ ಪುಟ ಹಾಕಲಾಗುತ್ತದೆ. ನಂತರ ಒಂದು ದಿನ ಬಿಟ್ಟು ಆಮೇಲೆ ಮರುದಿನ ಅದರ ಅಚ್ಚನ್ನು ತೆಗೆದುಕೊಂಡು ಲೋಹ ಮಿಶ್ರಣದ ರಸದಿಂದ ಎರಕ ಹೊಯ್ದು ಆನೆ ಶಿಲ್ಪರಚನೆ ಮಾಡಲಾಗಿದೆ. ಆನೆಯ ದುಂಡು ಶಿಲ್ಪದಲ್ಲಿ ನೈಜತೆಗೆ ತಕ್ಕಂತೆ ಪ್ರಮಾಣ, ಭಾವಭಂಗಿ ಮತ್ತು ಅದರ ನಿಲುವು ಗಾಂಭೀರ್ಯದಿಂದ ಕೂಡಿದೆ. ಆನೆಯ ಕೊರಳಲ್ಲಿ ಗೆಜ್ಜೆಯ ಸರ, ಘಂಟೆಯ ಸರಗಳನ್ನು ಸಂಯೋಜಿಸಲಾಗಿದೆ. ಆನೆಯ ಸೊಂಡಿಲನ್ನು ನೀಳವಾಗಿ ಕೆಳಗೆ ಮಾಡಿ ಮರದ ದಿಮ್ಮೆಯೊಂದನ್ನು ಸೊಂಡಿಲಿನಿಂದ ಹಿಡಿದುಕೊಂಡು ಬೇರೆ ಕಡೆಗೆ ಸಾಗಿಸುವಂತೆ ರಚಿಸಲಾಗಿದೆ. ಆನೆಯ ತಲೆಯ ಮೇಲೆ ದಡಿ, ಜೋಲುಗಳಿಂದ ಅಲಂಕರಣ ಮಾಡಿದ್ದನ್ನು ನೋಡಿದರೆ, ಉತ್ಸವದಲ್ಲಿ ಭಾಗವಹಿಸುವ ಆನೆಯಂತೆ ಕಂಡುಬರುತ್ತದೆ. ಆನೆಯ ಕಿವಿಗಳು ಸ್ಪಷ್ಟವಾಗಿ ಶಬ್ದವನ್ನು ಆಲಿಸುವಂತೆ ಆಕೃತಿ ನಿರ್ಮಾಣವಾಗಿದೆ. ಆನೆಯ ಬಾಯಿ, ದಂತಗಳು ಮತ್ತು ನಾಲ್ಕು ಕಾಲುಗಳನ್ನು ನೋಡಿದರೆ, ಶಿಲ್ಪವು ಶಾಸ್ತ್ರೀಯ ಪ್ರಮಾಣಕ್ಕಿಂತ ಜನಪದ ಶೈಲಿಯನ್ನು ಹೋಲುವಂತೆ ಕಲಾಕೃತಿ ನಿರ್ಮಾಣ ಹಂತದಲ್ಲಿದೆ ಎಂದೆನಿಸುತ್ತದೆ. ಸಾಂಪ್ರದಾಯಿಕ ಕಲಾಕೃತಿಗಳಲ್ಲಿ ಜನಪದ ಸೂಕ್ಷ್ಮತೆಗಳು ಕಂಡುಬರುವುದು ಈ ಭಾಗದ ಒಂದು ವೈಶಿಷ್ಟ್ಯತೆಯಾಗಿದೆ.

**೪. ಸಿದ್ಧೇಶ್ವರ ವಿಗ್ರಹ(ಕಂಚು–ಲೋಹ ಮಾಧ್ಯಮ):** ಶಿವನನ್ನು ಕೆಲವು ಭಾಗದಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆದು, ಆರಾಧಿಸುವುದು ಕರ್ನಾಟಕದಲ್ಲಿ ಕಂಡುಬರುತ್ತದೆ. ಶಿವನ ನಿರಾಕಾರವಾದ ಲಿಂಗಕ್ಕೆ ಸ್ಥಳೀಯವಾದ ಚಾರಿತ್ರಿಕ ಮತ್ತು ಸಾಂಸ್ಕೃತಿಕವಾದ ಹಿನ್ನೆಲೆಯಿಂದ ವಿವಿಧ ಹೆಸರನಿಂದ ಪೂಜೆ, ಜಾತ್ರೆ, ಉತ್ಸವಗಳನ್ನು ಆಚರಿಸುವುದು ಕಂಡುಬರುತ್ತದೆ. ಸಿದ್ಧೇಶ್ವರನ ವಿಗ್ರಹವು ಹಲವು ಲೋಹಗಳಿಂದ ಮಿಶ್ರಿತವಾದ ಕಂಚಿನ ವಿಗ್ರಹವಾಗಿವೆ. ಮೂಲತಃ ಈಶ್ವರ ಲಿಂಗದ ಮೇಲಿನ ಮುಖಕವಚದಂತೆ ಇದ್ದರೂ, ಇದು ಬಿಡಿಭಾಗಗಳನ್ನು ಜೋಡಿಸಿ ಮಾಡಿದ ಕವಚದಂತೆ ಕಂಡು ಬರುವುದಿಲ್ಲ. ಬದಲಾಗಿ ಎರಕ ಮಾಡಿ ತಯಾರಿಸಿದ ವಿಗ್ರಹವಾಗಿದೆ. ಅಲ್ಲದೇ ಕಂಚಿನ ಲೋಹ ವನ್ನು ಉಪಯೋಗಿಸಿಕೊಂಡು ಶಿಲ್ಪದ ಒಳಗಡೆ ಪೊಳ್ಳಾಗಿರುವಂತೆ ದುಂಡುಶಿಲ್ಪವನ್ನು ರಚನೆ ಮಾಡಿರುವುದು ವಿಶೇಷವೆನಿಸುತ್ತದೆ. ಸಂಪೂರ್ಣ ಘನಾಕೃತಿಯಲ್ಲಿ ತಯಾರಿಸಿದರೆ, ಲೋಹದ ಪ್ರಮಾಣವೂ ಹೆಚ್ಚಾಗಿ, ಅದರ ಮೌಲ್ಯವೂ ಬಹಳವಾಗುತ್ತದೆ. ಆದ್ದರಿಂದ ಶಿಲ್ಪಕಲಾವಿದನು ಮೂಲ ಆಕೃತಿಗೆ ತಕ್ಕಂತೆ ಮತ್ತು ಕಡಿಮೆ ಹಣಕಾಸಿನಿಂದ ಶಿಲ್ಪವನ್ನು ಸುಂದರವಾಗಿ ರಚನೆ ಮಾಡಿ ಕೊಡುವುದು ಇನ್ನೊಂದು ವಿಶೇಷವೇ ಆಗಿದೆ. ಶಿವನ ಮುಖ ಸಿದ್ಧೇಶ್ವರನ ರೂಪದಲ್ಲಿ ಸುಮಾರು ಹದಿನೈದು ಕಿಲೋಗ್ರಾಮ್ ತೂಕದಲ್ಲಿ ಒಂದು ಅಡಿ ಆರು ಇಂಚು ಎತ್ತರದ ವಿಗ್ರಹ ತಯಾರಿಸ ಲಾಗಿದೆ. ಕಣ್ಣು, ಮೂಗು, ಕಿವಿ, ಜಟೆ ಮತ್ತು ಮೀಸೆಗಳನ್ನು ಸ್ಪಷ್ಟವಾಗಿ ರಚಿಸಿರುವುದು ಕಂಡು ಬರುತ್ತದೆ. ಮೂರನೇ ಕಣ್ಣನ್ನು ರೇಖೆಗಳಿಂದ ಕೆತ್ತನೆ ಮಾಡಲಾಗಿದೆ. ಕುತ್ತಿಗೆಯಲ್ಲಿ ಕಡಗದಂತೆ ಒಂದು ಬಳೆಯನ್ನು ಹಾಕಲಾಗಿದೆ. ಶಿಲ್ಪವು ನೋಡಿದರೆ ಸಾಕು, ಜನಪದೀಯ ಮತ್ತು ಸಾಂಪ್ರದಾಯಿಕ ಶೈಲಿಯಲ್ಲಿ ಸಂಯೋಜಲ್ಪಟ್ಟಿರುವುದು ಕಂಡುಬರುತ್ತದೆ.

**೫. ದೀಪ ಬೆಳಗುವ ಬಾಲಿಕೆ ಶಿಲ್ಪಗಳು(ಕಂಚು-ಲೋಹ ಮಾಧ್ಯಮ):** ದೇವರ ಮುಂದೆ ದೀಪಗಳನ್ನು ಎಡ-ಬಲ ಬದಿಯಲ್ಲಿ ಬೆಳಗುವುದು ಆಸ್ತಿಕರಲ್ಲಿ ಕಂಡುಬರುತ್ತದೆ. ದೀಪ ಸ್ಥಂಭಗಳು, ಹಣತೆ, ಕಲಶ, ದೀಪದ ಸಮೇವು ಮುಂತಾದ ಮಣ್ಣಿನ, ಲೋಹಗಳಲ್ಲಿ ಬೆಳ್ಳಿ, ಕಂಚು, ಹಿತ್ತಾಳೆ ಸ್ಟೀಲ್ ಮುಂತಾದವುಗಳಿಂದ ತಯಾರಿಸಿದ ದೀಪಸ್ಥಂಭಗಳಿಂದ ದೀಪ ಬೆಳಗುವ ಆಲಂಕಾರಿಕ ಉಪಕರಣಗಳನ್ನು ಬಳಕೆ ಮಾಡುತ್ತಾರೆ. ಕಂಚಿನಿಂದ ನಿರ್ಮಿಸಿರುವ ವಿಶೇಷ ದೀಪ ಬೆಳಗುವ ಬಾಲಿಕೆಯರ ದುಂಡುಶಿಲ್ಪದೊಂದಿಗೆ ಕಲಾಕೃತಿ ತಯಾರಿಸುವುದು ಒಂದು ವಿಶೇಷವೆನಿಸುತ್ತದೆ.

ದೇವರ ಎಡ-ಬಲ ಬದಿಯಲ್ಲಿ ಸ್ಥಾಪಿಸಲು ನಿರ್ಮಿಸಿರುವ ಕಂಚಿನ ದೀಪಬಾಲಿಕೆಯರು ಅಲಂಕರಣಗೊಂಡಿದ್ದು, ದೇವರಿಗೆ ತಮ್ಮ ಎರಡೂ ಕೈಗಳಿಂದ ದೀಪ ಬೆಳಗಿ ಆರತಿ ಮಾಡುತ್ತಾರೆ ಏನೋ ಎನ್ನುವಂತೆ ಶಿಲ್ಪರಚನೆ ಮಾಡಲಾಗಿದೆ. ಅಧಿಷ್ಠಾನ ಪೀಠದ ಮೇಲೆ ಪದ್ಮಪೀಠವನ್ನು ಅಲಂಕರಿಸಿ ನಿಂತಿರುವ ದೀಪಬಾಲಿಕೆಯರು ಅಪ್ಸರಕನ್ಯೆಯರಂತೆ ನಿಂತಿದ್ದಾರೆ. ಇವರ ಶಿಲ್ಪದಲ್ಲಿ ವಸ್ತ್ರವಿನ್ಯಾಸ ಭರತನಾಟ್ಯ ಮಾಡುವ ನಾಟ್ಯ ಕಲಾವಿದರಂತೆ ಅಲಂಕರಣಗೊಳಿಸಿ ಶಿಲ್ಪಕಲಾಕೃತಿ ರಚಿಸಿರುವುದು ಒಂದು ವೈಶಿಷ್ಟ್ಯವೇ ಸರಿ. ಎರಡು ಕೈಗಳಿಂದ ದೀಪದ ಹಣತೆಯನ್ನು ಹಿಡಿದುಕೊಂಡು ತದೇಕ ಭಾವದಿಂದ ಭಕ್ತಿಪರವಶರಾಗಿ ನಿಂತಿರುವಂತೆ ಶಿಲ್ಪಕಲಾಕೃತಿಗಳು ರಚನೆಯಾಗಿವೆ. ಹಣೆಯಲ್ಲಿ ತಿಲಕ, ಕಿವಿಗಳಲ್ಲಿ ಓಲೆ, ಕಂಠಾಭರಣಗಳು, ಭುಜಪಟ್ಟಿ, ರಟ್ಟೆಗಳಿಗೆ ಅಲಂಕೃತವಾದ ಕಡಗಗಳು ಮತ್ತು ನಡುವಿನಲ್ಲಿ ವಸ್ತ್ರವಿನ್ಯಾಸದ ಮೇಲೆ ಕಟ್ಟಿರುವ ಗೆಜ್ಜೆಪಟ್ಟಿ ನೇರಿಗೆ ದಡಿಗಳ ವಿನ್ಯಾಸ ಸಂಪೂರ್ಣ ಸಾಂಪ್ರದಾಯಿಕ ಶೈಲಿಯನ್ನು ಪ್ರತಿಬಿಂಬಿಸುತ್ತಿವೆ. ಆದರೆ ಈ ಶಿಲ್ಪಗಳಲ್ಲಿ ಕಂಡುಬರುವ ಮುಖದ ಪ್ರಮಾಣ, ಕೇಶವಿನ್ಯಾಸಗಳು ಮಾತ್ರ ಜನಪದ ಶೈಲಿಯನ್ನು ಹೋಲುತ್ತವೆ. ಲೋಹಶಿಲ್ಪದಲ್ಲಿ ಕೆಲವು ಭಾಗಗಳನ್ನು ಬಿಡಿಯಾಗಿ ಮತ್ತೆ ಕೆಲವುಗಳನ್ನು ಇಡಿಯಾಗಿ ಮಾಡಿ ಪೊಳ್ಳು ಬರುವಂತೆ ಲೋಹದ ಎರಕ ಮಾದರಿಯನ್ನು ತಯಾರಿಸಿಕೊಂಡು ದೀಪಸ್ಥಂಭದ ಬದಲಾಗಿ ದೀಪ ಬೆಳಗುವ ಬಾಲಿಕೆಯರ ಶಿಲ್ಪ ವಿನ್ಯಾಸ ಮಾಡಿರುವುದು ಒಂದು ಅಚ್ಚರಿ.

**ಬಸಣ್ಣ ಮೋನಪ್ಪ ಬಡಿಗೇರ ಅವರ ಕಲಾಕೃತಿಗಳು(ಯಾದಗಿರಿ ಜಿಲ್ಲೆ)**

೧. **ದ್ಯಾಮವ್ವನ ಮರಶಿಲ್ಪ:** ದ್ಯಾಮವ್ವನ ಮರಶಿಲ್ಪವು ಜನಪದ ಶೈಲಿಯಿಂದ ಕೂಡಿದೆ. ಇದನ್ನು ಗ್ರಾಮದೇವತೆಯನ್ನಾಗಿ ಪೂಜಿಸುವ ಪದ್ಧತಿಯಿದೆ. ಉತ್ತರ ಕರ್ನಾಟಕದ ಗ್ರಾಮದೇವತೆಯ ಶಿಲ್ಪಕ್ಕೂ ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಯ ಶಿಲ್ಪಕ್ಕೂ ಬಹಳ ವ್ಯತ್ಯಾಸ ಕಂಡುಬರುತ್ತದೆ. ಉತ್ತರ ಕರ್ನಾಟಕದಲ್ಲಿ ಮರಶಿಲ್ಪವನ್ನು ತಯಾರಿಸಿ ಕೆಂಪು ಹಳದಿ ವರ್ಣವನ್ನು ಬಳಸಿ ಗ್ರಾಮದೇವತೆಯನ್ನು ಅಲಂಕರಣಗೊಳಿಸಲಾಗುತ್ತದೆ. ಗ್ರಾಮದೇವತೆಯ ಮರಶಿಲ್ಪವೂ ಸುಮಾರು ಐದು ಫೂಟ್ ಎತ್ತರದಿಂದ ಕೂಡಿದ್ದು ಮೂರು ಭಾಗಗಳು ಪ್ರತ್ಯೇಕವಾಗಿ ಜೋಡಿಸಲ್ಪಟ್ಟಿವೆ. ಕೆಳಗಿನ ಭಾಗದಲ್ಲಿ ನಾಲ್ಕು ಇಂಚಿನ ದಪ್ಪದಲ್ಲಿ ಮರದ ಹಲಗೆಯನ ಮೇಲೆ ಒಂದು ಫೂಟ್ ಆರು ಇಂಚು ಎತ್ತರದಲ್ಲಿ ರಾಕ್ಷಸನ ಶಿಲ್ಪವಿದ್ದು ಕೈಯಲ್ಲಿ ಖಡ್ಗವನ್ನು ಹಿಡಿದು ದೇವಿಯೊಂದಿಗೆ ಸೆಣಸಾಡುವಂತೆ ಕಂಡುಬರುತ್ತದೆ. ಈ ರಕ್ಕಸನ ಶಿಲ್ಪದ ಎರಡು ಭುಜದ ಮೇಲೆ ಸಿಂಹದ

ಎರಡು ಮುಂಗಾಲುಗಳನ್ನು ಇರಿಸಿ ಬಾಯಿ ತೆರದ ರೂಪದಲ್ಲಿ ಸಿಂಹವನ್ನು ಕೆತ್ತಲಾಗಿದೆ. ಸಿಂಹದ ಮೇಲೆ ಆದಿಶಕ್ತಿಯು ದುರ್ಗಾರೂಪವನ್ನು ತಾಳಿರುವುದು ಕಂಡುಬರುತ್ತದೆ. ರಕ್ಕಸನನ್ನು ಸಂಹಾರ ಮಾಡಲು ಸಿಂಹ ವಾಹಿನಿಯಾದ ದೇವಿಯ ಶಿಲ್ಪ ದಶಭುಜಗಳಿಂದ ಕೂಡಿದ್ದು ಹತ್ತು ಕೈಗಳಲ್ಲಿ ಖಡ್ಗ, ಚಕ್ರ, ಪರಶು, ತ್ರಿಶೂಲ, ಗದೆ, ಶಂಕ, ಸರ್ಪಾಸ್ತ್ರ, ಪಿನಾಕಪಾಣಿಯನ್ನು ಹಿಡಿದಿದ್ದು ಎಡಗೈಯಲ್ಲಿ ರಕ್ಕಸನ ರುಂಡವನ್ನು ಚಂಡಾಡಿ ಎಡಗೈಯಲ್ಲಿ ಹಿಡಿದಂತೆ ಕೆತ್ತನೆ ಮಾಡಲಾಗಿದೆ. ದೇವಿಯ ಕೀರಿಟದಲ್ಲಿ ಕೇದಗಿಯ ಗರಿಯನ್ನು ಕೆತ್ತನೆ ಮಾಡಲಾಗಿರುವುದು ಒಂದು ವೈಶಿಷ್ಟ್ಯವೇ ಸರಿ.

೨. **ಕುದುರೆ ಮರಶಿಲ್ಪ:** ಸಾಗುವಾನಿಯ ಮರದಿಂದ ಬಾಗಿಲುಗಳ ಮೇಲೆ ಎಡಬಲದಲ್ಲಿ ಹಣೆಪಟ್ಟಿಯ ಬಾಗದಲ್ಲಿ ಜೋಡುಕುದುರೆಗಳನ್ನು ಕೆತ್ತಿಸಿ ಪ್ರತಿಷ್ಠಾಪನೆ ಮಾಡುವುದು ಸಗರ ನಾಡಿನ ವೈಶೀಷ್ಟ್ಯವಾಗಿದೆ. ಸುರಪುರದ ತಾಲೂಕು ದೇವರ ಗೋನಾಲ ಕುದುರೆಗಳು ಪ್ರಸಿದ್ಧಿ ಹೊಂದಿವೆ. ಮರಶಿಲ್ಪದಲ್ಲಿ ಕುದುರೆಯನ್ನು ಕೆತ್ತನೆ ಮಾಡಿ ಮನೆಯ ಮುಖ್ಯ ಬಾಗಿಲಿಗೆ ಕೂಡಿಸಿ ರುವುದರಿಂದ ಮನೆಯ ಕುಟುಂಬದವರಿಗೆ ಯಶಸ್ಸು ಕೀರ್ತಿ ಲಭಿಸುತ್ತದೆ. ಎನ್ನುವುದು ಜನರ ಭಾವನೆ. ಯಾದಗಿರಿ, ಕಲುಬುರ್ಗಿ ರಾಯಚೂರು, ಬೀದರ ಜಿಲ್ಲೆಗಳಲ್ಲಿ ಮಾತ್ರ ಇಂತಹ ಕುದುರೆ ಶಿಲ್ಪಗಳನ್ನು ಮರದಲ್ಲಿ, ಶಿಲೆಯಲ್ಲಿ ಕೆತ್ತನೆ ಮಾಡಿ ಪ್ರತಿಷ್ಠಾಪಿಸುವ ವಾಡಿಕೆ ಇದೆ. ಕುದುರೆಯು ಬಾಯಿ ತೆರದು ನಾಲಿಗೆ ಚಾಚಿದಂತೆ ಕೆತ್ತನೆ ಮಾಡಿದ್ದು ಅದರ ಹಲ್ಲುಗಳು ಸ್ಪಷ್ಟವಾಗಿ ಕೆತ್ತಲ್ಪಟ್ಟಿವೆ ಕುದುರೆಯ ಮುಕುಟ ಸರಪಳಿ ಜೂಲು ಹಣೆಯ ಚುಂಚು ಗೊಂಡೆಗಳನ್ನು ಕೆತ್ತಿ ಅಲಂಕರಣ ಗೊಳಿಸಲಾಗಿದೆ. ಕುದುರೆಯ ಎದೆಯ ಭಾಗದಲ್ಲಿ ಆಲಂಕಾರಿಕ ನಕ್ಷೆಯು ರಚನೆಯಾಗಿದ್ದು ಅದರ ಮೈಮೇಲೆ ಅರ್ಧ ವರ್ತುಲದಲ್ಲಿ ನಕ್ಷೆಯನ್ನು ರಚನೆ ಮಾಡಲಾಗಿದೆ. ಕುದುರೆ ಕಣ್ಣು ಮೂಗಿನ ಹೊಳ್ಳೆ ಮತ್ತು ಕುತ್ತಿಗೆಯ ಕೇಶರಾಶಿ ಸೂಕ್ಷ್ಮ ಕೆತ್ತನೆಯಿಂದ ಕೂಡಿರುವುದು ವೈಶಿಷ್ಟವೇ ಸರಿ.

೩. **ಮನೆಯ(ಮರಗೆಲಸದಲ್ಲಿ) ಕಂಬ, ತೊಲೆ, ಬೋದುಗಳಲ್ಲಿ ಉಬ್ಬುಶಿಲ್ಪ:** ಹೈದರಾಬಾದ್ ಕರ್ನಾಟಕದಲ್ಲಿ ಸಾಂಪ್ರದಾಯಿಕ ಶಿಲ್ಪಕಲೆಯು ಮನೆಮನೆಗಳಲ್ಲಿ, ದೇವಾಲಯಗಳಲ್ಲಿ, ಜನಪದರ ಜೀವನದಲ್ಲಿ, ರಂಟೆ–ಕುಂಟೆಗಳಲ್ಲಿ, ಪೂಜಾ ಮಂಟಪಗಳಲ್ಲಿ, ಬಾಗಿಲು ಚೌಕಟ್ಟುಗಳಲ್ಲಿ, ಮನೆಯಲ್ಲಿ ಬಳಸುವ ನಿತ್ಯೋಪಯೋಗಿ ವಸ್ತುಗಳಲ್ಲಿ, ಹಬ್ಬ–ಹರಿದಿನ ಜಾತ್ರೆ ಉತ್ಸವಗಳಲ್ಲಿ ಶಿಲ್ಪಕಲೆ ವಿಜೃಂಭಿಸು ತ್ತದೆ. ವಾಸ್ತುಶಾಸ್ತ್ರವನ್ನು ಸಂಪೂರ್ಣವಾಗಿ ಅರಿತು, ಅದರ ನಿಯಮಗಳನ್ನು ಪಾಲಿಸಿಕೊಂಡು, ಆಯಾ ಅಳತೆ ಪ್ರಮಾಣಗಳನ್ನು ಬಳಸಿಕೊಂಡು, ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಮುಂತಾದ ದಶದಿಕ್ಕುಗಳ ಪರಿಕಲ್ಪನೆ ತಂದುಕೊಂಡು ಮನೆಯನ್ನು ನಿರ್ಮಿಸುತ್ತಿದ್ದುದು ಕಂಡುಬರುತ್ತದೆ. ಇಂತಹ ಅನೇಕ ಮನೆಗಳು, ಸಾಂಪ್ರದಾಯಿಕ ಶಿಲ್ಪಕಲಾವಿದರ ಪರಿಶ್ರಮದಿಂದಲೇ ಈ ನಾಡಿನಲ್ಲಿ ನಿರ್ಮಾಣವಾಗಿವೆ. ಬೇರೆ ಪ್ರಾಂತಗಳಿಗಿಂತ, ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಸಾಂಪ್ರದಾಯಿಕ ವಾಸ್ತು, ಚಿತ್ರ, ಶಿಲ್ಪಕಲೆ, ವ್ಯಾಪಕವಾಗಿ ಹರಡಿದೆ. ಆಧುನಿಕ ಪರಿಕರಗಳಾದ ಸಿಮೆಂಟು, ಕಬ್ಬಿಣದ ವಿವಿಧ ತಗಡು, ಸಿಮೆಂಟಿನ ತಗಡು, ಆರ್.ಸಿ.ಸಿ.ಯಂತಹ ಚಾವಣಿಗಳು ಕಬ್ಬಿಣದಿಂದ(ಪಿಲ್ಲರ್ಸ್)

ಸ್ತಂಭಗಳನ್ನು ಹಾಕಿ, ಪಾಯ ತೋಡಿ, ಬೃಹದಾಕಾರದ ಮನೆಗಳನ್ನು ಇತ್ತೀಚಿನ ಎಲ್ಲಾ ಪ್ರಾಂತ್ಯದಲ್ಲಿ ನಿರ್ಮಿಸುವುದು ಕಂಡುಬರುತ್ತದೆ. ಆದರೆ ಈಗಲೂ ಹೈದರಾಬಾದ್ ಕರ್ನಾಟಕದ ಜನರು ಗ್ರಾಮೀಣ ಪರಿಸರದಲ್ಲಿ ತಮ್ಮ ಸೊಗಡನ್ನು ಬಿಟ್ಟುಕೊಟ್ಟಿಲ್ಲ. ಏಕೆಂದರೆ ಹೈದರಾಬಾದ್ ಕರ್ನಾಟಕದ ಬಿಸಿಲಿನ ತಾಪಕ್ಕೆ ಕಾಂಕ್ರಿಟ್ ಮನೆಗಳು ಆರೋಗ್ಯದ ಮೇಲೆ ಪರಿಣಾಮ ಬೀರುವುದರಿಂದ, ಇಂದಿಗೂ ತೊಲೆ, ಕಂಬ, ಮಡಿಗೆ ಮರದಿಂದಲೇ ನಿರ್ಮಿಸಿಕೊಂಡು ಅದರ ಮೇಲೆ ಶಹಬಾದ ಶಿಲೆಯ ಹೊದಿಕೆ ಹಾಕುವುದು ಕಂಡುಬರುತ್ತದೆ. ಇದರಿಂದ ಬಿಸಿಲ ಬೇಗೆ ಅನಿಸುವುದಿಲ್ಲ. ತಂಪಾಗಿರುತ್ತದೆ. ಇಂತಹ ಮನೆ ನಿರ್ಮಾಣದಲ್ಲಿ ಬೋದು, ತೊಲೆ, ಕಂಬಗಳಲ್ಲಿ ವಿಶೇಷವಾದ ನಕ್ಷೆ, ಆಲಂಕಾರಿಕ ನಕ್ಷೆಗಳನ್ನು ಬೇವಿನ ಮರ, ಮಳಗಿನ ಮರ, ಮಾವಿನ ಮರಗಳಲ್ಲಿ ವಿಶೇಷವಾದ ಮರಗೆಲಸದ ಕೆತ್ತನೆ ಮಾಡಿರುವುದು ಒಂದು ವಿಶೇಷವಾಗಿದೆ. ಇದರಲ್ಲಿ ಹೆಚ್ಚಾಗಿ ಆಲಂಕಾರಿಕ ಮತ್ತು ಜ್ಯಾಮಿತಿಕ ನಕ್ಷೆಗಳನ್ನು ಕೆತ್ತನೆ ಮಾಡಲಾಗಿದೆ.

೪. **ಗ್ರಾಮದೇವತೆಯ ಮುಖ(ಮರಮಾಧ್ಯಮ):** ಗ್ರಾಮದೇವತೆಯ ಮರದ ಶಿಲ್ಪವನ್ನು ಬಿಡಿ ಭಾಗಗಳನ್ನಾಗಿ ಕೆತ್ತನೆ ಮಾಡಿಕೊಂಡು ಕೊನೆಯ ಹಂತದಲ್ಲಿ ಒಟ್ಟಾರೆ ಜೋಡಣೆ ಮಾಡಲಾಗುತ್ತದೆ. ಮರಶಿಲ್ಪದ ರಚನಾಕ್ರಮಗಳಲ್ಲಿ ಇದೂ ಒಂದಾಗಿದೆ. ಗ್ರಾಮದೇವತೆಯ ಮುಖವನ್ನು ಸಾಗವಾನಿ ಮರದಲ್ಲಿ ಕೆತ್ತನೆ ಮಾಡಲಾಗಿದೆ. ದೇವತೆಯ ತಲೆಯ ಮೇಲೆ ಕಿರೀಟವು ಅತ್ಯಂತ ಕಲಶಪ್ರಾಯವಾಗಿದೆ. ಕಿರೀಟದ ಮೇಲ್ಭಾಗವನ್ನು ತಿರುಗುಣಿ ಯಂತ್ರದಿಂದ ತಯಾರಿಸಲಾಗಿದೆ. ಕಿರೀಟದ ಹಿಂದಿನ ಭಾಗದಲ್ಲಿ ಪ್ರಭಾವಳಿಯನ್ನು ಸುಂದರವಾಗಿ ವೃತ್ತಾಕಾರದಲ್ಲಿ ಕೆತ್ತನೆ ಮಾಡಿ ಜೋಡಿಸಲಾಗಿದೆ. ಕಿರೀಟದ ಎಡ-ಬಲ ಬದಿಗೆ ಮರದಿಂದ ಆಲಂಕಾರಿಕ ನಕ್ಷೆಗಳನ್ನು ಹೊಯ್ಸಳ ಶೈಲಿಯಲ್ಲಿ ವಿನ್ಯಾಸಗೊಳಿಸಿರುವುದು ಒಂದು ವಿಶಿಷ್ಟವೆನಿಸುತ್ತದೆ. ಗ್ರಾಮದೇವತೆಯ ಶಿಲ್ಪದಲ್ಲಿ ನಗುಮುಖದ ಭಾವನೆ ಸೂಸುತ್ತದೆ. ಕಿವಿಯಲ್ಲಿ ಓಲೆ, ಜುಮಿಕೆಗಳನ್ನು ಸೂಕ್ಷ್ಮ ಕುಸುರಿ ಕೆತ್ತನೆ ಮಾಡಿರುವುದು ಕಲಾವಿದನ ಜಾಣ್ಮೆಯನ್ನು ಪ್ರತಿಬಿಂಬಿಸುತ್ತದೆ. ಕಿರೀಟದಲ್ಲಿ ಕೇದಗೆ ಹೂವಿನ ಗರಿಗಳನ್ನು ಅಲಂಕರಿಸಿರುವುದು ಕಂಡುಬರುತ್ತದೆ. ದೇವತೆಯ ಕಿರೀಟದ ಎಡ ಬಲ ಬದಿಯಲ್ಲಿ ಮರದಿಂದ ಚಿಕ್ಕ ಚಿಕ್ಕ ಗುಂಡಿನಾಕಾರದ ಕೆತ್ತನೆ ಮಾಡಲಾಗಿದೆ. ಆಲಂಕಾರಿಕ ನಕ್ಷೆಗಳಲ್ಲಿ ಸಣ್ಣ ಮಣಿಗಳನ್ನು ಜೋಡಣೆ ಮಾಡಿ ಕೆತ್ತನೆ ಮಾಡಿರುವುದು ಅತ್ಯಂತ ಆಕರ್ಷಣೀಯವಾಗಿದೆ. ದೇವಿಯ ಶಿಲ್ಪದಲ್ಲಿ ಕಣ್ಣುಗಳು, ಉಬ್ಬು, ಮೂಗು, ಮುಖದ ಅಂಗಾಂಗಗಳು ನೈಜತೆಯಿಂದ ಕೂಡಿವೆ. ಶಿಲ್ಪಿಯು ಗ್ರಾಮದೇವತೆಯ ಭಾವಾಭಿವ್ಯಕ್ತಿಯನ್ನು ವ್ಯಕ್ತಪಡಿಸುವಲ್ಲಿ ಕಲಾಪ್ರೌಢಿಮೆಯನ್ನು ಮೆರೆದಿದ್ದಾನೆ. ದೇವಿಯ ಶಿಲ್ಪಕಲಾಕೃತಿಯಲ್ಲಿ ಮುಖ್ಯ ಭಾಗವಾದ ಮುಖದ ಶಿಲ್ಪವು ಪ್ರಮಾಣ, ಲಯಬದ್ಧತೆಯಿಂದ ಕೆತ್ತನೆ ಮಾಡಲಾಗಿದೆ. ನಕ್ಷೆಗಳೆಲ್ಲವೂ ಸಾಂಪ್ರದಾಯಿಕ ಶಾಸ್ತ್ರೀಯ ಶೈಲಿಯಲ್ಲಿದ್ದರೂ ದೇವಿಯ ಮುಖದ ಕೆತ್ತನೆಯು ಜನಪದ ಶೈಲಿಯನ್ನು ಸೂಚಿಸುವಂತೆ ಕಾಣುತ್ತದೆ. ಗ್ರಾಮದೇವತೆಯ ಶಿಲ್ಪದಲ್ಲಿ ಶಾಸ್ತ್ರೀಯ ಜನಪದೀಯ ಶೈಲಿಗಳು ಮೇಳೈಸಿರುವುದು ಒಂದು ವೈಶಿಷ್ಟ್ಯವಾದ ಶೈಲಿಯಾಗಿದೆ. ಕಲಾವಿದನಿಗೆ ಅನಿಸಿರುವ ಭಾವನೆ, ದೇವಶಿಲ್ಪದಲ್ಲಿ ಸೂಕ್ಷ್ಮವಾಗಿ ಗುರುತಿಸುವಂತಿದೆ. ಗ್ರಾಮದೇವತೆಯು ಗ್ರಾಮೀಣ ಜನರ, ಜನಪದರ ಆರಾಧ್ಯ ದೈವವಾಗಿದ್ದಾಳೆ.

೫. **ಬಾಗಿಲಿನ ಉಬ್ಬುಶಿಲ್ಪ:** ಶಿಲ್ಪಕಲೆ ಸಗರನಾಡಿನಲ್ಲಿ ಬಾಗಿಲುಗಳ ಮೇಲೆಯೂ ವಿಜೃಂಭಿಸುತ್ತಿದೆ ಎನ್ನುವುದಕ್ಕೆ ಕಲಾವಿದರ ಅಪ್ರತಿಮೆಯ ಕೊಡುಗೆ ಇದಾಗಿದೆ. ಮನೆಗಳಿಗೆ ಬಾಗಿಲುಗಳನ್ನು ವಿಶಿಷ್ಟ ಶೈಲಿಯಲ್ಲಿ ರೂಪಿಸಿಕೊಂಡಿರುವುದು ಅಥವಾ ಅಂತಹ ಬೆಲೆಬಾಳುವ ಬಾಗಿಲನ್ನು ಮಾಡಿಸುವುದು ಒಂದು ಅದ್ಭುತ. ಸಾಗವಾನಿ ಮರದ ಬಹಳ ಬೆಲೆಬಾಳುವಂತದ್ದಾಗಿದೆ. ಅದರಲ್ಲಿ ಬೆಳ್ಳಿ ಲೋಹದಿಂದ, ತಾಮ್ರ ಲೋಹದಿಂದ ಕಂಚುಗಳಿಂದ ಪ್ರತಿಮೆಗಳನ್ನು ಮಾಡಿಸಿ, ಬಾಗಿಲಿನಲ್ಲಿ ಪ್ರತಿಷ್ಠಾಪಿಸುವುದೆಂದರೆ ಸಾಮಾನ್ಯರ ಕೆಲಸವಲ್ಲ. ಯಾವುದೇ ಕಲೆ, ಪ್ರಜ್ವಲಿಸಬೇಕೆಂದರೆ, ಅದರ ಪೋಷಕರೂ ಬಹಳ ಮುಖ್ಯ ಅಂದರೆ ಆ ಕಲೆ ಮತ್ತು ಕಲಾವಿದ ಜೀವಂತ ಬದುಕುತ್ತಾನೆ. ಇಲ್ಲವಾದರೆ ಬಾಗಿಲುಗಳ ಮೇಲೆ ಬೆಳ್ಳಿ, ಕಂಚುಗಳಿಂದ ಪ್ರತಿಮೆ ಮಾಡಿಸಿ ಪ್ರತಿಷ್ಠಾಪಿಸುವುದು ಅಸಾಧ್ಯ. ದಶಲಕ್ಷ ರೂಪಾಯಿಗಳ ಮರ ಮತ್ತು ಬೆಳ್ಳಿ ಲೋಹದ ಪ್ರತಿಮೆ ಇನ್ನೂ ಬೆಲೆ ಬಾಳುವ ಲೋಹ, ಇಂತಹವುಗಳನ್ನು ಬಳಸಿಕೊಂಡು ಮರ ಮತ್ತು ಲೋಹ ಸಂಯೋಜನೆಗಳೊಂದಿಗೆ ಬಾಗಿಲು ನಿರ್ಮಾಣ ಮಾಡಿರುವುದು ಒಂದು ಆಶ್ಚರ್ಯಕರವಾದ ವಿಷಯ. ಬಾಗಿಲಿನ ಮಧ್ಯ ಭಾಗದಲ್ಲಿ ತಿರುಪತಿಯ ವೆಂಕಟೇಶ್ವರನ ಬೆಳ್ಳಿಯ ವಿಗ್ರಹ, ಅದಕ್ಕೆ ಸ್ಥಳಾವಕಾಶ, ಮರದಿಂದ ಮಾಡಿದ ಮಂಟಪ, ಪ್ರಭಾವಳಿ, ಕೀರ್ತಿಮುಖ, ಅದರ ಸುತ್ತಲೂ ಕಲ್ಯಾಣ ಚಾಲುಕ್ಯರ ದೇವಾಲಯದಲ್ಲಿ ಮುಖ್ಯದ್ವಾರಗಳಲ್ಲಿ ಕೆತ್ತನೆ ಮಾಡಿದ ಆಲಂಕಾರಿಕ ನಕ್ಷೆಗಳ ಮಾದರಿಗಳನ್ನು ಬಳಸಿಕೊಂಡು ಶಿಲ್ಪಕೆತ್ತನೆ ಮಾಡಿರುವುದು ಕಲಾವಿದರ ಜಾಣ್ಮೆ, ತಾಳ್ಮೆ ಎಲ್ಲವೂ ಅಸಾಮಾನ್ಯವೇ ಆಗಿದೆ. ಬಾಗಿಲ ಎಡಬಲ ಬದಿಯಲ್ಲಿ ಹಣೆಪಟ್ಟಿಗೆ ಹೊಂದಿಕೊಂಡಿರುವಂತೆ ಕುದುರೆಯ ಮುಖ ಭಾವ ಶಿಲ್ಪಗಳು, ಶ್ರೀಮಂತಿಕೆ ಹೆಗ್ಗಳಿಕೆ, ಐಶ್ವರ್ಯದ ಸಂಕೇತಗಳಂತೆ ಪ್ರತಿಬಿಂಬಿಸುವುದು ಇನ್ನೊಂದು ವೈಶಿಷ್ಟ್ಯಪೂರ್ಣವಾದ ಕಲೆಯಾಗಿದೆ. ಇದೊಂದು ವಿಶೇಷ ಶೈಲಿಯೂ ಆಗಿದೆ. ಜಾಮಿತಿಕ ನಕ್ಷೆ, ಆಲಂಕಾರಿಕ ನಕ್ಷೆ, ನೈಸರ್ಗಿಕ ನಕ್ಷೆ, ಪುನರಾವರ್ತಿತ ನಕ್ಷೆ ಎಲ್ಲವೂ ವಿಶೇಷವಾಗಿದೆ.

**ಪಂಪಣ್ಣ ಆಚಾರಿ ಅವರ ಶಿಲ್ಪಕಲಾಕೃತಿಗಳು(ರಾಯಚೂರು ಜಿಲ್ಲೆ)**

೧. **ಬಸವಣ್ಣನ ಮೂರ್ತಿಶಿಲ್ಪ:** ಶಿವನ ವಾಹನನಾದ ನಂದಿಯು ಶೈವ ದೇವಾಲಯದಲ್ಲಿ ಶಿವನಿಗೆ ಅಭಿಮುಖವಾಗಿ ಸ್ಥಾಪಿತವಾಗಿರುವುದು ಅನೇಕ ಕಡೆಗಳಲ್ಲಿ ಕಾಣಬಹುದು. ಭಾರತದ ಶೈವ ದೇವಾಲಯದ ಗರ್ಭಗುಡಿಯಲ್ಲಿ ಶಿವನ ಲಿಂಗ ಸ್ಥಾಪಿತವಾಗಿದ್ದಾರೆ. ಗರ್ಭಗುಡಿಯ ಮುಂದಿನ ಮಂಟಪದಲ್ಲಿ ನಂದಿ ಮೂರ್ತಿ ಸ್ಥಾಪಿತವಾಗಿರುತ್ತದೆ. ಕೆಲವು ದೇವಾಲಯಗಳು ಪ್ರತ್ಯೇಕ ಬಸವಣ್ಣನಿಗಾಗಿ, ನಂದಿ ಮಂಟಪವನ್ನು ನಿರ್ಮಿಸಿರುವುದನ್ನು ಕಾಣಬಹುದು. ವಿಜಯನಗರದ ಹಂಪೆಯು ವಿರೂಪಾಕ್ಷ ದೇವರ ಎದುರಿಗೆ ಮತಂಗ ಪರ್ವತದ ಹತ್ತಿರದವರೆಗೂ ರಥ ಬೀದಿಯ ಎದುರಿನಲ್ಲಿ ನಂದಿ ಮಂಟಪವಿರುವುದನ್ನು ಕಾಣುತ್ತೇವೆ. ಶೈವ ದೇವಾಲಯದಲ್ಲಿ ಬಸವಣ್ಣನನ್ನು ಸ್ಥಾಪಿಸುವುದು ಸರ್ವಸಾಮಾನ್ಯ. ಬಸವಣ್ಣನ ಶಿಲ್ಪವು ಪೀಠವನ್ನು ಸೇರಿ, ಮೂರು ಪೂಟು ಉದ್ದ ಎರಡು ಪೂಟು ಆರು ಇಂಚು ಎತ್ತರದಲ್ಲಿ ನಿರ್ಮಿಸಲಾಗಿದೆ. ಸೆಲ್ಲಿಕೇರಿ ಶಿಲೆಯಿಂದ ಮೂರ್ತಿ ತಯಾರಿಸಲಾಗಿದೆ. ಶಿಲ್ಪದಲ್ಲಿ ಬಸವಣ್ಣನ ಕೊರಳಲ್ಲಿ ಗೆಜ್ಜೆಸರ, ಗಗ್ಗರಿಸರ ಮತ್ತು ಗಂಟೆ ಕುತ್ತಿಗೆಯ

ಹತ್ತಿರದಲ್ಲಿ ರುದ್ರಾಕ್ಷಿ ಸರದಂತೆ ಮಣಿಗಳಿಂದ ಕೂಡಿದ ಸರವನ್ನು ಕೆತ್ತನೆ ಮಾಡಲಾಗಿದೆ. ಬಸವಣ್ಣನ ಕೊಂಬುಗಳ ಮೇಲೆ, ಕೋಡು ಅಣಸುಗಳನ್ನು ಕೆತ್ತಿರುವುದು ಕಂಡುಬರುತ್ತದೆ. ಕಿವಿಯ ಮೇಲೆ ಗಗ್ಗರಿ, ಗುಚ್ಚಿನ ಗಂಟು ಇದೆ. ಬಸವಣ್ಣನು ಕಣ್ಣು ಅಗಲಿಸಿ, ದೃಷ್ಟಿ ಬೀರಿ ನೋಡುತ್ತಾನೆ ಎನ್ನುವಂತೆ ಕಣ್ಣಿನ ಭಾವನೆ ಶಿಲ್ಪದಲ್ಲಿ ಕಾಣುತ್ತದೆ. ಪೀಠದ ಮೇಲೆ ಕಾಲುಗಳನ್ನು ಮಡಿಸಿ ಮಲಗಿ ಕೊಂಡು ನೇರವಾಗಿ ಕುತ್ತಿಗೆಯನ್ನು ಎತ್ತಿ ಶಿವನ ಕಡೆಗೆ ನೋಡುತ್ತಾನೆ ಎನ್ನುವಂತೆ ತೋರಿಬರುವ ಶಿಲ್ಪ ರಚನೆ ಇದಾಗಿದೆ. ಬಾಲದಲ್ಲಿ ಕೇಶಗಳನ್ನು ಗೆರೆಗೆರೆಯಂತೆ ಕೆತ್ತನೆ ಮಾಡಿ ತೋರಿಸಲಾಗಿದೆ. ಬಸವಣ್ಣನ ಶಿಲ್ಪದಲ್ಲಿ ಮೂಗಿನ ಹೊಳ್ಳೆಯ ಮೇಲೆ, ಮುಖದ ಮೇಲೆ ಭಾವ ರೇಖೆಗಳನ್ನು ಕೆತ್ತಿರುವುದು ವಿಶಿಷ್ಟತೆಯಿಂದ ಕೂಡಿದೆ.

೨. **ರಾಘವೇಂದ್ರ ಸ್ವಾಮಿಗಳ ಶಿಲಾಶಿಲ್ಪ:** ಮಂತ್ರಾಲಯದ ರಾಘವೇಂದ್ರ ಗುರುಗಳು ಮಧ್ವ ಸಂಪ್ರದಾಯವನ್ನು ಅನುಸರಿಸಿ ಶ್ರೀಕೃಷ್ಣನನ್ನು ಆರಾಧಿಸಿದರು. ಭಕ್ತರ ಕಲ್ಪವೃಕ್ಷ, ಕಾಮಧೇನುವಿನಂತೆ ರಾಯರು ಇಷ್ಟಾರ್ಥಗಳನ್ನು ಈಡೇರಿಸುತ್ತಾರೆ ಎನ್ನುವ ನಂಬಿಕೆ ಭಕ್ತರಲ್ಲಿ ಈಗಲೂ ಇದೆ. ನೆರೆ ರಾಜ್ಯವಾದ ಆಂಧ್ರಪ್ರದೇಶದಲ್ಲಿ ಮಂತ್ರಾಲಯ ತುಂಗಭದ್ರಾ ನದಿಯ ತೀರದಲ್ಲಿ ಇದೆ. ಶ್ರೀಕ್ಷೇತ್ರವು ಭಕ್ತಾದಿಗಳ ಶ್ರದ್ಧಾಕೇಂದ್ರವಾಗಿದೆ.

ಮಂತ್ರಾಲಯದ ರಾಘವೇಂದ್ರರಾಯರ ಮಠಗಳು ನಾಡಿನ ಅನೇಕ ಸ್ಥಳಗಳಲ್ಲಿ ಇವೆ. ರಾಯರು ಶ್ರೀಸಾಮಾನ್ಯರಂತೆ ಜನಿಸಿ ಬೆಳೆದು ವೈವಾಹಿಕ ಜೀವನದ ಎಲ್ಲಾ ನೋವು ನಲಿವುಗಳನ್ನು ಪಡೆದು ಕೊನೆಗೆ ಆಧ್ಯಾತ್ಮಿಕ ಸಂಪತ್ತನ್ನು ಪಡೆದುಕೊಂಡು ಪವಾಡಪುರುಷ ಗುರು ರಾಘವೇಂದ್ರ ಎಂದು ಭಕ್ತರ ಹೃದಯದಲ್ಲಿ ನೆಲೆಸಿದ್ದಾರೆ. ಇವರ ಪ್ರತಿಮೆಗಳನ್ನು ಅನೇಕ ಊರುಗಳಲ್ಲಿ ಮಠ ಗಳಲ್ಲಿ ಸ್ಥಾಪಿಸಿ ಪೂಜೆ ಪುರಸ್ಕಾರಗಳನ್ನು ಮಾಡಿಕೊಂಡು ಭಕ್ತರು ತಮ್ಮ ಇಷ್ಟಾರ್ಥಗಳನ್ನು ಈಡೇರಿಕೊಳ್ಳುತ್ತಿದ್ದಾರೆ. ಇವರ ಪ್ರತಿಮೆಯ ಹಿಂಬದಿಯಲ್ಲಿ ತುಳಸಿ ವೃಂದಾವನವಿದೆ. ರಾಯರ ಉಬ್ಬುಶಿಲ್ಪ ಸ್ಪಷ್ಟವಾಗಿ ನಯವಾಗಿ ಕೆತ್ತಲ್ಪಟ್ಟಿರುವುದು ಒಂದು ವೈಶಿಷ್ಟ್ಯ. ರಾಯರು ತಲೆಯಿಂದ ಕಾಷಾಯ ವಸ್ತ್ರವನ್ನು ಧರಿಸಿ ಯತಿಯೇಂದ್ರ ಪಂಚೆ ಧರಿಸಿದ ರೂಪದಲ್ಲಿ ಪದ್ಮಾಸನ ಹಾಕಿಕೊಂಡು ಭಕ್ತರಿಗೆ ಅಭಯ ನೀಡುವ ಹಸ್ತಮುದ್ರಿಕೆ ಇದೆ. ಬಲಗೈಯಲ್ಲಿ ಜಪಮಾಲೆ ಹಿಡಿದು ಜಪಿಸುವ ಸೂಚನೆಯಂತೆ ಹಸ್ತಮುದ್ರಿಕೆ ಕಂಡುಬರುತ್ತದೆ. ಎಡಗೈಯನ್ನು ಎಡ ಮೊಣಕಾಲಿನ ಮೇಲೆ ಇಟ್ಟುಕೊಂಡು ಕುಳಿತಿರುವ ಭಂಗಿ ಸುಂದರವಾಗಿದೆ. ಕೊರಳಲ್ಲಿ ತುಳಸಿ ಮಾಲೆ, ಹಣೆಯಲ್ಲಿ ತ್ರಿನಾಮ, ಹೃದಯ ವಕ್ಷಭಾಗದಲ್ಲಿ ತ್ರಿನಾಮ ಮುದ್ರೆಯನ್ನು ಸೂಕ್ಷ್ಮವಾಗಿ ಸ್ಪಷ್ಟತೆಯಿಂದ ಕೆತ್ತನೆ ಮಾಡಲಾಗಿದೆ. ಪೀಠದ ಮೇಲೆ ಕೂರ್ಮಾಸನವಿದೆ. ವೃಂದಾವನದ ಮೇಲೆ, ಕೀರ್ತಿಮುಖ ಆಲಂಕಾರಿಕ ನಕ್ಷೆಗಳಿಂದ ಕೆತ್ತನೆ ಇರುವುದು. ಅಧಿಷ್ಠಾನದ ಮೇಲಿನ ಪಟ್ಟಿಕೆ ಮತ್ತು ಕೆಳಗಿನ ಪಟ್ಟಿಕೆಯಲ್ಲಿ ಪುನರಾವರ್ತಿತ ನಕ್ಷೆಗಳು ಸುಂದರವಾಗಿ ಇವೆ.

೩. **ಗಣೇಶನ ಶಿಲಾಶಿಲ್ಪ:** ಶಿವನ ಮತ್ತು ಪಾರ್ವತಿಯ ಮಗ ಗಣೇಶನು ತಾಯಿ ಪ್ರೀತಿಗೆ ಪಾತ್ರನಾದ ಕಥೆ ಶಿವನ ಪುರಾಣಗಳಲ್ಲಿ ಮತ್ತು ಶಾಕ್ತೇಯ, ಗಾನಪತ್ಯ, ಪೌರಾಣಿಕ ಶ್ರುತಿಗಳಲ್ಲಿ

ಉಲ್ಲೇಖಿತವಾಗಿದೆ. ಗಣೇಶನು ಪೂರ್ವದಲ್ಲಿ ಕೈಲಾಸದ ಕಾವಲುಗಾರನಂತೆ ತಾಯಿಗೆ ನೆರವಾಗಿದ್ದು, ಸಾಕ್ಷಾತ್ ಶಿವನನ್ನೇ ತಡೆದು ನಿಲ್ಲಿಸಿದ ನಂತರ ಶಿವನು ಬಾಲಕನ ಶಿರಚ್ಛೇಧನ ಮಾಡಿದಾಗ ಪಾರ್ವತಿಯು ಬಂದು ಶಿವನನ್ನು ಕುರಿತು ನನ್ನ ಮಗನನ್ನು ಬದುಕಿಸಿಕೊಡಬೇಕೆಂದು ಪ್ರಾರ್ಥಿಸಿದಾಗ ಶಿವನು ತನ್ನ ಸುತ್ತಲಿರುವ ಶಿವ ಪ್ರೇತಗಣಗಳನ್ನು ಕುರಿತು ಉತ್ತರ ದಿಕ್ಕಿಗೆ ತಲೆ ಮಾಡಿ ಮಲಗಿದ ಪ್ರಾಣಿಯ ಶಿರಸ್ಸನ್ನು ತನ್ನಿರೆಂದು ಹೇಳಲು ಗಣಗಳು ಆನೆ ಉತ್ತರದಿಕ್ಕಿಗೆ ತಲೆಮಾಡಿ ಮಲಗಿದ್ದನ್ನು ಕಂಡು ಶಿರವನ್ನು ಕತ್ತರಿಸಿ ತಂದಾಗ ಶಿವನು ಮೃತ ಬಾಲಕನ ಶಿರಸ್ಸಿಗೆ ಬದಲಾಗಿ ಆನೆಯ ಶಿರವನ್ನು ಜೋಡಿಸಿ ಮರಳಿ ಪ್ರಾಣವನ್ನು ಪ್ರತಿಷ್ಠಾಪಿಸುತ್ತಾನೆ. ಆಗ ಗಜಾನನ, ಗಣೇಶ, ಅಂದರೆ ಗಣಗಳ ಈಶ, ಗಣ, ಪತ್ಯ, ವಿಘ್ನ ವಿನಾಶಕ, ವಿನಾಯಕ, ಲಂಬೋದರ, ಏಕದಂತ, ಎಂದು ಅನೇಕ ಹೆಸರುಗಳನ್ನು ಗಣೇಶನಿಗೆ ನಾಮಧೇಯ ಮಾಡಿ, ಮೂರು ಲೋಕಗಳಲ್ಲಿಯೂ ಪ್ರಥಮ ಪೂಜ್ಯನಾಗಬೇಕೆಂದು ಶಿವ ಪಾರ್ವತಿಯರು ಆಶೀರ್ವದಿಸಿದರು. ಅಂದಿನಿಂದ ಯುಗಯುಗಗಳಲ್ಲಿ ಗಣೇಶನ ಪೂಜೆ ಪ್ರಥಮವಾಗಿದೆ. ಪ್ರತಿಯೊಂದು ದೇವಾಲಯದಲ್ಲೂ ಗಣೇಶನ ಪ್ರತಿಮೆಯನ್ನು ಸ್ಥಾಪನೆ ಮಾಡುವುದು ಕಂಡುಬರುತ್ತದೆ. ಸಿಮೆಂಟು, ಲೋಹ, ಮರ, ಮೃತ್ತಿಕೆ, ಶಿಲೆಯಲ್ಲಿ ಗಣೇಶನ ವಿಗ್ರಹ ಕೆತ್ತನೆ ಮಾಡಿಸಿ. ಪ್ರತಿಷ್ಠಾಪನೆ ಮಾಡಿ ದೇವಾಲಯ, ಮಠಮಾನ್ಯಗಳಲ್ಲಿ, ಪೂಜೆ ಮಾಡುವ ಆಚರಣೆ ಇದೆ.

ಗಣೇಶನ ಶಿಲಾಶಿಲ್ಪವನ್ನು ಪಂಪಣ್ಣ ಆಚಾರ್ಯ ಶಿಲ್ಪಿಗಳು ಘನ ಶಿಲೆಯಲ್ಲಿ ಉಬ್ಬುಶಿಲ್ಪದಂತೆ ಕೆತ್ತನೆ ಮಾಡಿದರೂ ಪ್ರತಿಯೊಂದು ಅಂಗಾಂಗಗಳು ಸ್ಪಷ್ಟ ಮತ್ತು ಸೂಕ್ಷ್ಮ ಕೆತ್ತನೆಗಳಿಂದ ಕೂಡಿವೆ. ಗಣೇಶನ ಶಿಲ್ಪವು ಕೃಷ್ಣ ಶಿಲೆಯಿಂದ ರಚಿಸಲ್ಪಟ್ಟಿದ್ದು, ಸೊಂಡಿಲು ಬಲಬದಿಗೆ ಸುತ್ತಿಕೊಂಡು ಸುರುಳಿ ಯಂತೆ ಮುಚ್ಚಿಕೊಂಡಿರುವುದು ಒಂದು ವೈಶಿಷ್ಟ್ಯವೆನಿಸುತ್ತದೆ. ಎರಡು ಕಾಲುಗಳು ಎಡ ಬದಿಯಲ್ಲಿ ಮಡಚಿಕೊಂಡು ಪೀಠಕ್ಕೆ ಪೂರ್ಣ ಒರಗಿದಂತಿವೆ. ಗಣೇಶನ ನಡುವಿನ ನೆರಿಗೆವಸ್ತ್ರ ಪೀಠಕ್ಕೆ ತಗುಲಿ ಮಡಿಕೆಯಂತೆ ಕೆತ್ತನೆ ಮಾಡಲಾಗಿದೆ. ಪಂಚೆ ಎರಡು ಕಾಲ್ಗಳ ಪಾದಕ್ಕೆ ತಗುಲುವಂತೆ ಚಿತ್ರಿಸಲಾಗಿದೆ. ಮುಂದಿನ ಎರಡು ಕೈಗಳು ಬಲಕ್ಕೆ ವಳದ ಹಸ್ತಮುದ್ರೆ ಎಡಗೈಯಲ್ಲಿ ಮೋದಕವನ್ನು ಹಿಡಿದಂತೆ ರಚನೆ ಮಾಡಲಾಗಿದೆ. ಹಿಂದಿನ ಎರಡು ಕೈಗಳು ಪಾಶ, ಅಂಕುಶವನ್ನು ಧರಿಸಿವೆ, ಭುಜ, ಕಂಠ, ಕೊರಳು, ಹೊಟ್ಟೆ, ಆಭರಣಗಳಿಂದ ಅಲಂಕೃತಗೊಂಡಿದೆ. ನಾಲ್ಕು ಕೈಗಳಲ್ಲಿ ಮುಂಗೈ ಕಡಗ, ಬಳೆ, ಕೆತ್ತಲ್ಪಟ್ಟಿವೆ. ಕಿರೀಟವು ಎರಡು ಹಂತದ ಅಡ್ಡಪಟ್ಟಿ ಮಣಿಗಳ ಸರದಿಂದ ಕೂಡಿದ್ದು, ಮಧ್ಯದ ಭಾಗದಲ್ಲಿ ನಕ್ಷೆರೇಖೆಗಳಿಂದ ಅಲಂಕೃತವಾಗಿದೆ. ಗಣೇಶನ ಉಬ್ಬುಶಿಲ್ಪದ ಹಿಂಭಾಗದಲ್ಲಿ ಪೂರ್ಣ ಪ್ರಭಾವದ ಪಟ್ಟಿಯಂತೆ ಶಿಲೆಯನ್ನು ಹೊರತುಪಡಿಸಿ, ಯಾವುದೇ ನಕ್ಷೆ ಅಥವಾ ಸ್ತಂಭಗಳು, ಕೀರ್ತಿಮುಖ ರಚನೆ ಮಾಡದೆ ಕೇವಲ ಪುನರಾವರ್ತಿತ ಗರಿಗಳಂತೆ ಕೆತ್ತನೆ ಮಾಡಲಾಗಿದೆ. ಅಧಿಷ್ಠಾನದ ಕೆಳಗೆ ಗಣೇಶನ ವಾಹನ ಮೂಷಕನನ್ನು ಉಬ್ಬುಶಿಲ್ಪದಲ್ಲಿಯ ರಚನೆಯಂತೆ ಕೆತ್ತನೆ ಮಾಡಲಾಗಿದೆ. ಅಧಿಷ್ಠಾನವು ಕೂಡ ಯಾವುದೇ ನಕ್ಷೆ ಆಕಾರಗಳನ್ನು ಬಳಸದೇ ಸರಳ ರೀತಿಯಲ್ಲಿ ಕಾಣುವಂತೆ ಕೆತ್ತನೆ ಮಾಡಲಾಗಿದೆ. ಇಂತಹ ಶೈಲಿ ಸಾಮಾನ್ಯವಾಗಿ ವಿಜಯನಗರ ಶೈಲಿಯಲ್ಲಿ ಕಂಡುಬರುವುದು ವಿಶೇಷವಾಗಿದೆ.

**೪. ತಾಯಿ ಮತ್ತು ಮಗು ಸಿಮೆಂಟ್ ಕಲಾಕೃತಿ:** ಹೈದರಾಬಾದ್ ಕರ್ನಾಟಕದ ರಾಯಚೂರು ಜಿಲ್ಲೆ ಸಂಗಾಪುರದ ಶಿಲ್ಪಿಗಳಾದ ಪಂಪಣ್ಣ ಆಚಾರಿಯವರು ಶಿಲೆಯಲ್ಲಿ ಮಾತ್ರ ಶಿಲ್ಪಗಳನ್ನು ರಚಿಸದೇ ಇನ್ನೂ ಅನೇಕ ಮಾಧ್ಯಮಗಳಲ್ಲಿ ತಮ್ಮ ಪ್ರತಿಭೆಯನ್ನು ತೋರಿಸಿದ್ದಾರೆ. ಸಿಮೆಂಟು ಮಾಧ್ಯಮದಲ್ಲಿ ಸುಮಾರು ಐದು ಪೂಟು ಎತ್ತರದ ನಗ್ನವಾಗಿ ಕುಳಿತಿರುವ ತಾಯಿ ತನ್ನ ಮಗುವಿಗೆ ಎದೆ ಹಾಲನ್ನು ಉಣಿಸುವ ದೃಶ್ಯ ಅತ್ಯಂತ ಮಾತೃಬಾವಪೂರ್ಣವಾಗಿ ರಚನೆ ಮಾಡಲ್ಪಟ್ಟಿದೆ. ತಾಯಿಯು ತನ್ನ ಮಗುವಿನ ಮುದ್ದು ಮುಖವನ್ನು ನೋಡುತ್ತಾ, ಮಾತೃ ಭೋಜನ ಮಾಡಿಸುವುದು ಅತ್ಯಂತ ಭಾವುಕತೆಯನ್ನು ತುಂಬಿದಂತಿದೆ. ಮಗು ತನ್ನ ತಾಯಿಯ ಬಲಗಾಲಿನ ಮೇಲೆ ಮಲಗಿದಂತೆ ಇದ್ದು, ತಾಯಿಯು ತನ್ನ ಎರಡೂ ಕೈಗಳಿಂದ ಮಗುವನ್ನು ಅಪ್ಪಿಕೊಂಡು ಸಾಂತ್ವನಿಸುವಂತೆ ಶಿಲ್ಪ ರಚನೆಯಾಗಿದೆ. ತಾಯಿ ಮತ್ತು ಮಗುವಿನ ಬಾಂಧವ್ಯ ಪ್ರೀತಿಯನ್ನು ಪ್ರತಿಬಿಂಬಿಸುವಂತಿರುವ ಶಿಲ್ಪ ನೋಡುಗರ ಮನಸ್ಸನ್ನು ಮುಗ್ಧರನ್ನಾಗಿಸುವಂತೆ ರಚನೆ ಮಾಡಲಾಗಿದೆ. ತಾಯಿಯ ಶಿಲ್ಪದಲ್ಲಿ ತಲೆಯ ಮೇಲಿರುವ ಕೇಶವಿನ್ಯಾಸ, ಗೆರೆಗೆರೆಯಾಗಿ ಬಾಚಿಕೊಂಡು ಮುಡಿಕಟ್ಟಿದಂತೆ ಸೂಕ್ಷ್ಮ ಮತ್ತು ಸ್ಪಷ್ಟತೆಯನ್ನು ಸೂಚಿಸುತ್ತದೆ. ಮಗುವಿನ ತಲೆಯಲ್ಲಿನ ಕೇಶಗಳಿಗೂ ತಾಯಿಯ ಕೇಶಗಳಿಗೂ ವಯಸ್ಸಿನ ವ್ಯತ್ಯಾಸವನ್ನು ರೂಪಿಸುವಲ್ಲಿ ಶಿಲ್ಪಿಗಳು ವೈಶಿಷ್ಟ್ಯಪೂರ್ಣ ಪ್ರಜ್ಞೆಯನ್ನು ಮೆರೆದಿದ್ದಾರೆ. ಮಗುವಿನ ಮುದ್ದು ಮುಖ ಕೈಕಾಲುಗಳು ಶಿಶುವಿನ ವಯಸ್ಸನ್ನು ಪ್ರತಿಬಿಂಬಿಸುತ್ತದೆ. ತಾಯಿ ಮಗು ಆರೋಗ್ಯಪೂರ್ಣ ಭಾವಪೂರ್ಣ ಚೈತನ್ಯಪೂರ್ಣ ಸ್ಥಿತಿ ಮತ್ತು ಜೀವಂತಿಕೆ ಇದ್ದು ಉಸಿರಾಡುತ್ತವೆಯೇನೋ ಎಂಬುವಂತೆ ಶಿಲ್ಪದಲ್ಲಿ ಜೀವಕಳೆ ತರುವಲ್ಲಿ ಶಿಲ್ಪ ಆಚಾರ್ಯರು ತಮ್ಮ ಬುದ್ಧಿ ಭಾವನೆಗಳಿಂದ ಶಿಲ್ಪವನ್ನು ರಚನೆ ಮಾಡಿರುವುದೇ ಒಂದು ಅಭೂತ ಪೂರ್ವವಾದ ಕಲೆಯ ರಚನೆ ಎನ್ನಬಹುದು.

**೫. ಕನಕದಾಸರ ಸಿಮೆಂಟ್ ಕಲಾಕೃತಿ:** ಕನ್ನಡನಾಡಿನಲ್ಲಿ ಅನೇಕ ಶರಣರು ಸಂತರು ದಾಸವರೇಣ್ಯರು ಜನ್ಮ ತಾಳಿ ಸಮಾಜಕ್ಕೆ ಮಾರ್ಗದರ್ಶನ ಮಾಡಿದ್ದಾರೆ. ಅವರ ವಚನ, ಪ್ರವಚನ, ಸಾಹಿತ್ಯ, ಪದಗಳಿಂದ ಆಧ್ಯಾತ್ಮಿಕ ಉನ್ನತಿ ಸಾಧಿಸುವ ಮಾರ್ಗವನ್ನು ಸೂಚಿಸಿದವರಲ್ಲಿ ಕನಕದಾಸರು ಒಬ್ಬರು. ಕುಲ ಕುಲವೆಂದು ಹೊಡೆದಾಡದಿರಿ ಕುಲದ ನೆಲೆಯೇನಾದರೂ ಬಲ್ಲಿರಾ ॥ ಬಲ್ಲಿರಾ ॥ ಎಂದು ಸಮಾಜದ ಜಾತಿವ್ಯವಸ್ಥೆಯನ್ನು ಖಂಡಿಸಿದ್ದಾರೆ. ಇಂತಹ ದಾಸವರೇಣ್ಯರ ಸ್ಮರಣೆ ಸದಾ ನಮಗೆ ನೆನಪು ತಂದುಕೊಟ್ಟು ಜನರನ್ನು ತಪ್ಪುದಾರಿಗೆ ಹೋಗದಂತೆ ಪುನಃ ಪುನಃ ಅವರ ನೀತಿಸಾರ ನೆನಪಿರಲಿ ಎನ್ನುವ ಸದುದ್ದೇಶದಿಂದ ಕನಕದಾಸದ ಪ್ರತಿಮೆಗಳನ್ನು ಊರುಗಳ ಪ್ರಮುಖ ಬೀದಿ ವೃತ್ತಗಳಲ್ಲಿ ಪ್ರತಿಷ್ಠಾಪಿಸುತ್ತಾರೆ. ಹಾಗೆಯೇ ಶಿಲ್ಪಕಲಾವಿದರು ಇವರ ಪ್ರತಿಮೆಯಲ್ಲಿ ದಾಸರ ಸಾಹಿತ್ಯದ ತಿರುಳು ಮತ್ತು ಅವರ ಹರಿನಾಮ ಹಾಡುವ ಭಾವ ಭಂಗಿಯಲ್ಲಿ ಪುತ್ತಳಿಯನ್ನು ನಿರ್ಮಿಸಿರುವುದು ಒಂದು ವೈಶಿಷ್ಟ್ಯ. ಬಲಗಾಲ ಮೇಲೆ ಪೂರ್ಣ ನಿಂತು ಎಡಗಾಲನ್ನು ಎತ್ತಿ, ಮುಂದೆ ನಡೆಯುತ್ತಾ ಹರಿನಾಮ ಹಾಡುತ್ತಾರೆ ಎನ್ನುವ ನಿಂತ ಭಂಗಿ ಅತ್ಯಂತ ಆಕರ್ಷಕವಾಗಿದೆ. ಎಲ್ಲವನ್ನೂ ತ್ಯಾಗ ಮಾಡಿ ಒಂದು ಚಿಕ್ಕ ಪಂಚೆ, ಜೋಳಿಗೆ, ತಾಳಗಳನ್ನು

ಹಿಡಿದು ಕೊರಳಲ್ಲಿ ತುಳಸಿ ಮಾಲೆ ಧರಿಸಿರುವ ದಾಸರ ಪ್ರತಿಮೆ ಅವರ ಮನೋಜ್ಞ ಪ್ರತಿಬಿಂಬವನ್ನು ಸೂಚಿಸುವಂತೆ ನಿರ್ಮಾಣವಾಗಿದೆ. ದಾಸರ ಪ್ರತಿಮೆಯ ಹೆಗಲ ಮೇಲೆ ಕಂಬಳಿ ಹೊದ್ದಿರುವುದು ಇದನ್ನು ಸಿಮೆಂಟಿನಲ್ಲಿ ಕಂಬಳಿಯೇ ಎನ್ನುವಂತೆ ನಿರ್ಮಾಣ ಮಾಡಿದ ಶಿಲ್ಪಿಗಳ ಸೃಜನಶೀಲತೆ ಮೆಚ್ಚುವಂತಹದು. ದಾಸರು ಕಾಲುಗಳಲ್ಲಿ ಕಟ್ಟಿಗೆ ಪಾದರಕ್ಷೆಗಳನ್ನು ಧರಿಸಿ, ನಾಡಿನಾದ್ಯಂತ ದಾಸರ ಪದಗಳನ್ನು, ಹರಿನಾಮ ತಪವನ್ನು ಪ್ರಚಾರಪಡಿಸುವಂತೆ ನಡೆದಿದ್ದಾರೆ ಎಂದು ಶಿಲ್ಪವನ್ನು ನೋಡಿದ ಸಾಮಾನ್ಯರೂ ತಿಳಿದುಕೊಳ್ಳುವಂತೆ ರಚನೆ ಮಾಡಲಾಗಿದೆ. ಮುಖ ಭಾವದಲ್ಲಿ ಭಕ್ತಿ ಪರಾಕಾಷ್ಠೆ ಕಂಡುಬರುವಂತೆ ಸಿಮೆಂಟಿನಲ್ಲಿ ಶಿಲ್ಪ ನಿರ್ಮಿಸಿರುವುದು ಅದ್ಭುತವಾದ ಕಲಾಕೃತಿ ನಿರ್ಮಾಣವಾಗಿದೆ. ೧೨ನೇ ಶತಮಾನದಲ್ಲಿ ಕ್ರಾಂತಿಯಾಗಿ ಬಸವೇಶ್ವರರು ಜಾತಿವ್ಯವಸ್ಥೆಯ ವಿರುದ್ಧ ತಮ್ಮ ವಚನ ಸಾಹಿತ್ಯಗಳ ಮೂಲಕ ಸಮಾಜವನ್ನು ಸುಧಾರಣೆ ಮಾಡಿ ಕೆಲವು ಮೌಢ್ಯತೆಯ ಆಚರಣೆಗಳನ್ನು ಕುರಿತು ತಮ್ಮ ವಚನದಲ್ಲಿ ಹೀಗೆ ಹೇಳಿದ್ದಾರೆ.

*"ನೀರ ಕಂಡಲ್ಲಿ ಮುಳುಗುವರಯ್ಯ*
*ಮರ ಕಂಡಲ್ಲಿ ಸುತ್ತುವರಯ್ಯ*
*ಬತ್ತುವ ಜಾಲಿಕೆ ಒಣಗುವ ಮರಕೆ*
*ಸುತ್ತುವವರ ನೆಚ್ಚನಯ್ಯ ನಮ್ಮ ಕೂಡಲ ಸಂಗಮದೇವ"*

ಎಂದು ನೇರ ನಿಷ್ಠುರವಾಗಿ ಜ್ಞಾನವನ್ನು ತಿಳಿಸಿದರು. ಇಂತಹ ವಚನ ಸಾಹಿತ್ಯ ವಿಶ್ವಮಾನ್ಯತೆಯನ್ನು ಪಡೆದಿದೆ. ೧೨ನೇ ಶತಮಾನ ವಚನಗಳ ಮೂಲಕವೇ ಧರ್ಮ, ಜಾತಿ, ಸಾಮಾಜಿಕ ಅಂತರಗಳನ್ನು ಸಮತೋಲನ ಕೈ ತರುವವರಲ್ಲಿ ಪ್ರಥಮರಾಗಿದ್ದಾರೆ. "ಕಾಯಕವೇ ಕೈಲಾಸ" ಎಂದು ಇವರ ಮಾರ್ಗಸೂಚಕವಾದ ವಾಕ್ಯ ದುಡಿದು ಸಂಪಾದನೆ ಮಾಡಿ, ಶ್ರಮವಿಲ್ಲದೇ ಸಂಪಾದನೆ ಮಾಡಿದರೆ, ಇಹಲೋಕ, ಪರಲೋಕಗಳಲ್ಲಿಯೂ ಸ್ಥಾನವಿಲ್ಲ ಎಂದು ಹೇಳಿದ್ದಾರೆ.

ಬಸವೇಶ್ವರರ ವಚನ ಸಾಹಿತ್ಯ ವಿಶ್ವಮಾನ್ಯವಾಗಿದೆ. ಬಸವೇಶ್ವರರ ಶಿಲಾಶಿಲ್ಪವು ಎರಡೂ ಕಾಲುಗಳನ್ನು ಮಡಿಸಿ, ಸಿದ್ಧಾಸನದಲ್ಲಿ ಕುಳಿತಿದ್ದು, ಕೆಳಗಡೆ ಚೌಕಾಕಾರದ ಆಸನ ಪೀಠವಿದೆ. ಇದರ ಮೇಲೆ ಕುಳಿತು ಬಲ ಕೈಯಲ್ಲಿ ವಚನ ಸಾಹಿತ್ಯದ ತಾಡೋಲೆ ಪತ್ರಗಳಲ್ಲಿ ರಚಿಸಿದ ವಚನಗಳನ್ನು ತಮ್ಮ ಕಣ್ಣಿಗೆ ಸಮೀಪ ಕಾಣುವಂತೆ ಹಿಡಿದುಕೊಂಡು ಅದರಲ್ಲಿ ಅವರು ರಚಿಸಿದ ವಚನ ಸಾಹಿತ್ಯವನ್ನು ಓದಿ ಹೇಳುತ್ತಾರೆ ಎನ್ನುವಂತೆ ಶಿಲ್ಪ ಕೆತ್ತನೆ ಮಾಡಲಾಗಿದೆ. ಎಡ ಕೈಯಲ್ಲಿ ತಾಳೆಗರಿಗಳ ಲೇಖನದ ಕಟ್ಟ(ಪುಸ್ತಕ)ನ್ನು ಒಂದೊಂದಾಗಿ ತೆಗೆದು ಓದಿ ವಿವರಿಸುವಂತೆ ಶಿಲ್ಪ ಕೆತ್ತನೆ ಮಾಡಲಾಗಿದೆ. ಮೈಯಲ್ಲಿ ವಸ್ತ್ರ, ಪಂಚೆ, ಕೈಗಳಲ್ಲಿ ರುದ್ರಾಕ್ಷಿ ಮಾಲೆ, ಕಿವಿಗಳಲ್ಲಿ ಕುಂಡಲ, ಕಂಠದಲ್ಲಿ ಇಷ್ಟಲಿಂಗವನ್ನು ಧರಿಸಿದ್ದಾರೆ. ಹಣೆಯಲ್ಲಿ ವಿಭೂತಿ ಬಿಳಿವರ್ಣದಿಂದಲೇ ಲೇಪಿತವಾಗಿದೆ. ಬಸವೇಶ್ವರರ ಮುಖದಲ್ಲಿ ಭಕ್ತಿ ಭಾವ ಕಂಡುಬರುತ್ತದೆ.

**೬. ವೆಂಕಟೇಶ್ವರನ ಶಿಲಾಶಿಲ್ಪ:** ತಿರುಪತಿಯ ವೆಂಕಟೇಶ್ವರನ ಭಕ್ತರು ನಾಡಿನಾದ್ಯಂತ ಇದ್ದಾರೆ. ಕೆಲವರು ತಿರುಪತಿಗೆ ಯಾತ್ರೆ ಮಾಡಿ ವೆಂಕಟರಮಣನ ದರ್ಶನ ಪಡೆಯುತ್ತಾರೆ.

ಕೆಲವರಿಗೆ ಅಷ್ಟಾದರೂ ಯಾತ್ರೆಯನ್ನು ಮಾಡಿ ದರ್ಶನ ಪಡೆಯುವ ಭಾಗ್ಯ ಸಿಗದಿದ್ದರೆ ನಿರಾಶರಾಗುತ್ತಾರೆ ಎಂದ ಅರಿತು ವೆಂಕಟರಮಣನ ಭಕ್ತರು ತಮ್ಮ ಊರುಗಳಲ್ಲಿ ವೆಂಕಟೇಶ್ವರನ ದೇಗುಲ ನಿರ್ಮಿಸಿ ತಿರುಪತಿಯ ವೆಂಕಟಗಿರಿವಾಸನನ್ನು ತಮ್ಮ ಊರುಗಳಲ್ಲಿಯೇ ಸ್ಥಾಪಿಸಿ, ಪೂಜೆ ಮಾಡಿ ಆರಾಧಿಸುವುದುಂಟು. ಇಂತಹ ದೇವಾಲಯ ಮೂರ್ತಿಗಳು ಕರ್ನಾಟಕ, ಆಂಧ್ರ, ತಮಿಳುನಾಡು ಮಹಾರಾಷ್ಟ್ರಗಳ ಅನೇಕ ನಗರ ಗ್ರಾಮಗಳಲ್ಲಿ ಕಾಣಬಹುದು. ಹಾಗೆಯೇ ಕರ್ನಾಟಕದ ರಾಯಚೂರು ಜಿಲ್ಲೆ ಸಂಗಾಪುರದ ಶಿಲ್ಪಿಗಳಿಂದ ವೆಂಕಟೇಶ್ವರನ ಮೂರ್ತಿಗಳನ್ನು ಶಿಲೆಯಲ್ಲಿ ಮಾಡಿಸಿದ್ದಾರೆ. ತಿರುಪತಿಯ ವೆಂಕಟರಮಣನ ಪ್ರತಿಮೆಯ ಪ್ರತಿರೂಪದಂತೆ ನಿಂತಿರುವ ವಿಷ್ಣು, ಹಿಂದಿನ ಕೈಗಳಲ್ಲಿ ಶಂಖ ಚಕ್ರಧಾರಿಯಾಗಿದ್ದು, ಬಲಕ್ಕೆ ವರದ ಹಸ್ತಮುದ್ರೆ ಇದೆ. ಎಡಗೈ ಟೊಂಕದ ಮೇಲೆ ಇದೆ. ವೈಜಯಂತಿ ಮಾಲೆ, ಕಿರೀಟ, ಕಂಠಾಭರಣ, ಕೈಕಂಕಣಗಳು ನಡುವಿನಲ್ಲಿ ಆಭರಣಗಳನ್ನು ಹೀಗೆ, ಆಲಂಕಾರಿಕ ಪ್ರತಿಮೆಯಾಗಿ ನಿರ್ಮಾಣ ಮಾಡಿದ್ದಾರೆ. ವೆಂಕಟರಮಣನ ಶಿಲ್ಪವು ದುಂಡುಶಿಲ್ಪವಾಗಿದ್ದು ಹಿಂಬದಿಯಲ್ಲಿ ಪ್ರಭಾವಳಿಯು ಪುನರಾವರ್ತಿತ ನಕ್ಷೆಗಳಿಂದ ಕೆತ್ತಲ್ಪಟ್ಟಿದೆ. ಪ್ರಭಾವಳಿಯ ಮೇಲೆ ಕೀರ್ತಿಮುಖವು ಆಲಂಕಾರಿಕ ನಕ್ಷೆಗಳಿಂದ ಕೆತ್ತಿದ್ದು ಕಂಡುಬರುತ್ತದೆ. ಪ್ರಭಾವಳಿಯ ಎಡಬದಿಯ ತೋಳು ಪಟ್ಟಿಕೆಗಳಲ್ಲಿ ಚಿಕ್ಕಗಾತ್ರದ ಪೂಜಾ ಅರ್ಚನೆಗೆ ಹೂವಿನ ಪುಟ್ಟಿಯನ್ನು ಹಿಡಿದು ನಿಂತಿರುವ ಉಬ್ಬುಶಿಲ್ಪಗಳು ಕಂಡುಬರುತ್ತವೆ. ಗಾತ್ರದಲ್ಲಿ ಮೂಲ ದೇವರಿಗಿಂತ ಚಿಕ್ಕದಾದ ಶಿಲ್ಪಗಳಾಗಿವೆ. ಮೂಲದೇವತೆ ವೆಂಕಟರಮಣನನ್ನು ದುಂಡುಶಿಲ್ಪವಾಗಿ ಕೆತ್ತಿ ಪ್ರಧಾನ ದೇವತೆ ಎಂದು ಸೂಚಿಸುವಂತಿದೆ. ಎಡಬಲ ಬದಿಗೆ ಉಬ್ಬುಶಿಲ್ಪ ರಚನೆ ಮಾಡಿ ಸಹ ಪರಿವಾರ ದೇವತೆಯಂತೆ ಸೂಚಿಸಿ ಕೆತ್ತನೆ ಮಾಡಿದ್ದು ವಿಶಿಷ್ಟ್ಯವಾಗಿದೆ.

೭. **ನಾಗಶಿಲ್ಪ:** ನಾಗಶಿಲ್ಪವು ಪೀಠವನ್ನು ಸೇರಿ ಮೂರು ಪೂಟು ಎತ್ತರದಲ್ಲಿ ಕೆತ್ತನೆ ಮಾಡಲಾಗಿದೆ. ಬಾಲವನ್ನು ಸೇರಿ ಮೂರು ಸುತ್ತು ಸುತ್ತಿಕೊಂಡು ಮೇಲೆ ಎಡೆ ಬಿಚ್ಚಿಕೊಂಡಿದೆ. ಐದು ಎಡೆಗಳಿಂದ ನಿರ್ಮಿತವಾದ ಶಿಲ್ಪ ಕೆತ್ತನೆ ಮಾಡಲಾಗಿದೆ. ಮಧ್ಯದ ಎಡೆಯಲ್ಲಿ ಈಶ್ವರನ ಲಿಂಗ ಕೆತ್ತನೆ ಮಾಡಿರುವುದು ಒಂದು ವಿಶೇಷವೆನ್ನಿಸುತ್ತದೆ. ನಾಗ ಮತ್ತು ಲಿಂಗು ಒಟ್ಟಿಗೆ ಇರುವ ಶಿಲ್ಪವು ಬಹಳ ವಿರಳ. ನಾಗಶಿಲ್ಪಿಗಳು ಪ್ರತಿಷ್ಠಾಪನೆ ಮಾಡಿ ಸಂತಾನ ಫಲ ಪೂಜೆ ಮಾಡುವುದು ಕಂಡುಬರುತ್ತದೆ. ಕರಾವಳಿ, ದಕ್ಷಿಣ ಕನ್ನಡ, ಉತ್ತರ ಕನ್ನಡ ಭಾಗಗಳಲ್ಲಿ ಹಿಂದೂ ಧಾರ್ಮಿಕ ದೇವಾಲಯಗಳಲ್ಲಿ ನಾಗದೇವತೆಯನ್ನು ಪ್ರತಿಷ್ಠಾಪಿಸುವುದು ಕಂಡುಬರುತ್ತದೆ. ಅಶ್ವತ್ಥ ವೃಕ್ಷದ ಕೆಳಗೆ ಸ್ಥಾಪಿಸಿ ಆರಾಧಿಸುವುದು ರೂಢಿಯಲ್ಲಿದೆ.

**ಲೋಹಶಿಲ್ಪಿ ಸಿದ್ಧಲಿಂಗ ಆಚಾರಿಯವರ ಕಲಾಕೃತಿಗಳು(ರಾಯಚೂರು ಜಿಲ್ಲೆ)**

೧. **ನಾಗಶಿಲ್ಪ ಮತ್ತು ಪ್ರಭಾವಳಿ:** ಸುಮಾರು ಐದು ಪೂಟು ಎತ್ತರ ಮತ್ತು ಮೂರು ಪೂಟು ಅಗಲದಲ್ಲಿ ಶಿಲ್ಪಾಕೃತಿ ಕಂಡುಬರುತ್ತದೆ. ನಾಗಶಿಲ್ಪವು ಮಧ್ಯಭಾಗದಲ್ಲಿದ್ದು ಅಧಿಷ್ಠಾನವು ಆಯತಾಕಾರದಲ್ಲಿದೆ. ಅಧಿಷ್ಠಾನದ ಮೇಲಿಂದ ಬಾಲದಿಂದ ಮೇಲಿನ ಹೆಡೆಯವರೆಗೂ ಎರಡೂ ಸುರುಳಿ ಸುತ್ತಿ ಮೇಲ್ಭಾಗದಲ್ಲಿ ಏಳು ಹೆಡೆಗಳನ್ನು ಬಿಚ್ಚಿ ನಾಗರಾಜನು ತನ್ನ ಮುಖದಲ್ಲಿ ಭಕ್ತರಿಗೆ

ಆಶೀರ್ವಾದ ಮಾಡುವ ರೀತಿಯಲ್ಲಿ ನಾಗಶಿಲ್ಪವು ಕಂಡುಬರುತ್ತದೆ. ನಾಗಶಿಲ್ಪವು ಮೂಲತಃ ಶಿಲೆಯಿಂದ ಮಾಡಲ್ಪಟ್ಟಿದ್ದು ಅದರ ಮೇಲಿನ ಕವಚವನ್ನು ಬೆಳ್ಳಿಯ ಲೋಹದಿಂದ ಉಬ್ಬುಶಿಲ್ಪವನ್ನಾಗಿ ನಿರ್ಮಿಸಲಾಗಿದೆ. ಏಳು ಹೆಡೆಗಳ ಮಧ್ಯದಲ್ಲಿ ಮತ್ತೊಂದು ಹೆಡೆಯು ಅಡಕವಾದಂತೆ ಗಮನಿಸಿದರೆ ನಾಗ ನಾಗಿಣಿಯು ಒಂದೇ ಶಿಲ್ಪದಲ್ಲಿ ಮೇಳೈಸಿದಂತೆ ಶಿಲ್ಪಿಗಳು ಕೆತ್ತನೆ ಮಾಡಿರುವುದು ಒಂದು ವಿಶಿಷ್ಟವೇ ಆಗಿದೆ. ಸುಮಾರು ಐದು ಕೆ.ಜಿ. ಬೆಳ್ಳಿಯ ಲೋಹದಿಂದ ತಗಡಿನಂತಿರುವ ಬೆಳ್ಳಿಯ ಹಾಳೆಗಳನ್ನು ಮಾಡಿಕೊಂಡು ನಾಗಶಿಲ್ಪದ ಮೂಲಾಕೃತಿಗೆ ಬೆಳ್ಳಿಯ ಮೇಲುಕವಚವನ್ನು ಉಬ್ಬು ಶಿಲ್ಪವನ್ನಾಗಿ ನಿರ್ಮಿಸುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ನಾಗಶಿಲ್ಪದ ಸುತ್ತ ಪ್ರಭಾವಳಿಯನ್ನು ಹಿತ್ತಾಳೆ ಲೋಹದಿಂದ ನಿರ್ಮಿಸಲಾಗಿದ್ದು ಇದು ಕೂಡ ಉಬ್ಬು ಶಿಲ್ಪದ ರಚನೆಯಾಗಿದೆ ಹಿತ್ತಾಳೆಯ ಲೋಹವು ಬಂಗಾರದ ವರ್ಣದಂತಿದ್ದು ನೋಡುಗರನ್ನು ಚಕಿತಗೊಳಿಸುವಂತಿದೆ. ಎಡ ಬಲದ ಪಟ್ಟಿಕೆಗಳಲ್ಲಿ ಆಲಂಕಾರಿಕ ನಕ್ಷೆಗಳಿದ್ದು ಅದರ ಮೇಲಿನ ಭಾಗವು ಎಡ ಬಲಬದಿಯಲ್ಲಿ ಹಂಸ ಪಕ್ಷಿಗಳ ಎದುರು ಬದಿರಾಗಿ ನಿಂತ ಭಂಗಿಯಲ್ಲಿ ಇಟ್ಟು ಹಂಸ ಪಕ್ಷಿಗಳ ಕೊಕ್ಕರೆ ರೆಕ್ಕೆ ಪುಕ್ಕಗಳ ಆಲಂಕಾರಿಕ ನಕ್ಷೆಗಳಿಂದ ರಚನೆ ಆಗಿ ಪುನರಾವರ್ತನ ನಕ್ಷೆ ಪ್ರಕಾರಗಳು ಕಂಡುಬರುತ್ತದೆ. ಇದರ ಮೇಲಿನ ಹಂತದಲ್ಲಿ ಪ್ರಭಾವಳಿ ಯೆಂಬ ವೈಭವ ನಕ್ಷೆಗಳು ಪುನಾರಾವರ್ತನೆಗೊಂಡಿವೆ. ಪ್ರಭಾವಳಿಯ ಮೇಲ್ಭಾಗದ ಮಧ್ಯದಲ್ಲಿ ಕೀರ್ತಿಮುಖವು ತೆರೆದ ಬಾಯಿಂದ ಕೂಡಿದ್ದು ಕೋರೆ ಹಲ್ಲುಗಳು ಬೀರಿದ ಕಣ್ಣುಗಳು ಹಾಗೂ ಕೀರ್ತಿ ಮುಖದ ಸುತ್ತಲೂ ಭಯಂಕರವಾದ ಕೇಶರಾಶಿಗಳಂತೆ ಆಲಂಕಾರಿಕ ನಕ್ಷೆಗಳನ್ನು ಕಲಾತ್ಮಕವಾಗಿ ರಚನೆ ಮಾಡಿರುವುದು ಶಿಲ್ಪಿಯ ಪ್ರತಿಭೆಯನ್ನು ಸಾಕ್ಷೀಕರಿಸುವಂತೆ ಲೋಹ ಕಲಾಕೃತಿ ನಿರ್ಮಾಣ ವಾಗಿದೆ. ಒಟ್ಟಾರೆ ನಾಗಶಿಲ್ಪವು ಬೆಳ್ಳಿ ಮತ್ತು ಹಿತ್ತಾಳೆಯ ಲೋಹಗಳಿಂದ ಕವಚ ಪೂರ್ಣವಾಗಿದ್ದು ಭಕ್ತರ ಅಭಿಲಾಷೆಯನ್ನು ಈಡೇರಿಸುವಂತೆ ಶಿಲ್ಪಿಗಳು ನಿರ್ಮಿಸಿದ್ದಾರೆ ಈ ಶಿಲ್ಪದ ನಿರ್ಮಾತೃವು ಸಿದ್ಧಲಿಂಗಾಚಾರ್ಯ ಅವರು ಹಗಲು ಇರುಳೆನ್ನದೇ ಲೋಹಗಳ ಉಬ್ಬುಶಿಲ್ಪವನ್ನು ನಿರ್ಮಿಸಿ ಕೆಲವು ಸಂದರ್ಭಗಳಲ್ಲಿ ಪ್ರತ್ಯೇಕವಾದ ಲೋಹದ ಹಾಳೆಗಳನ್ನು ಬೆಸುಗೆ ಮಾಡುವ ಮೂಲಕ ಶಿಲ್ಪವನ್ನು ಪೂರ್ಣಗೊಳಿಸಿದ್ದಾರೆ. ಸಂಪೂರ್ಣ ನಾಗಶಿಲ್ಪದಲ್ಲಿ ಲೋಹಗಳ ಬೆಸುಗೆ ಇದ್ದರೂ ಕೂಡ ನೋಡುಗರ ಕಣ್ಣಿಗೆ ಎಲ್ಲಿಯೂ ಅದು ಗೋಚರವಾಗದೆ ಎಲ್ಲವೂ ಒಂದೇ ಏಕ ಲೋಹದ ಕಲಾಕೃತಿಯ ಮುಂದೆ ಕಂಡುಬರುವುದು ಒಂದು ವೈಶಿಷ್ಟಪೂರ್ಣವೇ ಆಗಿದೆ. ಈ ಕಲಾಕೃತಿಯನ್ನು ಮಾಡಲು ಸುಮಾರು ಒಂದು ತಿಂಗಳುಗಳ ಕಾಲ ಹಿಡಿದಿದೆ. ಸಿದ್ಧಲಿಂಗ ಆಚಾರ್ಯ ಅವರ ಜೊತೆ ಮೂರು ಜನ ಸಹಾಯಕ ಶಿಲ್ಪಿಗಳು ಈ ಕಾರ್ಯದಲ್ಲಿ ತಮ್ಮ ಶ್ರಮವನ್ನು ಸಮರ್ಪಿಸಿದ್ದಾರೆ. ಗಟ್ಟಿ ಲೋಹಗಳನ್ನು ಕರಗಿಸುವುದು, ದ್ರವರೂಪ ಮಾಡುವುದು, ಲೋಹದ ಹಾಳೆಗಳನ್ನು ಮಾಡಿಕೊಂಡು ಕೆಲಸ ಮಾಡುವುದು ಅಷ್ಟು ಸುಲಭದ ಮಾತಲ್ಲ.

೨. **ಶಿವನ ಲೋಹಶಿಲ್ಪ:** ಶಿವಲಿಂಗ ರೂಪದ ತಳಭಾಗದಲ್ಲಿ ವೃತ್ತಾಕಾರದ ಅಧಿಷ್ಠಾನದ ಹಂತಗಳು ರಚನೆ ಮಾಡಲ್ಪಟ್ಟಿದ್ದು ಅದರ ಮೇಲ್ಭಾಗದಲ್ಲಿ ಶಿವಲಿಂಗದ ರೂಪಕ್ಕೆ ಶಿವನ

ಮುಖವಾಡವನ್ನು ಪಂಚಲೋಹದಲ್ಲಿ ಮಾಡಲಾಗಿದೆ. ತಳಭಾಗದಲ್ಲಿ ಶಿವನ ಕುತ್ತಿಗೆಗೆ ನಾಗನು ಎರಡು ಹಂತದಲ್ಲಿ ಸುತ್ತಿಕೊಂಡಂತೆ ಕಂಡುಬರುತ್ತದೆ. ಬಲಭಾಗದಲ್ಲಿ ಹೆಡೆಯತ್ತಿ ನಿಂತಿರುವಂತೆ ಕಾಣುತ್ತದೆ. ಶಿವನ ಮುಖದ ಮೇಲೆ ಕಿರೀಟವನ್ನು ಕೆತ್ತಿರುವುದು ಕಂಡುಬರುತ್ತದೆ. ಕಿರೀಟದ ಬಲಭಾಗದಲ್ಲಿ ಬಾಲ ಚಂದ್ರನು ಧರಿಸಿದ್ದಾನೆ. ಕಿರೀಟ ರೂಪದಲ್ಲಿ ಮೇಲ್ಭಾಗ ಗಂಗಾ ಸ್ಥಾನದಿಂದ ಎಡ ಬದಿಗೆ ಗಂಗೆಯು ಧರೆಗಿಳಿಯುವಂತೆ ಲೋಹದಲ್ಲಿ ನಿರ್ಮಿಸಿರುವುದು ಒಂದು ವಿಶಿಷ್ಟವಾಗಿದೆ. ಶಿವನ ಹಿಂಭಾಗದಲ್ಲಿ ಪ್ರಭಾವಳಿ ಅಲಂಕಾರಿಕ ನೈಸರ್ಗಿಕ ಧಾರ್ಮಿಕ ನಕ್ಷೆಗಳನ್ನು ಅರ್ಧ ವರ್ತುಲದ ಆಕಾರದಲ್ಲಿ ನಿರ್ಮಿಸಿರುವುದು ಕಂಡುಬರುತ್ತದೆ. ಪ್ರಭಾವಳಿಯ ಮಧ್ಯಭಾಗ ಮೇಲ್ಭಾಗದಲ್ಲಿ ಕೀರ್ತಿ ಮುಖವನ್ನು ರಚಿಸಿದ್ದು ಶೈಲಿಯನ್ನು ಪ್ರತಿಬಿಂಬಿಸುವಂತೆ ಇದೆ. ಲೋಹಶಿಲ್ಪದಲ್ಲಿ ದುಂಡುಶಿಲ್ಪ ಉಬ್ಬುಶಿಲ್ಪ ಕಲಾಕೃತಿಯ ಕವಚಶಿಲ್ಪ ಇವುಗಳು ಅತ್ಯಂತ ಕಲಾತ್ಮಕವಾಗಿ ರಚಿಸಲ್ಪಟ್ಟಿವೆ. ಪಂಚಲೋಹ ಗಳ ಮಿಶ್ರಣ ಲೋಹ ಶಿಲ್ಪಿಯ ಕಲಾ ತಾಂತ್ರಿಕತೆಯನ್ನು ಪ್ರತಿಬಿಂಬಿಸುವಂತೆ ಕಲಾಕೃತಿಯ ಬಿಡಿಭಾಗಗಳನ್ನು ಬೆಸುಗೆ ಮಾಡಿ ಪೂರ್ಣಗೊಳಿಸಲಾಗಿದೆ.

೩. **ಹಂಸಪಕ್ಷಿಯ ಉಬ್ಬುಶಿಲ್ಪ:** ಎರಡು ಪೂಟ್ ಅಗಲ ಎರಡು ಪೂಟ್ ಉದ್ದದ ಬೆಳ್ಳಿ ತಗಡಿನಲ್ಲಿ ಉಬ್ಬು ಶಿಲ್ಪವನ್ನು ರಚನೆ ಮಾಡಲಾಗಿದೆ. ಬಾಗಿಲ ಕದದಲ್ಲಿ ಇಂತಹ ಪ್ರತ್ಯೇಕವಾಗಿ ತಯಾರಿಸಿಕೊಂಡು ಬೆಳ್ಳಿ ತಗಡಿನಿಂದ ರಚಿತವಾದ ಉಬ್ಬುಶಿಲ್ಪಗಳನ್ನು ಒಂದಕ್ಕೊಂದು ಜೋಡಿಸಿ ಬೆಸುಗೆಯನ್ನು ಮಾಡಿ ಬಾಗಿಲಿನ ಕದಗಳನ್ನು ಬೆಳ್ಳಿ ತಗಡಿನಿಂದ ಹೊಂದಿಸಲಾಗುತ್ತದೆ. ಕದಗಳ ಮೂಲ ಸ್ವರೂಪ ಕಾಣುವುದಿಲ್ಲ. ಮರದಿಂದ ಅಥವಾ ಶಿಲೆಯಿಂದ ಮೂಲ ಬಾಗಿಲು ಕದಗಳನ್ನು ಮೊದಲೆ ನಿರ್ಮಿಸಿಕೊಂಡು ಅದಕ್ಕೆ ಹೊಂದಿಕೆಯಾಗುವಂತೆ ಬೆಳ್ಳಿ ಅಥವಾ ಹಿತ್ತಾಳೆ ಮುಂತಾದ ಲೋಹಗಳನ್ನು ತಗಡಿನಂತೆ ಹಾಳೆಯ ಆಕಾರದಲ್ಲಿ ಮಾಡಿಕೊಂಡು ಉಬ್ಬುಶಿಲ್ಪ ರಚನೆ ಮಾಡಲಾಗಿದೆ. ಹಂಸಪಕ್ಷಿಯ ಮೂಲ ಸ್ವರೂಪವನ್ನು ಬಳಸಿಕೊಂಡು ಕಲಾವಿದ ಅದಕ್ಕೆ ಪೂರಕವಾಗುವಂತೆ ಉಳಿದ ಭಾಗಗಳಾದ ರೆಕ್ಕೆ, ಪುಕ್ಕ, ಕೊಕ್ಕು ತಲೆಯ ಮೇಲಿನ ಚುಂಚು, ಕಾಲುಗಳಲ್ಲಿ ಹೊಂದಿ ಕೊಳ್ಳುವಂತೆ ಆಲಂಕಾರಿಕ ನಕ್ಷೆಗಳನ್ನು ರಚಿಸಲಾಗಿದೆ.

ಹಂಸಪಕ್ಷಿಯನ್ನು ಬದಿಯ ನೋಟದಲ್ಲಿ ಚಿತ್ರಿಸಿಕೊಂಡು ಇದಕ್ಕೆ ಹೊಂದಿಕೆಯಾಗುವಂತೆ ಚೌಕಾಕಾರದ ಸುತ್ತಲೂ ಎರಡು ಇಂಚು ಪಟ್ಟಿಯನ್ನು ಬಿಟ್ಟು ಅದಕ್ಕೆ ಎರಡು ಬದಿಗಳಲ್ಲಿ ಅಂತಿಮ ರೇಖೆಗಳಂತೆ ಚೌಕವನ್ನು ನಿರ್ಮಿಸಿ ಅದರ ಒಳಗಡೆ ಪುನರಾವರ್ತಿತ ನಕ್ಷೆಗಳನ್ನು ನಾಲ್ಕು ಪಟ್ಟಿಗಳಲ್ಲಿ ಕೆತ್ತನೆ ಮಾಡಿದ್ದು ಮೂಲ ಆಕೃತಿಗೆ ಸೌಂದರ್ಯ ಹೆಚ್ಚಿಸುವಂತೆ ಕಲಾಕೃತಿ ರಚನೆಯಾಗಿರುವುದು ಕಂಡುಬರುತ್ತದೆ. ಇಂತಹ ಅನೇಕ ಕಲಾಕೃತಿಗಳನ್ನು ಕಲ್ಯಾಣ ಚಾಲುಕ್ಯರ ದೇವಾಲಯಗಳಲ್ಲಿ ಮತ್ತು ದೇವಾಲಯದ ಕಂಬಗಳಲ್ಲಿ ಹಾಗೂ ಗೋಪುರದ ಅಂತಸ್ತುಗಳಲ್ಲಿ ಶಿಲೆಯಿಂದ ಕೆತ್ತನೆ ಮಾಡಿದ್ದನ್ನು ಕಾಣಬಹುದು. ಕಲಾವಿದರು ಪ್ರಾಚೀನ ದೇವಾಲಯಗಳಲ್ಲಿ ಕಂಡುಬರುವ ಅನೇಕ ಬಿಡಿ ಶಿಲ್ಪಗಳನ್ನು ತಮ್ಮ ಕಲೆಯಲ್ಲಿ ಲೋಹದಲ್ಲಿ ಉಪಯೋಗಿಸಿಕೊಂಡಿರುವುದು ಒಂದು ವೈಶಿಷ್ಟ್ಯವಾಗಿದೆ.

೪. **ಓಂ ಸಂಕೇತದ ಉಬ್ಬುಶಿಲ್ಪ:** ಹಿತ್ತಾಳೆ ಲೋಹದಿಂದ ರಚನೆಯಾದ ಉಬ್ಬುಶಿಲ್ಪವು ಹಿಂದೂಧರ್ಮದ ಪವಿತ್ರವಾದ ಓಂ ಸಂಕೇತಾಕ್ಷರದಿಂದ ಕೆತ್ತಲ್ಪಟ್ಟಿದೆ. ಪೂಜಾಮಂಟಪಗಳಲ್ಲಿ ಮತ್ತು ದೇವರ ಸಿಂಹಾಸನದಲ್ಲಿ ಮಧ್ಯಭಾಗದಲ್ಲಿ ಇಂತಹ ಉಬ್ಬುಶಿಲ್ಪದ ಫಲಕಗಳನ್ನು ಪ್ರತ್ಯೇಕವಾಗಿ ತಯಾರಿಸಿಕೊಂಡು ಜೋಡಣೆ ಮಾಡಿ ಬೆಸುಗೆ ಮಾಡಲಾಗುತ್ತದೆ. ಒಂದು ಪೂಜಾಮಂಟಪ, ಉತ್ಸವದ ಪಲ್ಲಕ್ಕಿ ದೇವರನ್ನು ಕೂಡಿಸುವ ಸಿಂಹಾಸನದ ಮಧ್ಯಭಾಗಗಳಲ್ಲಿ ಬಿಡಿಭಾಗಗಳನ್ನು ಕೂಡಿಸುವುದು ಒಂದು ವಿಶಿಷ್ಟ. ಏಕೆಂದರೆ ಪೂರ್ಣ ಪ್ರಮಾಣದ ಏಕಲೋಹದ ಹಾಳೆಗಳನ್ನು ಮಾಡಿಕೊಂಡು ಕೆತ್ತನೆ ಮಾಡಲು ಆಗುವುದಿಲ್ಲ. ಆದ್ದರಿಂದ ಅವಶ್ಯಕತೆ ಇದ್ದಲ್ಲಿ ಪ್ರತ್ಯೇಕ ಉಬ್ಬುಶಿಲ್ಪ ಬಳಸಲಾಗುತ್ತದೆ. ನಂತರ ಕಲಾಕೃತಿ ಪೂರ್ಣಗೊಂಡಾಗ ಜೋಡಣೆ ಕಂಡುಬರುವುದಿಲ್ಲ. ಓಂ ಸಂಕೇತಾಕ್ಷರವನ್ನು ಹಿಂದಿ(ಸಂಸ್ಕೃತ) ಮೂಲ ಆಕಾರದಲ್ಲಿ ಅಕ್ಷರವನ್ನು ಎರಡು ಇಂಚು ಪಟ್ಟಿಯನ್ನು ಬಿಟ್ಟು ಒಳಗೆ ಒಂದು ಚಿಕ್ಕ ವೃತ್ತದಂತೆ ಉಬ್ಬುವೃತ್ತವನ್ನು ಮಾಡಿಕೊಳ್ಳಲಾಗಿದೆ. ಇದರ ಸುತ್ತಲೂ ಮಣಿಗಳು ಸರದಂತೆ ವೃತ್ತಾ ನಿರ್ಮಾಣ ಮಾಡಲಾಗಿದೆ. ಇದರ ಒಳಗೆ ಒಂದು ಇಂಚು ಅಳತೆಯ ಓಂ ಸಂಕೇತದ ಆಕಾರವನ್ನು ಉಬ್ಬುಶಿಲ್ಪ ಬರುವಂತೆ ನಿರ್ಮಿಸಿ ಅದರ ಮೇಲೆ ಹಾವಿನ ಚರ್ಮದ ಆಕಾರ ರಚನೆ ಮಾಡಲಾಗಿದೆ. ಓಂ ಅಕ್ಷರದ ಮೇಲ್ಭಾಗದ ಆರಂಭದಲ್ಲಿ ಹಾವಿನ ಮುಖದಂತೆ ನಿರ್ಮಿಸಿರುವುದು ವಿಶೇಷವೆನಿಸುತ್ತದೆ. ಓಂ ಅಕ್ಷರದ ಹಿಂದೆ ಬಾಲದಂತೆ ಸುರುಳಿ ಸುತ್ತಿಕೊಂಡಿರುವುದು ಇದು ಓಂ ಸಂಕೇತದಲ್ಲಿ ನಾಗರ ಹಾವಿನ ಸರ್ಪ ಸಂಕೇತ ಅಡಕವಾಗಿದ್ದು ಇದು ಆಧ್ಯಾತ್ಮಿಕ ನೆಲೆಯನ್ನು ಪ್ರತಿಬಿಂಬಿಸುವಂತೆ ಸೂಚಿಸುತ್ತದೆ. ಫಲಕದ ಒಳಗೆ ಸುತ್ತಲೂ ಆಲಂಕಾರಿಕ ನಕ್ಷೆ, ಹೂ ಬಳ್ಳಿ ನಕ್ಷೆ, ಸುರುಳಿ ನಕ್ಷೆಯ ರಚನೆ ಮಾಡಿರುವುದು ಕಂಡುಬರುತ್ತದೆ.

೫. **ಪಂಚಲೋಹದ ಗಣೇಶ:** ಗಣೇಶನ ವಿಗ್ರಹವು ಅಧಿಷ್ಠಾನವನ್ನು ಸೇರಿ ಕೀರ್ತಿ ಮುಖದವರೆಗೆ ಮೂರು ಫೂಟ್ ಎತ್ತರದಿಂದ ಎರಕ ಕಾಯಿಸಿ ಹುಯ್ದು ತಯಾರಿಸಿದ ವಿಗ್ರಹವಾಗಿದೆ. ಇದರಲ್ಲಿ ಹಿತ್ತಾಳೆ, ತಾಮ್ರ, ಸತು, ಬೆಳ್ಳಿ, ಬಂಗಾರ ಐದು ವಿಧದ ಲೋಹಗಳನ್ನು ಪ್ರಮಾಣಕ್ಕೆ ತಕ್ಕಂತೆ ಮಿಶ್ರಣ ಮಾಡಿಕೊಂಡು ಕಾಯಿಸಿ ಎರಕ ಹುಯ್ಯಲಾಗಿದೆ. ವಿಗ್ರಹದ ಪೀಠ ಚೌಕಾಕಾರದಿಂದ ಕೂಡಿದ್ದು ಎರಡು ಹಂತದ ಮೇಲೆ ಪದ್ಮಪೀಠ ನಿರ್ಮಿಸಿ ಅದರ ಮೇಲೆ ಗಣೇಶನನ್ನು ಎರಡು ಕಾಲುಗಳು ಮಡಚಿ ಕುಳಿತಿರುವಂತೆ ರಚನೆ ಮಾಡಲಾಗಿದೆ.

ಗಣೇಶನ ಸುತ್ತಲೂ ಹಿಂಬದಿಯಲ್ಲಿ ಪ್ರಬಾವಳಿಯನ್ನು ಪ್ರತಿಬಿಂಬಿಸುತ್ತದೆ. ಕೀರ್ತಿ ಮುಖದಲ್ಲಿ ಮಕರತೋರಣವನ್ನು ಸುಂದರವಾಗಿ ಕೆತ್ತನೆ ಮಾಡಲಾಗಿದೆ. ಕಿರೀಟ ಪಾಶಾಂಕುಶ, ವರದಹಸ್ತ ಮತ್ತು ಮೋದಕವನ್ನು ಹಿಡಿದುಕೊಂಡು ಗಣೇಶನ ವಿಗ್ರಹ ಅತ್ಯಂತ ಸೂಕ್ಷ್ಮ ಕುಸುರಿ ಕೆತ್ತನೆಯಾಗಿದೆ. ಕೈಯಲ್ಲಿ ಕಡಗಗಳು, ಹೊಟ್ಟೆಗೆ ನಾಗಾಭರಣ, ವಸ್ತ್ರವಿನ್ಯಾಸ, ನಡುಪಟ್ಟಿ, ಬಲಬದಿಗೆ ಸೊಂಡಿಲನ್ನು ತಿರುಗಿಸಿ ಅದರಲ್ಲಿ ಕುಂಭ ಕಲಶವನ್ನು ಹಿಡಿದಂತೆ ನಿರ್ಮಿಸಿರುವುದು ಒಂದು ವೈಶಿಷ್ಟ್ಯಪೂರ್ಣವಾದ ಕಲಾಕೃತಿಯಾಗಿದೆ. ವಿಗ್ರಹದ ಹಣೆಯ ಮೇಲೆ ಓಂ ಅಕ್ಷರವನ್ನು ಸಂಸ್ಕೃತದಲ್ಲಿ ಕೆತ್ತನೆ ಮಾಡಲಾಗಿದೆ.

ಗಣೇಶನ ವಿಗ್ರಹದ ಅಧಿಷ್ಠಾನದ ಕೆಳಗೆ ಮೂಷಕನನ್ನು ಕೆತ್ತಿಸಿ ಮಾಡಲಾಗಿದ್ದು ಕಂಡುಬರುತ್ತದೆ. ವಿಗ್ರಹವು ಒಳಗಿನ ಭಾಗ ಪೊಳ್ಳಾಗಿರುವುದು ಲೋಹಶಿಲ್ಪದ ತಯಾರಿಕಾಕ್ರಮ, ಒಂದು ತಂತ್ರಗಾರಿಕೆ ಯನ್ನು ಕಾಣಬಹುದು. ಅಧಿಷ್ಠಾನದಿಂದ ಪ್ರಭಾವಳಿಯವರೆಗೆ ಏಕರೂಪದ ಲೋಹದ ವಿಗ್ರಹ ರಚನೆ ಒಂದು ಮಹತ್ವಪೂರ್ಣವಾಗಿದೆ.

**೬. ಸ್ತ್ರೀ ಮುಖದ ಲೋಹವಿಗ್ರಹ:** ಎರಡು ಫೂಟ್ ಎತ್ತರದ ಸ್ತ್ರೀ ಮುಖದ ವಿಗ್ರಹವನ್ನು ಜನಪದ ಶೈಲಿಯಲ್ಲಿ ನಿರ್ಮಿಸಿರುವುದು ಒಂದು ವಿಶೇಷವಾಗಿದೆ. ಹೈದರಾಬಾದ್ ಕರ್ನಾಟಕದ ಪ್ರಾಂತ್ಯದಲ್ಲಿ ಸಾಂಪ್ರದಾಯಿಕ ಶಿಲ್ಪದಲ್ಲಿ ಜನಪದ ಪ್ರಭಾವ ಅಲ್ಲಲ್ಲಿ ಕಂಡುಬರುತ್ತದೆ. ಸಾಪ್ರದಾಯಿಕ ಶೈಲಿಯಲ್ಲಿ ಗೊತ್ತಿಲ್ಲದಂತೆ ಜನಪದದ ಶೈಲಿ ಪ್ರಭಾವ ಮೇಳೈಸಿದೆ. ಶಿಲ್ಪವು ಹಿತ್ತಾಳೆ ಲೋಹದಿಂದ ನಿರ್ಮಿಸಿದಂತೆ ಕಂಡರೂ ಇದರಲ್ಲಿ ತಾಮ್ರ ಮಿಶ್ರಣ ಮಾಡಲಾಗಿದೆ. ಕಂಚಿನ ವಿಗ್ರಹ ರಚಿಸುವಾಗ ಲೋಹ ಮಿಶ್ರಣ ಮಾಡಿ ವಿಗ್ರಹ ತಯಾರಿಸಲಾಗುತ್ತದೆ. ಸ್ತ್ರೀ ಮುಖದಲ್ಲಿ ಭಾವನೆ ಅತ್ಯಂತ ತುಡಿತ ಬಿಗುವು, ಬಿನ್ನಾಣ, ಗಟ್ಟಿತನವನ್ನು ತೋರಿಸುವಂತೆ ಮುಖಭಾವ ರೂಪಿತಗೊಂಡಿದೆ. ಎರಡೂ ಕಿವಿಗಳಲ್ಲಿ ಬೆಂಡೋಲೆ, ಬುಗುಡಿ, ಹಣೆಯಲ್ಲಿ ಬೈತಲೆಯ ಮಧ್ಯ ಸರ ಪದಕ ಕುಂಕುಮ ಹಚ್ಚಿಕೊಂಡಂತೆ ಕಾಣುತ್ತದೆ.

ಹಣೆಮಧ್ಯದಲ್ಲಿ ಧರಿಸಿರುವ ತಿಲಕವೂ ಕೂಡ ಜನಪದರ ಆಚರಣೆ ಮತ್ತು ಜೀವನಶೈಲಿಯನ್ನು ಪ್ರತಿಬಿಂಬಿಸುವಂತೆ ಕಂಡುಬರುತ್ತದೆ. ಸ್ತ್ರೀ ಮುಖದ ಕಂಠಭಾಗದಲ್ಲಿ ಎರಡು ಹಂತದ ರೂಪದಲ್ಲಿ ಕಂಠಾಬರಣ ಮತ್ತು ಮಧ್ಯದಲ್ಲಿ ಚಿಕ್ಕ ಪದಕ ಜೋಡಣೆಯಾಗಿದೆ. ಕುತ್ತಿಗೆಯಿಂದ ಕೆಳಭಾಗವು ವೃತ್ತಾಕಾರದಿಂದ ಕೂಡಿದ್ದು, ಅದರ ಅಂತ್ಯಭಾಗದಲ್ಲಿ ಸಮತಟ್ಟಾಗಿ ಕೆಳಗೆ ಕೂಡುವಂತೆ ಒಂದು ವೃತ್ತ ಬಳೆಯಂತೆ ಎರಡು ಹಂತದಲ್ಲಿ ನಿರ್ಮಾಣ ಮಾಡಿದೆ. ಸ್ತ್ರೀ ಮುಖವು ಗಟ್ಟಿತನದ ಸ್ವರೂಪವನ್ನು ತೋರಿಸುವಂತೆ ಆಕೃತಿಯ ಎರಕ ವಿಧಾನದಿಂದ ಲೋಹ ಮಿಶ್ರಣ ಮಾಡಿಕೊಂಡು ಒಳಗಡೆ ಪೊಳ್ಳಾಗಿ ಇರುವಂತೆ ಲೋಹ ವಿಗ್ರಹವನ್ನು ರಚನೆ ಮಾಡಲಾಗಿದೆ. ತಲೆಯಲ್ಲಿ ಕೂದಲನ್ನು ಬಾಚಿಕೊಂಡು ಬೈತಲೆ ಆಕರ್ಷಣೀಯವಾಗಿದೆ.

**ಮರಶಿಲ್ಪಿ ಶ್ರೀ ನಾರಾಯಣಪ್ಪ ಅವರ ಕಲಾಕೃತಿಗಳು(ಕೊಪ್ಪಳ ಜಿಲ್ಲೆ)**

**೧. ಆಂಜನೇಯ:** ಮರದಿಂದ ತಯಾರಿಸಿದ ಆಂಜನೇಯನ ದುಂಡುಶಿಲ್ಪವು ಎಡಗಾಲಿನ ಮಂಡಿಯನ್ನು ಊರಿ ಕುಳಿತ ಭಂಗಿಯಲ್ಲಿದೆ. ಬಲಗಾಲನ್ನು ಮಡಿಸಿ ಪಾದ ಮಾತ್ರ ಕೆಳಗೆ ಇದೆ. ಬಲಗೈಯಲ್ಲಿ ಗದೆಯನ್ನು ಹಿಡಿದು ಭುಜದ ಮೇಲೆ ಹೊತ್ತುಕೊಂಡಂತೆ ನಿರ್ಮಾಣ ಮಾಡಲಾಗಿದೆ. ಆಂಜನೇಯನ ಬಾಲವು ಹಿಂಬದಿಯಿಂದ ಸುರುಳಿಯಂತೆ ಸುತ್ತಿ ಎಡಭುಜಕ್ಕೆ ತಗುಲಿಕೊಂಡಿದೆ. ಆಂಜನೇಯನ ಎರಡು ಭುಜಗಳಿಗೆ ಭುಜಕೀರಿಟ ತೊಡಿಸಿರುವುದು ವೈಶಿಷ್ಟ್ಯವೆನಿಸುತ್ತದೆ.

ಎಡಗೈನ್ನು ಮುಷ್ಟಿ ಮಾಡಿ ಟೊಂಕದ ಮೇಲೆ ಇಟ್ಟುಕೊಂಡಂತೆ ಶಿಲ್ಪರಚನೆ ಮಾಡಲಾಗಿದೆ. ಆಂಜನೇಯ ಹಸಿರುಬಣ್ಣದ ಅರ್ಧ ಕಾಶಿಯನ್ನು ಧರಿಸಿದ್ದಾನೆ. ನಡುವಿಗೆ ವಸ್ತ್ರವನ್ನು ಕಟ್ಟಿ

ಗಂಟು ಹಾಕಿಕೊಂಡಂತೆ ಹಿಂದೆ ಮುಂದಿನ ಭಾಗದಲ್ಲಿ ವಸ್ತ್ರದ ದಡಿಯು ಕೆಳಗೆ ನೀಳವಾಗಿ ಇರುವಂತೆ ಕಾಣುತ್ತದೆ. ಕೀರಿಟ ಮತ್ತು ಅದರ ಸುತ್ತಲೂ ಪ್ರಭಾವಲಯದಂತೆ ವಿಸ್ತರಿಸಲಾದ ಕೀರಿಟ ರಚನೆ ಇದೆ. ಕಾಲುಕೈಗಳಲ್ಲಿ ಕಡಗಗಳು, ಕೊರಳಲ್ಲಿ ಹಾರ, ತೋಳು ಬಂದಿಯಿಂದ ಅಲಂಕೃತಗೊಳಿಸಲಾಗಿದೆ. ಹಣೆಯಲ್ಲಿ ನಾಮ ಕೈ, ಎದೆ, ಭಾಗಗಳಲ್ಲಿ ನಾಮಗಳು ಕಂಡುಬರುತ್ತವೆ. ಆಂಜನೇಯನ ಮುಖ ಭಾವ ಅತ್ಯಂತ ಆಕರ್ಷಕವೂ ಮತ್ತು ಶ್ರೀ ರಾಮಪ್ರಭುವಿನ ಆಜ್ಞೆಗಾಗಿ ಕಾದುಕುಳಿತಂತೆ ಬಿಂಬಿತವಾಗುತ್ತದೆ. ಶ್ವೇತವರ್ಣ ಮಿಶ್ರತದಿಂದ ವರ್ಣಿಕೆ ಕಂಡುಬಂದರೆ ಗದೆ, ಕೀರಿಟ, ತೋಳುಬಂದಿ ಆಭರಣಗಳು ಬಂಗಾರ ವರ್ಣಲೇಪನ ಮಾಡಲಾಗಿದೆ. ವಸ್ತ್ರ ಕೆಂಪು ಬಣ್ಣದಿಂದ ಕೂಡಿದ್ದು, ಹಳದಿ ದಡಿ ಇದೆ. ಮರಶಿಲ್ಪಕ್ಕೆ ವರ್ಣ ತುಂಬಿ ಮೆರುಗು ಬರುವಂತೆ ಕಲಾವಿದ ಜಾಣ್ಮೆ ತೋರಿಸಿದ್ದಾನೆ.

ಕಾಲು ಕೈಗಳಲ್ಲಿ ಅವಶ್ಯಕವಿರುವ ಕೆಲವು ಭಾಗಗಳಲ್ಲಿ ಕೆಂಪು ಬಣ್ಣದ ರೇಖೆಗಳನ್ನು ರಚಿಸಿ ಭಾವನೆಗೆ ಸ್ಫೂರ್ತಿ ಬರುವಂತೆ ಬಣ್ಣ ಲೇಪನ ತಂತ್ರ ಬಳಸಲಾಗಿದೆ. ಹಗುರವಾದ ಒಣಗಿದ ಮರಗಳ ಬಿಡಿ ಭಾಗಗಳಿಂದ ಆಂಜನೇಯನ ದುಂಡುಶಿಲ್ಪ ತಯಾರಿಸಿ ಮುಖ ಕೈ ಕಾಲು ಬಿಡಿ ಬಿಡಿಯಾಗಿ ರಚಿಸಿ ಜೋಡಿಸಿ ತಯಾರಿಸಿದ್ದರೂ ಬಿಡಿ ಭಾಗಗಳು ಎಲ್ಲಿಯೂ ಗೋಚರಿಸದಂತೆ ಶಿಲ್ಪತಂತ್ರ ಬಳಸಲಾಗಿದೆ.

೨. **ಮಹಾಮ್ಮಾಯೆ ದೇವಿಮೂರ್ತಿ:** ಹಗುರವಾದ ಮರವನ್ನು ಬಳಸಿ ಮೂಲ ದೇವಿಯ ಆಕಾರವನ್ನು ಕೆತ್ತನೆ ಮಾಡಿ ನಂತರ ಅವಶ್ಯಕತೆ ಇದ್ದಲ್ಲಿ ಹುಣಸೆ ಬೀಜದ ಸರಿಯನ್ನು ಬಳಸಿ ಮಕ್ಕು ಮಾಡಿಕೊಂಡು ಕಿರೀಟ, ಕಿವಿ, ಮೂಗು ರಚನೆ ಮಾಡುವ ಒಂದು ತಂತ್ರಗಾರಿಕೆ ಆಗಿದೆ. ಮರದ ಶಿಲ್ಪದ ಮೇಲೆ ತೈಲವರ್ಣ, ಜಲವರ್ಣ, ಜಲವರ ವರ್ಣಗಳನ್ನು ಬಳಕೆ ಮಾಡಿಕೊಂಡು ವರ್ಣಲೇಪನ ಕಾರ್ಯ ಮಾಡಲಾಗುತ್ತದೆ. ವರ್ಣಲೇಪನ ಮಾಡಿ ಒಣಗಿದ ನಂತರ ಅದರ ಮೇಲೆ ಹೊಳಪು ಬರುವಂತೆ ಒಂದು ವಿಧದ ಪಾಲಿಷ್ ಲೇಪನ ಕಾರ್ಯ ಮಾಡಲಾಗುತ್ತದೆ. ಮರಶಿಲ್ಪದಲ್ಲಿ ಜನಪದ ಶೈಲಿಯ ಮುಖ ಕೆತ್ತನೆ ಕಂಡುಬರುತ್ತದೆ. ಗ್ರಾಮದೇವತೆಗಳಾದ ಊರಮ್ಮ ದುರುಗಮ್ಮ, ದ್ಯಾಮವ್ವ ಹೀಗೆ ಬೇರೆ ಬೇರೆ ಹೆಸರಿನಿಂದ ಮರಶಿಲ್ಪದಲ್ಲಿ ದೇವಿ ಮೂರ್ತಿಯನ್ನು ಕೆತ್ತನೆ ಮಾಡಲಾಗುತ್ತದೆ ಸಮಗ್ರವಾಗಿ ಮರಶಿಲ್ಪದಲ್ಲಿ ಗ್ರಾಮದೇವಿಯರ ವಿಗ್ರಹಗಳನ್ನು ದುಂಡುಶಿಲ್ಪದ ಶೈಲಿಯಲ್ಲೇ ರಚನೆ ಮಾಡುವುದು ಕಂಡುಬರುತ್ತದೆ. ದೇವಿ ಮುಖವನ್ನು ಕೈ ಕಾಲುಗಳನ್ನು ಆಭರಣಗಳನ್ನು ಮತ್ತು ಆಕೆಯ ವಾಹನಗಳಾದ ಸಿಂಹ, ಹುಲಿ, ಕುದುರೆ, ಆನೆ ಮುಂತಾದ ಪ್ರಾಣಿಗಳನ್ನು ಪ್ರತ್ಯೇಕವಾಗಿ ಕೆತ್ತಿ ನಿರ್ಮಿಸಿ ಒಂದನ್ನೊಂದು ಜೋಡಣೆ ಮಾಡಿ ಸಮಗ್ರವಾಗಿ ಸಂಯೋಜನೆ ಮಾಡಿ ದೇವಿ ವಿಗ್ರಹ ನಿರ್ಮಾಣ ಮಾಡುವ ತಂತ್ರಗಾರಿಕೆಯನ್ನು ಕಾಣಬಹುದು. ಮಹಾಮಾಯದೇವಿ ಮುಖ ಶಿಲ್ಪದಲ್ಲಿ ಕೆಂಪುವರ್ಣ ಮುಖ ಕಿರೀಟಕ್ಕೆ ಲೇಪನ ಮಾಡಿದ್ದು ಒಂದು ವಿಶೇಷ ಕಣ್ಣುಗಳಲ್ಲಿ ಭೀತಿ ಸ್ವಣ ಬಿಡಿಸಿರುವುದರಿಂದ ಭಯವನ್ನು ಹುಟ್ಟಿಸುವಂತೆ ಕಾಣುತ್ತದೆ ರಾಕ್ಷಸರ ಶಿರಗಳನ್ನು ಕಡಿದು ತಲೆಯಲ್ಲಿ ಕಿರೀಟದಲ್ಲಿ ಧರಿಸಿರುವುದು ಕಾಳಿ ಸ್ವರೂಪದಂತೆ

ವರ್ಣಲೇಪನ ಆಕಾರಗಳು ಕಾಣುತ್ತದೆ. ದೇವಿಯ ಮುಖ ಇನ್ನೂ ಗಂಭೀರ ಸ್ವರೂಪ ಕಾಣುವಂತೆ ಹಲ್ಲುಗಳು ತೆರೆದಿದ್ದು, ಕೋರೆ ಹಲ್ಲುಗಳು ಕಂಡುಬರುತ್ತವೆ. ಬಾಯಿಯಲ್ಲಿ ರಾಕ್ಷಸನನ್ನು ಅರ್ಧ ದೇಹ ನುಂಗಿ ಕಾಲುಗಳು ಮಾತ್ರ ಹೊರಗೆ ಕಾಣುವಂತೆ ವರ್ಣಲೇಪನ ಮಾಡಿದ್ದು ಒಂದು ವಿಶೇಷವೂ ಆಗಿದೆ, ಗ್ರಾಮದೇವತೆ ದುಷ್ಟಶಿಕ್ಷಣೆ ಶಿಷ್ಟರಕ್ಷಣೆ ಎನ್ನುವಂತೆ ಪ್ರತಿಬಿಂಬಿತವಾಗಿದೆ.

**೩. ಗರುಡಸ್ವಾಮಿಯ ಮರಶಿಲ್ಪ:** ವೈಷ್ಣವ ಪರಂಪರೆಯಲ್ಲಿ ವಿಷ್ಣುದೇವನಸಮೇತ ಗರುಡ ವಾಹನನ್ನು ಪೂಜೆ ಮಾಡುವ ಸಂಪ್ರದಾಯ ಕಾಣಬಹುದು. ವೆಂಕಟೇಶ್ವರನ ದೇವಸ್ಥಾನ, ರಾಮ ಮಂದಿರ, ಕೇಶವನ ದೇವಸ್ಥಾನ ಅಲ್ಲದೆ, ವೈಷ್ಣವ ರಥದಲ್ಲಿ ಬ್ರಹ್ಮೋತ್ಸವ ಸಂದರ್ಭದಲ್ಲಿ ಉತ್ಸವದ ಮೂರ್ತಿಗಳನ್ನು ಮರದಿಂದ ನಿರ್ಮಿಸಿ, ವರ್ಣಲೇಪನ ಮಾಡಿದ ಅನೇಕ ವಿಧದ ಮೂರ್ತಿ ಶಿಲ್ಪಗಳನ್ನು ಹಬ್ಬ ಹರಿದಿನಗಳಲ್ಲಿ ಮೆರವಣಿಗೆ ಮಾಡುವ ಪದ್ಧತಿ ಇದೆ. ಇಂತಹ ಉತ್ಸವದ ಮೂರ್ತಿಗಳಲ್ಲಿ ಒಂದಾದ ಗರುಡಸ್ವಾಮಿಯ ಮೂರ್ತಿಯು ಎಡಗಾಲನ್ನು ಮಂಡೆಯೂರಿ ಬಲಗಾಲನ್ನು ಪಾದಯೂರಿ ಎರಡು ಕೈಗಳನ್ನು ಅಂಗಾತ ಮಾಡಿ ವಿಷ್ಣುವನ್ನು ಅಂಗೈ ಆಚೆ ಬೇಡಿ ಕೊಳ್ಳುವಂತೆ ಶಿಲ್ಪವನ್ನು ನಿರ್ಮಿಸಲಾಗಿದೆ.

ಗರುಡನು ಪಕ್ಷಿಗಳ ರಾಜ. ಗರುಡನ ಮರಶಿಲ್ಪದಲ್ಲಿ ಕೈಗಳು ಕಾಲ್ಗಳು, ಕೀರಿಟ, ಗಡ್ಡ, ಮೀಸೆ ಆಭರಣಗಳಿಂದ ಅಷ್ಟೇ ಅಲ್ಲದೆ ಪಂಚೆ, ನಡುವಸ್ತ್ರ ರಚನೆ ಮಾಡಿರುವುದು ಒಂದು ವೈಶಿಷ್ಟ್ಯ ಪೂರ್ಣವೆನಿಸುತ್ತದೆ. ಗರುಡನನ್ನು ಮನುಷ್ಯರಂತೆ ನಿರ್ಮಿಸಿ ಈತನ ಬೆನ್ನಿನ ಹಿಂಬದಿಯಲ್ಲಿ ಎರಡೂ ರೆಕ್ಕೆಗಳನ್ನು ಎಡಬಲ ಬದಿಗೆ ಬಿಚ್ಚಿ ಗರಿಗೆದರಿದಂತೆ ಕಲಾಕೃತಿ ನಿರ್ಮಿಸಿರುವುದು ಕಲಾವಿದನ ಕಲ್ಪನೆ ಜಾಣ್ಮೆಗೆ ಹಿಡಿದ ಕನ್ನಡಿಯಂತಿದೆ. ವಿಷ್ಣುಭಕ್ತನಾದ ಗರುಡನು ವಿಷ್ಣು ದೇವಾಲಯದ ಎದುರಿಗೆ ಗರುಡ ಸ್ತಂಭರೂಪದಲ್ಲಿ ಶಿಲೆಯಲ್ಲಿ ಸ್ಥಾಪಿಸುವುದು ಇದೆ. ಆದರೆ ಮರದಲ್ಲಿ ನಿರ್ಮಿಸಿದ ಗರುಡನ ದುಂಡುಶಿಲ್ಪವೂ ಸುಮಾರು ನಾಲ್ಕು ಫೂಟ್ ಎತ್ತರದಿಂದ ಕೂಡಿದ್ದು ಇದರ ಕೆಳಗೆ ಹಲಗೆಯ ಪೀಠವಿದೆ. ಬೆಳ್ಳಿವರ್ಣದಂತೆ ದೇಹವಿಲ್ಲ. ಲೇಪನ ಕಂಡುಬಂದರೂ ಕೆಂಪು ಪಂಚೆ ಹಸಿರು ವಸ್ತ್ರ ಮತ್ತು ಹಸಿರುವರ್ಣದ ರೆಕ್ಕೆಗಳು ವರ್ಣ ಸಂಯೋಜನೆಗೆ ಪೂರಕವಾಗಿವೆ. ತಂಜಾವೂರು ಶೈಲಿಯ ಕೀರಿಟ ರಚನೆ ಕಾಣುತ್ತದೆ. ಮನುಷ್ಯರ ಮುಖದಂತೆ ಮುಖ ರಚನೆ ಇದ್ದರೂ ಮೂಗು ಮಾತ್ರ ಗರುಡನ ಕೊಕ್ಕು ಎನ್ನುವಂತೆ ರಚನೆ ಮಾಡಿರುವುದು ಇನ್ನೂ ವಿಶೇಷ. ಮರಶಿಲ್ಪದಲ್ಲಿ ಅತ್ಯಂತ ನೈಜ ರೂಪದ ಶಿಲ್ಪ ಎನ್ನುವಂತಿದೆ.

**೪. ಆಂಜನೇಯನ ಮರಶಿಲ್ಪ:** ಮರ ಮತ್ತು ಮಣ್ಣಿನಿಂದ ತಯಾರಿಸಿದ ಆಂಜನೇಯನ ಶಿಲ್ಪವು ಬಲಗಾಲು ಮಂಡೆಯನ್ನೂರಿ ಎಡಗಾಲು ಮಡಿಸಿ ಪಾದ ಊರಿದಂತೆ ರಚನೆ ಮಾಡ ಲಾಗಿದೆ. ಆಂಜನೇಯನ ಮರಶಿಲ್ಪವನ್ನು ರಾಮದೇವರ ರಥಗಳಲ್ಲಿ ಉತ್ಸವಗಳಲ್ಲಿ ಮೆರವಣಿಗೆ ಮಾಡುವುದನ್ನು ಕಾಣಬಹುದು. ರಾಮನ ಭಕ್ತ ಆಂಜನೇಯನು ವಾನರ ಸ್ವರೂಪಿಯಾಗಿದ್ದು ವಿಷ್ಣುವಿನ ದಶಾವತಾರಗಳಲ್ಲಿ ರಾಮನ ಅವತಾರವು ಒಂದು. ರಾಮನಿಗೆ ಹನುಮಂತ ಅಂಜನಾ ದೇವಿಪುತ್ರ ಆಂಜನೇಯನ ನಿಕಟ ಸಂಬಂಧ ಕಂಡುಬರುತ್ತದೆ. ಎಲ್ಲಿ ರಾಮನೋ ಅಲ್ಲಿ

ಹನುಮನು ಎನ್ನುವಂತೆ ಶ್ರೀ ರಾಮನ ದೇವಾಲಯದಲ್ಲಿ ಹನುಮನ ಪಾತ್ರ ಇದ್ದೇ ಇರುತ್ತದೆ. ಸುಮಾರು ನಾಲ್ಕು ಫೂಟು ಎತ್ತರದ ಹನುಮ ಆಂಜನೇಯನು ಎರಡು ಕೈಗಳನ್ನು ತೆರೆದು ರಾಮನು ಬೇಡಿಕೊಳ್ಳುತ್ತಿದ್ದಾನೋ ಎನ್ನುವಂತೆ ಶಿಲ್ಪರಚನೆ ಮಾಡಲಾಗಿದೆ. ಹಣೆಯಲ್ಲಿ ತ್ರಿನಾಮ ಕೈ, ರಟ್ಟೆ, ಬುಜ, ಎದೆ ವಕ್ಷಸ್ಥಳಗಳಲ್ಲಿ ರಾಮನಾಮಗಳನ್ನು ಸಂಕೇತಪೂರ್ಣವಾಗಿ ಬಿಳಿ ಕೆಂಪು ಬಣ್ಣಗಳಿಂದ ಬಿಡಿಸಲಾಗಿದೆ. ಕಾಲಲ್ಲಿ ಕಡಗ, ಕೊರಳಲ್ಲಿ ಆಭರಣ ಸರಗಳು, ಭುಜದ ಆಭರಣ ಎಲ್ಲವೂ ಆಲಂಕಾರಿಕ ರೂಪದಲ್ಲಿ ಬಂಗಾರವರ್ಣದಿಂದ ಕೂಡಿವೆ. ಆಂಜನೇಯನ ಕೆಳಗೆ ಹಲಗೆಯನ್ನು ಪೀಠದಂತೆ ಹೊಂದಿಸಲಾಗಿದೆ.

ಕಿರೀಟದಲ್ಲಿ ಸೂಕ್ಷ್ಮವಾದ ನಕ್ಷೆಗಳು ಕೆಂಪು ಬಿಳಿ ವರ್ಣಗಳಿಂದ ಚಿತ್ರಿಸಲಾಗಿದೆ. ಆಂಜನೇಯನ ಎರಡೂ ಹಸ್ತ ಮುಖ, ಕಿವಿ, ತಿಳಿಗೆಂಪು ವರ್ಣ ಲೇಪಿಸಿ, ರೇಖೆಗಳಿಂದ ಹಸ್ತಗಳನ್ನು ಅಲಂಕರಿಸಿದ್ದು ಒಂದು ವಿಶೇಷ ಎನಿಸುತ್ತದೆ. ಆಂಜನೇಯನಿಗೆ ಯಜ್ಞೋಪವೀತವನ್ನು ಬಿಳಿವರ್ಣ ದಿಂದ ಅಲಂಕರಿಸುವುದು ಮಹತ್ವ ತರುವಂತೆ ಕಾಣುತ್ತದೆ. ಆಂಜನೇಯನ ದುಂಡುಶಿಲ್ಪದಲ್ಲಿ ತೆಳುವರ್ಣ ಲೇಪನ ಮಾಡಿ ಯಾವುದೇ ನೆರಳು ಬೆಳಕಿನ ಪರಿಕಲ್ಪನೆ ಬರದಂತೆ ಕೇವಲ ಸದಾ ವರ್ಣವನ್ನು ಲೇಪನ ಮಾಡಲಾಗಿದೆ. ಮರಶಿಲ್ಪದಲ್ಲಿ ಕೆಲವು ಪ್ರತ್ಯೇಕ ಜೋಡಣೆಗಳಿದ್ದು ಕಾಣುವುದು ಒಂದು ವೈಶಿಷ್ಟವೇ ಸರಿ.

೫. **ಹಂಸಪಕ್ಷಿಯ ಶಿಲ್ಪ:** ಹಂಸಪಕ್ಷಿಯು ಮರದಿಂದ ನಿರ್ಮಿಸಿದ್ದು ಕೆಲವು ಭಾಗದಲ್ಲಿ ಸರಿ(ಮಣ್ಣನ್ನು) ಬಳಸಿಕೊಂಡು ಇದರ ಆಕಾರವನ್ನು ತಿದ್ದಲಾಗಿದೆ. ಹಂಸಾಪಕ್ಷಿಯ ಮೇಲೆ ಹಂಸಿನಿಯು ಆರೂಢಳಾಗುತ್ತಾಳೆ. ಸಿಂಹವಾಹಿನಿ, ಅಶ್ವಾವಾಹಿನಿ ಹಂಸವಾಹಿನಿ ಇವುಗಳಲ್ಲಿ ದೇವಿ ಯನ್ನು ಪ್ರತ್ಯೇಕವಾಗಿ ತಯಾರಿಸಿಕೊಂಡು ಅವರ ಮೇಲೆ ಆಸೀನವಾಗುವ ದೇವಿಯ ಮರದ ಮೂರ್ತಿಯನ್ನು ಬೇರೆಯಾಗಿ ತಯಾರಿಸಲಾಗುತ್ತದೆ. ದೇವಿಯ ಮರದ ಮೂರ್ತಿಗಳನ್ನು ವಾಹನಕ್ಕೆ ನಂತರ ಸಂಯೋಜನೆ ಮಾಡಿ ಅದು ಅಲ್ಲಾಡದಂತೆ ಬಿಗಿ ಭದ್ರತೆಯನ್ನು ಮಾಡಲಾಗುತ್ತದೆ. ಮರಶಿಲ್ಪಿದಲ್ಲಿ ವಾಹನ, ಪೀಠ ಆಭರಣ ಆಯುಧಗಳನ್ನು ಕಿರೀಟಗಳನ್ನು ಪ್ರತ್ಯೇಕವಾಗಿ ಕೆತ್ತನೆ ಮಾಡಿ ಜೋಡಿಸಿದರೆ ಶಿಲಾ ಶಿಲ್ಪದಲ್ಲಿ ಹೀಗೆ ಮಾಡಲು ಬರುವುದಿಲ್ಲ.

ಏಕೆಂದರೆ ಶಿಲೆ ಮರಕ್ಕಿಂತ ಗಟ್ಟಿ. ಆದರೂ ಸೂಕ್ಷ್ಮತೆ ಇರುತ್ತದೆ. ಕೆಳಗೆ ಬಿದ್ದರೆ ಒಡೆಯು ವುದಿಲ್ಲ. ಆದರೆ ಶಿಲೆ ಹಾಳಾಗುತ್ತದೆ. ಮರದಿಂದ ಮರಕ್ಕೆ ಜೋಡಣೆ ಮಾಡುವುದು ಸರಳ ಮತ್ತು ಇದಕ್ಕೆ ಅಂಟಿನ ದ್ರಾವಣ ಬಳಸಬಹುದು. ಆದರೆ ಶಿಲೆಯನ್ನು ಜೋಡಿಸುವುದು ಕಠಿಣ. ಜೋಡಿಸಿದರೆ ಒಂದಕ್ಕೊಂದು ಅಂಟುವುದು ಬಹಳ ವಿರಳ. ಹಾಗಾಗಿ ಮರಶಿಲ್ಪ ಕೆತ್ತನೆಯಲ್ಲಿ ಜೋಡಣೆ ಮಾಡಬಹುದು ಮತ್ತು ಲೋಹಶಿಲ್ಪದಲ್ಲಿ ಬೆಸುಗೆ ಮಾಡಿ ಲೋಹದ ಬಿಡಿ ಬಾಗಗಳನ್ನು ಬೆಸೆದು ಹೊಂದಿಸಬಹುದು. ಆದರೆ ಶಿಲಾಶಿಲ್ಪದಲ್ಲಿ ಈ ರೀತಿ ಅಂಟಿನ ದ್ರಾವಣ ಬಳಸಿ ಜೋಡಿಸಿದರೆ ಶಿಲೆ ಒಂದನ್ನೊಂದು ಹಿಡಿಯುವುದು ಬಹಳ ಅಸಂಭವ. ಅದ್ದರಿಂದ ಮರ ಶಿಲ್ಪದಲ್ಲಿ ಯಾವುದೇ ದುಂಡುಶಿಲ್ಪ ರಚನೆಯನ್ನು ಮಾಡುವಾಗ ಜೋಡಣೆ ತಂತ್ರ ಕಾಣಬಹುದು. ಮರದಲ್ಲಿ ಉಬ್ಬುಶಿಲ್ಪ ರಚಿಸುವಾಗ ಜೋಡಣೆಯ ಅವಶ್ಯಕತೆ ಇರುವುದಿಲ್ಲ.

**ರಥಶಿಲ್ಪಿ ಶ್ರೀ ಮಲ್ಲಪ್ಪ ಬಡಿಗೇರ ಅವರ ಕಲಾಕೃತಿಗಳು(ಕೊಪ್ಪಳ ಜಿಲ್ಲೆ)**

**೧. ಗಣೇಶನ ದುಂಡುಶಿಲ್ಪ(ಮರಮಾಧ್ಯಮ):** ಗಣೇಶನ ವಿಗ್ರಹವು ಸಾಗವಾನಿ ಮರದಿಂದ ಕೆತ್ತಲ್ಪಟ್ಟಿದೆ. ವಿಗ್ರಹದ ಭಂಗಿ ಸಂಪೂರ್ಣ ಸಾಂಪ್ರದಾಯಿಕ ಶೈಲಿಯಲ್ಲಿ ಕೆತ್ತನೆ ಮಾಡಲ್ಪಟ್ಟಿದೆ. ಮಂಟಪದ ಮೇಲೆ ಅಧಿಷ್ಠಾನ ನಿರ್ಮಿಸಿ ಅದರ ಮೇಲೆ ಗಣೇಶನು ಯುದ್ಧಕ್ಕಾಗಿ ಸಿದ್ಧನಾಗಿ ನಿಂತಿರುವಂತೆ ಭಾವಭಂಗಿ ಕಂಡುಬರುತ್ತದೆ. ಬಲಗಾಲನ್ನು ನೇರವಾಗಿಟ್ಟಿದ್ದು, ಎಡಗಾಲನ್ನು ಸ್ವಲ್ಪ ಮಡಿಸಿ ನೇರವಾಗಿ ನಿಂತಿರುವುದು ಕಂಡುಬರುತ್ತದೆ. ಹೆಗಲ ಮೇಲಿನ ವಸ್ತ್ರವಿನ್ಯಾಸ ನೆರಿಗೆಗಳು ಸ್ಪಷ್ಟವಾಗಿ ಕಂಡುಬರುತ್ತವೆ. ನಡುವಿನಲ್ಲಿ ವಸ್ತ್ರ ಕಟ್ಟಿ ಕೆಳಗೆ ದಡಿನೂಲುಗಳನ್ನು ಸಹ ಸೂಕ್ಷ್ಮತೆಯಿಂದ ಕೆತ್ತಿರುವುದು ಒಂದು ವಿಶೇಷವೆನಿಸುತ್ತದೆ. ಎಡಗೈಯಲ್ಲಿ ಅಡ್ಡಲಾಗಿ ಗದೆ ಹಿಡಿದಿರುವ ಭಂಗಿ ಠೀವಿಯಿಂದ ಕೂಡಿದೆ. ಬಲಗೈಯಲ್ಲಿ ಅಭಯ ಹಸ್ತಮುದ್ರೆ, ಹಿಂಬದಿಯ ಎರಡು ಕೈಗಳಲ್ಲಿ ತ್ರಿಶೂಲ, ಬಾಣ ಧರಿಸಿದ್ದು ಕಂಡುಬರುತ್ತದೆ. ಗಣೇಶನು ತನ್ನ ಬಲಭುಜಕ್ಕೆ ಬತ್ತಳಿಕೆ, ಬಾಣಗಳನ್ನು ಕಟ್ಟಿಕೊಂಡು ಸಮರಕ್ಕೆ ಸಿದ್ಧನಾಗಿ ನಿಂತಿರುವ ದೃಶ್ಯ ಚಿತ್ತಾಕರ್ಷಕವಾಗಿ ಕಂಡುಬರುತ್ತದೆ. ಗಣೇಶನ ಹಿನ್ನೆಲೆಯಲ್ಲಿ ಪ್ರಭಾವಳಿಯ ನಕ್ಷೆ ಅತ್ಯಂತ ಸೂಕ್ಷ್ಮ ಕುಸುರಿ ಕೆತ್ತನೆಗಳಿಂದ ಕೂಡಿದೆ. ಪ್ರಭಾವಳಿಯ ಮೇಲಿನ ಮಧ್ಯಭಾಗದಲ್ಲಿ ಕೀರ್ತಿಮುಖ ರಚನೆ ಸುಂದರವಾಗಿದೆ. ಜಾಮಿತಿಕ ನಕ್ಷೆಗಳ ಹಿನ್ನೆಲೆಯಲ್ಲಿ ಕೆತ್ತಿದ್ದಾರೆ. ಅದರ ಸುತ್ತಲೂ ಆಲಂಕಾರಿಕ ಮಂಟಪವನ್ನು ತಯಾರಿಸಿ ನಂತರ ಅದಕ್ಕೆ ಪ್ರಭಾವಳಿ ಸಮೇತ ಬಿಡಿಯಾಗಿ ಕಲಾಕೃತಿಯನ್ನು ರಚನೆ ಮಾಡಿ ಜೋಡಿಸಿದ ನಂತರ ಮರದ ರಥದ ಮುಂಭಾಗದಲ್ಲಿ ಇಂತಹ ಮರಶಿಲ್ಪವನ್ನು ಪ್ರತಿಷ್ಠಾಪಿಸಿ, ಕಬ್ಬಿಣದ ನೆಟ್‌ಬೋಲ್ಟ್‌ಗಳ ಜೋಡಣೆ ಮಾಡುವುದು ಕಂಡುಬರುತ್ತದೆ. ರಥಶಿಲ್ಪದಲ್ಲಿ ಬಿಡಿ ಬಿಡಿಯಾಗಿ ಉಬ್ಬುಶಿಲ್ಪ ದುಂಡುಶಿಲ್ಪಗಳನ್ನು ಕೆತ್ತನೆ ಮಾಡಿ ರಥಗಳಲ್ಲಿ ಅವಶ್ಯಕ ಭಾಗದಲ್ಲಿ ಜೋಡಿಸುವುದೂ ಒಂದು ವೈಶಿಷ್ಟ್ಯಪೂರ್ಣವಾದ ಕೆಲಸವೇ ಆಗಿದೆ.

**೨. ಗಡ್ಡೆ ತೇರು(ಮರಮಾಧ್ಯಮ):** ರಥದಲ್ಲಿ ಸಾಗವಾನಿ, ಬೇವು, ಹಲಸು, ಮಾವು, ಶಿವಾನಿ ಮರಗಳನ್ನು ಸಂಪೂರ್ಣ ಅಳತೆಗೆ ತಕ್ಕಂತೆ ಕೊರೆದುಕೊಂಡು ಮರವು ಒಣಗಿದ ಮೇಲೆ ಕೆತ್ತನೆ ಕೆಲಸ ಆರಂಭ ಮಾಡುತ್ತಾರೆ. ಅದರಲ್ಲಿ ರಥದ ಕೆಲಸ ಕೆತ್ತನೆ ಮಾಡುವಾಗ ಪರಿಪೂರ್ಣವಾಗಿ ಮರವು ಒಣಗಿರಬೇಕಾಗುತ್ತದೆ. ಇಲ್ಲವಾದರೆ, ಬಿರುಕು, ಹುಳುಕು, ಎಳೆ ಬಿಡುವ ಸಂಭವವಿರುತ್ತದೆ. ಅಲ್ಲದೆ ಶಿಲ್ಪಕೆತ್ತನೆ ಮಾಡಿದ ನಂತರ ಅಂಕುಡೊಂಕಾಗಿ ಮರ ತನ್ನ ನೈಜ ಸ್ವರೂಪವನ್ನು ಕಳೆದುಕೊಂಡು ಕುಗ್ಗುತ್ತದೆ. ಆದ್ದರಿಂದ ಒಣಗಿದ ಮರದಲ್ಲಿ ರಥ ನಿರ್ಮಾಣ ಮಾಡಲಾಗುತ್ತದೆ. ರಥಗಳಲ್ಲಿ ಕಟ್ಟುವ ತೇರು, ಗಡ್ಡೆಯ ತೇರು ಎಂದು ಎರಡು ಬಗೆಗಳಿವೆ. ಅದರಲ್ಲಿ ಕಟ್ಟುವ ತೇರಿನಲ್ಲಿ ಶಿಲ್ಪಗಳಾಗಲಿ, ನಕ್ಷೆಗಳಾಗಲಿ ಬಹಳ ಕಂಡುಬರುವುದಿಲ್ಲ. ವಿಶೇಷವಾಗಿ ಆಕರ್ಷಣೀಯ ಮತ್ತು ಕಲಾತ್ಮಕ ಕಲಾಕೃತಿಗಳಿಂದ ರಥ ಸುಂದರವಾಗಿ ರಚನೆ ಮಾಡಬೇಕಾದರೆ ಸಾಮಾನ್ಯವಾಗಿ ಗಡ್ಡೆಯ ರಥವನ್ನು ನಿರ್ಮಿಸಲಾಗುತ್ತದೆ. ರಥ ನಿರ್ಮಾಣದಲ್ಲಿ ಅಧಿಷ್ಠಾನವು ಮತ್ತಿ ಕಟ್ಟಿಗೆ, ಹೊನ್ನೆಕಟ್ಟಿಗೆಯಿಂದ ಗಟ್ಟಿಮುಟ್ಟಾದ ಮತ್ತು ಅತ್ಯಂತ ದಪ್ಪ ಗಾತ್ರದ ಮರಗಳನ್ನು ಬಳಸಿಕೊಂಡು

ರಥ ನಿರ್ಮಾಣ ಮಾಡಲಾಗುತ್ತದೆ. ಅದರ ಮೇಲೆ ತೊಲೆ, ಬೋದು, ಪಟ್ಟಿಗಳನ್ನು ರಚನೆ ಮಾಡುತ್ತಾರೆ. ಇದರಲ್ಲಿ ಅಷ್ಟಕೋನ, ನವರಂಗ ಮಂಟಪ, ಚೌಕ ಆಕಾರಗಳನ್ನು, ನಕ್ಷತ್ರ ಆಕಾರ ಗಳು ಬರುವಂತೆ ರಥದ ಮಾದರಿ ತಯಾರಿಸಿಕೊಳ್ಳುತ್ತಾರೆ. ರಥವು ಅಷ್ಟಕೋನದಿಂದ ಕೂಡಿದ್ದು, ಮೇಲೆ ಅಂತಸ್ತಿನ ಕಮಾನು ರಚನೆ ಮಾಡಲಾಗಿದೆ. ಆಂಜನೇಯನ ರಥವಾಗಿರುವುದರಿಂದ ರಾಮಾಯಣದ ದೃಶ್ಯ ಸನ್ನಿವೇಶಗಳ ಉಬ್ಬುಶಿಲ್ಪಗಳನ್ನು ಕೆತ್ತನೆ ಮಾಡಿರುವುದು ಕಂಡುಬರುತ್ತದೆ. ವಿಷ್ಣುವಿನ ದಶಾವತಾರದ ಉಬ್ಬುಶಿಲ್ಪಗಳು ರಥದಲ್ಲಿ ಕೆತ್ತಲ್ಪಟ್ಟಿವೆ. ಗಡ್ಡೆಯನ್ನು ಕೆಳಗೆ ಅಗಲವಾಗಿ ಮಧ್ಯದಲ್ಲಿ ಕಿರಿದಾಗಿ ಮೇಲೆ ವಿಸ್ತರಿಸಿ ಕೆತ್ತಿರುವುದನ್ನು ಕಾಣಬಹುದು. ರಥದ ಗಡ್ಡೆಯ ಸುತ್ತಲೂ ತಿರುಗುಣಿಯಿಂದ ಮಾಡಿದ ಕಾಯಿಗಳು, ಗುಂಡಗಿನ ಕಳಸದ ಆಕಾರಗಳನ್ನು ಕೆತ್ತಲಾಗಿದೆ.

೩. **ರಥಶಿಲ್ಪ(ಮರಮಾಧ್ಯಮ):** ಸುಮಾರು ಇಪ್ಪತ್ತೆರಡು ಅಡಿ ಎತ್ತರದ ರಥವನ್ನು ನಿರ್ಮಿಸಿದ್ದಾರೆ. ಅಕ್ಷಕೋನದ ಈ ರಥದಲ್ಲಿ ಏಳು ಸಿಂಹದ ಮುಖವನ್ನು ಕೆತ್ತನೆ ಮಾಡಲಾಗಿದೆ. ನಾಲ್ಕು ಬೋದುಗಳು ಇವೆ. ಇದರಲ್ಲಿ ಕೆತ್ತನೆಯ ವಿನ್ಯಾಸ ಕಂಡುಬರುತ್ತದೆ. ಗಡ್ಡೆಯ ಮೇಲ್ಭಾಗದಲ್ಲಿ ಪಟ್ಟಿಯ ಸುತ್ತಲೂ ಕೆಳಗೆ ಗಂಟೆಯ ಆಕಾರದ ಸಣ್ಣ ಸಣ್ಣ ತಿರುಗುಣಿಯಲ್ಲಿ ತಯಾರಿಸಿದ ಗುಂಡುಗಳಂತೆ ನಿರ್ಮಿಸಿರುವುದು ಕಂಡುಬರುತ್ತದೆ. ಅದರ ಮೇಲೆ ಅಂತಸ್ತಿನಲ್ಲಿ ಕಟಾಂಜನೆಯಂತೆ ಒಂದು ಅಡಿ ಎತ್ತರದಲ್ಲಿ ಬಿಡಿಬಿಡಿಯಾಗಿ ಚಿಕ್ಕ ಸ್ತಂಭಗಳಂತೆ ನಿರ್ಮಿಸಿ ಮೂಲಸ್ತಂಭಗಳಿಗೆ ಹೊಂದಿಕೊಂಡಂತೆ ಅಡ್ಡಲಾಗಿ ಹೊಂದಿಸಲಾಗಿದೆ. ಎಂಟು ಕಮಾನುಗಳು ಮತ್ತು ಅವುಗಳಿಗೆ ಸ್ತಂಭಗಳನ್ನು ತಿರುಗುಣಿಯಿಂದ ಜಂತ್ರ ಮಾಡಿ ಸುಂದರವಾದ ಶೈಲಿಯೊಂದಿಗೆ ವಿನ್ಯಾಸ ಮಾಡಲಾಗಿದೆ. ಬೋದು ತೊಲೆಗಳಲ್ಲಿ ಸಾಂದರ್ಭಿಕ ಶಿಲ್ಪಗಳಾದ ಆನೆ, ಕುದುರೆ, ಸಿಂಹ, ಎರಳೆಯನ್ನು ನಿರ್ಮಿಸುವುದು ಕಂಡುಬರುತ್ತದೆ. ರಥವು ನಾಲ್ಕು ಗಾಲಿಗಳಿಂದ ಕೂಡಿದ್ದು, ಅದನ್ನು ಬೇರೆಯವರಿಂದ ಗಟ್ಟಿಶಿಲೆಯಿಂದ ಮಾಡಿಸಲಾಗಿದೆ. ಮತ್ತು ಮತ್ತಿಕಟ್ಟಿಗೆಯಿಂದ ರಥದ ಅಚ್ಚನ್ನು ನಿರ್ಮಿಸಲಾಗಿದೆ. ಕಟ್ಟಿಗೆಯ ಅಚ್ಚಿಗೆ ಕಬ್ಬಿಣದ ಬಳೆಯನ್ನು ಹಾಕಲಾಗಿದೆ ಮತ್ತು ಅಚ್ಚಿನ ಹೊರಭಾಗದಲ್ಲಿ ಕಬ್ಬಿಣದಿಂದ ನಟ್ಟು-ಬೋಲ್ಟು ಮಾಡಿಸಿ ಜೋಡಿಸಲಾಗಿದೆ. ರಥದ ಗಡ್ಡೆ, ಮಂಟಪ, ಅದರ ಮೇಲೆ ವೃತ್ತಾಕಾರವಾಗಿ ಸುತ್ತಲೂ ಬಟ್ಟೆಯಿಂದ ತಯಾರಿಸಿದ ನಿಶಾನೆ, ಪಟಗಳನ್ನು ಸಂಯೋಜನೆ ಮಾಡಿರುವುದು ಒಂದು ವಿಶೇಷವೆನಿಸುತ್ತದೆ. ನಂತರದ ಹಂತದಲ್ಲಿ ಆರು ಘಟ್ಟಗಳನ್ನು ಮಾಡಿಕೊಂಡು ಅದರ ಮೇಲೆ ಹೂವು ತಯಾರಿಸಿ ನಂತರ ಕಲಶ ಸ್ಥಾಪನೆ ಮಾಡಲಾಗಿದೆ. ರಥವನ್ನು ಹಗ್ಗದಿಂದ ಎಳೆಯಲು ಸಹಾಯವಾಗಲು ರಥದ ಮುಂಭಾಗ ಮತ್ತು ಹಿಂಭಾಗದಲ್ಲಿ ಕಬ್ಬಿಣದ ಬಳೆಗಳನ್ನು ಜೋಡಿಸಲಾಗಿದೆ. ರಥದ ಕಲಶದ ಮೇಲೆ ಒಂದು ಛತ್ರ ನಿರ್ಮಿಸಿರುವುದು ಒಂದು ವೈಶಿಷ್ಟವಾಗಿದೆ.

೪. **ಐದು ಅಂತಸ್ತಿನ ಗಡ್ಡೆರಥ:** ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು ವಿವಿಧ ನಮೂನೆಯ ರಥಗಳನ್ನು ನಿರ್ಮಿಸುವುದರಲ್ಲಿ ಪ್ರವೀಣರು ಮತ್ತು ಸಿದ್ಧಹಸ್ತರಾಗಿದ್ದಾರೆ. ಸುಮಾರು ಮೂವತ್ತೈದು ಅಡಿ ಎತ್ತರದ ರಥ ನಿರ್ಮಾಣ ಕಾರ್ಯವೆಂದರೆ, ಅಷ್ಟು ಸುಲಭದ ಮಾತಲ್ಲ. ರಥ ನಿರ್ಮಾಣ ಮಾಡುವ ಶಿಲ್ಪಿಯು ಬಹಳ ಜಾಗರೂಕತೆ ವಹಿಸಿ ಶಿಲ್ಪಕಾರ್ಯ

ಮಾಡಬೇಕಾಗುತ್ತದೆ. ಇದರಲ್ಲಿ ಸ್ವಲ್ಪ ಅಜಾಗರೂಕತೆ ವಹಿಸಿದರೂ ತುಂಬ ಹಾನಿಯಾಗುವ ಸಂಭವಗಳೇ ಹೆಚ್ಚು ಇರುತ್ತವೆ. ಕೇವಲ ರಥದಲ್ಲಿ ಶಿಲ್ಪಕೆತ್ತನೆ ಮಾಡುವುದಲ್ಲ, ಅದರ ಅಳತೆ, ಆಯ, ಪ್ರಮಾಣ, ಅದರ ಒಟ್ಟು ತೂಕ, ಗಾತ್ರ ಮತ್ತು ಬಿಗಿ ಭದ್ರತೆ ದೃಷ್ಟಿಯಿಂದಲೂ ಒಂದು ಮರದ ಕಟ್ಟಿಗೆಯನ್ನು ಇನ್ನೊಂದಕ್ಕೆ ಜೋಡಿಸುವಾಗ ಹೊರಗೆ ಕಣ್ಣಿಗೆ ಕಾಣದಂತೆ ಅನೇಕ ಕಬ್ಬಿಣದ ದೊಡ್ಡ ದೊಡ್ಡ ಸಲಾಕೆ, ನಟ್ಟು ಬೋಲ್ಟ್‌ಗಳನ್ನು ಜೋಡಣೆ ಮಾಡುವುದೆಂದರೆ, ಒಬ್ಬ ಇಂಜನಿಯರ್‌ಗಿಂತಲೂ ಬಹಳ ಕಾಳಜಿ ವಹಿಸಿ, ಶಾಸ್ತ್ರೀಯಬದ್ಧ, ಲಯಬದ್ಧವಾದ ಶಿಲ್ಪಕಾರ್ಯ ಮಾಡಬೇಕಾಗುತ್ತದೆ. ಐದು ಅಂತಸ್ತಿನ ಗಡ್ಡೆ ತೇರನ್ನು ದೇವಾಲಯದ ಅಧಿಷ್ಠಾನ ಮಾದರಿಯಲ್ಲಿ ಹಂತ ಹಂತವಾಗಿ ತೊಲಿಬೋಧಿಗೆ ಅಡ್ಡಪಟ್ಟಿಗಳನ್ನು ಒಂದಕ್ಕೊಂದು ಜೋಡಿಸಬೇಕಾಗುತ್ತದೆ. ಐದು ಅಂತಸ್ತಿನ ರಥದಲ್ಲಿ ಸ್ಥಂಭಗಳು ಜೋಡಣೆ ಇದೆ. ರಥದಲ್ಲಿ ಗಣೇಶ, ಲಕ್ಷ್ಮೀ, ಸರಸ್ವತಿಯರ ಉಬ್ಬುಶಿಲ್ಪಗಳು ಕಂಡುಬರುತ್ತವೆ. ರಥದ ಮುಖ್ಯ ತೊಲೆಗಳಲ್ಲಿ, ಬೋಧಿಗೆಗಳಲ್ಲಿ ಉಬ್ಬುಶಿಲ್ಪಗಳನ್ನು ಕೆತ್ತನೆ ಮಾಡಿರುವುದು ಒಂದು ವಿಶಿಷ್ಟವೆನಿಸುತ್ತದೆ. ರಥದ ಬೋದಿಗೆಗಳಲ್ಲಿ ಮಾವಿನಕಾಯಿ ವಿನ್ಯಾಸಗಳು ಕಂಡುಬರುತ್ತವೆ. ರಥದ ಮೇಲ್ಭಾಗದಲ್ಲಿ ಮಣಿಗಳಂತೆ ಅಡ್ಡಪಟ್ಟಿಗಳಲ್ಲಿ ಕುಸುರಿ ನಕ್ಷೆಗಳನ್ನು ಕೆತ್ತನೆ ಮಾಡಲಾಗಿದೆ.

**ಶ್ರೀ ಹಂಸಾನಂದಾಚಾರ್ಯ ಅವರ ಕಲಾಕೃತಿಗಳು(ಬಳ್ಳಾರಿ ಜಿಲ್ಲೆ)**

೧. **ಬೆಳ್ಳಿರಥ ಶಿಲ್ಪ:** ಹೈದರಾಬಾದ್ ಕರ್ನಾಟಕ ಪ್ರದೇಶದ ೬ ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆಯು ಒಂದು. ಈ ಜಿಲ್ಲೆಯಲ್ಲಿ ೭ ತಾಲ್ಲೂಕುಗಳಿವೆ. ಈ ಪ್ರಾಂತ್ಯದಲ್ಲಿ ಅನೇಕ ಸಿದ್ಧರು, ಪವಾಡ ಪುರುಷರು ಅವತರಿಸಿದ್ದಾರೆ. ಅಂತವರ ಸಾಲಿನಲ್ಲಿ ಕೂಡ್ಲಿಗಿ ತಾಲ್ಲೂಕಿನ ಶಿಖಪುರ ಎಂದು ಪ್ರಸಿದ್ಧವಾದ ಗ್ರಾಮದಲ್ಲಿ ಗುರುಬಸವರಾಜ ಎಂಬ ಪವಾಡಪುರುಷರು ತಮ್ಮ ಮಹಿಮೆಯನ್ನು ತೋರುತ್ತ ದೀನ, ದಲಿತ, ಬಡವರ ಪಾಲಿನ ದೇವರಾಗಿ ಅವತಾರವೆತ್ತುತ್ತಾರೆ. ಕಾಲಾನಂತರ ಅವರು ನೆಲೆಸಿದ ವೀರಭದ್ರ ದೇವಾಲಯವು ಗುರುಬಸವರಾಜನಿಗೆ ಆಶ್ರಯವನ್ನು ಕೊಟ್ಟಾಗ ಆತ ಭಿಕ್ಷಾಟನೆಗಾಗಿ ಬೇರೆ ಊರುಗಳಿಗೆ ಸಂಚರಿಸುತ್ತಾ ಹೋಗಿ ಜನರು "ನಿಮ್ಮ ಊರು ಯಾವುದು ಸ್ವಾಮಿ" ಎಂದು ಕೇಳಿದರೆ ನನಗೆ ಆಶ್ರಯ ಕೊಟ್ಟ ಊರು "ಕೊಟ್ಟೂರು" ಎಂದು ಹೇಳುತ್ತಿದ್ದರು. ನಿನಗೆ ಆಶ್ರಯ ಕೊಟ್ಟವರು ಯಾರು ಎಂದು ಕೇಳಿದರೆ ಆಶ್ರಯ ಕೊಟ್ಟ ವೀರೇಶ ಎಂದು ಹೇಳುತ್ತಿದ್ದರು. ಹೀಗೆಯೇ ಗ್ರಾಮೀಣ ಜನಪದರಲ್ಲಿ ಕೊಟ್ಟ ಊರು ಕೊಟ್ಟೂರು, ಕೊಟ್ಟ ವೀರೇಶ, ಕೊಟ್ಟೂರೇಶ ಎಂದು ಇಂದಿಗೂ ಪ್ರಸಿದ್ಧಿಯನ್ನು ಪಡೆದ ಕ್ಷೇತ್ರವಾಗಿದೆ. ಅವರ ಐಕ್ಯಸ್ಥಾನವನ್ನು ಕೊಟ್ಟೂರೇಶನ ಗದ್ದಿಗೆ ಎಂದು ಕರೆಯುವ ವಾಡಿಕೆ ಇದೆ. ಕೊಟ್ಟೂರೇಶನ ಜಾತ್ರೆಯಲ್ಲಿ ಮರದಿಂದ ರಚಿಸಿದ ಬೃಹದಾಕಾರದ ರಥವು ಉತ್ಸವವಾಗಿ ನಡೆಯುತ್ತದೆ. ಆದರೆ ಕಾರ್ತಿಕ ಮಾಸದಲ್ಲಿ ಕೊಟ್ಟೂರೇಶ್ವರನ ಕೊನೆಯ ಕಾರ್ತಿಕೋತ್ಸವದ ದಿನದಲ್ಲಿ ಲಕ್ಷದೀಪ ಬೆಳಗುವುದರೊಂದಿಗೆ ರಾತ್ರಿಯ ವೇಳೆಯಲ್ಲಿ ಬೆಳ್ಳಿಯ ರಥವನ್ನು ಎಳೆಯುವುದರ ಮೂಲಕ ಬೆಳ್ಳಿರಥೋತ್ಸವವನ್ನು ಪ್ರತಿ ವರ್ಷ ಆಚರಿಸಲಾಗುತ್ತದೆ.

ಅಮರ ಶಿಲ್ಪಿ ಜಕಣಾಚಾರಿ ಪ್ರತಿಷ್ಠಿತ ಪ್ರಶಸ್ತಿ ಪುರಸ್ಕೃತರಾದ ಜಿ.ಬಿ. ಹಂಸಾನಂದಾಚಾರ್ಯ ಹೂವಿನಹಡಗಲಿ ಇವರು ೨೦೦೨ನೇ ಇಸವಿಯಲ್ಲಿ ಕೊಟ್ಟೂರಿನ ಕೊಟ್ಟೂರೇಶ್ವರನ ಬೆಳ್ಳಿಯ

ರಥವನ್ನು ೨೫೮ ಕೆ.ಜಿ. ೬೦೦ ಗ್ರಾಂ. ಬೆಳ್ಳಿಯನ್ನು ಕರಗಿಸಿ ತೆಳುವಾದ ತಗಡಿನಂತೆ ಮಾಡಿಕೊಂಡು ಅದರಲ್ಲಿ ಗುರುಬಸವರಾಜನ ಪವಾಡಗಳ ಉಬ್ಬುಶಿಲ್ಪಗಳನ್ನು ನಿರ್ಮಿಸಿದ್ದಾರೆ. ಸುಮಾರು ೨೧ ಅಡಿ ಎತ್ತರದ ಮತ್ತು ಇಷ್ಟು ತೂಕದ ಬೆಳ್ಳಿ ರಥವು ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಇದೇ ಪ್ರಥಮ ಪ್ರಾಶ್ಯಸ್ತ್ಯವಾಗಿದೆ. ಬೆಳ್ಳಿ ರಥವನ್ನು ನಿರ್ಮಾಣ ಮಾಡುವ ಪೂರ್ವದಲ್ಲಿ ಮೂಲ ರಥವನ್ನು ಮರದಿಂದ ಮಾಡಲಾಗುತ್ತದೆ. ಇದಕ್ಕೆ ಬಳಕೆಯಾಗುವ ಮರಗಳು ಉತ್ಕೃಷ್ಟ ಮಟ್ಟದ್ದಾಗಿರ ಬೇಕು. ಏಕೆಂದರೆ, ಮರದ ರಥದ ಮೇಲೆ ಬೆಳ್ಳಿಯ ತಗಡಿನ ನಕ್ಷಾವಿನ್ಯಾಸಗಳ ಪಟ್ಟಿಯನ್ನು ಅಚ್ಚೊತ್ತಿದಂತೆ ಜೋಡಿಸಲಾಗುತ್ತದೆ. ಒಂದು ಬಾರಿ ಮರವು ಕಳಪೆ ಮಟ್ಟದ್ದಾಗಿ ಹುಳ ತಿಂದು ಹಾಳಾದರೆ ಒಳಗಡೆ ಇರುವ ಮರವು ಕಾಣುವುದಿಲ್ಲ. ಮೇಲೆ ಬೆಳ್ಳಿಯ ಪದರು ಇರುವುದರಿಂದ ರಥವನ್ನು ಎಳೆಯುವಾಗ ಏನಾದರೂ ಘಟನೆಗಳು ಸಂಭವಿಸಬಹುದು. ಇದರಿಂದ ಭಕ್ತ ಸಮೂಹಕ್ಕೂ ಮತ್ತು ದೇವರಿಗೂ ಅಪಚಾರವೆಸಗಿದಂತೆ ಆಗುತ್ತದೆ. ಆದ್ದರಿಂದ ಬೆಳ್ಳಿ ಅಥವಾ ಸುವರ್ಣ ರಥಗಳನ್ನು ನಿರ್ಮಿಸುವಾಗ ಮರದ ಮೂಲ ರಥವನ್ನು ಬಹಳ ಜಾಗರೂಕತೆಯಿಂದ ಮರದ ಆಯ್ಕೆ ಮತ್ತು ನಿರ್ಮಾಣ ಕಾರ್ಯವನ್ನು ಮಾಡಬೇಕಾಗುತ್ತದೆ.

ತೇಗದ ಮರ, ಮತ್ತಿಯ ಮರ, ಬೇವಿನ ಮರ, ಹೊನ್ನೆಯ ಮರ ಮುಂತಾದವುಗಳನ್ನು ಬಳಸಿಕೊಂಡು ಮೂಲ ರಥವನ್ನು ನಿರ್ಮಿಸಿದ ನಂತರ ಅದರ ಪರಿಪಕ್ವತೆಯನ್ನು ನೋಡಿಕೊಂಡು ಅದರ ಮೇಲೆ ಬೆಳ್ಳಿಯ ತಗಡಿನಿಂದ ಉಬ್ಬುಶಿಲ್ಪಗಳನ್ನು, ನಕ್ಷೆವಿನ್ಯಾಸವನ್ನು ಮಾಡಲಾಗಿದೆ. ಈ ಬೆಳ್ಳಿ ರಥವು ಅಧಿಷ್ಠಾನ ಭಾಗದಲ್ಲಿ ಚೌಕಾಕಾರವಾಗಿದ್ದು ಮೇಲಿನ ಹಂತ ಅರಳಿದ ಕಮಲದಂತೆ ನಿರ್ಮಾಣವಾಗಿದೆ. ಅಷ್ಟಕೋನದಿಂದ ಕೂಡಿರುವ ಸ್ಥಾಪಿತ ಸ್ಥಾನವು ಸ್ತಂಭಗಳು ಮತ್ತು ಕಮಾನಿನಂತೆ ರಚನೆಯಾಗಿದೆ. ನಂತರ ಊರ್ಧ್ವ ಭಾಗವು ಮೂರು ಹಂತದ ಗೋಪುರದಂತೆ ರಚಿಸಿದ್ದಾರೆ. ಮೇಲಿನ ಭಾಗವು ಗುಮ್ಮಟದಂತೆ ಕೂಡಿದ್ದು, ಕಳಸವು ಮಾತ್ರ ಬಂಗಾರದ ಲೇಪನದಿಂದ ಕೂಡಿದೆ. ಚಿತ್ತಾಕರ್ಷಕವಾಗಿ ಕಾಣುತ್ತದೆ. ರಥದ ಸ್ತಂಭಗಳ ಕೆಳಗೆ ಸಿಂಹಗಳು ಹಾರುವ ರೀತಿಯಲ್ಲಿ ನಿಂತು ಸ್ತಂಭಗಳನ್ನು ಹೊತ್ತುಕೊಂಡಂತಿವೆ. ಸುತ್ತಲೂ ಆಲಂಕಾರಿಕ ನಕ್ಷೆಗಳು ಮತ್ತು ಪದ್ಮಗಳ ರಚನೆ ಕಂಡುಬರುತ್ತದೆ. ಬೆಳ್ಳಿಯ ರಥದಲ್ಲಿ ತಗಡುಗಳ ಬೆಸುಗೆ ಇರುವುದೋ ಇಲ್ಲವೋ ಎಂಬಂತೆ ಕಾಣುತ್ತವೆ. ಹಂಸಾನಂದಾಚಾರ್ಯರ ಸೂಕ್ಷ್ಮ ಕುಸುರಿ ಕೆತ್ತನೆ ಹಾಗೂ ನಯಗಾರಿಕೆ ಅತ್ಯಂತ ವೈಶಿಷ್ಟ್ಯಪೂರ್ಣವಾಗಿದೆ. ತುಂಬಾ ಬೆಲೆ ಬಾಳುವ ಬೆಳ್ಳಿಯನ್ನು ಸಾಕಷ್ಟು ಪ್ರಮಾಣದಲ್ಲಿ ಕರಗಿಸಿ ತಗಡಿನ ಹಾಳೆಯಂತೆ ಮಾಡಿಕೊಂಡು ರಾಳದ ಮಣಿಯ ಮೇಲೆ ಹೊಡೆತದ ಕೆಲಸ ಮಾಡುವ ಮೂಲಕ ಚಾನ ಸುತ್ತಿಗೆಗಳನ್ನು ಚೆನ್ನಾಗಿ ಪಳಗಿಸಿರುವುದು ಕಂಡುಬರುತ್ತದೆ. ಹಗಲಿರುಳೆನ್ನದೆ ಸಹಾಯಕ ಶಿಲ್ಪಿಗಳನ್ನು ಗಣನೆಗೆ ತೆಗೆದುಕೊಂಡು ಬೆಳ್ಳಿ ರಥ ನಿರ್ಮಾಣ ಕಾರ್ಯವನ್ನು ಮಾಡಲಾಗಿದೆ. ಬೆಳ್ಳಿ ರಥವು ನಾಲ್ಕು ಮರದ ಗಾಲಿಗಳಿಂದ ಕೂಡಿದ್ದು, ಗಾಲಿಗಳ ಸುತ್ತಲೂ ಕಬ್ಬಿಣದ ಪಟ್ಟಿಯನ್ನು ಹಾಕಲಾಗಿದೆ. ರಥವನ್ನು ಎಷ್ಟು ಬಾರಿ ಎಳೆದರೂ ಗಾಲಿಗಳು ಸವಿಯದಂತೆ ರಥಕ್ಕೆ ಯಾವ ಬಾಧೆಯು ಆಗದಂತೆ ಶಿಲ್ಪಿಗಳು ಮುಂಜಾಗರೂಕತೆಯನ್ನು ವಹಿಸಿದ್ದಾರೆ. ಇದಲ್ಲದೆ ರಥವು ಬೀದಿಯಲ್ಲಿ ಸಾಗುವಾಗ ಎಡ ಮತ್ತು ಬಲ ಬದಿಗೆ ಹೊರಳುವಂತೆ

ತಾಂತ್ರಿಕತೆಯಿಂದ ಕೂಡಿದ(ಸ್ಟೇರಿಂಗ್) ತಿರುಗಿಸುವ ಚಕ್ರವನ್ನು ರಥಕ್ಕೆ ನಿರ್ಮಿಸಿದ್ದು ಶಿಲ್ಪಕಲೆಯ ವೈಶಿಷ್ಟ್ಯತೆಯನ್ನು ತೋರಿಸುವಂತಿದೆ.

೨. **ಪಂಚಕಳಸ:** ಕೂಡ್ಲಿಗಿ ತಾಲ್ಲೂಕಿನ ಶಿರಿಬಿ ಗ್ರಾಮದ ಮೂಗಣ್ಣ ದೇವರೆಂದು ಪ್ರಸಿದ್ಧಿ ಪಡೆದ ದೇವರ ಗುಡಿಯ ಬೆಳ್ಳಿಯ ಪಂಚಕಳಸವನ್ನು ಸುಮಾರು ಹತ್ತು ಕೆ.ಜಿ. ಬೆಳ್ಳಿಯನ್ನು ಬಳಸಿ ಕೊಂಡು ಕಳಸವನ್ನು ನಿರ್ಮಿಸಿದ್ದಾರೆ. ಈ ಕಳಸವನ್ನು ಗೋಪುರದ ಕಳಸದಂತೆ ನಿರ್ಮಿಸಲಾಗಿದೆ. ಆದರೆ ಈ ಕಳಸವು ಪಲ್ಲಕ್ಕಿಯ ಬಾಗಿದ ಬೊಂಬಿನ ಮೇಲೆ ಮಧ್ಯಭಾಗದಲ್ಲಿ ಕಟ್ಟುವಂತೆ ನಿರ್ಮಿಸಲಾಗಿದೆ. ನಾಲ್ಕು ದಿಕ್ಕಿಗೆ, ನಾಲ್ಕು ಕೋನದ ಕಮಲದ ಮೊಗ್ಗಿನಂತೆ ಕಲಾಕೃತಿಯು ವಿನ್ಯಾಸಗೊಂಡಿದ್ದು ಮಧ್ಯಭಾಗದಲ್ಲಿ ಕೆಳಗಿನ ಗಗ್ಗರೆಯಿಂದ ನೇರವಾಗಿ ನಾಲ್ಕು ಕಳಸಗಳಿಗಿಂತಲೂ ಎತ್ತರವಾದ ಮಧ್ಯದ ಕಳಸವಿದೆ. ನಾಲ್ಕು ಕೋನಗಳಲ್ಲಿ ನಾಲ್ಕು ಕಳಸಗಳು ಸುತ್ತಲೂ ನಕ್ಷೆಯಿಂದ ಕೂಡಿದ್ದು ಮರದಲ್ಲಿ ಬಳ್ಳಿಯಂತೆ ಮೂಲಸ್ತಂಭದಿಂದ ಉತ್ಪತ್ತಿಯಾದಂತೆ ನಿರ್ಮಿಸಲಾಗಿದೆ. ಒಂದೇ ಬಳ್ಳಿಯಲ್ಲಿ ಒಂದು ಗೊಂಚಲದಿಂದ ಐದು ಮೊಗ್ಗುಗಳು ಅರಳಿದಂತೆ ಕಳಸದ ಶಿಲ್ಪವಿನ್ಯಾಸವನ್ನು ರಚಿಸಿದ್ದು ವೈಶಿಷ್ಟ್ಯತೆಯನ್ನು ತೋರಿಸುತ್ತದೆ. ಸುತ್ತಲೂ ನಾಲ್ಕು ಕಳಸಗಳು ಒಂದಕ್ಕೊಂದು ತಾಗ ದಂತಿದ್ದು ಮಧ್ಯ ಕಳಸವು ಪ್ರತ್ಯೇಕವಾಗಿ ಹೊರಹೊಮ್ಮಿದಂತೆ ನಿರ್ಮಿಸಲಾಗಿದೆ. ಪಂಚಕಳಸವನ್ನು ತಿರುಗುಣಿ ಯಂತ್ರದಿಂದ ಮಾಡಿರುವಂತೆ ಕಂಡರೂ ಕೂಡ ಇದನ್ನು ಸ್ವತಃ ಶಿಲ್ಪಿಯು ಕೈಯಿಂದಲೇ ನಿರ್ಮಿಸಿದ್ದು ಇನ್ನೊಂದು ವೈಶಿಷ್ಟ್ಯವೆನಿಸುತ್ತದೆ. ಪಂಚಕಳಸವನ್ನು ಹಂತಹಂತವಾಗಿ ಪ್ರತ್ಯೇಕ ಕಳಸ ವನ್ನು ಮಾಡಿ ನಂತರ ಟಂಕ ಬೆಸುಗೆ ಹಾಕುವ ಮೂಲಕ ಜೋಡಿಸಲಾಗಿದೆ. ಪಂಚಕಳಸವು ಪಂಚಭೂತಗಳ ಸ್ವರೂಪವನ್ನು ಸಾಂಕೇತಿಕವಾಗಿ ತೋರಿಸುವಂತೆ ಕಂಡುಬರುತ್ತದೆ.

೩. **ಶ್ರೀ ಆಂಜನೇಯ ಸ್ವಾಮಿ ರಥ(ಇಟ್ಟಿಗಿ ಗ್ರಾಮ) ಮರಮಾಧ್ಯಮ:** ರಥಶಿಲ್ಪವೆಂದರೆ ಅತ್ಯಂತ ವಿಶಿಷ್ಟವಾದ ಹಾಗೂ ಪ್ರಾಯೋಗಿಕವಾದ ವಿದ್ಯೆಯಾಗಿದೆ. ರಥಶಿಲ್ಪವನ್ನು ಮಾಡುವ ಶಿಲ್ಪಿಗಳು ಶಾಸ್ತ್ರಬದ್ಧವಾಗಿ ಹಾಗೂ ಪ್ರಾಯೋಗಿಕ ಜ್ಞಾನವನ್ನು ಹೊಂದಿರಬೇಕಾಗಿರುತ್ತದೆ. ಗಣಿತಶಾಸ್ತ್ರ, ಜೋತಿಷ್ಯ, ವಾಸ್ತುಶಾಸ್ತ್ರವನ್ನು ಅಧ್ಯಯನ ಮಾಡಿರಬೇಕಾಗಿರುತ್ತದೆ. ಪ್ರಾಚೀನ ಕಾಲದಿಂದಲೂ ದಕ್ಷಿಣ ಭಾರತದಲ್ಲಿ ರಥಗಳನ್ನು ನಿರ್ಮಿಸುವ ಸಂಪ್ರದಾಯ ಕಂಡುಬರುತ್ತದೆ. ರಥಶಿಲ್ಪ ಎಂದರೆ ಸಂಚಾರಿ ದೇವಾಲಯವೇ ಎಂದು ಅರ್ಥ. ದೇವಾಲಯದಲ್ಲಿರುವ ಮೂರ್ತಿಯು ಪ್ರತಿಸ್ಥಾಪಿತವಾಗಿದ್ದರೆ, ರಥದಲ್ಲಿನ ವಿಗ್ರಹವು ಪ್ರತ್ಯೇಕವಾಗಿ ಚರಮೂರ್ತಿಯಾಗಿರುತ್ತದೆ. ವರ್ಷದಲ್ಲಿ ಒಂದು ಬಾರಿ ಊರಿನ ಗ್ರಾಮಸ್ಥರು ಸಭೆ ಸೇರಿ ರಥೋತ್ಸವ ಹಬ್ಬವನ್ನು ಆಚರಿಸುವ ಸಂಪ್ರದಾಯ ರೂಢಿಯಲ್ಲಿದೆ. ಕರ್ನಾಟಕದ ವಿವಿಧೆಡೆ ಅನೇಕ ರಥೋತ್ಸವವು ಜರುಗುವವು. ರಥವನ್ನು ನಿರ್ಮಾಣ ಮಾಡುವ ರಥಶಿಲ್ಪಿಯು ಮೊಟ್ಟಮೊದಲ ಬಾರಿಗೆ ರಥದ ನೀಲನಕ್ಷೆಯನ್ನು ತಯಾರಿಸಿ ನಂತರ ಅದಕ್ಕೆ ಬೇಕಾಗುವ ಮರದ ಅಂದಾಜು ಅಳತೆ ಮತ್ತು ಸಾಮಗ್ರಿಗಳ ಪಟ್ಟಿಯನ್ನು ತಯಾರಿಸಿಕೊಂಡು ಅದಕ್ಕೆ ತಗಲುವ ವೆಚ್ಚವನ್ನು ಕೂಡ ಲೆಕ್ಕ ಮಾಡಿಕೊಳ್ಳಬೇಕಾಗುತ್ತದೆ ಎಂದು ರಥಶಿಲ್ಪಿಗಳಾದ ಹಂಸಾನಂದಾಚಾರ್ಯರ ಅಭಿಪ್ರಾಯ. ಹೂವಿನಹಡಗಲಿ ತಾಲ್ಲೂಕು ಇಟ್ಟಿಗಿ ಗ್ರಾಮದ ಆಂಜನೇಯ ಸ್ವಾಮಿ ರಥವನ್ನು ನಿರ್ಮಿಸುವಾಗ ಅವರು ಕಂಡುಕೊಂಡಂತಹ ಅನುಭವವನ್ನು ತಿಳಿಯಪಡಿಸುತ್ತಾರೆ.

ರಥವನ್ನು ನಿರ್ಮಿಸಬೇಕಾದರೆ ಗಾಲಿಗಳಿಂದ ಹಿಡಿದು ರಥದ ಕಳಸದವರೆಗೆ ಪ್ರತ್ಯೇಕವಾದ ಅಳತೆಗಳನ್ನು ಸಿದ್ಧಪಡಿಸಿಕೊಂಡು ಅದಕ್ಕೆ ಬೇಕಾಗುವ ಮರದ ಆಯ್ಕೆಯನ್ನು ಮಾಡಬೇಕಾಗುತ್ತದೆ. ಮರವು ಕಡಿದು ಸುಮಾರು ವರ್ಷಗಳಾಗಿರಬೇಕು. ಏಕೆಂದರೆ ಹಸಿಯಾದ ಮರದಿಂದ ರಥ ನಿರ್ಮಾಣ ಮಾಡಿದರೆ ಮರವು ಒಣಗಿದ ನಂತರ ಅಂಕುಡೊಂಕಾಗುವ ಸಾಧ್ಯತೆಗಳಿರುತ್ತದೆ. ಮರವು ಆರಿದ ಮೇಲೆ ಬಿರುಕಿನಂತಹ ಎಳೆಗಳು ಬರುವ ಸಂಭವವಿರುತ್ತದೆ. ಆದ್ದರಿಂದ ಪೂರ್ಣ ಒಣಗಿದ ಮತ್ತು ಸುವ್ಯವಸ್ಥಿತವಾದ ಮರವನ್ನು ಬಳಕೆ ಮಾಡಬೇಕಾಗುತ್ತದೆ. ರಥಶಿಲ್ಪದಲ್ಲಿ ಕಟ್ಟುವ ರಥ ಮತ್ತು ಗಡ್ಡೆಯ ರಥ ಎಂದು ಎರಡು ವಿಧದ ರಥಗಳಿರುತ್ತವೆ. ಕಟ್ಟುವ ರಥಗಳೆಂದರೆ ಚೌಕಾಕಾರದಲ್ಲಿ ಹಂತ ಹಂತವಾಗಿ ಮೇಲ್ಚಾವಣಿಯನ್ನು ನಿರ್ಮಿಸಿಕೊಂಡು ಸುತ್ತಲೂ ಬಟ್ಟೆಯಿಂದ ಹೂಗಳಿಂದ ಅಲಂಕಾರ ಮಾಡಿ ರಥವನ್ನು ನಿರ್ಮಿಸುತ್ತಾರೆ. ಈ ರಥದಲ್ಲಿ ನಕ್ಷೆಗಳು, ದುಂಡು ಶಿಲ್ಪಗಳು ಮತ್ತು ಉಬ್ಬುಶಿಲ್ಪಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಇಂತಹ ರಥಗಳು ಬಹಳ ವಿರಳ. ಆದರೆ ಗಡ್ಡೆರಥ ನಿರ್ಮಾಣದಲ್ಲಿ ಶಿಲ್ಪಿಗಳ ಕಲೆಯನ್ನು ಯಥೇಚ್ಛವಾಗಿ ಬಿಂಬಿಸಬಹುದು. ಗಡ್ಡೆರಥದ ಹಂತದಲ್ಲಿ ಷಟ್ಕೋನ, ಅಷ್ಟಕೋನ, ನವರಂಗ ಮುಂತಾದ ವಿಧದಲ್ಲಿ ಕೋನಗಳಿಂದ ಚಾವಣಿಯನ್ನು ನಿರ್ಮಿಸಿಕೊಳಬಹುದು. ಗಡ್ಡೆಯ ತೇರಿನಲ್ಲಿ ಸುತ್ತಲೂ ಆನೆ, ಸಿಂಹ, ಕೀರ್ತಿಮುಖ ಕುದುರೆ, ಇವುಗಳು ಬೃಹತ್ತಾಕಾರದ ದುಂಡುಶಿಲ್ಪಗಳಿಂದ ರಥದ ಸುತ್ತಲೂ ಕೆತ್ತಲ್ಪಟ್ಟಿದೆ. ರಥದ ಮೇಲ್ಚಾವಣಿಗೆ ಅಂತಸ್ತಿನಲ್ಲಿ ಕಮಾನುಗಳನ್ನು ನಿರ್ಮಾಣ ಮಾಡಿದ್ದಾರೆ. ಹಾಗೆಯೇ ಈ ರಥವು ಕಲ್ಯಾಣ ಚಾಲುಕ್ಯರ ದೇವಾಲಯದ ಶೈಲಿಯನ್ನು ಹೋಲುತ್ತದೆ. ಈ ರಥದ ಗಾಲಿಗಳು ಸುಮಾರು ಏಳು ಅಡಿ ಸುತ್ತಳತೆಯ ವ್ಯಾಸದಲ್ಲಿವೆ.

ಗಟ್ಟಿಯಾದ ಕಲ್ಲಿನಿಂದ ನಿರ್ಮಿತವಾದ ಗಾಲಿಗಳು ಅಚ್ಚಿನ ಹತ್ತಿರ ದಪ್ಪ ಅಳತೆಯಲ್ಲಿವೆ. ಗಡ್ಡೆಯ ರಥವು ಮನೆಯ ಹಾಸು ಮಡಿಗೆಯಂತೆ ತೊಲೆ, ಬೋದು, ಜಂತೆಗಳಂತೆ ಒಂದಕ್ಕೊಂದು ಎಣೆದುಕೊಂಡಿವೆ. ಗಾಲಿಯ ಅಚ್ಚು ಕರಿಮತ್ತಿಯ ಕಟ್ಟಿಗೆಯಿಂದ ಕೂಡಿದೆ. ಅದರ ಮೇಲಿನ ಶಿಲ್ಪಗಳ ಭಾಗವು ಸಾಗವಾನಿ ಕಟ್ಟಿಗೆ(ತೇಗ) ಮರದಿಂದ ಕೂಡಿದ್ದು, ಸುಂದರವಾದ ರಚನಾವಿನ್ಯಾಸಗಳು ಕಂಡುಬರುತ್ತವೆ. ಗಡ್ಡೆಯ ತೇರಿನ ಮೇಲ್ಭಾಗವು ಅಷ್ಟಭುಜಗಳಿಂದ ನಿರ್ಮಿತವಾಗಿದೆ. ಅಷ್ಟ ದಿಕ್ಕಿಗೂ ಅಷ್ಟ ದಿಕ್ಪಾಲಕರ ಉಬ್ಬುಶಿಲ್ಪಗಳು ಕಂಡುಬರುತ್ತವೆ. ಇಂದ್ರ, ಅಗ್ನಿ, ಯಮ, ನಿರುತಿ, ವರುಣ, ವಾಯವ್ಯ ಕುಬೇರ, ಈಶಾನ್ಯ ಅಷ್ಟ ದಿಕ್ಪಾಲಕರ ಉಬ್ಬುಶಿಲ್ಪಗಳು ವಿವಿಧ ವರ್ಣಗಳಿಂದ ಆಕರ್ಷಣೀಯವಾಗಿ ಕಾಣುತ್ತವೆ. ದಿಕ್ಪಾಲಕರು ಚತುರ್ಭುಜದಲ್ಲಿ ಆಯುಧಗಳನ್ನು ಧರಿಸಿರುವುದು ಕಂಡುಬರುತ್ತದೆ. ಮೇಲಿನ ಹಂತದಲ್ಲಿ ಕೆಂಪುವರ್ಣದ ವೃತ್ತಾಕಾರದ ಬಟ್ಟೆಯಿಂದ ನಿರ್ಮಿತವಾದ ಗಗ್ಗರಿಯಿದೆ. ಅದರ ಮೆಲ್ಭಾಗದಲ್ಲಿ ಶಿವನ ಮತ್ತು ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ವರ್ಣಚಿತ್ರಪಟಗಳಿವೆ. ಆಂಜನೇಯ ಸ್ವಾಮಿ ರಥವು ಸುಮಾರು ಇಪ್ಪತ್ತೈದು ಅಡಿ ಎತ್ತರದ ಅಳತೆಯಲ್ಲಿ ನಿರ್ಮಾಣವಾಗಿದೆ.

ಶ್ರೀರಾಮನ ಭಕ್ತನಾದ ಆಂಜನೇಯನು ರಾಮಾಯಣದಲ್ಲಿ ಬರುವ ಸನ್ನಿವೇಶಗಳ ಉಬ್ಬು ಶಿಲ್ಪಗಳು ಕಂಡುಬರುತ್ತವೆ. ಬೆಟ್ಟವನ್ನು ಹೊತ್ತು ಹಾರುವ ಆಂಜನೇಯನ ಶಿಲ್ಪ, ರಾಮ, ಸೀತ,

ಲಕ್ಷ್ಮಣ, ಆಂಜನೇಯನ ಶಿಲ್ಪ ಮತ್ತು ಗದೆಯನ್ನು ಧರಿಸಿ ಸೀಮೋಲ್ಲಂಘನ ಮಾಡುವ ಶಿಲ್ಪ ಹೀಗೆ ಅತ್ಯಂತ ವೈಶಿಷ್ಟ್ಯಪೂರ್ಣವಾದ ಆಂಜನೇಯನ ರಥವನ್ನು ಸುಮಾರು ಆರರಿಂದ ಏಳು ತಿಂಗಳವರೆಗೆ ಶಿಲ್ಪನಿರ್ಮಾಣ ಕಾರ್ಯವನ್ನು ಮಾಡಿರುವುದು ಕಂಡುಬರುತ್ತದೆ. ಒಂದು ರಥವನ್ನು ನಿರ್ಮಿಸಬೇಕಾದರೆ ಮುಖ್ಯವಾಗಿ ರಥಶಿಲ್ಪಿ ಪ್ರಮುಖ ಶಿಲ್ಪಿಯಾಗಿರುತ್ತಾರೆ. ಇವರು ಸಹಾಯಕ ಶಿಲ್ಪಿಗಳಿಗೆ ಬೇರೆ ಬೇರೆ ಶಿಲ್ಪಕಾರ್ಯವನ್ನು ಒಪ್ಪಿಸಿ ಪ್ರಮುಖವಾಗಿ ಬರುವ ಮೂರ್ತಿಶಿಲ್ಪಗಳನ್ನು ತಾವೇ ನಿರ್ಮಿಸುತ್ತಾರೆ. ರಥದಲ್ಲಿ ಬರುವ ಅನೇಕ ರೇಖಾಚಿತ್ರಗಳನ್ನು ತಯಾರಿಸಿ ಸಹಾಯಕ ಶಿಲ್ಪಿಗಳ ಮೇಲೆ ಮೇಲ್ವಿಚಾರಕರಾಗಿ ನಿರ್ದೇಶನ ನೀಡುತ್ತಾ ರಥದ ಶಿಲ್ಪಗಳ ಜೋಡಣೆಯನ್ನು ಸ್ವತಃ ತಾವೇ ಕಾರ್ಯೋನ್ಮುಖರಾಗಿ ಮಾಡುತ್ತಾರೆ. ಇಂತಹ ಬೃಹತ್ ರಥ ನಿರ್ಮಾಣದ ಕೆಲಸ ವನ್ನು ಕೇವಲ ಒಬ್ಬ ರಥಶಿಲ್ಪಿಯಿಂದ ನಿರ್ವಹಿಸಲು ಸಾಧ್ಯವಿಲ್ಲ. ಇಂತಹ ಅನೇಕ ಶಿಲ್ಪಿಗಳ ಕುಟುಂಬವೇ ಸೇರಿ ರಥ ನಿರ್ಮಾಣ ಕಾರ್ಯದಲ್ಲಿ ಮಗ್ನರಾಗಿರುತ್ತಾರೆ. ರಥ ನಿರ್ಮಾಣದ ಆರಂಭದಿಂದಲೂ ಸಂಪೂರ್ಣ ರಥವು ತಯಾರಾಗಿ ಉತ್ಸವ ನಡೆದು ಜನಸ್ತೋಮದಲ್ಲಿ ರಥವು ಸಾಗುವುದನ್ನು ನೋಡಿ ರಥಶಿಲ್ಪಿಗಳಾದ ಹಂಸಾನಂದಾಚಾರ್ಯರು ಭಾವಪರವಶರಾಗುತ್ತಾರೆ.

೪. **ಕೊಟ್ಟೂರೇಶ್ವರನ ಮರದ ರಥ:** ಬಳ್ಳಾರಿ ಜಿಲ್ಲೆಯ ಕೊಟ್ಟೂರಿನ ರಥವು ಸುಮಾರು ನೂರಾರು ವರ್ಷಗಳ ಕಾಲದ ಹಿಂದೆ ಮಾಡಲಾಗಿತ್ತು. ಅದು ೨೦೧೭ರಲ್ಲಿ ರಥವನ್ನು ಎಳೆಯುವಾಗ ಮುರಿದು ಬಿದ್ದುದು ನಾಡಿನಾದ್ಯಂತ ದೂರದರ್ಶನದಲ್ಲಿ ಸುದ್ದಿಯಾಯಿತು. ಆದರೆ ದೇವರ ಪವಾಡವೋ ಏನೋ ಎಂಬಂತೆ, ಒಬ್ಬರಿಗೂ ಒಂದೂ ಗಾಯಗಳಾಗದಂತೆ ದೇವರು ಕಾಪಾಡಿದ ಎಂದು ನಾಡಿನ ಜನರ ಅಭಿಪ್ರಾಯ. ನಂತರ ೨೦೧೮ರ ರಥೋತ್ಸವಕ್ಕೆ ಹೊಸ ರಥ ನಿರ್ಮಾಣ ಮಾಡುವ ಕಾರ್ಯವನ್ನು ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿ ಗ್ರಾಮದವರಾದ ಶಿಲ್ಪಿ ಜಿ.ಬಿ. ಹಂಸಾನಂದಾಚಾರ್ಯರಿಗೆ ನೂತನ ರಥ ನಿರ್ಮಾಣ ಕಾರ್ಯವನ್ನು ಮುಜುರಾಯಿ ಇಲಾಖೆ ಮತ್ತು ಜಿಲ್ಲಾ ಆಡಳಿತ ಹಾಗೂ ದೇವಸ್ಥಾನದ ಸಮಿತಿಯ ಪ್ರಮುಖರು ಜವಾಬ್ದಾರಿಯನ್ನು ವಹಿಸಿದರು. ನೂತನ ರಥವನ್ನು ೨೦೧೮ರ ವರ್ಷದಲ್ಲಿ ನಿರ್ಮಾಣ ಮಾಡಿಕೊಟ್ಟಿದ್ದು ಒಂದು ದಾಖಲೆಯಾಗಿದೆ. ಏಕೆಂದರೆ ಹೈದರಾಬಾದ್ ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲೇ ಐವತ್ತೂರು ಅಡಿ ಎತ್ತರದ ಬೃಹದಾಕಾರದ ರಥ ಇದಾಗಿದೆ. ಕೆಳಗೆ ಗಡ್ಡೆ ತೇರು ಮತ್ತು ಅದರ ಮೇಲೆ ಕಟ್ಟುವ ತೇರು ಇವೆರಡರ ಸಂಯುಕ್ತ ರಥರಚನೆ ತಂತ್ರಗಾರಿಕೆ ಇದರಲ್ಲಿದೆ. ರಥದ ಗಡ್ಡೆಯ ಮುಂಭಾಗ ಹಿಂಭಾಗದಲ್ಲಿ ಬೋದುಗಳ ಮೇಲೆ ಕುಳಿತಿರುವ ಭಂಗಿಯಲ್ಲಿ ಸಿಂಹಗಳಿವೆ. ಸಿಂಹಗಳು ಬಾಯಿತೆರೆದ ಸ್ವರೂಪದಲ್ಲಿದ್ದು ಹೊಯ್ಸಳ ಶೈಲಿಯನ್ನು ಹೋಲುತ್ತವೆ. ಗಡ್ಡೆಯ ರಥದ ಮೇಲು ಅಂತಸ್ತಿನಲ್ಲಿ ಕುಳಿತಿರುವ ಗಣೇಶನ ಉಬ್ಬುಶಿಲ್ಪ ಕಂಡುಬರುತ್ತದೆ. ಕಮಾನುಗಳ ಸುತ್ತಲೂ ಆನೆಯ ಮೇಲೇರಿ ನಿಂತಿರುವ ಸಿಂಹಗಳು ವಿಜಯನಗರ ಶೈಲಿಯನ್ನು ಬಿಂಬಿಸುತ್ತವೆ. ರಥದ ಮೇಲು ಅಂತಸ್ತಿನ ಪಟ್ಟಿಗಳಲ್ಲಿ ಶಿವ, ಪಾರ್ವತಿ ಮತ್ತು ಕೊಟ್ಟೂರೇಶ, ವೀರಭದ್ರ ದೇವರು, ರೇಣುಕಾ ಎಲ್ಲಮ್ಮ, ತಿಂಥಿಣಿ ಮೌನೇಶ್ವರ, ಶರಣರ ಮತ್ತು ಕೊಟ್ಟೂರೇಶನ ಪವಾಡಗಳು ಹಾಗೂ

ಪಂಚಗಣಾಧೀಶ್ವರರಾದ ನಾಯಕನಟ್ಟಿ ತಿಪ್ಪೇರುದ್ರಸ್ವಾಮಿ, ಮದ್ದಾನಸ್ವಾಮಿ, ಕೋಲುಶಾಂತೇಶ ಕೆಂಪಯ್ಯ, ನಿಂಬಕ್ಕ, ಗೋಣಿ ಬಸವೇಶ್ವರ ಮುಂತಾದ ಪವಾಡಪುರುಷರ ಉಬ್ಬುಶಿಲ್ಪಗಳು ಕೆತ್ತನೆ ಮಾಡಿರುವುದು ವೈಶಿಷ್ಟ್ಯವಾಗಿದೆ.

**ಶ್ರೀ ಶಂಕರಾಚಾರ್ಯ ಅವರ ಕಲಾಕೃತಿಗಳು(ಬಳ್ಳಾರಿ ಜಿಲ್ಲೆ)**

ಹೂವಿನ ಹಡಗಲಿ ತಾಲ್ಲೂಕಿನ ಇಟಗಿ ಗ್ರಾಮದಲ್ಲಿ ಅನೇಕ ದೇವಾಲಯಗಳಿವೆ. ಅವುಗಳಲ್ಲಿ ಕಲ್ಲೇಶ್ವರ ದೇವಸ್ಥಾನವು ಪ್ರಾಚೀನ ವಾಸ್ತುಶಿಲ್ಪದ ಪರಂಪರೆಯಲ್ಲಿದೆ. ಈ ದೇವಾಲಯವು ಊರಿನ ದಕ್ಷಿಣ ಭಾಗದಲ್ಲಿದ್ದು ಗ್ರಾಮದ ಎಲ್ಲಾ ಜನರು ಭಕ್ತಿಪೂರ್ವಕವಾಗಿ ಶಿವರಾತ್ರಿ ಜಾಗರಣೆ, ಸಣ್ಣ ರಥ ಕಲ್ಲಪ್ಪನ ಉಚ್ಚಯ್ಯ ಎಂದು ಬೀದಿಬೀದಿಗಳಲ್ಲಿ ರಥವನ್ನು ಎಳೆದು ವಿಜೃಂಭಣೆಯಾಗಿ ದೇವರ ಆರಾಧನೆ ಮಾಡುತ್ತಾರೆ. ಪ್ರತಿನಿತ್ಯವೂ ಪೂಜೆ ಪುನಸ್ಕಾರಗಳಿಂದ ಕಲ್ಲಿನಾಥನನ್ನು ಆರಾಧಿಸುವುದು ಕಂಡುಬರುತ್ತದೆ. ಇಟಗಿ ಗ್ರಾಮದಲ್ಲಿ ಅತ್ಯಂತ ಪ್ರಾಚೀನವಾದ ಶಿವಲಿಂಗವಿದೆ. ಈ ಲಿಂಗಕ್ಕೆ ಭಕ್ತರು ಬೆಳ್ಳಿಯ ಮುಖವಾಡ ಮತ್ತು ಪಣಿನಾಗಾಭರಣವನ್ನು ಲೋಹಶಿಲ್ಪಿಯಾದ ಶಂಕರಾಚಾರ್ಯರು ಅತ್ಯಂತ ಸುಂದರವಾಗಿ ನಿರ್ಮಿಸಿದ್ದಾರೆ. ಸುಮಾರು ೬ ಇಂಚು ಎತ್ತರದಲ್ಲಿ ಲಿಂಗದ ಸುತ್ತಲೂ ನಾಗರಹಾವಿನ ಸುತ್ತಿದ ಅಚ್ಚು ಕಂಡುಬರುತ್ತದೆ. ಅದರ ಮೇಲೆ ಶಿವನ ಕೊರಳು ಮೇಲ್ಮುಖ ಮತ್ತು ಮೀಸೆಗಳು ಕೆತ್ತಲ್ಪಟ್ಟಿದೆ.

ಎರಡು ಕಿವಿಯ ಹಿಂದಿನ ಭಾಗದಲ್ಲಿ ಆಲಂಕಾರಿಕ ನಕ್ಷೆಯಿಂದ ಸುಳುವಿನ ರೂಪದಲ್ಲಿ ಬೆಳ್ಳಿಯ ತಗಡಿನಿಂದ ಉಬ್ಬುಶಿಲ್ಪ ರಚನೆಯಾಗಿದೆ. ಕಲ್ಲೇಶ್ವರನ ನೇತ್ರಗಳು ಪೂರ್ಣಪ್ರಮಾಣದಲ್ಲಿ ತೆರೆದಂತೆ ಕಾಣುತ್ತವೆ. ಶಿವನ ಜಟೆಯು ಎಳೆ ಎಳೆಯಾಗಿ ಸುತ್ತಿಕೊಂಡು ಬಿಗಿದು ಕಟ್ಟಿದಂತಿದೆ. ಜಟೆಯ ಮುಕುಟದ ಮಧ್ಯಭಾಗದಲ್ಲಿ ರುದ್ರಾಕ್ಷಿ ಸುತ್ತಿದ ಸರವನ್ನು ಬೆಳ್ಳಿಯಿಂದಲೇ ನಿರ್ಮಿಸಿದ್ದಾರೆ. ಜಟೆಯ ಊರ್ಧ್ವಭಾಗದಲ್ಲಿ ಗಂಗೆಯು ಶಿವನ ಜಟೆಯಿಂದ ಹೊರಚಿಮ್ಮಿ ಹರಿಯುವಂತೆ ಬೆಳ್ಳಿಯ ಪಟ್ಟಿಯಿಂದ ನಿರ್ಮಿತವಾಗಿದೆ. ಶಿವನ ಕೊರಳಿಗೆ ಸುತ್ತಿದ ನಾಗರಾಜನು ಹಿಂಬದಿಯಿಂದ ಎಡೆಯನ್ನು ಬಿಚ್ಚಿ ೭ ಎಡೆಯ ಸರ್ಪಭೂಷಣನಂತೆ ಗೋಚರವಾಗುವ ಹಾಗೆ ಸುಂದರವಾದ ಕೆತ್ತನೆ ಕಂಡುಬರುತ್ತದೆ. ಏಳು ಎಡೆಗಳ ಮೇಲೆ ಪ್ರತ್ಯೇಕವಾಗಿ ಒಂದೊಂದು ಕಲಶಮಣಿಗಳಂತೆ ಬೆಳ್ಳಿ ಆಕೃತಿಗಳನ್ನು ನಿರ್ಮಿಸಲಾಗಿದೆ. ಕಲ್ಲಪ್ಪನ (ಲಿಂಗು) ಮೇಲೆ ಬೆಳ್ಳಿಯ ಮುಖವಾಡವನ್ನು ಹಾಕಿ ಪೂಜೆ ಮಾಡಲಾಗುತ್ತದೆ. ಈ ದೃಶ್ಯವು ಶಂಕರಾಚಾರ್ಯರ ಲೋಹ ಶಿಲ್ಪಕಲೆಯ ನೈಪುಣ್ಯಕ್ಕೆ ಸಾಕ್ಷಿ ಎನ್ನುವಂತಿದೆ. ಬೆಳ್ಳಿಯ ತಗಡಿನಿಂದ ಒಳಗಡೆ ಟೊಳ್ಳಾಗಿ(ಪೊಳ್ಳು) ಇರುವಂತೆ ಬೆಳ್ಳಿಯ ಕವಚವನ್ನು ಸುಂದರ ಮತ್ತು ಆಕರ್ಷಣೀಯವಾಗಿ ರಚಿಸಿಕೊಟ್ಟು ದೇವರ ಹಾಗೂ ಭಕ್ತರ ಪ್ರೀತಿಗೆ ಶಿಲ್ಪಿಗಳು ಪಾತ್ರರಾಗಿದ್ದಾರೆ.

೧. **ಮೃತಿಕೆ(ಮಣ್ಣು) ಗಣೇಶನ ವಿಗ್ರಹ:** ಬಾವಿಹಳ್ಳಿ ಶಂಕರಾಚಾರ್ಯರು ಮಣ್ಣಿನಿಂದ ಗಣಪತಿ ತಯಾರಿಸುವುದಲ್ಲಿ ಅತ್ಯಂತ ಹೆಸರು ಮಾಡಿದ ಶಿಲ್ಪಿಗಳಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ತುಂಬಾ ಇವರು ಮಾಡಿದ ಗಣಪತಿಗಳು ಪ್ರಸಿದ್ಧಿ ಪಡೆದಿವೆ. ಸುಮಾರು ಐದು ಫೂಟ್

ಎತ್ತರದಿಂದ ಹಿಡಿದು ೧೨ ಫೂಟ್ ಎತ್ತರಗಳವರೆಗೆ ಅನೇಕ ಗಣಪತಿಗಳನ್ನು ನಿರ್ಮಿಸಿದ್ದಾರೆ. ಬಾವಿಹಳ್ಳಿ ಗಣಪತಿಗಳೆಂದೇ ಪ್ರಸಿದ್ಧಿಯಾದ ಮಣ್ಣಿನ ಮೂರ್ತಿಗಳು ಗಣೇಶನ ಹಬ್ಬದಲ್ಲಿ ಪಟ್ಟಣದ ಅನೇಕ ಬೀದಿ ಬೀದಿಗಳಲ್ಲಿ ಪೂಜೆಗೊಳ್ಳುತ್ತವೆ. ಶಂಕರಾಚಾರ್ಯರು ಮೊಟ್ಟಮೊದಲು ಗಣಪತಿ ಮಾಡುವುದರಿಂದಲೇ ಶಿಲ್ಪಿ ಎಂದು ಪ್ರಸಿದ್ಧಿ ಪಡೆದರು. ಬಳ್ಳಾರಿ ಜಿಲ್ಲೆಯ ಹಂಪಿಯಲ್ಲಿರುವ ಬೃಹದಾಕಾರದ ಉಗ್ರ ನರಸಿಂಹ(ಯೋಗ ನರಸಿಂಹ) ರೂಪಿಯ ಪ್ರತಿರೂಪದಂತೆ ಕಾಣುವ ಗಣೇಶನನ್ನು ಸುಮಾರು ೧೦ ಅಡಿ ಎತ್ತರದಲ್ಲಿ ನಿರ್ಮಿಸಿದ್ದಾರೆ. ಗಣೇಶನಿಗೆ ನಾಗಪೀಠವನ್ನು ರಚಿಸಿ ಅದರ ಹಿಂಬದಿಯಲ್ಲಿ ೭ ಹೆಡೆಗಳಿಂದ ನಾಗರಾಜನು ಕಿರೀಟದ ಹಿಂಬದಿಯಲ್ಲಿ ನಿರ್ಮಿಸಲ್ಪಟ್ಟಿದ್ದಾನೆ. ನರಸಿಂಹ ರೂಪಿಯಾದ ಗಣೇಶನ ಹಿಂಬದಿಯಲ್ಲಿ ಪ್ರಭಾವಳಿ ಸಂರಚನೆಯಾಗಿದೆ. ಎಡಬಲ ಬದಿಗಳಲ್ಲಿ ಸ್ತಂಭಗಳಂತಿದ್ದು ಅದರ ಮೇಲೆ ಮಕರತೋರಣ ಕಂಡುಬರುತ್ತದೆ.

ಕಿರೀಟದ ಮೇಲೆ ಪ್ರಭಾವಳಿಯ ಮಧ್ಯಭಾಗದಲ್ಲಿ ಕೀರ್ತಿಮುಖ ರಚನೆಗೊಂಡಿದೆ. ಯೋಗನರಸಿಂಹನ ರೂಪದಲ್ಲಿ ಗಣೇಶನು ಕುಳಿತಿದ್ದು ಎರಡು ಪಾದಗಳು ಮೇಲಿವೆ. ಪಾದಗಳಿಗೆ ಕಡಗ ಗೆಜ್ಜೆಗಳಿವೆ. ಎರಡು ಮಂಡೆಗಳಿಗೆ ನೇರವಾಗಿ ಅಡ್ಡಪಟ್ಟಿ ರಚನೆ ಮಾಡಲಾಗಿದೆ. ಬಲ ಹಸ್ತವು ವರದ ಹಸ್ತವಾಗಿದೆ. ಎಡಗೈ ಹಸ್ತವು ಯೋಗಾಸ್ತದಿಂದ ಕೂಡಿದೆ. ಹಿಂಬದಿ ಬಲಗೈಯಲ್ಲಿ ಚಕ್ರ ಧರಿಸಿದ್ದಾನೆ, ಹಾಗೆಯೇ ಹಿಂಬದಿಯ ಎಡ ಕೈಯಲ್ಲಿ ಶಂಖಧಾರಣೆಯಿದೆ. ಗಣೇಶನ ಬುಜದಿಂದ ಕೆಳಗಿನವರೆಗೆ ಯಜ್ಞೋಪವೀತ ಧಾರಣೆಯಿದೆ. ನಾಲ್ಕು ಕೈಗಳಲ್ಲಿ ಮುಂಗೈ ಕಡಗಗಳಿವೆ. ಕೊರಳಿಗೆ ಎರಡು ಪಟ್ಟಿಯ ಹಾರಗಳು ಕಂಡುಬರುತ್ತವೆ. ಉಗ್ರನರಸಿಂಹನ ಕೇಶಗಳು ಕುತ್ತಿಗೆ ಸುತ್ತಲೂ ಕೆತ್ತಲ್ಪಟ್ಟಿವೆ. ಕಿವಿಗಳು ದೊಡ್ಡದಾಗಿ ಆನೆಕಿವಿಯಂತಿದ್ದು ಕಣ್ಣುಗಳು ಉಗ್ರಸ್ವರೂಪಿಯಾದ ನರಸಿಂಹನಂತೆ ಕಂಡುಬರುತ್ತದೆ. ಗಣೇಶನ ಸೊಂಡಿಲು ಮುಖದಿಂದ ಆರಂಭವಾಗಿ ಕೆಳಗೆ ಭಾಗಿ ಎಡಬದಿಗೆ ವಾಲಿ ನಿಂತಿದೆ. ನರಸಿಂಹರೂಪಿ ಗಣೇಶನ ಹಣೆಯಲ್ಲಿ ನಾಮವನ್ನು ಸುಂದರವಾಗಿ ರಚಿಸಲಾಗಿದೆ. ತಲೆಯ ಮೇಲಿನ ಕಿರೀಟವು ತಿರುಪತಿ ವೆಂಕಟರಮಣನ ಕಿರೀಟದಂತೆ ಕಂಡುಬರುತ್ತದೆ. ಮಣ್ಣಿನಿಂದ ತಯಾರಿಸಲ್ಪಟ್ಟ ಈ ಗಣೇಶನು ಹಂಪೆಯ ಉಗ್ರನರಸಿಂಹನೇನೋ ಎನ್ನುವಂತೆ ಕಂಡುಬರುತ್ತದೆ. ಈ ವಿಗ್ರಹ ವಿಜಯನಗರ ಶೈಲಿಯನ್ನು ಪ್ರತಿಬಿಂಬಿಸುವಂತಿದೆ. ಶಂಕರಾಚಾರ್ಯರ ಶಿಲ್ಪಕಲಾ ನೈಪುಣ್ಯ ಸೂಕ್ಷ್ಮ ರಚನಾವಿನ್ಯಾಸ ವೈಶಿಷ್ಟ್ಯಪೂರ್ಣವಾಗಿದೆ.

೨. **ಬಾವಿಹಳ್ಳಿ ದೇವಸ್ಥಾನದ ಗೋಪುರ(ಗಾರೆಶಿಲ್ಪ):** ಶಿಲ್ಪಕಲಾವಿದ ಶಂಕರಾಚಾರ್ಯರು ಮಣ್ಣು, ಶಿಲೆ, ಲೋಹ ಮತ್ತು ಗಾರೆ ಶಿಲ್ಪದಲ್ಲಿ ಸಿದ್ಧಹಸ್ತರು ಎಂಬುದನ್ನು ತಮ್ಮ ಕಲಾಕೃತಿ ರಚನೆಯೊಂದಿಗೆ ಸಾಬೀತುಪಡಿಸಿದ್ದಾರೆ. ದೇವಸ್ಥಾನದ ಗರ್ಭಗುಡಿಯ ಮೇಲೆ ಗೋಪುರ ನಿರ್ಮಾಣ ಮಾಡುವ ಕಾರ್ಯ ಪ್ರಾಚೀನಕಾಲದಿಂದಲೂ ಕಂಡುಬರುತ್ತದೆ. ಗೋಪುರಗಳಲ್ಲಿ ಉತ್ತರ ಭಾರತ ಶೈಲಿ, ದಕ್ಷಿಣ ಭಾರತ ಶೈಲಿ, ನಾಗರ, ವೇಸರ, ದ್ರಾವಿಡರ ಶೈಲಿಗಳೆಂದು ಬೇರೆ ಬೇರೆ ವಿಧಧ ಗೋಪುರ ನಿರ್ಮಾಣ ಕಂಡುಬರುತ್ತದೆ. ಗೋಪುರ ನಿರ್ಮಾಣ ಕಾರ್ಯದಲ್ಲಿ ದ್ರಾವಿಡ ಶೈಲಿಯ ರಚನೆ ಉತ್ತರ ಕರ್ನಾಟಕದಲ್ಲಿ ಕಂಡುಬರುತ್ತದೆ. ತಮಿಳುನಾಡಿನ ಗೋಪುರ ಶಿಲ್ಪಕಲಾವಿದರು

ಹೆಚ್ಚಾಗಿ ಕರ್ನಾಟಕದ ದೇವಾಲಯ ಗೋಪುರಗಳನ್ನು ನಿರ್ಮಿಸುತ್ತಾರೆ. ಸಾಮಾನ್ಯವಾಗಿ ಗಾರೆಶಿಲ್ಪ ರಚನೆಯಲ್ಲಿ ತಮಿಳುನಾಡಿನ ಶಿಲ್ಪಿಗಳ ಹೆಸರು ಕೇಳಿಬರುತ್ತದೆ. ಶಂಕರಾಚಾರಿಯವರ ಸ್ವಗ್ರಾಮವಾದ ಬಾವಿಹಳ್ಳಿಯಲ್ಲಿ ದೇವಾಲಯದ ಗೋಪುರ ನಿರ್ಮಾಣ ಸ್ವತಃ ಇವರೇ ಮಾಡಿದ್ದು ವೈಶಿಷ್ಟ್ಯವೇ ಸರಿ.

ಸುಮಾರು ೧೯ ಅಡಿ ಎತ್ತರದಲ್ಲಿ ಶೈವಸಂಸ್ಕೃತಿಯ ಗೋಪುರ ನಿರ್ಮಾಣ ಅತ್ಯಂತ ಸುಂದರವಾಗಿ ರಚನೆಯಾಗಿದೆ. ಗೋಪುರದ ಅಧಿಷ್ಠಾನ ಭಾಗದಲ್ಲಿ ನಾಲ್ಕು ಕಂಬಗಳು ನಾಲ್ಕು ಗೋಡೆಗಳಿಗೆ ಆಸರೆಯಂತೆ ನಿಂತಿದ್ದು ನಾಲ್ಕು ಭಾಗದಲ್ಲಿ ಚೌಕಾಕಾರದ ನಿರ್ಮಾಣ ಕಂಡುಬರುತ್ತದೆ. ಅದರ ಮೇಲ್ಭಾಗ ಚಾಚಿದಂತೆ ಹೊರಗೆ ಬಂದು ಸುತ್ತಲೂ ಎರಡು ಪಟ್ಟಿಗಳ ನಡುವೆ ಹೂಗಳು ಎಣೆದಂತಿವೆ. ಗೋಪುರದ ಎದುರು ನೋಟದಲ್ಲಿ ಎಡ ಮತ್ತು ಬಲ ಬದಿಯಲ್ಲಿ ಚಿಕ್ಕ ಕಮಾನುಗಳ ನಿರ್ಮಾಣ ಕಂಡುಬರುತ್ತದೆ. ಇವುಗಳ ಮಧ್ಯಭಾಗದಲ್ಲಿ ದೊಡ್ಡಗಾತ್ರದ ಗೋಪುರದ ಮುಖ್ಯ ಕಮಾನು ಕಾಣುತ್ತದೆ. ಅದರ ಒಳಗಡೆ ಲಿಂಗೋದ್ಭವರಾದ ರೇಣುಕಾಚಾರ್ಯರ ಸಿಮೆಂಟು ಶಿಲ್ಪ ಬಲಗೈಯಲ್ಲಿ ಕಮಂಡಲ ಎಡಗೈಯಲ್ಲಿ ದಂಡವನ್ನು ಹಿಡಿದು ನಿಂತಿರುವುದು ಕಂಡುಬರುತ್ತದೆ. ಇದರ ಮುಂದೆ ಪೀಠಸಮೇತನಾದ ಲಿಂಗ ಸುಂದರವಾಗಿ ರಚಿಸಲ್ಪಟ್ಟಿದೆ. ಮೇಲ್ಚಾವಣಿಯಲ್ಲಿ ಶ್ರೀ ಚಕ್ರದ ಪಾಯದ ಆಕಾರದಂತೆ ಕೋನಗಳು ನಿರ್ಮಿತವಾದ ರೂಪದಲ್ಲಿ ಕಂಡುಬರುತ್ತದೆ. ಅದರ ಮೇಲೆ ನಾಲ್ಕು ಕೋನಗಳಿಗೆ ವಿರಾಜಮಾನವಾಗಿ ಸಿಂಹಗಳು ನಿರ್ಮಿಸಲ್ಪಟ್ಟಿವೆ. ರೇಣುಕಾಚಾರ್ಯರ ಮೇಲ್ಭಾಗದ ಮಧ್ಯದಲ್ಲಿ ಶಂಕರ ಪದ್ಮಾಸಿತನಾಗಿ ಕುಳಿತಂತೆ ರಚನೆಯಾಗಿದೆ. ಚತುರ್ಭುಜನಾದ ಶಂಕರನು ತ್ರಿಶೂಲ, ಡಮರುಗ ಸಮೇತನಾಗಿ ವರದ ಹಸ್ತವನ್ನು ತೋರಿಸುವಂತೆ ಶಿಲ್ಪ ನಿರ್ಮಾಣವಾಗಿದೆ. ಅದರ ಮೇಲ್ಭಾಗದಲ್ಲಿ ಮತ್ತೊಂದು ಚಾವಣಿ ನಿರ್ಮಿತವಾಗಿ ಮಧ್ಯಭಾಗದಲ್ಲಿ ಪದ್ಮನಕ್ಷೆಯಿದೆ.

ಎಡ ಮತ್ತು ಬಲ ಬದಿಯಲ್ಲಿ ನಾಲ್ಕುಕೋನಗಳಿಗೆ ಯಕ್ಷರು ಕುಳಿತುಕೊಂಡು ಎರಡೂ ಕೈಯಿಂದ ಶಂಕವನ್ನು ನಾದ ಮಾಡುವ ಶಿಲ್ಪಗಳು ಅತ್ಯಂತ ಸುಂದರವಾಗಿ ನಿರ್ಮಾಣಗೊಂಡಿವೆ. ಇದರ ಮೇಲ್ಭಾಗದಲ್ಲಿ ಗೋಲಾಕಾರದ ಡೂಮ್ ನಿರ್ಮಾಣಗೊಂಡು ಮೇಲಿಂದ ಕೆಳಗೆ ಅನೇಕ ಪಟ್ಟಿಗಳು ರಚಿತವಾಗಿವೆ. ಇದರ ಮೇಲೆ ಮಧ್ಯಭಾಗದಲ್ಲಿ ಗೋಪುರದ ಕಲಶ ಮತ್ತು ಧ್ವಜ ಸ್ಥಾಪಿಸಲ್ಪಟ್ಟಿದೆ. ಈ ಗೋಪುರ ನಿರ್ಮಾಣದಲ್ಲಿ ಶಿಲ್ಪಿ ಶಂಕರಾಚಾರ್ಯರು ಮತ್ತು ಅವರ ಮಕ್ಕಳಾದ ನಾಗರಾಜ, ದ್ವಾರಕೀಶ, ಮುಂತಾದ ಸಹಾಯಕ ಶಿಲ್ಪಿಗಳು ತಮ್ಮ ತಂದೆಯವರ ಕೈಯಲ್ಲಿ ಸಿಮೆಂಟು ಶಿಲ್ಪದ ರಚನೆಯನ್ನು ಮಾಡಿದ್ದಾರೆ. ಸುಂದರವಾದ ಗೋಪುರಕ್ಕೆ ತಕ್ಕಂತೆ ವರ್ಣರಚನಾವಿನ್ಯಾಸ ವೈಶಿಷ್ಟ್ಯಪೂರ್ಣವಾಗಿದೆ. ಕಡುನೀಲಿ, ತಿಳಿನೀಲಿ, ಕೆಂಪು, ಹಳದಿ, ಕೇಸರಿ. ಹಸಿರು ಮುಂತಾದ ಮಿಶ್ರಬಣ್ಣಗಳನ್ನು ಬಳಸಿಕೊಂಡು ದೇವಾಲಯದ ಗೋಪುರಕ್ಕೆ ಮೆರುಗು ತರುವಂತೆ ಶಿಲ್ಪ ಮತ್ತು ವರ್ಣಕಾರ್ಯ ಪೂರ್ಣಗೊಂಡಿದೆ.

೩. **ದೇವಿಮೂರ್ತಿ(ಹೂವಿನ ಹಡಗಲಿ) ಮಣ್ಣು ಮಾಧ್ಯಮ:** ಹೂವಿನ ಹಡಗಲಿಯ ಗವಿಸಿದ್ಧೇಶ್ವರ ಮಠದಲ್ಲಿ ಅನೇಕ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ. ಅದರಲ್ಲಿ ನವರಾತ್ರಿಯ

ದಸರ ಪ್ರಯುಕ್ತ ೯ ದಿನಗಳ ಪರ್ಯಂತ ದೇವಿ ಮಹಾತ್ಮೆಯ ಪುರಾಣವು ನಡೆಯುತ್ತದೆ. ಈ ಕಾರ್ಯಕ್ರಮಕ್ಕೆ ತಕ್ಕಂತೆಯೇ ಸಿಂಹವಾಹಿನಿಯಾಗಿರುವ ದೇವಿಯ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿ ೯ ದಿನಗಳು ದೇವಿಯ ಪೂಜ ಕೈಂಕರ್ಯಗಳು ನಡೆಯುತ್ತವೆ.

ಬಾವಿಹಳ್ಳಿಯ ಶಂಕರಾಚಾರ್ಯರು ಜಿಗುಟಾದ ಮಣ್ಣಿನಿಂದ ಸುಮಾರು ೬ ಫೂಟ್ ಎತ್ತರದ ನಿಂತ ಭಂಗಿಯಲ್ಲಿರುವ ದೇವಿಯನ್ನು ನಿರ್ಮಿಸುತ್ತಾರೆ. ಈ ಮೂರ್ತಿಯು ಅಷ್ಟ ಭುಜಗಳಿಂದ ಕೂಡಿದ್ದು ಬಲಗೈ ವರದ ಹಸ್ತ, ಅದರ ಹಿಂದಿನ ಕೈಯಲ್ಲಿ ಖಡ್ಗ ಧರಿಸಿ ಮೂರನೇ ಕೈಯಲ್ಲಿ ಕಮಲ ಪದ್ಮ ನಾಲ್ಕನೇ ಕೈಯಲ್ಲಿ ಚಕ್ರಧಾರಿಣಿಯಾಗಿದ್ದಾಳೆ. ಎಡ ಕೈಯಿಂದ ಗದೆಯನ್ನು ಹಿಡಿದು ಕೊಂಡು ಅದರ ಹಿಂದಿನ ಕೈಯಲ್ಲಿ ತ್ರಿಶೂಲ ಧರಿಸಿದ್ದಾಳೆ. ಮೂರು ಮತ್ತು ನಾಲ್ಕನೇ ಕೈಯಲ್ಲಿ ಧನಸ್ಸು ಶಂಖವನ್ನು ಧರಿಸಿರುವುದು ಕಂಡುಬರುತ್ತದೆ. ಬಲಪಾದವನ್ನು ಸ್ವಲ್ಪ ಮುಂದೆ ಇಟ್ಟು ನಿಂತಿರುವ ದೇವಿಯು ಭಕ್ತರನ್ನು ಕಾಪಾಡುವ ತಾಯಿಯಂತೆ ನಿರ್ಮಿಸಿದ್ದಾರೆ. ನೀಲಿವರ್ಣದ ಸೀರೆಯಿಂದ ಅಲಂಕರಣಗೊಂಡಿದ್ದು ಹಳದಿ ಪಟ್ಟಿಯ ದಡಿಯನ್ನು ಹೊಂದಿರುವುದು ಕಂಡುಬರುತ್ತದೆ. ನಡುವಿಗೆ ಒಡ್ಯಾಣದ ಆಭರಣ, ಕೊರಳಲ್ಲಿ ಕೇಯೂರ, ಚೂಡಾಮಣಿ ಹಾರವನ್ನು ಧರಿಸಿದ್ದಾಳೆ. ಎರಡು ಭುಜಗಳಿಗೆ ತೋಳಬಂದಿಗಳನ್ನು ರಚಿಸಿರುವುದು ಕಂಡುಬರುತ್ತದೆ. ಎಂಟು ಕೈಗಳಲ್ಲಿ ಹಸಿರು ಬಳೆ, ಬಂಗಾರದ ಕಡಗಗಳನ್ನು ಧರಿಸಿರುವಂತೆ ನಿರ್ಮಿಸಲಾಗಿದೆ.

ಎರಡು ಕಿವಿಗಳಲ್ಲಿ ಓಲೆಗಳು ತಲೆಯ ಕೇಶಗಳು ಹಿಂಬದಿಯಿಂದ ಕುತ್ತಿಗೆಯ ಎರಡು ಬದಿಗೆ ಇಳಿದಿರುವಂತೆ ಸುಂದರವಾಗಿ ರಚಿಸಲಾಗಿದೆ. ಸುವರ್ಣ ವರ್ಣದ ಕಿರೀಟ ಅದರ ಸುತ್ತಲೂ ಬಂಗಾರದ ಪ್ರಭೆಯಂತೆ ಪ್ರಭಾವಲಯವು ಸುಂದರವಾಗಿ ನಿರ್ಮಿಸಲ್ಪಟ್ಟಿದೆ. ದೇವಿಯ ಹಿಂಬದಿಯಲ್ಲಿ ನಿಂತಿರುವ ಸಿಂಹವು ಕೇಸರಿ ವರ್ಣದಿಂದ ಕಂಗೊಳಿಸುತ್ತಿದೆ. ಇದರ ಬಾಲವು ಸುತ್ತಿದಂತಿದ್ದು, ಮುಖಭಾವವು ಬಾಯಿ ತೆರೆದು ನಾಲಿಗೆ ಚಾಚಿ ಉಗ್ರ ಕಣ್ಣುಗಳಿಂದ ದುಷ್ಟಶಕ್ತಿಗಳನ್ನು ನಾಶಪಡಿಸು ವಂತೆ ಕಂಡುಬರುತ್ತದೆ. ನಾಲ್ಕು ಕಾಲುಗಳಲ್ಲಿ ಮುಂಗಾಲನ್ನು ಚಾಚಿದ್ದು ಸಿಂಹದ ಉಗ್ರ ಸ್ವರೂಪ ವನ್ನು ಶಿಲ್ಪಿ ಶಂಕರಾಚಾರ್ಯರು ಸಮಗ್ರವಾಗಿ ಈ ಶಿಲ್ಪದಲ್ಲಿ ಬಿಂಬಿಸಿದ್ದಾರೆ. ಆದರೆ ಮಾತೆ ದೇವಿಯ ಮುಖ ಭಾವದಲ್ಲಿ ಮಂದಹಾಸ ಭಕ್ತರ ರಕ್ಷಣೆ ಮತ್ತು ದುಷ್ಟರ ನಿಗ್ರಹದ ಭಾವನಾತ್ಮಕ ವಿಗ್ರಹವನ್ನು ಶಂಕರಾಚಾರ್ಯರು ನಿರ್ಮಿಸಿದ್ದಾರೆ. ಈ ಕಲಾಕೃತಿಯಲ್ಲಿ ರಚನೆ ಹಾಗೂ ವರ್ಣಗಾರಿಕೆ ತಂತ್ರಗಳು ಸೇರಿ ಪ್ರಮಾಣಬದ್ಧ ಹಾಗೂ ನವರಸಗಳ ಭಾವಬಿಂಬವು ಒಟ್ಟಿಗೆ ಸೇರಿ ಈ ಕಲಾಕೃತಿಯು ದೈವಕಳೆಯನ್ನು ಹೊರಸೂಸುವಂತೆ ನಿರ್ಮಿತವಾಗಿದೆ.

ಒಂಬತ್ತು ದಿನಗಳು ಶರನ್ನವರಾತ್ರಿಯ ದೇವಿ ಪುರಾಣವು ಮಹಾಮಂಗಲವಾದ ಮೇಲೆ ಈ ಮೂರ್ತಿಯನ್ನು ವಿಜಯದಶಮಿಯ ಮರವಣಿಗೆಯೊಂದಿಗೆ ಊರ ಪ್ರಮುಖ ಬೀದಿಗಳಲ್ಲಿ ಸಂಚರಿಸಿ ಉತ್ಸವ ಆಚರಿಸುವುದರ ಮೂಲಕ ಕೊನೆಗೆ ತುಂಗಭದ್ರಾ ನದಿಯಲ್ಲಿ ಪೂಜೆ ನೈವೇದ್ಯಗಳನ್ನು ಮಾಡುವುದರ ಮೂಲಕ ಅಮ್ಮನನ್ನು ಪ್ರಾರ್ಥಿಸಿ ಬೀಳ್ಕೊಡುತ್ತಾರೆ. ಶಂಕರಾಚಾರ್ಯ ಶಿಲ್ಪಿಗಳು ಇಂತಹ ದೇವತಾಕಾರ್ಯಗಳ ವಿಗ್ರಹ ತಯಾರಿಕೆ ಮಾಡುವುದರಲ್ಲಿ ಸಿದ್ಧಹಸ್ತರೆಂಬುದನ್ನು

ತಮ್ಮ ಕಲಾಕೃತಿ ರಚನೆಯ ಮೂಲಕವೇ ತೋರಿಸಿಕೊಟ್ಟಿದ್ದಾರೆ. ಶಿಲ್ಪಿಗಳು ಶಿಲ್ಪಮಾತ್ರವಲ್ಲದೆ ವರ್ಣಲೇಪನ, ವರ್ಣಮಿಶ್ರಣ ಮಾಡುವ ತಂತ್ರಗಾರಿಕೆಯನ್ನು ಕರಗತ ಮಾಡಿಕೊಂಡಿದ್ದಾರೆ. ಚಿತ್ರ, ಶಿಲ್ಪ, ವರ್ಣ ಇವು ಶಂಕರಾಚಾರ್ಯರ ವೈಶಿಷ್ಟ್ಯಪೂರ್ಣ ಅನುಭವವನ್ನು ಪ್ರತಿಬಿಂಬಿಸುತ್ತಿವೆ.

**೪. ಪಾಲಕಿ(ಸಿಂಹ ಮುಖದ) ಬೆಳ್ಳಿಯ ಕವಚ:** ಹೂವಿನ ಹಡಗಲಿ ತಾಲ್ಲೂಕು ಹೊಳಗುಂದಿ ಗ್ರಾಮದ ಸಿದ್ಧಲಿಂಗೇಶ್ವರ ದೇವರು ಬೆಟ್ಟದ ತುದಿಯಲ್ಲಿದೆ. ಕೆಳಗಡೆ ಪೂರ್ವಕ್ಕೆ ಹೊಳಗುಂದಿ ಗ್ರಾಮ ಸಿದ್ಧಲಿಂಗೇಶ್ವರ ದೇವರನ್ನು ಆರಾಧ್ಯ ದೈವವಾಗಿ ಪೂಜಿಸುತ್ತಾರೆ. ಅಲ್ಲದೇ ಪ್ರತಿ ವರ್ಷ ಜಾತ್ರೆ, ರಥೋತ್ಸವವು ನಡೆಯುತ್ತದೆ. ಶ್ರಾವಣ ಮಾಸದಲ್ಲಿ ಸಿದ್ಧಲಿಂಗೇಶ್ವರ ದೇವರ ಉತ್ಸವಮೂರ್ತಿಯನ್ನು ಪಾಲಕಿಯಲ್ಲಿ ಇರಿಸಿಕೊಂಡು ಭಕ್ತರು ಹೆಗಲನಿಂದ ಹೊತ್ತುಕೊಂಡು ಡೊಳ್ಳು ಶಹನಾಯಿ ಮೆರವಣಿಗೆಯೊಂದಿಗೆ ಊರಿನ ಪ್ರಮುಖ ಬೀದಿಗಳಲ್ಲಿ ಸುತ್ತಾಡಿ ಭಕ್ತರ ಮನೆ ಮುಂದೆ ಭಕ್ತಿ ಸೇವೆಯನ್ನು ಸ್ವೀಕರಿಸುತ್ತಾ ಗ್ರಾಮದ ಬೇರೆ ಬೇರೆ ದೇವಾಲಯಗಳಿಗೆ ಹೊತ್ತು ಸಾಗಿ ಕಾಯಿ ಕರ್ಪೂರಗಳನ್ನು ಸಮರ್ಪಿಸುವುದರೊಂದಿಗೆ ಪಾಲಕಿ ಸೇವೆಯ ಕಾರ್ಯಕ್ರಮ ನಡೆಯುತ್ತದೆ. ಇಂತಹ ಪಾಲಕಿಗಳನ್ನು ಹಗುರವಾದ, ಉತ್ತಮ ಗುಣಮಟ್ಟದ ಮರಗಳಿಂದ ನಿರ್ಮಿಸಿರುತ್ತಾರೆ. ಪಾಲಕಿಯ ಮೇಲೆ ಬಿದಿರು ಬೊಂಬಿನ ಅರ್ಧವೃತ್ತಾಕಾರದ ಮುಂದೆ ಹಿಂದೆ ಜನರು ಹೊತ್ತುಕೊಳ್ಳಲು ಬಿದುರು ಬೊಂಬು ಪೂರಕವಾಗಿರುತ್ತದೆ.

ಪಾಲಕಿಯ ಬಿದಿರು ಬೊಂಬಿಗೆ ಬೊಂಬು ಕಾಣದಂತೆ ಕೆಂಪು ಬಣ್ಣದ ಬಟ್ಟೆಯನ್ನು ಸುತ್ತಿರುತ್ತಾರೆ. ದೇವರು ಪಾಲಕಿಯಲ್ಲಿದ್ದರೆ ಬೊಂಬಿನ ಮಧ್ಯಭಾಗದಲ್ಲಿ ಬೆಳ್ಳಿಯ ಕಳಶವನ್ನು ಕಟ್ಟಿರುತ್ತಾರೆ. ಬೊಂಬಿನ ಮುಂದಿನ ಹಾಗೂ ಹಿಂದಿನ ಮುಖಕ್ಕೆ ಬೆಳ್ಳಿಯ ಕವಚವನ್ನು ತೊಡಿಸುವ ಸಂಪ್ರದಾಯವಿದೆ. ಅಂತಹ ಪಾಲಕಿ ಬೊಂಬಿನ ಮುಂದಿರುವ ಸಿಂಹ ಮುಖದ ಕವಚವನ್ನು ಬೆಳ್ಳಿಯ ತಗಡಿನಿಂದ ಶಿಲ್ಪಿ ಶಂಕರಾಚಾರ್ಯರು ನಿರ್ಮಿಸಿದ್ದಾರೆ. ಎರಡು ಕಾಲುಗಳು ಮಾತ್ರ ಮುಂದೆ ಚಾಚಿದಂತೆ ನಿರ್ಮಿಸಿದ್ದಾರೆ. ಸಿಂಹದ ಮುಖವು ಬಾಯಿ ತೆಗೆದು ನಾಲಿಗೆ ಹೊರಗೆ ಚಾಚಿದಂತೆ ರಚಿಸಿ ನಾಲಿಗೆಯಿಂದಲೇ ವಿಕಿರಣ ನಕ್ಷೆಗಳನ್ನು ರಚಿಸಿದ್ದಾರೆ. ಎರಡು ಕಣ್ಣುಗಳು ನೇರವಾಗಿ ದೃಷ್ಟಿ ಬೀಳುವಂತೆ ಕಾಣುತ್ತವೆ. ಸಿಂಹದ ಕಿವಿ ಹಾಗೂ ಬಾಯಿ ಒಳಗಡೆ ಮತ್ತು ಕೆಲವು ಭಾಗದಲ್ಲಿ ಕೆಂಪು ವರ್ಣವನ್ನು ಲೇಪಿಸಲಾಗಿದೆ. ಸಿಂಹದ ಬೆಳ್ಳಿ ಕವಚವು ಸುಮಾರು ಫೂಟ್ ಅಳತೆಯಲ್ಲಿ ರಚನೆಯಾಗಿದೆ. ಸಿಂಹದ ಮುಖದ ಸುತ್ತಲೂ ಕೇಶರಾಶಿಗಳು ಹರಡಿಕೊಂಡಂತೆ ಬೆಳ್ಳಿಯ ಪದರು ರೂಪದಲ್ಲಿ ಕೇಶ ವಿನ್ಯಾಸಗಳು ರಚನೆಗೊಂಡಿವೆ. ಪಾಲಕಿಯ ಬೆಳ್ಳಿ ಕವಚವು ಗಾತ್ರಕ್ಕೆ ತಕ್ಕಂತೆ ಪ್ರಮಾಣಬದ್ಧವಾಗಿ ರಚಿಸಿರುವುದು ಶಿಲ್ಪಕಲಾವಿದರ ನೈಪುಣ್ಯವಾಗಿದೆ.

**೫. ಬೆಳ್ಳಿ ಕವಚದ ಪೂಜಾ ಮಂಟಪ**

*ಉಳ್ಳವರು ಶಿವಾಲಯವ ಮಾಡುವರು*
*ನಾನೇನು ಮಾಡಲಿ ಬಡವನಯ್ಯ*
*ಕಾಲ್ಗಳೇ ಕಂಬ ದೇಹವೇ ದೇವಾಲಯ*
*ಎನ್ನ ಶಿರವೇ ಹೊನ್ನ ಕಳಸವಯ್ಯ*

ಎಂದು ಬಸವೇಶ್ವರರು ತಮ್ಮ ವಚನಸಾಹಿತ್ಯದಲ್ಲಿ ಉಳ್ಳವರ ಭಕ್ತಿಯ ಪರಾಕಾಷ್ಠೆಯನ್ನು ವಚನ ರೂಪದಲ್ಲಿ ತಿಳಿಸಿದ್ದಾರೆ. ಪೂಜಾಮಂದಿರ, ಪೂಜಾಮಂಟಪಗಳು ಉಳ್ಳವರಿಂದ ಬೆಳ್ಳಿ ಬಂಗಾರದ ಲೇಪನದಿಂದ ಸುಮಾರು ಕೆ.ಜಿ. ಬೆಲೆಬಾಳುವ ಆಭರಣ ಲೋಹದ ಕವಚ. ಹೀಗೆ ಅನೇಕ ರೂಪ ದಲ್ಲಿ ತಮ್ಮ ಭಕ್ತಿಯನ್ನು ಪ್ರದರ್ಶಿಸಿದ್ದಾರೆ. ಉತ್ತರ ಕರ್ನಾಟಕದ ಬೆಳಗಾವಿ ಜಿಲ್ಲೆಯ ಭಕ್ತರು ಪೂಜಾಮಂಟಪವನ್ನು ಶಿಲ್ಪಿಗಳಾದ ಶಂಕರಾಚಾರಿಯವರಿಂದ ಮಾಡಿಸಿದ್ದಾರೆ. ನಾಲ್ಕು ಸ್ತಂಭಗಳ ಮಂಟಪ ಮೇಲೆ ನಾಲ್ಕು ಕಳಶಗಳನ್ನು ಹೊದಿದ್ದು, ಮಧ್ಯಭಾಗದಲ್ಲಿ ಗುಮ್ಮಟಾಕಾರದ ಆಕೃತಿಯ ಮೇಲೆ ಮಧ್ಯ ಕಳಶವನ್ನು ಎತ್ತರದಲ್ಲಿ ರಚಿಸಿದ್ದಾರೆ. ಪೂಜಾಮಂಟಪದ ಮುಂಭಾಗದ ಮೇಲೆ ಕುಳಿತ ಗಣೇಶನ ಬೆಳ್ಳಿಯ ಉಬ್ಬುಶಿಲ್ಪವಿದೆ. ಮಂಟಪದ ಮೇಲ್ಭಾಗದ ಸುತ್ತಲೂ ಪುನರಾವರ್ತಿತ ನಕ್ಷೆಗಳನ್ನು ರಚಿಸಿದ್ದಾರೆ. ಮೂಲತಃ ತೇಗದ ಮರದ ಮಂಟಪಕ್ಕೆ ಮೂಲ ಹೊದಿಕೆಯಾಗಿ ಬೆಳ್ಳಿ ಕವಚವನ್ನು ಆಲಂಕಾರಿಕ ನಕ್ಷೆ ಪುನರಾವರ್ತಿತ ನಕ್ಷೆ ಸಮ್ಮಿಶ್ರ ನಕ್ಷೆಗಳೊಂದಿಗೆ ರಚನೆ ಮಾಡಿದ್ದಾರೆ. ಪೂಜಾಮಂಟಪದ ಮುಂದಿನ ಎಡಬಲದ ಸ್ತಂಭಗಳಿಗೆ ಗಿಳಿಯ ಶಿಲ್ಪಗಳನ್ನು ಎದುರು ಬದುರಾಗಿ ಮೇಲಿನ ಕೋನಗಳಿಗೆ ಹೊಂದಿಕೊಳ್ಳುವಂತೆ ರಚನೆ ಮಾಡಿದ್ದಾರೆ. ಅದೇ ಮಗ್ಗುಲ ಪಾರ್ಶ್ವದಲ್ಲಿ ಎರಡು ಕಾಲನ್ನು ಮೇಲೆತ್ತಿ ಹಾರುವಂತೆ ಸಿಂಹಗಳನ್ನು ರಚಿಸಿದ್ದಾರೆ.

ಪೂಜಾಮಂಟಪದ ಮುಂಭಾಗದಲ್ಲಿ ಸಿಂಹ ಮತ್ತು ಗಿಳಿಗಳ ಶಿಲ್ಪಗಳ ಜೋಡಣೆ ಸುಂದರ ಮತ್ತು ಆಕರ್ಷಣೀಯವಾಗಿದೆ. ಪೂಜಾಮಂಟಪದ ನಾಲ್ಕು ಚೌಕಾಕಾರದ ಪಾರ್ಶ್ವನಕ್ಷೆಗಳಿಗೆ ಸ್ಫಟಿಕ ಮಣಿಗಳನ್ನು ಸುತ್ತಲೂ ಗಂಟೆಗಳಂತೆ ಸಾಲಾಗಿ ತೂಗು ಹಾಕಲಾಗಿದೆ. ಬೆಳ್ಳಿಯಿಂದ ನಿರ್ಮಿತವಾದ ಪೂಜಾಮಂಟಪ ನಯವಾದ ಕುಸುರಿ ಕೆಲಸಗಳಿಂದ ಸೂಕ್ಷ್ಮ ಕೆತ್ತನೆಗಳ ಮೂಲಕ ದೇವಾಲಯವೋ ಎಂಬಂತೆ ಕಾಣುತ್ತದೆ. ಮರದಿಂದ ನಿರ್ಮಿತವಾದ ಪೂಜಾಮಂಟಪವು ಒಂದಿಷ್ಟೂ ಮರದ ಭಾಗವು ಕಾಣದಂತೆ ಬೆಳ್ಳಿಯ ತಗಡಿನಿಂದ ಸಂಪೂರ್ಣ ಹೊದಿಸಲ್ಪಟ್ಟಿದ್ದು ಕಲಾವಿದರ ಕೈಚಳಕ ನೋಡುವಂತಿದೆ. ಅನೇಕ ಜೋಡಣೆಗಳು ಬೆಸುಗೆಗಳು ಹಲವಾರು ಬೆಳ್ಳಿಯ ಚಿಕ್ಕಚಿಕ್ಕ ಆಕೃತಿಗಳನ್ನು ಪ್ರತ್ಯೇಕವಾಗಿ ತಯಾರಿಸಿಕೊಂಡು ಮಂಟಪದಲ್ಲಿ ಜೋಡಿಸಲಾಗಿದೆ. ಆದರೆ ಮಂಟಪ ವನ್ನು ನೋಡಿದವರಿಗೆ ಇವುಗಳ ಜೋಡಣೆ ಬೆಸುಗೆ ಯಾವುದೂ ಕಂಡುಬರುವುದಿಲ್ಲ. ಬೆಳ್ಳಿಯ ಲೋಹವನ್ನು ಕರಗಿಸಿ ಎರಕ ಹುಯ್ದಂತೆ ಏಕರೂಪದ ಬೆಳ್ಳಿಮಂಟಪ ಕಂಡುಬರುತ್ತದೆ. ಇದರಲ್ಲಿ ಲೋಹವಿದ್ಯೆಯ ತಂತ್ರಗಾರಿಕೆ ಶಿಲ್ಪಿ ಶಂಕರಾಚಾರಿಯವರ ಚಾಣಾಕ್ಷ ಬುದ್ಧಿ ವಿವೇಕ ಇವರ ಕೆಲಸದಲ್ಲಿ ಕಂಡುಬರುತ್ತದೆ. ಕೆಲವು ಭಾಗದಲ್ಲಿ ಬೆಳ್ಳಿಯ ಮೊಳೆಗಳನ್ನು ತಯಾರಿಸಿಕೊಂಡು ಸಾಧ್ಯವಿದ್ದಲ್ಲಿ ಇವುಗಳ ಬಳಕೆಯನ್ನು ಕೂಡಾ ಸೂಕ್ಷ್ಮಗತಿಯಲ್ಲಿ ಮಾಡಿದ್ದಾರೆ. ಮನೆಯಲ್ಲಿ ಪೂಜಾಕೋಣೆಯ ಗದ್ದುಗೆಯ ಮೇಲೆ ಬೆಳ್ಳಿ ಪೂಜಾಮಂಟಪವನ್ನು ಸ್ಥಾಪಿಸಿ ಅದರೊಳಗೆ ತಮ್ಮ ಇಷ್ಟ ದೇವರುಗಳ ವಿಗ್ರಹಗಳನ್ನು ಸ್ಥಾಪನೆ ಮಾಡಿ ಪೂಜಿಸುತ್ತಾರೆ.

೬. **ವೀರಭದ್ರೇಶ್ವರ ಶಿಲ್ಪ(ಹರಪನಹಳ್ಳಿ):** ಕನ್ನಡನಾಡು ಧಾರ್ಮಿಕ ನೆಲೆಗಳ ಬೀಡು. ಅದರಲ್ಲಿ ಹೈದರಾಬಾದ್ ಕರ್ನಾಟಕ ಭಾಗವು ಶೈವ, ವೈಷ್ಣವ, ಶಾಕ್ತೇಯ ಮುಂತಾದ ಧರ್ಮಗಳಿಂದ ಕೂಡಿದೆ. ಅದರಲ್ಲಿ ಶೈವಧರ್ಮದಲ್ಲಿ ಬರುವ ಶಿವನ ಮಗ ವೀರಭದ್ರದೇವರು ದಕ್ಷನ ಯಜ್ಞವನ್ನು

## ಶ್ರೀ ರಾಜಕುಮಾರ ಪಾಂಚಾಳ ಅವರ ಕಲಾಕೃತಿಗಳು (ಬೀದರ ಜಿಲ್ಲೆ)



೦೧. ದೇವಿಯ ಉಬ್ಬು ಶಿಲ್ಪ (ಮರ ಮಾಧ್ಯಮ)



೦೨. ರೇವಣಸಿದ್ಧೇಶ್ವರರ ಉಬ್ಬು ಶಿಲ್ಪ (ಮರ ಮಾಧ್ಯಮ)

## ಶ್ರೀ ರಾಜಕುಮಾರ ಪಾಂಚಾಳ ಅವರ ಕಲಾಕೃತಿಗಳು (ಬೀದರ ಜಿಲ್ಲೆ)



೦೩. ಚಳಕಾಪುರ ಹನುಮಾನ ಮಂದಿರದ ಬಾಗಿಲ ಮೇಲಿನ ಕಲಾಕೃತಿ (ಮರ ಮಾಧ್ಯಮ)



೦೪. ಬಾಗಿಲ ಹಣೆಪಟ್ಟಿಯ ಉಬ್ಬು ಶಿಲ್ಪ (ಮರ ಮಾಧ್ಯಮ)



೦೫. ಶ್ರೀಗುರು ಸಿದ್ಧಾರೂಢರ ಉಬ್ಬು ಶಿಲ್ಪ (ಮರ ಮಾಧ್ಯಮ)

## ಶ್ರೀ ಮಹಮ್ಮದ ಮೈಜುದ್ದೀನ ಅವರ ಕಲಾಕೃತಿಗಳು (ಬೀದರ ಜಿಲ್ಲೆ)



೦೧. ದೊಡ್ಡ ಹೂದಾನಿ



೦೨. ಸಣ್ಣ ಹೂದಾನಿ



೦೩. ಪಾತ್ರೆ

# ಶ್ರೀ ಮಹಮ್ಮದ ಮೈಜುದ್ದೀನ ಅವರ ಕಲಾಕೃತಿಗಳು (ಬೀದರ ಜಿಲ್ಲೆ)



೦೪. ಗಿಫ್ಟ್ ಬಾಕ್ಸ್





೦೫. ಬಳೆಗಳು

೦೬. ಕಿವಿ ಓಲೆಗಳು









ಶ್ರೀ ಮಹಮ್ಮದ ಮೈಜುದ್ದೀನ ಅವರ ಕಲಾಕೃತಿಗಳು (ಬೀದರ ಜಿಲ್ಲೆ)



ಸುರಾಯಿ

ಶ್ರೀ ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)



೦೧. ಶ್ರೀ ಶನೈಶ್ಚರ ಸ್ವಾಮಿ (ಶಿಲಾ ಮಾಧ್ಯಮ)



೦೨. ಮಹಿಷಾಸುರ ಮರ್ದಿನಿ (ಶಿಲಾ ಮಾಧ್ಯಮ)

ಶ್ರೀ ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)



೦೩. ಏಕಶಿಲಾ ಸೂರ್ಯರಥ (ಶಿಲಾ ಮಾಧ್ಯಮ)

## ಶ್ರೀ ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)



೦೪. ಲಿಂಗ (ಶಿಲಾ ಮಾಧ್ಯಮ)



೦೫. ಗಣೇಶ (ಶಿಲಾ ಮಾಧ್ಯಮ)

# ಲೋಹಶಿಲ್ಪಿ ಶ್ರೀ ಮಾನಯ್ಯ ಬಡಿಗೇರ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)



೦೧. ಪ್ರತಿಷ್ಠಾಪಿತ ನೂತನ ವಿಗ್ರಹಗಳ ಸಮೂಹ ಮಂಟಪ

## ಲೋಹಶಿಲ್ಪಿ ಶ್ರೀ ಮಾನಯ್ಯ ಬಡಿಗೇರ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)

ಪ್ರತಿಷ್ಠಾಪಿತ ನೂತನ ವಿಗ್ರಹಗಳ ಸಮೂಹ ಮಂಟಪದಲ್ಲಿನ ಪಂಚಬ್ರಹ್ಮ ವಿಗ್ರಹಗಳು



ಸದ್ಯೋಜಾತ



ವಾಮನ



ಅಘೋರ



ತತ್ಪುರುಷ



ಈಶಾನ

# ಲೋಹಶಿಲ್ಪಿ ಶ್ರೀ ಮಾನಯ್ಯ ಬಡಿಗೇರ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)

ಪ್ರತಿಷ್ಠಾಪಿತ ನೂತನ ವಿಗ್ರಹಗಳ ಸಮೂಹ ಮಂಟಪದಲ್ಲಿನ ಪಂಚರ್ಷಿ ವಿಗ್ರಹಗಳು



ಸಾನಗ



ಸನಾತನ



ಅಹಭೂನ



ಪ್ರತ್ನ



ಸುಪರ್ಣ

# ಲೋಹಶಿಲ್ಪಿ ಶ್ರೀ ಮಾನಯ್ಯ ಬಡಿಗೇರ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)

ಪ್ರತಿಷ್ಠಾಪಿತ ನೂತನ ವಿಗ್ರಹಗಳ ಸಮೂಹ ಮಂಟಪದಲ್ಲಿನ ವಿಗ್ರಹಗಳು



ವೀರಭದ್ರ



ಕಾಳಿಕಾ ದೇವಿ



ತಿಂತಿಣಿ ಮೌನೇಶ್ವರ

## ಲೋಹಶಿಲ್ಪಿ ಶ್ರೀ ಮಾನಯ್ಯ ಬಡಿಗೇರ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)

ಪ್ರತಿಷ್ಠಾಪಿತ ನೂತನ ವಿಗ್ರಹಗಳ ಸಮೂಹ ಮಂಟಪದಲ್ಲಿನ ವಿಗ್ರಹಗಳು

ಮಲ್ಲಯ್ಯ



ಹಾವಿನಾಳ ಕಲ್ಲಪ್ಪಯ್ಯನವರು

## ಲೋಹಶಿಲ್ಪಿ ಶ್ರೀ ಮಾನಯ್ಯ ಬಡಿಗೇರ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)



ಶಿವ ಮತ್ತು ನಂದಿ



ಮಹಾತ್ಮ ಗಾಂಧೀ

ಲೋಹಶಿಲ್ಪಿ ಶ್ರೀ ಮಾನಯ್ಯ ಬಡಿಗೇರ ಅವರ ಕಲಾಕೃತಿಗಳು (ಕಲಬುರ್ಗಿ ಜಿಲ್ಲೆ)



ಶಿವ-ಪಾರ್ವತಿ ಮತ್ತು ನಂದಿ (ಕಲಾಕೃತಿಯ ಪೂರ್ವಭಾವಿ ಮೇಣದ ಶಿಲ್ಪ)

## ಕಲಾವಿದ ಭೀಮಣ್ಣ ಮೋನಪ್ಪ ಕಂಬಾರ ಅವರ ಕಲಾಕೃತಿಗಳು (ಯಾದಗಿರಿ ಜಿಲ್ಲೆ)



ನಂದಿಯ ಮೇಲೆ ಆಸೀನರಾದ ಶಿವಪಾರ್ವತಿ ಲೋಹಶಿಲ್ಪ



ಆಂಜನೇಯನ ಲೋಹಶಿಲ್ಪ

# ಕಲಾವಿದ ಭೀಮಣ್ಣ ಮೋನಪ್ಪ ಕಂಬಾರ ಅವರ ಕಲಾಕೃತಿಗಳು (ಯಾದಗಿರಿ ಜಿಲ್ಲೆ)



ಆನೆಯ ದುಂಡು ಶಿಲ್ಪ (ಲೋಹ ಮಾಧ್ಯಮ)



ಸಿದ್ದೇಶ್ವರ ವಿಗ್ರಹ (ಲೋಹ ಶಿಲ್ಪ)



ದೀಪ ಬೆಳಗುವ ಬಾಲಿಕೆ ಶಿಲ್ಪಗಳು (ಕಂಚು-ಲೋಹ ಮಾಧ್ಯಮ)

# ಬಸಣ್ಣ ಮೋನಪ್ಪ ಬಡಿಗೇರ ಅವರ ಕಲಾಕೃತಿಗಳು (ಯಾದಗಿರಿ ಜಿಲ್ಲೆ)



ದ್ಯಾಮವ್ವನ ಮರಶಿಲ್ಪ



ಕುದುರೆ (ಮರಶಿಲ್ಪ)



ಮನೆಯ ಕಂಭ, ತೊಲೆ, ಬೋದುಗಳಲ್ಲಿ ಉಬ್ಬುಶಿಲ್ಪ

## ಬಸಣ್ಣ ಮೋನಪ್ಪ ಬಡಿಗೇರ ಅವರ ಕಲಾಕೃತಿಗಳು (ಯಾದಗಿರಿ ಜಿಲ್ಲೆ)



ಗ್ರಾಮದೇವತೆಯ ಮುಖ (ಮರ ಮಾಧ್ಯಮ)



ಬಾಗಿಲಿನ ಉಬ್ಬುಶಿಲ್ಪ

# ಪಂಪಣ್ಣ ಆಚಾರಿ ಅವರ ಕಲಾಕೃತಿಗಳು (ರಾಯಚೂರು ಜಿಲ್ಲೆ)



ಬಸವಣ್ಣ ಮೂರ್ತಿ ಶಿಲ್ಪ



ರಾಘವೇಂದ್ರ ಸ್ವಾಮಿಗಳ ಶಿಲಾಶಿಲ್ಪ



ಗಣೇಶನ ಶಿಲಾಶಿಲ್ಪ

# ಪಂಪಣ್ಣ ಆಚಾರಿ ಅವರ ಕಲಾಕೃತಿಗಳು (ರಾಯಚೂರು ಜಿಲ್ಲೆ)



ತಾಯಿ ಮತ್ತು ಮಗು (ಸಿಮೆಂಟ್ ಕಲಾಕೃತಿ)



ಕನಕದಾಸ (ಸಿಮೆಂಟ್ ಕಲಾಕೃತಿ)



ವೆಂಕಟೇಶ್ವರನ ಶಿಲಾಶಿಲ್ಪ



ನಾಗಶಿಲ್ಪ

## ಲೋಹಶಿಲ್ಪಿ ಸಿದ್ಧಲಿಂಗ ಆಚಾರಿ ಅವರ ಕಲಾಕೃತಿಗಳು (ರಾಯಚೂರು ಜಿಲ್ಲೆ)



ನಾಗಶಿಲ್ಪ ಮತ್ತು ಪ್ರಭಾವಳಿ



ಶಿವನ ಲೋಹ ಶಿಲ್ಪ



ಹಂಸ ಪಕ್ಷಿಯ ಉಬ್ಬು ಲೋಹಶಿಲ್ಪ

## ಲೋಹಶಿಲ್ಪಿ ಸಿದ್ಧಲಿಂಗ ಆಚಾರಿ ಅವರ ಕಲಾಕೃತಿಗಳು (ರಾಯಚೂರು ಜಿಲ್ಲೆ)



ಓಂ ಸಂಕೇತದ ಉಬ್ಬುಶಿಲ್ಪ



ಪಂಚಲೋಹದ ಗಣೇಶ



ಸ್ತ್ರೀ ಮುಖದ ಲೋಹ ವಿಗ್ರಹ

## ಮರಶಿಲ್ಪಿ ಶ್ರೀ ನಾರಾಯಣಪ್ಪ ಅವರ ಕಲಾಕೃತಿಗಳು (ಕೊಪ್ಪಳ ಜಿಲ್ಲೆ)



ಆಂಜನೇಯ



ಮಹಾಮ್ಮಾಯಿ ದೇವಿ ಮೂರ್ತಿ

# ಮರಶಿಲ್ಪಿ ಶ್ರೀ ನಾರಾಯಣಪ್ಪ ಅವರ ಕಲಾಕೃತಿಗಳು (ಕೊಪ್ಪಳ ಜಿಲ್ಲೆ)



ಗರುಡ ಸ್ವಾಮಿಯ ಮರಶಿಲ್ಪ



ಆಂಜನೇಯನ ಮರಶಿಲ್ಪ



ಹಂಸ ಪಕ್ಷಿಯ ಶಿಲ್ಪ

## ರಥಶಿಲ್ಪಿ ಶ್ರೀ ಮಲ್ಲಪ್ಪ ಬಡಿಗೇರ ಅವರ ಕಲಾಕೃತಿಗಳು (ಕೊಪ್ಪಳ ಜಿಲ್ಲೆ)



ಗಣೇಶನ ದುಂಡು ಶಿಲ್ಪ



ಗಡ್ಡೇ ತೇರು (ಮರಮಾಧ್ಯಮ)

# ರಥಶಿಲ್ಪಿ ಶ್ರೀ ಮಲ್ಲಪ್ಪ ಬಡಿಗೇರ ಅವರ ಕಲಾಕೃತಿಗಳು (ಕೊಪ್ಪಳ ಜಿಲ್ಲೆ)



ರಥಶಿಲ್ಪ (ಮರಮಾಧ್ಯಮ)



ಐದು ಅಂತಸ್ತಿನ ಗಡ್ಡಿರಥ

# ಶ್ರೀ ಹಂಸಾನಂದಚಾರ್ಯರವರ ಕಲಾಕೃತಿಗಳು (ಬಳ್ಳಾರಿ ಜಿಲ್ಲೆ)



ಬೆಳ್ಳಿ ರಥಶಿಲ್ಪ



ಪಂಚಕಳಶ

# ಶ್ರೀ ಹಂಸಾನಂದಚಾರ್ಯರವರ ಕಲಾಕೃತಿಗಳು (ಬಳ್ಳಾರಿ ಜಿಲ್ಲೆ)



ಶ್ರೀ ಆಂಜನೇಯಸ್ವಾಮಿ ರಥ (ಇಟ್ಟಿಗಿ ಗ್ರಾಮ) (ಮರಮಾಧ್ಯಮ)



ಕೊಟ್ಟೂರೇಶ್ವರನ ಮರದ ರಥ



ವೀರಭದ್ರ



# ಶ್ರೀ ಶಂಕರಾಚಾರ್ಯರವರ ಕಲಾಕೃತಿಗಳು (ಬಳ್ಳಾರಿ ಜಿಲ್ಲೆ)



ಮೃತ್ತಿಕೆ (ಮಣ್ಣ) ಗಣೇಶನ ವಿಗ್ರಹ



ಬಾವಿಹಳ್ಳಿ ದೇವಸ್ಥಾನದ ಗೋಪುರ (ಗಾರೆಶಿಲ್ಪ)



ದೇವಿ ಮೂರ್ತಿ (ಮಣ್ಣು ಮಾಧ್ಯಮ)

## ಶ್ರೀ ಶಂಕರಾಚಾರ್ಯರವರ ಕಲಾಕೃತಿಗಳು (ಬಳ್ಳಾರಿ ಜಿಲ್ಲೆ)



ಪಾಲಕಿ (ಸಿಂಹ ಮುಖ) ಬೆಳ್ಳಿಯ ಕವಚ



ವೀರಭದ್ರೇಶ್ವರ ಶಿಲ್ಪ



ಬೆಳ್ಳಿ ಕವಚದ ಪೂಜಾ ಮಂಟಪ

ಭಗ್ನಗೊಳಿಸಿ ದುಷ್ಟನಾದ ದಕ್ಷಬ್ರಹ್ಮನ ಶಿರಸ್ಸನ್ನು ಕಡಿದು ಹಾಕುತ್ತಾನೆ. ಕೋಪಾವೇಶದಲ್ಲಿರುವ ವೀರಭದ್ರ ದೇವರನ್ನು ಯಾರಿಂದಲೂ ಶಮನ ಮಾಡಲು ಆಗುವುದಿಲ್ಲ. ಆಗ ದಕ್ಷಬ್ರಹ್ಮನ ಪತ್ನಿಯಾದ ಪ್ರಸುತದೇವಿಯು ಪರಿಪರಿಯಾಗಿ ಶಿವನನ್ನು ಪ್ರಾರ್ಥಿಸಿ ತನ್ನ ಮಾಂಗಲ್ಯ ಭಾಗ್ಯವನ್ನು ಕರುಣಿಸಿ ಎಂದು ಯಾಚಿಸುತ್ತಾಳೆ. ಆಗ ಶಿವನು ಯಜ್ಞದ ಭಾಗವಾಗಿದ್ದ ಟಗರಿನ ತಲೆಯನ್ನು ಕಡಿದು ದಕ್ಷಬ್ರಹ್ಮನಿಗೆ ಜೋಡಿಸಿ ಜೀವದಾನ ಮಾಡುತ್ತಾನೆ. ಅಂದಿನಿಂದ ಶಿವನ ಮಗನಾದ ವೀರಭದ್ರ ದೇವರನ್ನು ಪೂಜಿಸುವುದು ಮತ್ತು ವೀರಭದ್ರ ದೇವರ ಒಡಪು ಮತ್ತು ದೇವರ ಗುಗ್ಗಳ ಮಾಡಿಕೊಂಡು ವೀರಭದ್ರ ದೇವರ ಬೆಳ್ಳಿ, ತಾಮ್ರ, ಹಿತ್ತಾಳೆ, ಬಂಗಾರದ ೯ ಇಂಚು ಅಗಲ ೧೧ ಇಂಚು ಎತ್ತರ ಇರುವ ಆಯತಾಕಾರದಲ್ಲಿ ನಿಂತಿರುವ ವೀರಭದ್ರದೇವರ ಉಬ್ಬುಶಿಲ್ಪವನ್ನು ಹಾಗೂ ದುಂಡುಶಿಲ್ಪವನ್ನು ಎದೆಯ ಮುಂಭಾಗದಲ್ಲಿ ಅಡ್ಡಲಾಗಿ ಧಾರಣೆ ಮಾಡಿಕೊಂಡು ವೀರಗಾಸೆ ಕುಣಿತವನ್ನು ಕುಣಿಯುತ್ತಾ ಸಮಾಳುವಾದನ, ನಂದಿಕೋಲುವಾದನ, ಕೈಯಲ್ಲಿ ಖಡ್ಗ, ಭರ್ಚಿ, ಈಟಿಗಳು ಶಸ್ತ್ರಾಸ್ತ್ರಗಳನ್ನು ಹಿಡಿದುಕೊಂಡು ಕಾಳಗ ಮಾಡುವವರ ಹಾಗೆ ಹಾರಿ ಕುಣಿಯುತ್ತಾ ವೀರಭದ್ರ ದೇವರ ಶಸ್ತ್ರಗಳನ್ನು ಕಪಾಲದಲ್ಲಿ, ನಾಲಿಗೆಯಲ್ಲಿ, ಮುಂಗೈಯಲ್ಲಿ, ಬೆನ್ನಮೇಲೆಯೂ ಚುಚ್ಚಿಕೊಂಡು ವೀರಭದ್ರ ದೇವರ ಆವೇಶವನ್ನು ತೋರಿಸುತ್ತಾ ಅವರ ಒಡಪು ಸ್ಮರಣೆಗಳನ್ನು

*"ಆಹಾಹಾಹಾ ! ರುದ್ರ, ಕರಿವೀರಭದ್ರ! ಶಿವನ ಕೆಂಜಡೆಯಿಂದ ಉದ್ಭವಿಸಿದ ವೀರ!*
*ಗಂಡರ ಗಂಡ ಪುಂಡ ಪ್ರಚಂಡ! ದಕ್ಷನನ್ನು ಸಂಹರಿಸಿದ ನಮ್ಮ ವೀರಭದ್ರ ದೇವರು"*

ಎಂದು ಹೇಳುತ್ತಾ ವೀರಗಾಸೆಯನ್ನು ತೊಟ್ಟಿರುವ ರುದ್ರರು ತಮ್ಮ ಮನೆಯ ದೇವರನ್ನಾಗಿ ಪೂಜಿಸುವುದು ಧರಿಸಿಕೊಂಡು ಕುಣಿಯುವುದು ಪ್ರಾದೇಶಿಕ ಸಂಪ್ರದಾಯವಾಗಿದೆ. ಇಂತಹ ವೀರಗಾಸೆಯಲ್ಲಿ ವೀರಭದ್ರ ದೇವರ ಫಲಕಗಳನ್ನು ಧರಿಸಿಕೊಂಡು ಮದುವೆ ಪೂರ್ವದಲ್ಲಿ, ಗೃಹ ಪ್ರವೇಶದ ಸಂದರ್ಭಗಳಲ್ಲಿ ಸಾಮೂಹಿಕವಾಗಿ ಇಂತಹ ಲೋಹ ಫಲಕಗಳನ್ನು ಧರಿಸಿಕೊಳ್ಳುವುದು ರೂಢಿಯಲ್ಲಿದೆ. ಶಂಕರಾಚಾರ್ಯ ಶಿಲ್ಪಿಯವರು ಬೆಳ್ಳಿಯ ಲೋಹದಿಂದ ವೀರಭದ್ರದೇವರ ಫಲಕವನ್ನು ನಿರ್ಮಿಸಿದ್ದಾರೆ. ಮಧ್ಯೆ ದೇವರ ಸುತ್ತಲೂ ಆಲಂಕಾರಿಕ ನಕ್ಷೆಗಳಿಂದ ಪ್ರಭಾವಳಿ ರಚನೆ ಯಾಗಿದ್ದು, ಮಧ್ಯಭಾಗದಲ್ಲಿ ಕೀರ್ತಿಮುಖವಿದೆ. ಅದರ ಮೇಲ್ಭಾಗದಲ್ಲಿ ಬೆಳ್ಳಿಯ ಛತ್ರ ಕಳಶದಿಂದ ಕೂಡಿದೆ. ಪ್ರಭಾವಳಿಯ ಎಡಬಲ ಬದಿಯಲ್ಲಿ ಧ್ವಜಗಳು ಮತ್ತು ಬಾಣಗಳಂತಹ ಆಕಾರವುಳ್ಳ ಆಲಂಕಾರಿಕ ಪಟ್ಟಿಗಳಿವೆ. ಪ್ರಭಾವಳಿಯ ಎಡಬಲ ಬದಿಯಲ್ಲಿ ವೀರಭದ್ರ ದೇವರ ಮೂರ್ತಿಗಿಂತ ಚಿಕ್ಕವಾದ ದಕ್ಷ ಬ್ರಹ್ಮ ಮತ್ತು ಪ್ರಸೂತ ದೇವಿ ಉಬ್ಬುಶಿಲ್ಪಗಳಿವೆ. ದಕ್ಷಬ್ರಹ್ಮನು ಕೈಮುಗಿದು ನಿಂತು ಕೊಂಡಂತೆ ಇದೆ. ಪ್ರಸುತದೇವಿಯು ಪೂಜಾಸಾಮಗ್ರಿಗಳಿಂದ ವೀರಭದ್ರನನ್ನು ಆರಾಧಿಸುವ ಭಂಗಿಯಲ್ಲಿ ನಿಂತಿದ್ದಾಳೆ. ಮಧ್ಯಭಾಗದಲ್ಲಿರುವ ವೀರಭದ್ರದೇವರು ಸರ್ಪಭೂಷಣನಾಗಿ ಬಲಗೈಯಲ್ಲಿ ಖಡ್ಗ ಧರಿಸಿ, ಹಿಂದಿನ ಕೈಯಲ್ಲಿ ಬಾಣ ಹಿಡಿದುಕೊಂಡಿದ್ದಾನೆ. ಎಡಗೈಯನ್ನು ಕೆಳಗೆ ಮಾಡಿ ಉದ್ದಂಡವನ್ನು ಹಿಡಿದಿದ್ದಾನೆ. ಹಿಂಬದಿಯ ಎಡಗೈಯಲ್ಲಿ ಧನುಸ್ಸನ್ನು ಧರಿಸಿದ್ದಾನೆ. ಬಲಕಾಲ ಮೇಲೆ ಭಾರ ಬಿಟ್ಟು ಸ್ವಲ್ಪ ವಾಲಿದಂತೆ ಭಂಗಿ ಇದೆ. ಎಡ ಭುಜದಿಂದ ಬಲ ಮೊಣಕಾಲುವರೆಗೆ ರುಂಡಮಾಲೆಯು ಇದೆ.

ಅಧ್ಯಾಯ : ಐದು

# ಸಾಂಪ್ರದಾಯಿಕ ಶಿಲ್ಪಕಲಾವಿದರ ಇಂದಿನ ಸ್ಥಿತಿಗತಿಗಳು

"ನೂರಾರು ಜನ ಓಟು ಹಾಕಿ ಒಬ್ಬ ರಾಜಕಾರಣಿಯರನ್ನು ಸೃಷ್ಟಿಸಬಹುದು. ಗರಡಿ ಮನೆಗೆ ಕಳುಹಿಸಿ ಒಬ್ಬ ಜಟ್ಟಿಯನ್ನು ಹುಟ್ಟು ಹಾಕಬಹುದು. ಕಾನೂನು ವಿದ್ಯಾಲಯಕ್ಕೆ ಕಳುಹಿಸಿ ಒಬ್ಬ ವಕೀಲನನ್ನು ರೂಪಿಸಬಹುದು. ವೈದ್ಯಕೀಯ ವಿದ್ಯಾಲಯಕ್ಕೆ ಕಳುಹಿಸಿ ಒಬ್ಬ ವೈದ್ಯನನ್ನು ನಿರ್ಮಾಣ ಮಾಡಬಹುದು. ಹಾಗೆಯೇ ಇಂಜಿನಿಯರಿಂಗ್ ಕಾಲೇಜ್‌ಗೆ ಕಳುಹಿಸಿ ಒಬ್ಬ ಇಂಜಿನಿಯರ್‌ನನ್ನು ನಿರ್ಮಿಸಬಹುದು. ಆದರೆ ಒಬ್ಬ ಕಲಾವಿದನನ್ನು ಅಥವಾ ಕವಿಯನ್ನು ಸೃಷ್ಟಿ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಯಾವುದೇ ಕಲಾಶಾಲೆಗಳಿಂದಲೂ ಇದು ಸಾಧ್ಯವಿಲ್ಲ. ಕಲಾವಿದ ತನ್ನಿಂದ ತಾನೇ ಸೃಷ್ಟಿಗೊಳ್ಳುತ್ತಾನೆ. ಅವನು ಈ ಸಮಾಜದ ಸೃಷ್ಟಿ. ಅದು ನಿಸರ್ಗದ ದೃಷ್ಟಿ ಪ್ರಪಂಚದ ಯಾವುದೇ ಒಬ್ಬ ಕಲಾಗುರು ಅಥವಾ ಒಂದು ಕಲಾಶಾಲೆ ಕಲಾವಿದರನ್ನು ಸೃಷ್ಟಿಸಿಲ್ಲ. ಏಕೆಂದರೆ ಮಾನವ ತನ್ನ ಸೃಜನಶೀಲ ಚಿತ್ತ ಚೇತನಗಳು ನಿಸರ್ಗದತ್ತವಾಗಿ ಬಂದ ಬಳುವಳಿ. ಇದೇ ಕಲಾವಿದರಿಗೂ ಸಾಮಾನ್ಯರಿಗೂ ಇರುವ ಅಂತರ. ಕಲೆ ಪ್ರತಿಯೊಬ್ಬ ಕಲಾವಿದನ ವೈಯಕ್ತಿಕ ಭಾವದ ಅಭಿವ್ಯಕ್ತಿಯಾಗಿದೆ. ಈ ಕಾರಣಕ್ಕಾಗಿಯೇ ಜನಸಾಮಾನ್ಯರು ಕಲೆ ದೈವದತ್ತವಾದ ದೇಣಿಗೆ, ಅದು ಎಲ್ಲರಿಗೂ ಬರುವುದಿಲ್ಲ" ಎಂದು ಹೇಳುತ್ತಾರೆ.[೧]

"ಸೃಷ್ಟಿಯ ಆಂತರಿಕ ಮತ್ತು ಬಾಹ್ಯರಹಸ್ಯವನ್ನು ಭೇದಿಸುವುದಕ್ಕೆ ಕಲಾವಿದ ಒಂದು ಕಲಾಕೃತಿಯನ್ನು ನಿರ್ಮಿಸುತ್ತಾನೆ ಮತ್ತು ಪರ್ಯಾಯವಾಗಿ ಮತ್ತೊಂದು ರಹಸ್ಯವನ್ನು ಸೃಷ್ಟಿಸುತ್ತಾನೆ. ಇಂತಹ ರಹಸ್ಯದ ನಿರಂತರತೆಯಿಂದಲೇ ಕಲೆ ಸದಾ ಕಾಲ ಜೀವಂತವಾಗಿರುತ್ತದೆ. ಬಣ್ಣ ಮತ್ತು ರೇಖೆಗಳಿಂದ ರೂಪುಗೊಳ್ಳುವ ಕಲಾಕೃತಿ ಕ್ರಮೇಣ ತನ್ನ ವಶಕ್ಕೆ ಮಾಡಿಕೊಳ್ಳುತ್ತದೆ. ಹಾಗೆಯೇ ಒಂದು ವಿಶಿಷ್ಟ ಪರಿಸರದಲ್ಲಿ ಪ್ರವಹಿಸುವ ಕಲೆಯನ್ನು ಬಂಧಿಸುತ್ತದೆ. ಕಲೆ ಯಾವಾಗಲೂ ತನ್ನ ಸೀಮಾರೇಖೆಯಿಂದ ಹೊರಬರುವ ಪ್ರಯತ್ನ ಮಾಡುತ್ತದೆ ಮತ್ತು ಸಂಪ್ರದಾಯದಿಂದ ಮುಕ್ತವಾಗಿರುತ್ತದೆ. ಕಲೆಯ ಈ ಮುಕ್ತತೆಯಿಂದ ಕಲಾವಿದ ತಾನು ಸಹ ಬಂಧಮುಕ್ತನಾಗುತ್ತಾನೆ. ಸೌಂದರ್ಯದ ದರ್ಶನವಾಗಬೇಕಾದರೆ ವೃತ್ತಿಗೆ ಸ್ವಾತಂತ್ರ್ಯ ಬೇಕು. ಸೌಂದರ್ಯವನ್ನು ಅನುಭವಿಸುವ

---

೧. ಡಾ. ಡಿ. ಎ. ಉಪಾಧ್ಯ: ದೃಶ್ಯಕಲೆಗಳು–ಒಂದು ತೌಲನಿಕ ಅಧ್ಯಯನ, ಪು–೧೪೧, ೧೪೨.

ಶಕ್ತಿ ಇರುವುದಿಲ್ಲ. ಪ್ರಕೃತಿಯ ರಹಸ್ಯಮಯ ಸೌಂದರ್ಯವನ್ನು ಪ್ರಾಮಾಣಿಕತೆಯಿಂದ ಮತ್ತು ವಿನಯಶೀಲತೆಯಿಂದ ಉದ್ಘಾಟಿಸುವ ಕೃತಿ ಕಲಾಕೃತಿಯಾಗುತ್ತದೆ. ಕಲಾವಿದನ ಪ್ರಾಮಾಣಿಕತೆಯು ಅವನ ಕಲೆಯಿಂದ ಪ್ರಕಟಿತವಾಗುತ್ತದೆ. ಎಷ್ಟೋ ಕಲಾವಿದರು ಮೂರ್ತ ಚಿತ್ರಗಳನ್ನು ರಚಿಸುತ್ತಾರೆ. ಆದರೆ ತಮ್ಮ ಮುಗ್ಧತೆಯಿಂದಲೋ ಏನೋ, ಕಲಾಕ್ಷೇತ್ರದಲ್ಲಿನ ಪ್ರಸಿದ್ಧಿಯಿಂದ ಅಮೂರ್ತವಾಗಿ ಉಳಿದ ಉದಾಹರಣೆಗಳು ಬಹಳಷ್ಟಿವೆ."[೨]

ಪ್ರಸ್ತುತ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕಂಡುಬರುವ ನಮ್ಮ ನಡುವಿನ ಅನೇಕ ಕಲಾವಿದರು ಪ್ರಸಿದ್ಧಿಯಿಂದ ಅಮೂರ್ತದಡೆಗೆ ಸಾಗಿದ್ದು, ಈ ಅಮೂರ್ತವೆಂಬ ಕತ್ತಲೆಯಲ್ಲಿರುವ ಕಲಾವಿದರ ಇಂದಿನ ಸ್ಥಿತಿಗತಿಯನ್ನು ಈ ಕೆಳಗಿನಂತೆ ಕ್ರಮವಾಗಿ ವಿಂಗಡಿಸಿಕೊಂಡು ಸಂಕ್ಷಿಪ್ತವಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ.

೫.೧. ಭೌಗೋಳಿಕ

೫.೨. ಸಾಮಾಜಿಕ

೫.೩. ಔದ್ಯೋಗಿಕ

೫.೪. ಶೈಕ್ಷಣಿಕ

೫.೫. ಸಾಂಸ್ಕೃತಿಕ

೫.೬. ಆರ್ಥಿಕ

೫.೭. ರಾಜಕೀಯ

## ೫.೧. ಭೌಗೋಳಿಕ

ಭೌಗೋಳಿಕವಾಗಿ ಸಾಂಪ್ರದಾಯಿಕ ಶಿಲ್ಪ ಕಲಾವಿದರು ಭಾರತ ದೇಶದ ಅನೇಕ ರಾಜ್ಯ, ನಗರಗಳಲ್ಲಿ ವಾಸವಾಗಿದ್ದುಕೊಂಡು ಕಲಾಪರಂಪರೆಯನ್ನು ವಿವಿಧ ಶೈಲಿಗಳ ಮೂಲಕ ರಚನೆ ಮಾಡುವುದು ಕಂಡುಬಂದಿದೆ. ಕೆಲವು ಶಿಲ್ಪ ಕಲಾವಿದರು ದೇವಾಲಯ ಶಿಲ್ಪ ನಿರ್ಮಾಣಕ್ಕಾಗಿ ವಿದೇಶದಲ್ಲಿಯೂ ತಮ್ಮ ಕಲಾ ಕೃತಿ ನಿರ್ಮಾಣ ಕಾರ್ಯದಲ್ಲಿ ಮಗ್ನರಾಗಿದ್ದಾರೆ. ಸಾಂಪ್ರದಾಯಿಕ ಶಿಲ್ಪ ಕಲಾವಿದರು ಭೌಗೋಳಿಕವಾಗಿ ಕರ್ನಾಟಕ, ಆಂಧ್ರ, ತಮಿಳುನಾಡು, ಮಹಾರಾಷ್ಟ್ರಗಳಲ್ಲಿ ಹೆಚ್ಚಿನ ನೆಲೆಗಳನ್ನು ಕಂಡುಕೊಂಡಿದ್ದಾರೆ. ಉತ್ತರ ಕರ್ನಾಟಕ ಹಾಗೂ ಹೈದರಾಬಾದ್ ಕರ್ನಾಟಕದಲ್ಲಿ ವಿಶೇಷವಾಗಿ ಶಿಲಾಶಿಲ್ಪಿಗಳು, ಮರಶಿಲ್ಪಿಗಳು ಮತ್ತು ಲೋಹಶಿಲ್ಪಿಗಳು ದೊರಕುತ್ತಾರೆ. ಆದರೆ ಕರ್ನಾಟದಲ್ಲಿ ದೇವಾಲಯ ಶಿಲ್ಪವನ್ನು ಮಾಡುವವರು ವಿರಳ. ದೇವಾಲಯ ನಿರ್ಮಾಣಕ್ಕಿಂತ ದೇವಾಲಯದ ಮೂರ್ತಿಗಳು, ಉತ್ಸವಮೂರ್ತಿಗಳು ಮತ್ತು ರಥ ನಿರ್ಮಾಣ, ಲೋಹದಿಂದ ಪ್ರತಿಮೆ ಮಾಡುವುದು ಕಂಡುಬರುತ್ತದೆ. ಶಿಲಾ ದೇವಾಲಯ ನಿರ್ಮಾಣ ಮತ್ತು ಪುನರ್ರಚನಾ ಕಾರ್ಯದಲ್ಲಿ ತಮಿಳುನಾಡಿನ ಶಿಲ್ಪಿಗಳು, ಕರ್ನಾಟಕದ ಅನೇಕ ಶಿಲಾ ದೇವಾಲಯ ಮತ್ತು ಸಿಮೆಂಟ್(ಗಾರೆ)ನಿಂದ ದೇವಾಲಯದ ಗೋಪುರ ನಿರ್ಮಾಣ ಮಾಡುವುದು ಕಂಡುಬರುತ್ತದೆ.

---

೨. ಪಿ. ಆರ್. ತಿಪ್ಪೇಸ್ವಾಮಿ(ಪ್ರ.ಸಂ): ಕಲಾಕೋಶ, ಪು-೮೩.

ಕರ್ನಾಟಕ ಸಾಂಪ್ರದಾಯಿಕ ಶಿಲ್ಪಿಗಳು ಬೇರೆ ರಾಜ್ಯಗಳಿಗೆ ವಲಸೆ ಹೋಗಿ ಶಿಲ್ಪ ಕಾರ್ಯ ಮಾಡುವುದು ಅತ್ಯಂತ ಕಡಿಮೆ ಪ್ರಮಾಣದಲ್ಲಿ ಇದ್ದಾರೆ. ಕೆಲವು ಸಾಂಪ್ರದಾಯಿಕ ಶಿಲ್ಪಿಗಳ ಕುಟುಂಬ ಕರ್ನಾಟಕದ ಕೆಲವು ಭಾಗದಲ್ಲಿ ತಮ್ಮ ನೆಲೆಗಳನ್ನು ಕಂಡುಕೊಂಡಿವೆ. ಕೊಪ್ಪಳ ಜಿಲ್ಲೆ ಕಿನ್ನಾಳ, ಕಲಘಟಗಿ(ಧಾರವಾಡ ಜಿಲ್ಲೆ), ನರಗುಂದ, ಗದಗ, ಹುಬ್ಬಳ್ಳಿ, ಬಳ್ಳಾರಿ, ಹೊಸಪೇಟೆ, ರಾಯಚೂರು, ಮಾನ್ವಿ, ಇಟ್ಟಗಿ, ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ, ಕಲಬುರಗಿ, ಯಾದಗಿರಿ, ಸುರಪುರ, ಬೀದರ್ ಜಿಲ್ಲೆಗಳಲ್ಲಿ ಮರಶಿಲ್ಪ, ಲೋಹಶಿಲ್ಪ, ಶಿಲಾಶಿಲ್ಪ ಮತ್ತು ಸಿಮೆಂಟ್ ಶಿಲ್ಪ ಕಾರ್ಯವನ್ನು ಸಾಂಪ್ರದಾಯಿಕ ಶೈಲಿಯಲ್ಲಿ ಮಾಡುವ ಅನೇಕ ಕುಟುಂಬಗಳು ಕಾರ್ಯಪ್ರವೃತ್ತವಾಗಿವೆ.

ಹಿಂದಿನ ತಲೆಮಾರಿನ ಶಿಲ್ಪಿಗಳಿಂತ ಇಂದಿನ ಯುವ ಶಿಲ್ಪಿಗಳು ಗ್ರಾಮೀಣ ಪ್ರದೇಶಗಳಿಗಿಂತ ನಗರ ಪ್ರದೇಶಗಳಲ್ಲಿ ನೆಲೆಸಿಕೊಂಡು ಶಿಲ್ಪ ಕಾರ್ಯವನ್ನು ಮಾಡುತ್ತಿದ್ದಾರೆ. ಕಾಲಕ್ರಮಕ್ಕೆ ತಕ್ಕಂತೆ ಶಿಲ್ಪಿಗಳು ವಲಸೆ ಹೋಗುವುದು, ಶಿಲ್ಪ ನಿರ್ಮಾಣ ಕಾರ್ಯ ಮುಗಿದ ನಂತರ ತಮ್ಮ ಮೂಲ ನೆಲೆಗಳಿಗೆ ಮರಳಿ ಬರುತ್ತಾರೆ. ಬೃಹದಾಕಾರದ ಶಿಲೆಯ ಅಥವಾ ಮರದ ಶಿಲ್ಪ ರಚನೆ ಮಾಡುವಾಗ ಶಿಲ್ಪವು ಸ್ಥಾಪಿತವಾಗುವ ಸ್ಥಳಗಳಲ್ಲಿ ಶಿಲ್ಪಿ ಕಾರ್ಯ ಮಾಡಬೇಕಾಗುತ್ತದೆ. ಮುಖ್ಯಶಿಲ್ಪಿಗಳು ಮತ್ತು ಸಹಾಯಕ ಶಿಲ್ಪಿಗಳು ಒಟ್ಟಿಗೆ ಸೇರಿ ದೇವಾಲಯ ಅಥವಾ ರಥ ನಿರ್ಮಾಣ ಕಾರ್ಯದಲ್ಲಿ ಪ್ರತಿಷ್ಠಿತ ಸ್ಥಳಗಳಲ್ಲಿ ವಾಸವಾಗಿದ್ದುಕೊಂಡು ಶಿಲ್ಪ ಕಾರ್ಯ ಸಂಪೂರ್ಣವಾಗುವವರೆಗೆ ಅಲ್ಲಿಯೇ ನೆಲೆಸಿರುತ್ತಾರೆ.

**೫.೨. ಸಾಮಾಜಿಕ**

ನಮ್ಮ ಕಲಾವಿದರು, ತಮ್ಮ ಸಮಾಜ ಮತ್ತು ಅದರ ವ್ಯವಸ್ಥೆಯ ದಾರುಣ ಸ್ಥಿತಿಯಿಂದ ರೋಸಿಹೋಗುತ್ತಾರೆ. ಸಾಮಾನ್ಯ ಜನರಿಗಿಂತ ವಿಭಿನ್ನ ದೃಷ್ಟಿಕೋನದಲ್ಲಿ ಸಮಾಜವನ್ನು ನೋಡುತ್ತಾರೆ. ಅದರಿಂದ ಭಾವೋದ್ವೇಗಕ್ಕೆ ಒಳಗಾಗುತ್ತಾರೆ. ಅದರಿಂದ ಉಂಟಾದ ರೋಷ, ಆಕ್ರೋಶಗಳನ್ನು ದುಃಖ ದುಮ್ಮಾನಗಳನ್ನು ಮನದೊಳಗೆ ಅದುಮಿಟ್ಟುಕೊಳ್ಳಲಾರದೇ ತಮ್ಮ ಕಲಾಭಿವ್ಯಕ್ತಿಯಲ್ಲಿ ಹೊರಗೆಡುವುತ್ತಾರೆ. ಇವರ ಅಭಿವ್ಯಕ್ತಿಯ ಕೃತಿ, ಸಮಾಜದ ಕರಾಳ ಮುಖಕ್ಕೊಂದು ಕನ್ನಡಿಯಾಗುತ್ತದೆ. ಇದರಿಂದ ಇವರ ವರ್ತನೆ ಸಮಾಜಕ್ಕೆ ಅವಾಸ್ತವ ಮತ್ತು ಅತಿರೇಕವೆನಿಸುತ್ತದೆ. ಸತ್ಯ ಯಾವಾಗಲೂ ಅಪ್ರಿಯವಾಗುತ್ತದೆ ಮತ್ತು ಅದು ಬಹಳ ಕಹಿ ಕೂಡ. ಇದರಿಂದ ತನ್ನ ವಿಕಾರ ರೂಪವನ್ನು ಒಪ್ಪಿಕೊಳ್ಳಲು ಇಷ್ಟಪಡದ ಸಮಾಜ, ಅದನ್ನು ಬಿಂಬಿಸಿದ ಕಲಾವಿದರನ್ನು ಹುಚ್ಚರೆಂದೇ ಕರೆಯುತ್ತದೆ. ಅಂತೆಯೇ ಇಂದಿನ ಸಮಾಜದಲ್ಲಿಯೂ ಸಹ ಕಲಾವಿದರನ್ನು ಕಂಡರೆ ಅಷ್ಟಕ್ಕಷ್ಟೇ. ಈ ಕಾರಣ ದಿಂದಲೇ ಕಲಾವಿದರನ್ನು ಸಮಾಜದಲ್ಲಿ ಪ್ರತ್ಯೇಕವಾಗಿಯೇ ಗುರುತಿಸಲಾಗುತ್ತಿರಬಹುದೇ? ಕೆಲವೊಮ್ಮೆ ನಮ್ಮ ಕಲಾವಿದರ ಕಲಾಕೃತಿ ಸಮಾಜದ ಮೇಲೆ ಅತ್ಯಂತ ಪ್ರಭಾವವನ್ನು ಉಂಟುಮಾಡುತ್ತವೆ. ಅಂಥ ಸಂದರ್ಭಗಳಿಂದ ಇವರು ಇನ್ನೂ ಹೆಚ್ಚಿನ ಚೈತನ್ಯ ಮತ್ತು ಉತ್ಸಾಹಗಳನ್ನು ಹೊಂದಿ, ತಮ್ಮ ಅಭಿವ್ಯಕ್ತಿಯ ಕಾರ್ಯದಲ್ಲಿ ತೀವ್ರವಾಗಿ ತಲ್ಲೀನರಾಗುತ್ತಾರೆ. ಆಗ ಸಮಾಜ ಇವರನ್ನು ತನ್ನಿಂದ ಪ್ರತ್ಯೇಕವಾಗಿ ನೋಡಲಾರಂಭಿಸುತ್ತದೆ. ಇವರೂ ಸಹ ಅಂಥ ಸಮಾಜದಲ್ಲಿ ಬೆರೆಯದೇ,

ಅದರಿಂದ ಆಚೆಯೇ ಅಥವಾ ಹೊರಗೆಯೇ ಬದುಕಲು ಇಚ್ಛಿಸುತ್ತಾರೆ. ಇದರಿಂದ ಇವರು ಸಮಾಜದಲ್ಲಿ ಪ್ರತ್ಯೇಕವಾಗಿ ಅಥವಾ ವಿಶೇಷವಾಗಿ ಕಾಣಲಾರಂಭಿಸುತ್ತಾರೆ. ಇದರಿಂದ ಇವರು ತಮ್ಮ ಉಡುಗೆ, ತೊಡುಗೆಗಳ ಬಗೆಗೆ, ದಾಡಿ, ಮೀಸೆಗಳ ಬಗೆಗೆ, ಜುಟ್ಟು ಜಡೆಗಳ ಬಗೆಗೆ ಅಷ್ಟಾಗಿ ಲಕ್ಷ್ಯ ವಹಿಸುವುದಿಲ್ಲ. ಅಂದರೆ, ಸಮಾಜದ ಇತರರಂತೆ ಇರಬೇಕೆಂದು ಬಯಸುವುದಿಲ್ಲ. ಅನೇಕ ಸಂದರ್ಭಗಳಲ್ಲಿ ತಮ್ಮ ಮಾತು ನಡೆನುಡಿಗಳ ಬಗ್ಗೆಯೂ ಇವರು ದಾಕ್ಷಿಣ್ಯ ಹೊಂದದೇ ಸ್ವಾಭಾವಿಕವಾಗಿ ಮತ್ತು ನೇರವಾಗಿ ನುಡಿಯುತ್ತಾರೆ ಮತ್ತು ಕೃತ್ರಿಮವಲ್ಲದ ಬದುಕನ್ನು ಬದುಕುತ್ತಾರೆ. ಇದು ಸಮಾಜದ ಇತರರಿಗಿಂತ ಭಿನ್ನವಾದ ಜೀವನಶೈಲಿಯಾಗಿ ತೋರುತ್ತದೆ. ಹೀಗಾಗಿ ಅನೇಕ ಸಂದರ್ಭಗಳಲ್ಲಿ ಇವರು ಸಮಾಜದಲ್ಲಿ ವಿಶಿಷ್ಟ ಮತ್ತು ವಿಚಿತ್ರ ವ್ಯಕ್ತಿಗಳಾಗಿ ಕಾಣಿಸಿಕೊಳ್ಳುತ್ತಾರೆ.[೩]

"ಸಮಾಜದಲ್ಲಿ ಇತರ ವ್ಯಕ್ತಿಗಳಿಗೆ ಇರದ ಒಂದು ವಿಶೇಷವಾದ ಸಾಮರ್ಥ್ಯ ಕಲಾವಿದರಿಗಿದೆ. ಅದೇ 'ಕನಸುಗಾರಿಕೆ', ನಮ್ಮ ಕಲಾವಿದರು ಕನಸುಗಾರರು. ಅವರು ತಮ್ಮ ಹಗಲು ರಾತ್ರಿಗಳನ್ನು ಕನಸಿನ ಭ್ರಮಾಲೋಕದಲ್ಲಿಯೇ ಕಳೆಯುತ್ತಾರೆ. ಅವರ ಭ್ರಮಾಲೋಕಕದ ಕನಸುಗಳ ಮಧ್ಯ, ಅವರ ಕಹಿ ನೆನಪುಗಳು ಅಹಿತಕರ ಸಂದರ್ಭಗಳು ಮರೆತುಹೋಗುತ್ತವೆ. ಅಥವಾ ಅವುಗಳನ್ನು ಮರೆಯಲೆಂದೇ ಇಲ್ಲವೇ ಮುಚ್ಚಿಹಾಕಲೆಂದೇ, ನಮ್ಮ ಕಲಾವಿದರು ತಮ್ಮ ಕಲ್ಪನೆಯ ಕಲಾವಿಲಾಸವನ್ನು ಮಾಧ್ಯಮದ ಮೂಲಕ ಅಭಿವ್ಯಕ್ತಿಗೊಳಿಸುತ್ತಾರೆ."[೪]

ಸಾಂಪ್ರದಾಯಿಕ ಶಿಲ್ಪಿಗಳು "ಕಲಾವಿದರು ಕಲೆಗಾಗಿ ಕಲೆಯಲ್ಲ! ಸಮಾಜಕ್ಕಾಗಿ ಕಲೆ! ಎನ್ನುವ ಉದ್ದೇಶದಿಂದ ಸಮಾಜಮುಖಿಯಾಗಿ ಶಿಲ್ಪಗಳನ್ನು ನಿರ್ಮಿಸಿದ್ದಾರೆ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಸಮಾಜದ ಒಂದು ಭಾಗವಾಗಿ ಕಲಾವಿದರು ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಕೇವಲ ಒಂದು ಜಾತಿ, ಜನಾಂಗ, ವರ್ಗಗಳಿಗೆ ಸೀಮಿತಗೊಳ್ಳದೇ ಸಮಾಜದ ಎಲ್ಲಾ ವರ್ಗಗಳಿಗೂ ನೇರವಾಗಿ ಅವರ ಬೇಡಿಕೆ ಹಂಬಲಗಳಿಗೆ ತಕ್ಕಂತೆ ರಥಶಿಲ್ಪ, ಶಿಲಾಶಿಲ್ಪ, ಲೋಹಶಿಲ್ಪ, ಸಿಮೆಂಟ್‌ಶಿಲ್ಪ ಗಳನ್ನು ನಿರ್ಮಿಸಿಕೊಟ್ಟು ಸಮಾಜದ ಸೌಹಾರ್ದತೆಯನ್ನು ಮೆರೆದಿದ್ದಾರೆ.

ಶಿಲ್ಪಗಳಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ, ಜೈನ, ಪಾರ್ಸಿ ಎಂದು ಪ್ರತ್ಯೇಕಿಸಿ ನೋಡದೇ ಎಲ್ಲವೂ ಕಲೆಯ ಸ್ವರೂಪ ಮತ್ತು ಕಲಾಕೃತಿಗಳೆಂದು ಭಾವಿಸಿ ಶಿಲ್ಪವನ್ನು ನಿರ್ಮಿಸುತ್ತಾರೆ. ಇದೇ ಉದ್ದೇಶಕ್ಕಾಗಿ ಸಮಾಜ ಕಲಾವಿದರನ್ನು ಗುರುತಿಸಿ ಗೌರವಿಸಿ ಸನ್ಮಾನಿಸುತ್ತಿರುವುದು ಕಂಡುಬರುತ್ತದೆ. ಹುಟ್ಟಿದ ಮಗುವಿಗೆ ತೊಟ್ಟಿಲು ಮಾಡುವುದರಿಂದ ಹಿಡಿದು ಮನುಷ್ಯ ಸತ್ತಾಗ ಚಟ್ಟ ಡೋಲಿ ಮಾಡುವವರೆಗೆ ಕಲಾವಿದನ ಸೇವೆ ಸಮಾಜಕ್ಕೆ ಸಲ್ಲುತ್ತದೆ. ಸಮಾಜವಿಲ್ಲದೇ ಕಲಾವಿದನಿಲ್ಲ! ಕಲಾವಿದ ನಿಲ್ಲದ ಯಾವ ಸಮಾಜವೂ ಪೂರ್ಣವಾಗಲಾರದು. ಗ್ರಾಮೀಣ ಜನರಿಂದ ನಗರ ಜೀವನದಲ್ಲಿಯೂ ಶಿಲ್ಪ ಕಲಾವಿದನ ಪಾತ್ರ ಮಹತ್ವದ್ದಾಗಿದೆ.[೫]

---

೩. ಡಾ. ಡಿ. ಎ. ಉಪಾಧ್ಯ: ದೃಶ್ಯಕಲೆಗಳು–ಒಂದು ತೌಲನಿಕ ಅಧ್ಯಯನ, ಪು–೧೪೬.

೪. ಅದೇ., ಪು–೧೪೬, ೧೪೭.

೫. ಸಂದರ್ಶನ: ಬಾವಿಹಳ್ಳಿ ಲೋಹಶಿಲ್ಪಿ ಶಂಕರಪ್ಪಾಚಾರ್ಯರು(ಬಳ್ಳಾರಿ ಜಿಲ್ಲೆ), ಅವರೊಂದಿಗೆ, ದಿನಾಂಕ : ೧೫.೬.೨೦೧೭

ಶಿಲ್ಪ ಕಲಾವಿದರು ಸಮಾಜಕ್ಕೆ ನಿರ್ಮಿಸಿಕೊಡುವ ಕೆಲವು ಕಲಾಕೃತಿಗಳಿಗೆ ಬಟ್ಟೆ, ಧಾನ್ಯ, ಉಡುಗೊರೆ, ಬಂಗಾರದ ಉಂಗುರಗಳನ್ನು ಗೌರವ ಪ್ರೀತಿ ಕಾಣಿಕೆಯಾಗಿ ಸಮಾಜದ ಮುಖಂಡರು ಮತ್ತು ದೇವತಾಮೂರ್ತಿ ಮಾಡಿಸಿದವರು ನೀಡಿ ಗೌರವಿಸುವುದು ಕಂಡುಬರುತ್ತದೆ. ಕೆಲವು ಪ್ರಾದೇಶಿಕ ಹಿನ್ನೆಲೆಯಲ್ಲಿ ಶಿಲ್ಪಿಗಳಿಗೆ ಇವುಗಳನ್ನು ನೀಡಿ ಸಂತೃಪ್ತರನ್ನಾಗಿಸಿ ಅವರನ್ನು ಹರಸುತ್ತಾರೆ.

"ಆಯಾಪದ್ಧತಿ ರೂಢಿಯಲ್ಲಿದ್ದಿತು ಮತ್ತು ಈಗಲೂ ಗ್ರಾಮೀಣ ಪ್ರದೇಶದಲ್ಲಿ ಕಲಾವಿದರಿಗೆ ಆಯಾ ನೀಡುವ ಪದ್ಧತಿ ರೂಢಿಯಲ್ಲಿದೆ. ಆಯಗಾರರು ಕುಲಕಸುಬಿನ ಜೊತೆಗೆ ವಿವಿಧ ಉಪವೃತ್ತಿಗಳನ್ನು ಅವಲಂಬಿಸಿದ್ದರು. ಆಯಾಪದ್ಧತಿ ನಂಬಿಕೆ, ಸೇವೆ ಪರಸ್ಪರ ಅವಲಂಬನೆ, ಕೊಡುಗೆಗಳ ಮೇಲೆ ನಿಂತಿತ್ತು. ವೈಷಮ್ಯಕ್ಕೆ ಒಳಜಗಳಕ್ಕೆ ಅವಕಾಶವಿಲ್ಲದಂತೆ ನೀಡಿ ನಿಯಮಗಳನ್ನು ಈ ಪದ್ಧತಿ ರೂಢಿಸಿಕೊಂಡಿತ್ತು. ತಲೆ ತಲಾಂತರದಿಂದ ಆಯದ ಕುಳ ಹಾಗೂ ಆಯಗಾರರ ಮಧ್ಯ ಅನ್ಯೋನ್ಯ ಸಂಬಂಧಗಳಿದ್ದವು. ಇದು ಸಾಮಾಜಿಕ ಭದ್ರತೆಗೆ ಸುಗಮ ಜೀವನಕ್ಕೆ ದಾರಿಯಾಗುತ್ತಿತ್ತು."[೬] ಕನ್ನಡ ನಾಡಿನ ಹಲವು ಶಾಸನಗಳು ಇಂತ ಸ್ವಾವಲಂಬಿ ಹಾಗೂ ಸಮುದಾಯದ ಪ್ರಧಾನ ಆಯಗಾರಿಕೆ ಹಾಗೂ ಆಯಗಾರರ ಬಗ್ಗೆ ಸಾಕಷ್ಟು ಪ್ರಮಾಣದ ಮಾಹಿತಿಗಳನ್ನು ನೀಡುತ್ತವೆ. ಆಯಾ ಪ್ರಧಾನ ಸಮಾಜದಲ್ಲಿ ಕಸಬುದಾರಿಕೆ ಅಥವಾ ಕಸಬುದಾರ ಕೇವಲ ಒಬ ಕೂಲಿ ಕಾರ್ಮಿಕನಲ್ಲ. ಆತನೊಬ್ಬ ಸಾಮಾಜಿಕ ನಿರ್ಮಾತೃವಾಗಿದ್ದ. ಸಾಂಪ್ರದಾಯಿಕ ವೃತ್ತಿಗಳಲ್ಲಿ ಹಾಗೂ ಸಾಮಾಜಿಕ ಸಂದರ್ಭದಲ್ಲಿ ಆಯಾಪದ್ಧತಿ ಪ್ರಮುಖ ಸಂಗತಿಯಾಗಿತ್ತು.

### ೫.೩. ಔದ್ಯೋಗಿಕ

ಸಾಂಪ್ರದಾಯಿಕ ಶಿಲ್ಪ ಕಲಾವಿದರು ವಂಶಪಾರಂಪರಿಕವಾಗಿ ಕಲೆಯನ್ನು ಒಂದು ಉದ್ಯೋಗ ದಂತೆ ಬಳಸಿಕೊಂಡು ಬಂದಿದ್ದಾರೆ. ಪ್ರಾಚೀನ ಕಾಲದ ವಸ್ತುಸ್ಥಿತಿ ಹೀಗೆ ಇರಲಿಲ್ಲ. ರಾಜ ಮಹಾರಾಜರ ಆಡಳಿತದ ಅವಧಿಯಲ್ಲಿ ನಾಡಿನ ಅನೇಕ ಕಲೆಗಳಿಗೆ ರಾಜಾಶ್ರಯ ಇದ್ದಿತು. ಶಿಲ್ಪ ಕಲಾವಿದರಿಗೆ ರಾಜರು ವಸತಿ-ಆಹಾರ ಧಾನ್ಯಗಳು, ವಸ್ತ್ರಗಳು ಕೊರತೆಯಾಗದಂತೆ ನೋಡಿಕೊಳ್ಳುತ್ತಿದ್ದರು ಮತ್ತು ಅವರ ಕುಟುಂಬಗಳ ಕ್ಷೇಮವನ್ನು ಸ್ವತಃ ರಾಜನ ಆಡಳಿತದಲ್ಲಿ ನಿರ್ವಹಿಸುತ್ತಿದ್ದರು. ಶಿಲ್ಪ ಕಲಾವಿದರಿಗೆ ಬೇಕಾಗುವ ಶಿಲೆ, ಮರ, ಲೋಹ ಮುಂತಾದ ಮಾಧ್ಯಮಗಳನ್ನು ಹೇರಳವಾಗಿ ಒದಗಿಸುತ್ತಿದ್ದರು.

ಅಲ್ಲದೇ ಶಿಲ್ಪಕಾರ್ಯ ಮಾಡಲು ಉತ್ತಮವಾದ ವಾತಾವರಣವನ್ನು ನೋಡಿ ಶಿಲ್ಪ ಕುಟೀರ ಗಳನ್ನು ನಿರ್ಮಿಸಿ ಕೆಲಸಕ್ಕೆ ಸಹಾಯವಾಗುವಂತೆ ಅವರಿಗೆ ಬೇಕಾದ ಉಪಕರಣಗಳು ಮತ್ತು ಮೂಲಭೂತ ಸಾಮಗ್ರಿಗಳನ್ನು ಕೆಲಸದ ಬೇಡಿಕೆಗೆ ತಕ್ಕಂತೆ ಕಲ್ಪಿಸಿಕೊಡುತ್ತಿದ್ದರು. ಅಲ್ಲದೇ ಶಿಲ್ಪ ಕಲಾವಿದರ ಕುಟುಂಬದ ಮಕ್ಕಳ ಶಿಕ್ಷಣದ ಹೊಣೆಯನ್ನು ನಿರ್ವಹಿಸುತ್ತಿದ್ದರು. ಇಷ್ಟೆಲ್ಲಾ ಸೌಕರ್ಯಗಳು ದೊರೆತ ಮೇಲೆ ಕಲಾವಿದರ ಆರೋಗ್ಯ ಮತ್ತು ಅವರ ಕಷ್ಟ-ಕಾರ್ಪಣ್ಯಕ್ಕೆ ಸ್ಪಂದಿಸುವ ಕಲಾಪ್ರೇಮಿ

---

೬. ಡಾ. ವೀರೇಶ ಬಡಿಗೇರ: ಶಾಸನಗಳಲ್ಲಿ ಆಯಗಾರಿಕೆ, ಪು–೮.

ರಾಜರುಗಳು ಇದ್ದರು. ಆದರೆ ಇಂದಿನ ಕಲಾವಿದರ ಸ್ಥಿತಿ ಬೇರೆಯಾಗಿದೆ. ಕಲಾವಿದನು ಮೂಲತಃ ಕಲೆಯನ್ನೇ ಆಶ್ರಯಿಸಿಕೊಂಡು ತನ್ನ ನೆಲೆಯನ್ನು ಕಟ್ಟಿಕೊಳ್ಳಬೇಕಾಗಿದೆ. ಸಾಮಾನ್ಯವಾಗಿ ಕಲಾವಿದರು ತಮ್ಮ ಕಲೆಯನ್ನೇ ಉದ್ಯೋಗವನ್ನಾಗಿಸಿಕೊಂಡು ಹಗಲಿರುಳು ಎನ್ನದೇ ಬೆವರು ಸುರಿಸಿ ಶಿಲೆ, ಮರ, ಲೋಹದ ಜೊತೆಗೆ ತಮ್ಮ ಕಲಾನೈಪುಣ್ಯವನ್ನು ತೋರಿಸಬೇಕಾಗುತ್ತದೆ.

ಕಲಾವಿದರು ತಮ್ಮ ವಸತಿ, ಕುಟುಂಬ, ಮಕ್ಕಳ ಶಿಕ್ಷಣ ಇವುಗಳನ್ನೆಲ್ಲಾ ತಾವೇ ನಿರ್ವಹಿಸಿ ಶಿಲ್ಪಕಾರ್ಯ ಮಾಡುವ, ಬೇಕಾಗುವ ಶಿಲೆ ಮರ, ಲೋಹ ಇವುಗಳನ್ನು ಸ್ವಂತ ಹಣದಿಂದಲೇ ಸಂಗ್ರಹಿಸಿಕೊಳ್ಳಬೇಕಾಗಿದೆ. ಅಷ್ಟೇ ಅಲ್ಲದೇ ಸಾಂಪ್ರದಾಯಿಕ ಶಿಲ್ಪಗಳಲ್ಲಿ ಬಳಕೆಯಾಗುವ ಅನೇಕ ಉಪಕರಣಗಳನ್ನು ತಾವು ಹಣ ಕೊಟ್ಟು ಕೊಂಡುಕೊಳ್ಳಬೇಕಾಗಿದೆ. ಇದೆಲ್ಲ ಒಂದು ಕಡೆಯೆಂದರೆ ಶಿಲ್ಪಕಾರ್ಯ ನಿರ್ವಹಿಸಲು ವಿಶಾಲವಾದ ಸ್ಥಳಾವಕಾಶ ಮತ್ತು ಶಿಲ್ಪಕುಟೀರವನ್ನು ಬಾಡಿಗೆಯ ರೂಪದಲ್ಲಾಗಲಿ ಅಥವಾ ಜಾಗದ ಗುತ್ತಿಗೆ ಪಡೆದುಕೊಂಡು ಮೂರು ಅಥವಾ ಐದು ವರ್ಷ ನೀರಿನ ವ್ಯವಸ್ಥೆ ಮಾಡಿಕೊಂಡು, ಶಿಲ್ಪಕಾರ್ಯ ಪ್ರಾರಂಭಿಸಲು ಪುರಸಭೆ, ಪಟ್ಟಣ ಪಂಚಾಯಿತಿ ನಗರಸಭೆಗಳಲ್ಲಿ ಪರವಾನಿಗೆ ಪತ್ರಕ್ಕೆ ಹಣ ಕಟ್ಟಿ ನಂತರ ಪರವಾನಿಗೆ ಪಡೆದುಕೊಂಡು ಶಿಲ್ಪ ಕಾರ್ಯವನ್ನು ಆರಂಭಿಸಬೇಕಾಗಿದೆ. ಇಂತೆಲ್ಲಾ ಸ್ಥಿತಿಗಳನ್ನು ನಿಭಾಯಿಸಿಕೊಂಡು ಶಿಲ್ಪಿಗಳು ಸಮಾಜದ ಸೇವೆ ಮಾಡಬೇಕಾಗಿದೆ. ಕಲೆ ಮತ್ತು ಉದ್ಯೋಗ ಶಿಲ್ಪಿಗೆ ಉದ್ಯೋಗವೇ ಕಲೆಯಾಗಿದೆಯೋ ಅಥವಾ ಕಲೆಯೇ ಉದ್ಯೋಗವಾಗಿದೆಯೋ ಹೇಳುವುದು ಕ್ಲಿಷ್ಟವೆನಿಸುತ್ತದೆ.

ಹಿಂದಿನ ತಲೆಮಾರಿನ ಹಿರಿಯ ಜೀವಿಗಳು ಕಲೆಯನ್ನೇ ನಂಬಿ ಅದನ್ನೇ ಆರಾಧಿಸಿಕೊಂಡು ತಮ್ಮ ಜೀವನ ಸಾಗಿಸುತ್ತಿದ್ದರು. ಪ್ರಸ್ತುತ ಕೆಲವು ದಶಕಗಳ ಈಚೆಗೆ ಹೊಸ ತಲೆಮಾರಿನ ಪೀಳಿಗೆ ತಮ್ಮ ಹಿರಿಯರ ಸಾಂಪ್ರದಾಯಿಕ ಶಿಲ್ಪಕಲೆಗಳನ್ನು ನಿರ್ಲಕ್ಷ್ಯ ಭಾವದಿಂದ ಕಂಡು ಶೇಕಡ ೫೦% ರಷ್ಟು ಯುವಕರು ತಮ್ಮ ಸಾಂಪ್ರದಾಯಿಕ ಕಲೆಯನ್ನು ಹಿರಿಯರಿಗೆ ಬಿಟ್ಟು ಖಾಸಗಿ ಉದ್ಯೋಗ, ಸರ್ಕಾರಿ ಉದ್ಯೋಗ ಅರಸಿ ಹೋಗಿದ್ದಾರೆ. **ಉದಾ:** ವಿಜಯನಗರ ಕಾಲದ ಸಾಂಪ್ರದಾಯಿಕ ಕಲೆ ಎಂದು ಹೇಳಲ್ಪಡುವ ಕೊಪ್ಪಳ ಜಿಲ್ಲೆ ಕಿನ್ನಾಳ ಕಲಾವಿದರ ಮನೆತನಗಳಲ್ಲಿ ಎಷ್ಟೋ ಯುವಕರು ವಂಶ ಪಾರಂಪರ್ಯಗತವಾಗಿ ಬಂದ ಕಲೆಯನ್ನು ಬಿಟ್ಟು ಬೇರೆ ಬೇರೆ ವ್ಯಾಪಾರ, ವಾಣಿಜ್ಯ ಉದ್ಯೋಗ ಗಳನ್ನು ಮಾಡುತ್ತಿದ್ದಾರೆ. ಇನ್ನೂ ಕೆಲವರು ಬೀದರ ಜಿಲ್ಲೆಯಲ್ಲಿ ಅಂತಾರಾಷ್ಟ್ರೀಯ ಪ್ರಶಸ್ತಿಗೆ ಭಾಜನರಾಗಿ ಬಿದ್ರಿ ಕಲೆಯನ್ನು ವಿಶ್ವಮಟ್ಟದಲ್ಲಿ ಪರಿಚಯಿಸಿದ್ದಾರೆ. ಆದರೆ ಪ್ರಸುತ್ತ ಸ್ಥಿತಿಯಲ್ಲಿ ಸರಿಯಾದ ಮಾರುಕಟ್ಟೆ ವ್ಯವಸ್ಥೆ ಇಲ್ಲದೆ ಬೇಡಿಕೆ ಕಡಿಮೆಯಾಗಿ ಅದೇ ಕಲಾವಿದರು ಕೆಲವರು ಚಹ ಹೋಟೆಲ್‌ಗಳನ್ನು ಇಟ್ಟುಕೊಂಡು ಕುಟುಂಬ ಸಾಗಿಸುತ್ತಿದ್ದಾರೆ. ಒಟ್ಟಾರೆ ಬರಬರುತ್ತಾ ಮುಂದೊಂದು ಕಾಲಘಟ್ಟದಲ್ಲಿ ಸಾಂಪ್ರದಾಯಿಕ ಶಿಲ್ಪಕಲೆ ಮತ್ತು ಶಿಲ್ಪ ಕಲಾವಿದರ ಕುಟುಂಬಗಳು ತಮ್ಮ ವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಗಳನ್ನು ನಿರ್ವಹಿಸುವ ಕಾಲ ಬರುತ್ತದೆ"[೭] ಎಂದು ತಮ್ಮ ಅಭಿಪ್ರಾಯವನ್ನು ಇಲ್ಲಿ ಹಂಚಿಕೊಂಡಿದ್ದಾರೆ.

---

೭ ಸಂದರ್ಶನ: ನಾರಾಯಣಪ್ಪ ಶಂಕ್ರಪ್ಪ ಚಿತ್ರಗಾರ ಅವರೊಂದಿಗೆ, ದಿನಾಂಕ–

ನಮ್ಮ ರಾಜ್ಯದಲ್ಲಿ ಅನೇಕ ಪ್ರಾಚೀನ ದೇವಾಲಯಗಳಿವೆ ಮತ್ತು ಅವು ಕೆಲವು ಶಿಥಿಲಾವಸ್ಥೆಯನ್ನು ಕಂಡಿವೆ. ಆದರೆ ಇದಕ್ಕಾಗಿ ಪ್ರಾಚ್ಯವಸ್ತು ಇಲಾಖೆ ಇದ್ದು ಈ ದೇವಾಲಯಗಳನ್ನು ನಿರ್ವಹಣೆ ಮಾಡಲು ಯಾವ ಶಿಲ್ಪಿಗಳಿಗೂ ಸರ್ಕಾರಿ ಉದ್ಯೋಗ ದೊರೆತಿಲ್ಲ. ಅದರ ಬದಲಾಗಿ ಶಿಲ್ಪದಲ್ಲಿ ಅನುಭವ ಇಲ್ಲದಿರುವವರನ್ನು ನೇಮಕ ಮಾಡಿಕೊಂಡಿರುವುದು ಕಂಡುಬರುತ್ತದೆ. ನಮ್ಮ ರಾಜ್ಯದಲ್ಲಿ ಅನೇಕ ಜನ ಯುವಶಿಲ್ಪಿಗಳು ಇದ್ದಾರೆ. ಶಿಲ್ಪಕಲೆಯಲ್ಲಿ ಪದವಿ ಮತ್ತು ಸ್ನಾತಕೋತ್ತರ ಪದವಿಯೊಂದಿಗೆ ಪಿಎಚ್.ಡಿ. ಪದವಿಯನ್ನು ಪಡೆದುಕೊಂಡು ಸರ್ಕಾರದ ಯಾವುದೇ ಉದ್ಯೋಗವಾಗಲಿ ಅಥವಾ ಸರ್ಕಾರದ ಸೌಲಭ್ಯವಂಚಿತರಾಗಿ ನಿರುದ್ಯೋಗಿಗಳಾಗಿ ತಿಂಗಳಿಗೊಂದು ವರ್ಷಕ್ಕೊಂದು ಬರುವ ಮೂರ್ತಿಗಳನ್ನು, ವಿಗ್ರಹಗಳನ್ನು ತಯಾರಿಸಿಕೊಟ್ಟು ಜೀವನ ಸಾಗಿಸುತ್ತಿದ್ದಾರೆ. ಇಂತಹ ಪರಿಸ್ಥಿತಿ ಒಂದು ಕಡೆಯಾದರೆ ಗ್ರಾಮೀಣ ಪ್ರದೇಶದ ಯುವಶಿಲ್ಪಿಗಳು ತಮ್ಮ ತಂದೆ-ತಾಯಿಗಳನ್ನು ಬಿಟ್ಟು ದುಡಿಮೆಗೋಸ್ಕರ ದೊಡ್ಡ ದೊಡ್ಡ ನಗರದಲ್ಲಿ ತಮ್ಮ ಶಿಲ್ಪ ವೃತ್ತಿಯನ್ನು ಮಾಡುತ್ತಿದ್ದಾರೆ. ಸರ್ಕಾರಿ ಮತ್ತು ಅನುದಾನಿತ ಶಾಲಾ ಕಾಲೇಜುಗಳಲ್ಲಿ ಚಿತ್ರಕಲಾ ಶಿಕ್ಷಣ ಬೋಧಿಸಲು ಚಿತ್ರಕಲಾ ಶಿಕ್ಷಕರ ನೇಮಕಾತಿಗೆ ಅವಕಾಶವಿದೆ. ಆದರೆ ಪ್ರೌಢಶಾಲಾ ಕಾಲೇಜು ಹಂತದಲ್ಲಿ ಶಿಲ್ಪ ಕಲಾ ಶಿಕ್ಷಣ ಮತ್ತು ಶಿಲ್ಪಕಲಾ ಶಿಕ್ಷಕರ ನೇಮಕಾತಿಗೆ ಅವಕಾಶ ಕಲ್ಪಿಸಿಲ್ಲ. ಅಂದರೆ ಶಿಲ್ಪ ಕಲಾವಿದ ತನ್ನ ಕಲೆಯನ್ನೇ ಅವಲಂಬಿಸಿದ್ದಾನೆ. ಆ ಉದ್ಯೋಗವನ್ನು ತನ್ನದಾಗಿಸಿಕೊಂಡು ಜೀವನ ನಿರ್ವಹಣೆ ಮಾಡಬೇಕಾಗಿದೆ. ಹೊರ ರಾಜ್ಯಗಳಾದ ಆಂಧ್ರ ಪ್ರಾಚ್ಯವಸ್ತು ಇಲಾಖೆಗಳಲ್ಲಿ ಮತ್ತು ನಗರಸಭೆಗಳಲ್ಲಿ ಶಿಲ್ಪಕಲಾವಿದರ ನೇಮಕಾತಿ ಮಾಡಿಕೊಂಡು ಜಿಲ್ಲೆಗೆ ಒಬ್ಬರಂತೆ ಶಿಲ್ಪ ಕಲಾವಿದರು ಸರ್ಕಾರಿ ಸೇವೆ ಮಾಡುತ್ತಿದ್ದಾರೆ. ದೇವಾಲಯವು ರಾಜ್ಯದ ಆದಾಯ ಮೂಲಗಳಲ್ಲಿ ಒಂದು. ಮುಜರಾಯಿ ಇಲಾಖೆಗೆ ಆಗಮಿಕರೇ ಪ್ರಧಾನ ಎಂದು ಭಾವಿಸಿ ಕರ್ನಾಟಕ ಸರ್ಕಾರ ಆಗಮಿಕರನ್ನು ನೇಮಿಸಿಕೊಂಡಿದೆ. ಆಗಮದಲ್ಲಿ ಪರೀಕ್ಷೆಗಳನ್ನು ನಡೆಸುತ್ತಿದೆ. ಇದು ಅರ್ಚಕರಿಗೆ ನೆರವಾಗುವಂತಹದ್ದು. ಆಂಧ್ರಪ್ರದೇಶದಲ್ಲಿ ಇದರೊಂದಿಗೆ ಸ್ಥಪತಿ ಶಾಖೆಯು ಇದೆ. ಪ್ರತಿ ಜಿಲ್ಲೆಯಲ್ಲೂ ಒಬ್ಬ ಅಸಿಸ್ಟೆಂಟ್ ಸ್ಥಪತಿ ಇದ್ದು ಆ ದೇವಾಲಯಗಳ ದುರಸ್ತಿ ನೋಡಿಕೊಳ್ಳುತ್ತಾನೆ. ಈ ರೀತಿಯ ವ್ಯವಸ್ಥೆ ಕರ್ನಾಟಕದಲ್ಲಿ ಬರುವುದಾದರೆ ಇಲ್ಲಿ ದೇವಾಲಯಗಳು ಶಾಸ್ತ್ರೀಯ ನಿಯಮಕ್ಕೆ ಒಳಪಟ್ಟು ನಿರ್ಮಾಣಗೊಳ್ಳುತ್ತವೆ. ಇಲ್ಲಿ ದೇವಾಲಯ ಶಿಲ್ಪ ಕಲಿತವರಿಗೂ ಸರ್ಕಾರದ ಆಸರೆಯು ದೊರೆಯುವಂತಾಗುತ್ತದೆ. ಆಂಧ್ರಪ್ರದೇಶದಲ್ಲಿರುವ ದೇವಾಲಯಗಳ ದುಪ್ಪಟ್ಟು ದೇವಾಲಯಗಳು ಕರ್ನಾಟಕದಲ್ಲಿವೆ. ಆದರೆ ಸರ್ಕಾರವಾಗಲಿ, ಇಲಾಖೆಯಾಗಲಿ ಈ ಬಗ್ಗೆ ತಲೆಕೆಡಿಸಿಕೊಂಡಿಲ್ಲ. ಇಟ್ಟಿಗೆ, ಸಿಮೆಂಟ್‌ಗಳಿಂದ ಪಿಡಬ್ಲ್ಯುಡಿ ಇಲಾಖೆಯ ಅಸಿಸ್ಟೆಂಟ್ ಇಂಜನಿಯರ್ ನೇತೃತ್ವದಲ್ಲಿ ಬ್ಯಾಂಡೇಜ್‌ಗಳನ್ನು ಕಟ್ಟಿಸಿಕೊಳ್ಳುತ್ತಿದೆ. ಇದಕ್ಕೆ ಉದಾಹರಣೆಯಾಗಿ ಅಲಸೂರಿ(ಬೆಂಗಳೂರು)ನಲ್ಲಿರುವ ಪ್ರಾಚೀನವಾದ ಸೋಮೇಶ್ವರ ದೇವಾಲಯವನ್ನು ನೋಡಿದರೆ ಸಾಕು.[೮]

ಸಾಂಪ್ರದಾಯಿಕ ಶಿಲ್ಪಿಗಳ ಉದ್ಯೋಗದ ಮಾರ್ಗವನ್ನು ಯಾರ ಸಹಾಯವಿಲ್ಲದೇ ಸ್ವತಃ ತಾವೇ ಕಲ್ಪಿಸಿಕೊಳ್ಳಬೇಕಾಗಿದೆ. ಆದ್ದರಿಂದಲೇ ಉದ್ದದೇತ್ ಆತ್ಮಾನಾಂ ಎಂದು ಹೇಳಿದ್ದು ಶಿಲ್ಪಿಗಳೇ ತಮ್ಮ ಉದ್ಧಾರದ ಮಾರ್ಗವನ್ನು ಕಂಡುಕೊಳ್ಳಬೇಕು.

---

೮. ಡಾ. ಜಿ. ಜ್ಞಾನಾನಂದ: ಪಾರಂಪರಿಕ ಶಿಲ್ಪ ನಿನ್ನೆ-ನಾಳೆ, ಪು-೧೬೭

### ೫.೪. ಶೈಕ್ಷಣಿಕ ಸ್ಥಿತಿಗತಿ

ಸಾಂಪ್ರದಾಯಿಕ ಶಿಲ್ಪಕಲೆಯನ್ನು ಹೆಚ್ಚಾಗಿ ವಿಶ್ವಕರ್ಮ ಸಮುದಾಯದ ಮನೆತನಗಳು ವಂಶ ಪಾರಂಪರಾಗತವಾಗಿ ಪೀಳಿಗೆಯಿಂದ ಪೀಳಿಗೆಗೆ ಬಳುವಳಿಯಾಗಿ ಕಲಿಸಿದರು. ಬಾಲ್ಯದಲ್ಲಿ ತಂದೆ, ಅಜ್ಜ, ದೊಡ್ಡ ಅಣ್ಣ, ಅವರಿಂದಲೇ ಶಿಲ್ಪಕಲೆಯನ್ನು ಕಲಿತುಕೊಳ್ಳುವ ಅವಕಾಶವಿರುತ್ತಿತ್ತು. ಮನೆಯೇ ಶಿಲ್ಪಕಲಾ ಶಾಲೆಯಾಗಿ ಹಿರಿಯ ಶಿಲ್ಪಕಲಾವಿದರು ಗುರುಗಳಾಗಿ ಮಾರ್ಗದರ್ಶನ ನೀಡುತ್ತಿದ್ದರು. ಶಿಲ್ಪಕಲೆಯು ಪ್ರಮುಖವಾಗಿ ಪ್ರಾಯೋಗಿಕ ಶಿಕ್ಷಣವಾಗಿದ್ದರಿಂದ ಶಿಲ್ಪಿ ಗುರುಗಳ ಹತ್ತಿರ ಕೆಲವು ವರ್ಷಗಳ ಕಾಲ ತರಬೇತಿ ಪಡೆದು ಸ್ವತಂತ್ರ್ಯವಾಗಿ ಶಿಲ್ಪಗಳನ್ನು ನಿರ್ಮಿಸುವ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಿದ್ದರು. ಹಿರಿಯ ಶಿಲ್ಪ ಗುರುಗಳ ಹತ್ತಿರ ರೇಖಾಚಿತ್ರಗಳಿಂದ ಆರಂಭಗೊಂಡು ಶಿಲೆಯ ಆಯ್ಕೆ ಮರದ ಆಯ್ಕೆ ಮತ್ತು ಲೋಹಗಳ ಮಿಶ್ರಣ ಪ್ರಮಾಣ, ಲಯ ಬದ್ಧತೆ ವೇದ ಶಾಸ್ತ್ರ ಅಧ್ಯಯನಗಳನ್ನು ಮತ್ತು ಜೋತಿಷ್ಯ ಸ್ಥಾನ ಶ್ಲೋಕ, ಮಂತ್ರಗಳನ್ನು ತಾಳಮಾನಗಳನ್ನು ಕಲಿಯಬೇಕಾದರೇ ಸುಮಾರು ಐದರಿಂದ ಆರು ವರ್ಷ ಕಾಲಾವಧಿ ಬೇಕಾಗುತ್ತದೆ. ಸಾಂಪ್ರದಾಯಿಕ ಶಿಲ್ಪಿಯು ಶಿಕ್ಷಣದಲ್ಲಿ ಕಲಿತುಕೊಂಡು ಶಿಲ್ಪಕಲಾ ತರಬೇತಿಯನ್ನು ಪಡೆದುಕೊಳ್ಳುತ್ತಾನೆ. ಹಿಂದಿನ ತಲೆಮಾರಿನ ಸಾಂಪ್ರದಾಯಿಕ ಶಿಲ್ಪಿಗಳು ಶಾಲಾಶಿಕ್ಷಣವನ್ನು ಹೆಚ್ಚಾಗಿ ಕಲಿತಿರುವುದು ಕಂಡುಬರುವುದಿಲ್ಲ. ಕೇವಲ ಮೂರು, ಐದು, ಏಳನೇ ತರಗತಿಯವರೆಗೆ ಶಾಲಾ ಶಿಕ್ಷಣ ಮುಗಿಸಿ ಇಂದು ಅವರು ತಮ್ಮ ಶಿಲ್ಪಕಲಾ ನೈಪುಣ್ಯದಿಂದ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ತಮ್ಮ ಹೆಸರು ಕೀರ್ತಿಗಳನ್ನು ಮೆರೆದಿದ್ದಾರೆ. ಇನ್ನೂ ಕೆಲವು ಹಿರಿಯ ಹಳೆ ತಲೆಮಾರಿನ ಶಿಲ್ಪಿಗಳು ಶಾಲಾ ಶಿಕ್ಷಣವನ್ನು ಒಂದನೇ ತರಗತಿಯನ್ನು ಕಲೆಯದೇ ಇದ್ದರೂ ಅತ್ಯುತ್ತಮ ಕಲಾಕೃತಿಗಳನ್ನು ನಿರ್ಮಿಸಿದ್ದು ರಾಜ್ಯಮಟ್ಟದಲ್ಲಿ ಪ್ರಖ್ಯಾತ ಸಾಂಪ್ರದಾಯಿಕ ಶಿಲ್ಪಿಗಳ ಸಾಲಿನಲ್ಲಿ ನಿಂತಿದ್ದಾರೆ. ರಾಜ್ಯ ಪ್ರಶಸ್ತಿ, ಶಿಲ್ಪಕಲಾ ಅಕಾಡೆಮಿ ಪ್ರಶಸ್ತಿ ಪಡೆದುಕೊಂಡು ನೂರಾರು ಯುವ ಶಿಲ್ಪಿಗಳಿಗೆ ಶಿಲ್ಪ ಗುಣಗಳಾಗಿ ಮಾರ್ಗದರ್ಶನ ಮಾಡಿದವರು ಇದ್ದಾರೆ. ಉದಾಹರಣೆಗೆ ಗದುಗಿನ ಶ್ರೀ ಸೋಮಣ್ಣ ಶಿಲ್ಪಿಯವರು ವಿದ್ಯಾವಂತರಲ್ಲದಿದ್ದರೂ ಸಾಂಪ್ರದಾಯಿಕ ಶಿಲ್ಪಕಲೆಯನ್ನು ಸಿದ್ಧಹಸ್ತ ಮಾಡಿಕೊಂಡಿದ್ದರು. ಸಾವಿರಾರು ಶಿಲಾಮೂರ್ತಿಗಳನ್ನು ಮಾಡಿದ ಕೀರ್ತಿ ಇದೆ. ಅಂದರೆ ಸಾಂಪ್ರದಾಯಿಕ ಶಿಲ್ಪಕಲೆ ಕಲಿಯಲು ಶಾಲಾ ಶಿಕ್ಷಣಕ್ಕಿಂತ ಗುರುಕುಲ ಮಾದರಿಯ ಶಿಲ್ಪಕಲಾ ತರಬೇತಿಯೇ ಮುಖ್ಯವೆನಿಸುತ್ತದೆ.

ದೇವಾಲಯ ಶಿಲ್ಪವನ್ನು ಮಾಡುತ್ತಿದ್ದ ಶಿಲ್ಪ ಬ್ರಾಹ್ಮಣನ ಶಿಲ್ಪಾಗಾರವು ಗುರುಕುಲವಾಗಿತ್ತು. ಅಲ್ಲಿ ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟ, ವಸತಿ ಕೊಟ್ಟು ಶಿಲ್ಪಿ ವಿದ್ಯೆಯನ್ನು ಕಲ್ಪಿಸುವುದು, ಶಾಸ್ತ್ರ, ಬೋಧೆಗಳು ನಡೆಯುತ್ತಿದ್ದವು. ಶಿಲ್ಪಶಾಸ್ತ್ರವು ಉಳಿದುಬಂದಿದ್ದು, ಹೀಗೆ ಹತ್ತು ಸಾವಿರ ಮಂದಿ ಶಿಷ್ಯರಿಗೆ ಉಚಿತವಾಗಿ ಅನ್ನ, ಬಟ್ಟೆ ಆಶ್ರಯ ಕೊಟ್ಟು ವಿದ್ಯೆಯನ್ನು ಬೋಧಿಸಿದವರನ್ನು ಕುಲಪತಿಯೆಂದು ಕರೆಯುತ್ತಿದ್ದರು. ಇಂತಹ ಹಲವಾರು ಮಂದಿ ಕುಲಪತಿಗಳು ಶಿಲ್ಪವನ್ನು ಭೋವಿಸುತ್ತಿದ್ದು ನಮ್ಮ ಪರಂಪರೆಯು ಉಲ್ಲೇಖಿಸುತ್ತದೆ.[೯]

---

೯. ಡಾ. ಜಿ. ಜ್ಞಾನಾನಂದ: ಪಾರಂಪರಿಕ ಶಿಲ್ಪ ನಿನ್ನೆ-ನಾಳೆ, ಪು-೧೫೫.

ಸಾಂಪ್ರದಾಯಿಕ ಶಿಲ್ಪಕಲಾವಿದರು ಶೈಕ್ಷಣಿಕ ಸ್ಥಿತಿಗತಿಯಲ್ಲಿ ತುಂಬಾ ಹಿಂದಿದ್ದಾರೆ. ಸಾಂಪ್ರದಾಯಿಕ ಶಿಲ್ಪಕಲಾವಿದರ ಬದುಕು ಮಕ್ಕಳಿಗೆ ಉನ್ನತ ಶಿಕ್ಷಣವನ್ನು ಕಲಿಸುವಷ್ಟು ಸರಳವಾಗಿಲ್ಲ. ಸದಾ ಶಿಲ್ಪ ಕಾರ್ಯದಲ್ಲೇ ಮಗ್ನರಾಗಿ ತಮ್ಮ ಮಕ್ಕಳನ್ನು ಕೂಡ ಚಿಕ್ಕವರಿರುವಾಗಲೇ ಶಿಲ್ಪಕಲೆಯಲ್ಲಿ ತೊಡಗಿಸಿಕೊಳ್ಳುತ್ತಾರೆ. ಇದರಿಂದ ಶಿಲ್ಪಕಲಾವಿದರ ಮಕ್ಕಳ ವಿದ್ಯಾಭ್ಯಾಸದಲ್ಲಿ ಹಿನ್ನಡೆ ಉಂಟಾಗಿ ಅವರ ಶಾಲಾ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿದ ಅನೇಕ ಉದಾಹರಣೆಗಳಿವೆ. ಕೆಲವೊಂದು ಶಿಲ್ಪ ಕಲಾವಿದರು ಮಕ್ಕಳ ಭವಿಷ್ಯ ಉನ್ನತೀಕರಣವಾಗಲೆಂದು ಶೈಕ್ಷಣಿಕ ವ್ಯಾಸಂಗಕ್ಕೆ ಕಳಿಸಿಕೊಟ್ಟು ಅವರನ್ನು ಶಿಕ್ಷಣಾರ್ಥಿ ಮಾಡುವಲ್ಲಿ ಯಶಸ್ವಿಯಾಗಿದೆ. ಕಲಾವಿದರು ಕಲಾಶಿಕ್ಷಣವನ್ನು ಮುಂದು ವರಿಸಲು ಉತ್ಸುಕರಾಗಿರುತ್ತಾರೆ. ಶಿಲ್ಪಕಲಾ ಶಿಕ್ಷಣ ಕೊಡುವ ಕೇವಲ ಕೆಲ ಕಲಾಶಾಲೆಗಳು, ಶಿಲ್ಪಕಲಾ ಕಾಲೇಜುಗಳು ತುಂಬಾ ವಿರಳ. ಕಾರ್ಕಳದಲ್ಲಿ ಕೆನರಾ ಬ್ಯಾಂಕಿನವರು ನಡೆಸುವ ಶಿಲ್ಪಕಲಾ ತರಬೇತಿ ಕೇಂದ್ರ ೧೮ ತಿಂಗಳ ತರಬೇತಿಯನ್ನು ಒಳಗೊಂಡಿದೆ. ಹಾಗೆಯೇ ಬೆಂಗಳೂರಿನ ಕೆಂಗೇರಿ ಯಲ್ಲಿರುವ ಶಿಲ್ಪಕಲಾ ತರಬೇತಿ ಕೇಂದ್ರ ಊಟ ವಸತಿಯೊಂದಿಗೆ ಒಂದೂವರೇ ವರ್ಷದ ತರಬೇತಿಯನ್ನು ನೀಡುತ್ತದೆ. ರಾಜ್ಯದಲ್ಲಿರುವ ಕನ್ನಡ ವಿಶ್ವವಿದ್ಯಾಲಯದ ವಿಭಾಗದ ಬಾದಾಮಿ ಬನಶಂಕರಿಯಲ್ಲಿ ಶಿಲ್ಪಕಲೆಯ ಡಿಪ್ಲೊಮಾ ಮಾತ್ರವಿದ್ದು ಶಿಲ್ಪಕಲೆಯಲ್ಲಿ ಪದವಿ ಸ್ನಾತಕೋತ್ತರ ಪದವಿ, ಎಂ.ಫಿಲ್., ಪಿಎಚ್.ಡಿ.ಯಂತಹ ಅವಕಾಶಗಳನ್ನು ಕಲ್ಪಿಸಿದೆ.

ಕಲಬುರ್ಗಿಯ ದಿ ಐಡಿಯಲ್ ಫೈನ್ ಆರ್ಟ್ ಕಾಲೇಜು, ಕಲಬುರ್ಗಿ ಶಿಲ್ಪಕಲೆಯಲ್ಲಿ ಪದವಿ ಮತ್ತು ಸ್ನಾತಕ ಪದವಿಯನ್ನು ಪಡೆಯಲು ಅವಕಾಶವಿದೆ. ಮೈಸೂರಿನ ಆವರಣದಲ್ಲಿ ಶಿಲ್ಪಕಲಾ ವಿಭಾಗವಿದ್ದು, ಶಿಲ್ಪಕಲಾ ಶಿಕ್ಷಣವನ್ನು ಪಡೆಯಬಹುದಾಗಿದೆ. ಬೆಂಗಳೂರಿನ ಚನ್ನಪಟ್ಟಣ ಶಿಲ್ಪಕಲಾ ಕಾಲೇಜಿನಲ್ಲಿ ಎಸ್.ಎಸ್.ಎಲ್.ಸಿ. ಉತ್ತೀರ್ಣವಾದ ನಂತರ ಬಿ.ಎಫ್.ಎ. ಶಿಲ್ಪಕಲೆ ಮಾಡಲು ಆವರಣವಿದೆ. ಚಿತ್ರಕಲಾ ಪರಿಷತ್ತು, ಬೆಂಗಳೂರು ಇಲ್ಲಿಯೂ ಕೂಡ ಶಿಲ್ಪಕಲಾ ವಿಭಾಗವಿದ್ದು ಶಿಲ್ಪಕಲೆ ಪದವಿಗಳನ್ನು ವ್ಯಾಸಂಗ ಮಾಡಬಹುದಾಗಿದೆ. ಹೀಗೆ ಕೆಲವು ಶಿಲ್ಪಕಲೆಯ ಬಗ್ಗೆ ಶಿಕ್ಷಣ ನೀಡುವ ಬಗ್ಗೆ ಕೆಲವೇ ಕಾಲೇಜು ಇರುವುದರಿಂದ ಗ್ರಾಮೀಣ ಪ್ರದೇಶದ ಸಾಂಪ್ರದಾಯಿಕ ಶಿಲ್ಪಕಲಾವಿದರ ಮಕ್ಕಳು ಶಿಲ್ಪಕಲೆಯಲ್ಲಿ ಉನ್ನತ ಶಿಕ್ಷಣ ಪಡೆಯಲು ಅವಕಾಶವಿಲ್ಲದಂತಾಗಿದೆ. ರಾಜ್ಯದಲ್ಲಿ ಇರುವ ಚಿತ್ರಕಲಾ ಕಾಲೇಜುಗಳಂತೆ ಶಿಲ್ಪಕಲಾ ಕಾಲೇಜುಗಳಿಗೂ ಸರ್ಕಾರ ಶಿಕ್ಷಣ ಇಲಾಖೆಯಿಂದ ಅನುಮತಿ ನೀಡಿ ಜಿಲ್ಲೆಗೆ ಒಂದರಂತೆ ಶಿಲ್ಪಕಲಾ ಕಾಲೇಜುಗಳನ್ನು ನಿರ್ಮಿಸಿ, ಊಟ, ವಸತಿ ಸೌಲಭ್ಯಗಳೊಂದಿಗೆ(ಹಾಸ್ಟೆಲ್) ಅವಕಾಶ ಕಲ್ಪಿಸಿಕೊಟ್ಟರೆ ಸಾಂಪ್ರದಾಯಿಕ ಶಿಲ್ಪ ಕಲಾಶಿಕ್ಷಣ ಉಳಿಯಲು ಸಹಕಾರ ಮಾಡಿದಂತಾಗುವುದು. ಸಾಂಪ್ರದಾಯಿಕ ಶಿಲ್ಪಕಲಾವಿದರು ಇಲ್ಲಿ ಉನ್ನತ ಶಿಕ್ಷಣ ಪಡೆದು ಶಿಲ್ಪಕಲಾ ಗುರುಕುಲಗಳನ್ನು ಸ್ಥಾಪನೆ ಮಾಡುವ ನಿಟ್ಟಿನಲ್ಲಿ ಪ್ರಯತ್ನ ಶೀಲರಾಗಬೇಕಾಗಿದೆ. ಇದಕ್ಕೆ ಸಾರ್ವಜನಿಕ ಶಿಕ್ಷಣ ಇಲಾಖೆ ಅಥವಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಶಿಲ್ಪಕಲಾ ಅಕಾಡೆಮಿ ಸೇರಿದಂತೆ ಶಿಲ್ಪ ಕಲಾವಿದರ ಶೈಕ್ಷಣಿಕ ಅಭಿವೃದ್ಧಿಗೆ ಚಿಂತನೆ ಮಾಡಬೇಕಾಗಿದೆ. ಶಿಲ್ಪಕಲಾ ಶಿಕ್ಷಣವು ಪ್ರಾಚೀನ ಪರಂಪರೆಯನ್ನು ಹೊಂದಿದ್ದು ನಮ್ಮ ನಾಡಿನ

ಹೆಮ್ಮೆಯ ವಿಷಯವಾಗಿದೆ. ಶಿಲ್ಪಕಲಾ ಶಿಕ್ಷಣದಲ್ಲಿ ಮರ, ಶಿಲೆ, ಲೋಹ, ಮಣ್ಣು, ಗಚ್ಚು ಗಾರೆ ಮತ್ತು ಸಂಕೀರ್ಣಗಳ ಮಾಧ್ಯಮಗಳಂತಹ ಅನೇಕ ಶಿಲ್ಪಗಳನ್ನು ಪಠ್ಯಕ್ರಮಕ್ಕೆ ಅನುಗುಣವಾಗಿ ಏಕರೂಪ ಶಿಲ್ಪಕಲಾ ಶಿಕ್ಷಣದ ಪಠ್ಯಕ್ರಮವನ್ನು ಅಳವಡಿಸಿ ಶಿಲ್ಪಕಲಾ ಶಿಕ್ಷಣವನ್ನು ನೀಡಿದರೆ ನಮ್ಮ ರಾಜ್ಯದಲ್ಲಿ ಅನೇಕ ಯುವಶಿಲ್ಪಿಗಳು ಶಿಲ್ಪಕಲೆ ಶಿಕ್ಷಣವನ್ನು ವ್ಯಾಸಂಗ ಮಾಡಿ ಶಿಲ್ಪಕಲೆಯಲ್ಲಿ ಪ್ರಾವೀಣ್ಯತೆ ಸಾಧಿಸುವ ಸಾಧ್ಯತೆ ಇದೆ. ಗ್ರಾಮೀಣ ಪ್ರದೇಶದ ಶಿಲ್ಪಿಗಳು ರಾಜ್ಯಮಟ್ಟದಲ್ಲಿ ರಾಷ್ಟ್ರ ಮಟ್ಟದಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ  ಬೆಳೆಯಬೇಕಾದರೆ ಕನ್ನಡ ಭಾಷೆ ಮಾತ್ರವಲ್ಲದೇ ಹಿಂದಿ, ಇಂಗ್ಲಿಷ್‌ನಂತಹ ಬೇರೆ ರಾಜ್ಯ ದೇಶಗಳ ಭಾಷೆಗಳನ್ನು ಕಲಿಯಲು ಭಾಷಾ ಸಂವಹನ ತರಬೇತಿಗಳನ್ನು ನೀಡುವುದರಿಂದ ಸಾಂಪ್ರದಾಯಿಕ ಶಿಲ್ಪಿಗಳು ಬದುಕು ಮತ್ತು ಕಲೆ ವಿಸ್ತಾರಗೊಂಡು ಶಿಲ್ಪಕಲೆ ಉಚ್ಛ್ರಾಯ ಸ್ಥಿತಿಗೆ ತಲುಪುತ್ತದೆ. ಎಷ್ಟೋ ಜನ ಸಾಂಪ್ರದಾಯಕ ಶಿಲ್ಪಕಲಾವಿದರಿಗೆ ಪ್ರಾದೇಶಿಕ ಭಾಷೆಯನ್ನು ಬಿಟ್ಟರೆ ಬೇರೆ ಭಾಷೆಯನ್ನು ಮಾತನಾಡಲು ಬರುವುದಿಲ್ಲ. ಇದು ಕೂಡ ಅವರ ಶಿಲ್ಪಕಲೆಯನ್ನು ಜಾಗತಿಕ ಮಟ್ಟಕ್ಕೆ ಪರಿಚಯಿಸುವಲ್ಲಿ ಮಂದಗಾಮಿಯಾಗುವುದು.

ಈ ರೀತಿಯಾಗಿ ಸಾಂಪ್ರದಾಯಿಕ ಶಿಲ್ಪಕಲಾವಿದರು ಬೇರೆ ಬೇರೆ ಭಾಷೆಗಳನ್ನು ಕಲಿಯುವುದ ರಿಂದ ಹೊರ ರಾಜ್ಯ ಮತ್ತು ಹೊರ ದೇಶಗಳ ಕಲಾವಿದರೊಂದಿಗೆ ತಮ್ಮ ಕಲಾ ಪ್ರಜ್ಞೆಯನ್ನು ಇನ್ನಷ್ಟು ಉದ್ದೀಪನಗೊಳಿಸಿಕೊಳ್ಳುವ ಅವಕಾಶ ಸಿಕ್ಕಂತಾಗುತ್ತದೆ. ಶಿಲ್ಪಕಲೆಯ ಜೊತೆಗೆ ಶಿಲ್ಪಕಲಾ ಶಿಕ್ಷಣ, ಭಾಷಾಜ್ಞಾನ ಹಾಗೂ ಮಾಹಿತಿ ತಂತ್ರಜ್ಞಾನ ಎಲ್ಲವೂ ಸಂಗಮದಲ್ಲಿ ಸಾಂಪ್ರದಾಯಿಕ ಶಿಲ್ಪಕಲೆ ಶೈಕ್ಷಣಿಕವಾಗಿ ಮುಂದುವರಿದರೆ ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಔದ್ಯೋಗಿಕವಾಗಿ ಪ್ರಗತಿ ಸಾಧಿಸಲು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಜಾಗತಿಕ ಮಟ್ಟದಲ್ಲಿ ಸಾಂಪ್ರದಾಯಿಕ ಶಿಲ್ಪಕಲಾವಿದರು ಗುರುತಿಸಿಕೊಳ್ಳುವುದು ವಿಳಂಬವಾಗುವುದು. ಮಾನವನ ಅದೃಷ್ಟಕ್ಕೆ ಶಿಕ್ಷಣವು ಅತ್ಯಂತ ಪ್ರಮುಖ ಪಾತ್ರ ವಹಿಸುತ್ತದೆ. ಸಾಂಪ್ರದಾಯಿಕ ಶಿಲ್ಪಿಗಳು ಮುಂದಿನ ಪೀಳಿಗೆಗಾದರೂ ಶೈಕ್ಷಣಿಕವಾಗಿ ಶಿಲ್ಪಕಲಾ ಶಿಕ್ಷಣವನ್ನು ಅಧ್ಯಯನ ಮಾಡಲು ಸಹಕಾರ ನೀಡಿ ಅವರಿಗೆ ಹಾರೈಸ ಬೇಕಾಗಿದ್ದು ಜವಾಬ್ದಾರಿಯಾಗಿದೆ. ಕೇವಲ ಶಿಲ್ಪಕಲೆಯನ್ನು ಸ್ಥಳೀಯವಾಗಿ ಸೀಮಿತಗೊಳಿಸದೇ ಜಾಗತಿಕ ಮಟ್ಟದಲ್ಲಿ ಅದನ್ನು ಗುರುತಿಸುವಂತಾಗಲೂ ಶಿಕ್ಷಣ ಸಂಸ್ಥೆಗಳು ವಿಶ್ವವಿದ್ಯಾಲಯಗಳು, ಸರ್ಕಾರಗಳು ಕೂಡ ಇಚ್ಛಾಶಕ್ತಿಯನ್ನು ತೋರಿಸಬೇಕಾದ ಸಂದರ್ಭ ಬಂದಿದೆ. ಶಿಕ್ಷಣ ಮತ್ತು ಕಲೆ ಒಂದೇ ನಾಣ್ಯದ ಎರಡು ಮುಖವಿದ್ದಂತೆ. ಸಾಂಪ್ರದಾಯಿಕ ಶಿಲ್ಪಕಲಾವಿದರ ಕಲೆ ಮತ್ತು ಶಿಕ್ಷಣ ಏಕಕಾಲದಲ್ಲಿ ಜಾಗೃತವಾದರೆ ನಾಡಿನ ಅಭ್ಯುದಯವಾಗುತ್ತದೆ.

**೫.೫. ಸಾಂಸ್ಕೃತಿಕ**

ಸಾಂಪ್ರದಾಯಿಕ ಶಿಲ್ಪವು ಭಾರತೀಯ ಸಂಸ್ಕೃತಿಯ ಒಂದು ಭಾಗವೇ ಆಗಿದೆ. ಶಿಲ್ಪಿಗೆ ತಿಳಿಯದ ಜ್ಞಾನವಿಲ್ಲ, ವಿಚಾರವಿಲ್ಲ. ಇಲ್ಲದಿದ್ದಲ್ಲಿ ನಿರ್ಜೀವ ಕಲ್ಲಿನಲ್ಲಿ ಅಥವಾ ಮರದಲ್ಲಿ ಜೀವಕಳೆ ಬರುವಂತಹ ದಿವ್ಯವಿಗ್ರಹಗಳನ್ನು ರೂಪಿಸಲು ಸಾಧ್ಯವಾಗುತ್ತಿರಲಿಲ್ಲ. ಸಾಂಪ್ರದಾಯಿಕ ಶಿಲ್ಪವು ಕೇವಲ ಶಾಸ್ತ್ರ ಜ್ಞಾನವಲ್ಲ. ಆ ಶಿಲ್ಪವನ್ನು ಮಾಡುವ ಶಿಲ್ಪಿಯು ಅನುಭಾವವನ್ನು ಪಡೆದ

ಮಹಾನ್ ಯೋಗಿಯೇ ಆಗಿರುತ್ತಾನೆ. ಲಲಿತಕಲೆಗಳೆಲ್ಲವೂ ಶಿಲ್ಪಿ ಯೋಗಿಗೆ ಹಂತ ಹಂತವಾಗಿ ತಾನೇ ಮೈಗೂಡಿಕೊಂಡಿರುತ್ತದೆ. ಇಂತಹ ಅನೇಕ ಉದಾಹರಣೆಗಳಿಗೆ ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು ಸಾಕ್ಷಿಯಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ಹಿರಿಯ ಶಿಲ್ಪಿಗಳಾದ ಜಿ. ಬಿ. ಹಂಸಾನಂದಾಚಾರ್ಯರು ರಥಶಿಲ್ಪ, ಶಿಲಾಶಿಲ್ಪ, ಲೋಹಶಿಲ್ಪ, ಮೃತ್ತಿಕೆಶಿಲ್ಪ ಮತ್ತು ಗಾರೆಶಿಲ್ಪವನ್ನು ಕೂಡ ಮಾಡಿದ್ದಾರೆ. ಸ್ವತಃ ಹವ್ಯಾಸಿ ರಂಗಭೂಮಿ ಕಲಾವಿದರು ಕೂಡ ಆಗಿದ್ದಾರೆ. ಹೇಮರಡ್ಡಿ ಮಲ್ಲಮ್ಮ ನಾಟಕದಲ್ಲಿ ಭರಮರಡ್ಡಿ ಪಾತ್ರವನ್ನು ಅತ್ಯಂತ ವಿಶಿಷ್ಟವಾಗಿ ಅಭಿನಯಿಸಿದ್ದಾರೆ. ಗೋಣಿ ಬಸವೇಶ್ವರ ನಾಟಕದಲ್ಲಿ ಪಾತ್ರಗಳನ್ನು ಮಾಡಿ ಜನರ ಮನರಂಜಿಸಿದ್ದಾರೆ. ಇದು ಅಲ್ಲದೇ ಸಂಗೀತ ವಿದ್ಯೆಗಳಲ್ಲಿ ಅನೇಕ ರಾಗಗಳನ್ನು ನುಡಿಸುವ ಮೂಲಕ ಹಾರ್ಮೋನಿಯಂ, ತಬಲಾ, ವೈಲಿನ್, ದಿಲ್, ರೂಭಾ, ಪೀಟಿಲು ಮುಂತಾದ ವಾದ್ಯಗಳನ್ನು ನುಡಿಸುವುದರಲ್ಲಿ ಸಿದ್ಧಹಸ್ತರು. ಜೋತಿಷ್ಯ, ವಾಸ್ತುಶಿಲ್ಪ, ಜಲಶಿಲ್ಪ, ಆಯುರ್ವೇದದ ಔಷಧ ಜ್ಞಾನವನ್ನು ಪಡೆದವರಾಗಿದ್ದಾರೆ. ಭವ್ಯ ಮನೆಯನ್ನು ನಿರ್ಮಿಸುವುದರಿಂದ ಹಿಡಿದು ದೇವಾಲಯದ ನಿರ್ಮಾಣದ ಕಾರ್ಯವನ್ನು ಶಿಲ್ಪಕಲಾವಿದರು ನಿರ್ವಹಿಸುತ್ತಾರೆ. ರೇಖೆ, ನಕ್ಷೆ ರೂಪರೇಷೆಗಳ ಬಗ್ಗೆ ಅನೇಕ ರೇಖಾಚಿತ್ರಗಳನ್ನು ಪೂರ್ವದಲ್ಲಿ ತಯಾರಿಸಿಕೊಂಡು ಶಿಲ್ಪ ರಚಿಸುತ್ತಾರೆ. ಅನ್ನಪೂರ್ಣೇಶ್ವರಿ, ಗೋಣಿ ಬಸವೇಶ್ವರ, ಸಿದ್ಧಾರೂಢ ಇನ್ನೂ ಅನೇಕ ಮಹಾತ್ಮರ ಬೃಹದಾಕಾರದ ವರ್ಣಚಿತ್ರಗಳನ್ನು ರಚಿಸಿದ್ದಾರೆ.

ಅವರು ಸಾಹಿತ್ಯ, ಚಿತ್ರ, ವಾಸ್ತುಶಿಲ್ಪ, ಸಂಗೀತ, ನಾಟಕ ಮತ್ತು ಜೋತಿಷ್ಯ, ಆಯುರ್ವೇದ(ನಾಟಿ ವೈದ್ಯ) ಇವೆಲ್ಲವುಗಳ ಸಂಗಮವಾಗಿದ್ದಾರೆ. ಆಧ್ಯಾತ್ಮಿಕ ಪ್ರವಚನ ಉಪನ್ಯಾಸಗಳನ್ನು ನೀಡಿದ್ದಾರೆ. ದೇವಾಲಯಗಳಲ್ಲಿ ಭಜನೆ, ಕೀರ್ತನೆ, ದೇವಿ ಪುರಾಣ ಮಹಾತ್ಮೆಯ ಪ್ರವಚನ ಮತ್ತು ಶನೀಶ್ವರ ಮಹಾತ್ಮೆಯ ಪುರಾಣ ಪಠಣವನ್ನು ಅನೇಕ ದೇವಾಲಯಗಳಲ್ಲಿ ಮಾಡಿದ್ದಾರೆ. ಇದೂ ಅಲ್ಲದೇ ಜಕಣಾಚಾರಿ ಪ್ರಶಸ್ತಿಗೆ ಭಾಜನರಾದ ಶಿಲ್ಪಿಗಳು ಹಂಸಾನಂದಾಚಾರ್ಯರು ಪಾಕಶಾಸ್ತ್ರದಲ್ಲಿ ಸಿದ್ಧಹಸ್ತರು, ಹೋಳಿಗೆ, ಲಾಡು, ಉಂಡೆ ಇನ್ನಿತರ ಪುಷ್ಕಳ ಭಕ್ಷ್ಯ ಭೋಜನಗಳನ್ನು ತಯಾರಿಸಿ ಉಣ ಬಡಿಸುತ್ತಾರೆ. ಒಬ್ಬ ಶಿಲ್ಪಕಲಾವಿದ ಮಾತ್ರವಲ್ಲದೆ ಸಂಸ್ಕೃತಿಯ ಹರಿಕಾರರಾಗಿದ್ದಾರೆ. ಇನ್ನೊಬ್ಬ ಸಾಂಪ್ರದಾಯಿಕ ಲೋಹ, ಶಿಲ್ಪಿ ಬಳ್ಳಾರಿ ಜಿಲ್ಲೆ ಹಡಗಲಿ ತಾಲೂಕಿನ ಶಂಕ್ರಪ್ಪನವರು ಸಂಸ್ಕೃತಿಯ ವಿವಿಧ ಆಯಾಮಗಳನ್ನು ಬಲ್ಲವರು. ಸಂಗೀತ, ನಾಟಕ ರಂಗಸಜ್ಜಿಕೆಯಲ್ಲಿ ವಿವಿಧ ಪಾತ್ರಗಳನ್ನು ಮಾಡುತ್ತಾ ಶಿಲಾಶಿಲ್ಪ, ಲೋಹಶಿಲ್ಪ, ಮರಶಿಲ್ಪ, ಗಾರೆಶಿಲ್ಪ ಮತ್ತು ಹಾರ್ಮೋನಿಯಂ ವಾದ್ಯ ನುಡಿಸುವುದು, ನಾಟಕಗಳನ್ನು ಕಲಿಸುವುದು ಮುಂತಾದ ಅನೇಕ ಸಾಂಸ್ಕೃತಿಕ ಮಜಲನ್ನು ಮೈಗೂಡಿಸಿಕೊಂಡಿದ್ದಾರೆ. ಸಂಸ್ಕಾರಕ್ಕೂ ಸಂಸ್ಕೃತಿಗೂ ನಿಕಟ ಸಂಬಂಧವಿದೆ. ಸಂಸ್ಕಾರ ನಾನಾ ದಿಕ್ಕುಗಳಿಂದ ನಾನಾ ಮೂಲಗಳಿಂದ ಬರಬಹುದಾದ್ದರಿಂದ ಸಂಸ್ಕೃತಿಗೆ ಸೇರದ ವಿಷಯವಿಲ್ಲ. ಹಾಗಾಗಿ ಮಾನವನ ಜೀವನದ ಎಲ್ಲಾ ಚಟುವಟಿಕೆ ಮತ್ತು ತಿಳಿವಳಿಕೆಯನ್ನು ಸಂಸ್ಕೃತಿಯಲ್ಲಿ ಸೇರಿಸುವ ಆತುರ ಕಂಡುಬಂದಿತು. ಇದರ ಬಗ್ಗೆ ನಿರ್ದಿಷ್ಟವಾದ ವ್ಯಾಖ್ಯೆಯನ್ನು ಕಟ್ಟಿಕೊಡಲು ಕಷ್ಟ ಸಾಧ್ಯವಾಯಿತು. ಆದರೂ ಈ ಪ್ರಯತ್ನ ನಿಂತಿಲ್ಲ. ಉತ್ಪಾದನಾ ಸಂಬಂಧಗಳ ಆಧಾರದಲ್ಲಿ ಮೂಲ ರಚನೆಯಾಗಿರುವ ರೂಪಗೊಳ್ಳುವ ಬುದ್ಧಿ ಭಾವಗಳ ಸಂಸ್ಕಾರ ಪ್ರಕ್ರಿಯೆ ಸಂಸ್ಕೃತಿಯೆಂದು ಗ್ರಹಿಸುವುದು ಉಪಯುಕ್ತ.

ಮಾನವನಿಗೆ ಸಂಸ್ಕಾರವನ್ನು ಒದಗಿಸುವ ಎಲ್ಲಾ ಅಂಶಗಳು ಸಂಸ್ಕೃತಿಯ ತಳಹದಿಯೇ. ಪ್ರಕೃತಿಯ ಜೀವಕೋಟಿಯಲ್ಲಿ ಒಂದಾಗಿದ್ದ ಮಾನವ ಪ್ರಾಣಿ ವಾನರಾವಸ್ಥೆ, ನರಾವಸ್ಥೆ ತಲುಪಲು ಮುಖ್ಯ ಕಾರಣ ಸಂಸ್ಕಾರವೇ. ಸಂಸ್ಕಾರ ದುಡಿಯುವ ರೂಪದಲ್ಲಿ ಕಾಣಿಸಿಕೊಂಡಿತು. ಮಾನವ ಪ್ರಕೃತಿಯ ಒರಟು ನಿಯಮಗಳನ್ನು ಅರಿತುಕೊಂಡು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳಲು ಮಾರ್ಪಾಡಿಸಿ ಕೊಳ್ಳಲು ದುಡಿಮೆ ಆಧಾರವಾಯಿತು. ಮುಟ್ಟಿಗೆ ಆಕಾರದ ಕಲ್ಲನ್ನು ಸಂಸ್ಕರಿಸಿ ವಿವಿಧ ಬಗೆಯ ಆಯುಧ ಮತ್ತು ಉಪಕರಣಗಳ ಆಧಾರದಲ್ಲಿ ಹಲವು ಶತಮಾನಗಳವರೆಗೆ ಬದುಕು ಮಾಡಿದ್ದನ್ನು ಶಿಲಾಯುಗ ಎನ್ನುತ್ತಾರೆ. ನಂತರ ಉಪಯುಕ್ತ ಕಲೆಗಳ ಪಂಥ ಪದ್ಧತಿಗಳ ಆವಿಷ್ಕಾರವಾಯಿತು. ಈ ಹಂತ ಸಂಸ್ಕೃತಿ, ಧರ್ಮ ಹಾಗೂ ದೈನಂದಿನ ಚಟುವಟಿಕೆಗಳ ನಡುವೆ ಬಿಡಿಸಲಾರದ ನಂಟಿತ್ತು. ನಂತರ ಲೋಹಯುಗ ಬಂದಿತು. ನಾಗರಿಕರ ಜೊತೆ ಬೆಳೆಯುತ್ತಾ ಬಂದಿದೆ.[೧೦]

ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು, ಸಂಸ್ಕೃತಿಹರಿಕಾರರು ಹಬ್ಬ, ಜಾತ್ರೆ, ಉತ್ಸವಗಳಲ್ಲಿ ರಥಶಿಲ್ಪ, ಮೂರ್ತಿಶಿಲ್ಪ, ವರ್ಣಶಿಲ್ಪ, ಲೋಹಶಿಲ್ಪ, ಗಂಟೆ, ಜಾಗಟೆ, ಕಹಳೆ, ನಂದಿಕೋಲು, ವಿಗ್ರಹಗಳು, ಉತ್ಸವದ ಪಲ್ಲಕ್ಕಿ, ದೇವಾಲಯಗಳು, ಸಂಗೀತ ಪರಿಕರಗಳು, ಛತ್ರ ಚಾಮರಗಳು ಹೀಗೆ ಅನೇಕ ವಿಧವಾದ ಸಾಂಸ್ಕೃತಿಕ ಲೋಕದಲ್ಲಿ ಸಾಂಪ್ರದಾಯಿಕ ಕಲೆಗಳ ಕೊಡುಗೆಯನ್ನು ನೀಡಿದ್ದಾರೆ. ಸಂಸ್ಕೃತಿಯ ಉತ್ಸವಗಳಲ್ಲಿ ಸಾಂಪ್ರದಾಯಿಕ ಶಿಲ್ಪಿ ತೆರೆಯ ಹಿಂದೆ ಗೌಣವಾಗಿರುತ್ತಾನೆ. ಶಿಲ್ಪವಿಲ್ಲದ ಸಂಸ್ಕೃತಿಯೇ ಇಲ್ಲ. ನಮ್ಮ ದೇಶಕ್ಕೆ ಸಂಸ್ಕೃತಿಯನ್ನು ಕಟ್ಟಿ ಬೆಳೆಸಿದ ನಿರ್ಮಾತೃ ಶಿಲ್ಪಿಯಾಗಿದ್ದಾನೆ. ಜಾಗತಿಕ ಮಟ್ಟದಲ್ಲಿ ವಿದೇಶಿ ವಸ್ತುಗಳ ಭರಾಟೆಯಲ್ಲಿಯೂ ಕೂಡ ಸಾಂಪ್ರದಾಯಿಕ ಶಿಲ್ಪಕಲೆ ಜನರನ್ನು ಆಕರ್ಷಿಸುವಲ್ಲಿ ಸಂಸ್ಕೃತಿಯ ಕೇಂದ್ರ ಬಿಂದುವಾಗಿದೆ.

### ೫.೬. ಆರ್ಥಿಕ

ಸಾಂಪ್ರದಾಯಿಕ ಶಿಲ್ಪಿಗಳು ತಲಾತಲಾಂತರದಿಂದ ಮರ, ಶಿಲ್ಪ, ಗಾರೆ, ಲೋಹ ಇತ್ಯಾದಿ ಮಾಧ್ಯಮಗಳಿಂದ ಶಿಲ್ಪರಚನೆಯನ್ನು ಸದಾ ಕಾಲ ಮಾಡುತ್ತಾ ಬಂದಿದ್ದಾರೆ. ದೇವತಾವಿಗ್ರಹ, ರಥಶಿಲ್ಪ, ಕಂಚಿನ ಪ್ರತಿಮೆಗಳು, ಬೆಳ್ಳಿ ಬಂಗಾರದ ಪ್ರತಿಮೆಗಳು ಇನ್ನೂ ಅನೇಕ ವಿಧಗಳಲ್ಲಿ ಶಿಲ್ಪವನ್ನು ನಿರ್ಮಿಸಿದ್ದಾರೆ. ಆದರೂ ಕೂಡ ಕೇವಲ ಪ್ರಶಸ್ತಿ ಪುರಸ್ಕಾರ, ಸನ್ಮಾನ ಬಹುಮಾನಗಳಿಗೆ ಮಾತ್ರ ಸೀಮಿತವಾಗಿ ಯಾವುದೇ ಆರ್ಥಿಕ ರಂಗದಲ್ಲಿ ಹೇಳಿಕೊಳ್ಳುವಂತಹ ಅಭಿವೃದ್ಧಿಯನ್ನು ಪಡೆದುಕೊಂಡಿಲ್ಲ. ಕಲಾವಿದನಿಗೆ ತಾನು ನಿರ್ಮಿಸಿದ ಕಲೆಯೆಂದರೆ ಆತ್ಮತೃಪ್ತಿ ಸಿಗುತ್ತದೆ. ಇದನ್ನು ಹೊರತಾಗಿ ಕಲಾವಿದ ವ್ಯಾವಹಾರಿಕ ಜ್ಞಾನವನ್ನು ಹೆಚ್ಚಾಗಿ ಕಲಿತಿರುವುದಿಲ್ಲ. ಎಷ್ಟೋ ಶಿಲ್ಪಿಗಳಿಗೆ ಒಂದು ಲಕ್ಷ ಹಣವನ್ನು ಎಣಿಸಲು ಬರುವುದಿಲ್ಲ. ಅಷ್ಟು ಮುಗ್ಧತೆ ಸಾಂಪ್ರದಾಯಿಕ ಶಿಲ್ಪಕಲಾವಿದರಲ್ಲಿ ಕಂಡುಬರುತ್ತದೆ. ಈ ಮಾತನ್ನು ಹೇಳಲು ಅತಿಶಯೋಕ್ತ ಎನಿಸಿದರೂ ವಾಸ್ತವಿಕದಲ್ಲಿ ಇದು ಸತ್ಯವಿದೆ. ವಾಣಿಜ್ಯ ವ್ಯವಹಾರಗಳ ಜ್ಞಾನ ಕಡಿಮೆ ಎನ್ನುವುದಕ್ಕೆ ಬ್ಯಾಂಕಿನ ಚೆಕ್ ಪುಸ್ತಕದಲ್ಲಿ ಅವರಿಗೆ

---

೧೦. ಡಾ. ರಹಮತ್ ತರೀಕೆರೆ(ಸಂ.): ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೩, ಧರ್ಮ, ಪು-೫೯೩.

ವ್ಯವಹರಿಸುವ ಜ್ಞಾನ ಕೂಡ ಕಡಿಮೆ ಇರುತ್ತದೆ. ಇಂತಹ ಅಮಾಯಕರು ಮುಗ್ಧಶಿಲ್ಪಿಗಳು ಶ್ರೀಮಂತರಾಗುವುದಾದರೂ ಹೇಗೆ ಎಂಬುದನ್ನು ವಿಚಾರಿಸುವಂತಿದೆ.

ಸಾಂಪ್ರದಾಯಿಕ ಶಿಲ್ಪಿಗಳು ಬೆರಳೆಣಿಕೆಯಷ್ಟು ಮಾತ್ರ ಸ್ವಂತ ಮನೆ, ಶಿಲ್ಪಕಾರ್ಯಾಗಾರದ ಕುಟೀರಗಳನ್ನು ಹೊಂದಿದ್ದಾರೆ. ಇವರಿಗೆ ಯಾವುದೇ ಸುವ್ಯವಸ್ಥಿತವಾದ ಸರ್ಕಾರಿ ನೌಕರರಂತೆ ಬಂಗಲೆ ಭವನಗಳು ಇರುವುದಿಲ್ಲ. ಓಡಾಡಲು ಕಾರುಗಳು ಇರುವುದಿಲ್ಲ. ಸಾಂಪ್ರದಾಯಿಕ ಶಿಲ್ಪಿಗಳೆಂದರೆ ಶ್ರಮಿಕ ವರ್ಗದವರಾಗಿದ್ದು ಶ್ರಮ ವಹಿಸಿ ಬೆವರು ಸುರಿಸಿ ಕೈಯಿಂದ ಕಲ್ಲನ್ನು ಒಡೆದು ಬಸವಳಿದು ತಮ್ಮ ಕಾರ್ಯವನ್ನು ಮಾಡಬೇಕಾಗುತ್ತದೆ. ಇವರ ದುಡಿಮೆಯಿಂದ ಸಂಪಾದಿಸಿದ ಹಣದಲ್ಲಿ ಹೆಂಡತಿ ಮಕ್ಕಳು, ತಂದೆ-ತಾಯಿಗಳನ್ನು ಸಾಕುವಷ್ಟರ ಮಟ್ಟಿಗೆ ಆದಾಯವಿರುತ್ತದೆ. ಆದರೆ ಶಿಲ್ಪಕಲಾವಿದರ ಮಕ್ಕಳನ್ನು ಡಾಕ್ಟರ್, ಇಂಜಿನಿಯರ್, ಐ.ಎ.ಎಸ್., ಕೆ.ಎ.ಎಸ್. ಐ.ಪಿ.ಎಸ್. ಅಧಿಕಾರಿಗಳನ್ನಾಗಿ ಮಾಡುವಷ್ಟು ಯಾವ ಶಿಲ್ಪಿಗಳ ಹತ್ತಿರ ಶ್ರೀಮಂತಿಕೆ ಇರುವುದಿಲ್ಲ. ಇಂದಿನ ಶಿಕ್ಷಣದಲ್ಲಿ ಶ್ರೀಮಂತ ಮಕ್ಕಳಿಗೆ ಮಾತ್ರ ಮೇಲಿನ ಅವಕಾಶಗಳು ದೊರೆಯುತ್ತಿದ್ದು ಕೆಲವು ಶಿಲ್ಪಿಗಳ ಮಕ್ಕಳು ಮಾತ್ರ ಎಸ್.ಎಸ್.ಎಲ್.ಸಿ., ಪಿ.ಯು.ಸಿ., ಪದವಿ ಶಿಕ್ಷಣ ಮುಗಿಸುವವರೆಗೆ ವ್ಯಾಸಂಗ ಮಾಡಿರುವುದು ಕಂಡುಬರುತ್ತದೆ. ಉಳಿದಂತೆ ಸಾಂಪ್ರದಾಯಿಕ ಶಿಲ್ಪಕಲಾವಿದರ ಮಕ್ಕಳು ಸರ್ಕಾರಿ ಶಾಲೆಯಲ್ಲಿ ಓದು-ಬರಹ ಕಲಿತುಕೊಂಡು ತಂದೆಯ ಅಥವಾ ಅಣ್ಣನ ಕೈ ಕೆಳಗೆ ತಮ್ಮ ವೃತ್ತಿ ಬದುಕನ್ನು ಕಲಿಯಲು ಆರಂಭಿಸುತ್ತಾರೆ. ವರ್ಷವಿಡೀ ಶಿಲ್ಪ ಕಾರ್ಯಗಳನ್ನು ಮಾಡಿದರೂ. ಯಾರೂ ಕೋಟ್ಯಧಿಪತಿಗಳಾಗುವ ಸಂಭವವಿಲ್ಲ. ಏಕೆಂದರೆ ಜಾಗತಿಕ ಮಟ್ಟದಲ್ಲಿ ಸ್ಪರ್ಧಿಸುವಂತಹ ಮೂಲಭೂತ ಸೌಲಭ್ಯಗಳು ಇರುವುದಿಲ್ಲ. ಶಿಲ್ಪಕಾರ್ಯವನ್ನು ಮಾಡಲು ಶಿಲೆಯನ್ನು ಗಣಿಯಿಂದ ತೆಗೆದುಕೊಂಡು ಬರಬೇಕಾಗುತ್ತದೆ. ಇದಕ್ಕೆ ಸುಮಾರು ೫೦ ಸಾವಿರದಿಂದ ೧ ಲಕ್ಷದವರೆಗೆ ಹಣ ಬೇಕಾಗುತ್ತದೆ ಮತ್ತು ಸಾರಿಗೆ ವೆಚ್ಚ ೬ರಿಂದ ೧೦ ಸಾವಿರ ಬರುತ್ತದೆ. ಯಂತ್ರೋಪಕರಣಗಳನ್ನು ಖರೀದಿಸಲು ಕೂಡಾ ೨ ಲಕ್ಷದವರೆಗೆ ಹಣ ಬೇಕಾಗುತ್ತದೆ. ಬಂಡವಾಳವಿಲ್ಲದೆ ಶಿಲ್ಪಕಲೆಯನ್ನು ಮಾಡಲು ಸಾಧ್ಯವಿಲ್ಲ. ಮರಶಿಲ್ಪ, ಲೋಹಶಿಲ್ಪವಾದರೆ ಸುಮಾರು ೧ ಘನ ಅಡಿ ತೇಗದ ಕಟ್ಟಿಗೆಗೆ ೫ರಿಂದ ೭ ಸಾವಿರ ಬೇಕಾಗುತ್ತದೆ. ಮತ್ತು ಶಿವಾನಿ ಮರವಾದರೆ ಇದು ಕೂಡ ಸ್ಥಳೀಯವಾಗಿ ದೊರೆಯುವುದಿಲ್ಲ. ಬೇರೆ ಕಡೆಯಿಂದ ತರಿಸಿಕೊಳ್ಳಲು ಸುಮಾರು ಲಕ್ಷ ರೂಪಾಯಿಗಳು ಬೇಕಾಗುತ್ತದೆ. ಲೋಹ ಕೆಲಸ ಮಾಡಬೇಕೆಂದರೂ ಕೂಡ ತಾಮ್ರ, ಹಿತ್ತಾಳೆ, ತವರ, ಸತುವು, ಬೆಳ್ಳಿ ತುಂಬಾ ಬೆಲೆ ಬಾಳುವ ಲೋಹಗಳಾಗಿವೆ. ಲೋಹಗಳನ್ನು ಕರಗಿಸಲು ಯಂತ್ರೋಪಕರಣಗಳು ಸಾಧನ ಸಾಮಗ್ರಿಗಳು ಕಡಿಮೆ ಅಂದರೂ ೧೦ ರಿಂದ ೨೦ ಲಕ್ಷ ಮೂಲ ಬಂಡವಾಳ ಬೇಕಾಗುತ್ತದೆ. ಇದಕ್ಕೆ ಸಾಂಪ್ರದಾಯಿಕ ಶಿಲ್ಪಿಗಳು ಬ್ಯಾಂಕಿಗೆ ಅಲೆದಾಡಿದರೂ ಸಾಲ ಸೌಲಭ್ಯಗಳು ದೊರೆಯುವುದಿಲ್ಲ. ಹಾಗಾಗಿ ಸರ್ಕಾರ ಸೌಲಭ್ಯಗಳಾಗಲಿ, ಸಹಾಯ ಧನಗಳಾಗಲಿ ನೇರವಾಗಿ ಕಲಾವಿದರಿಗೆ ದೊರೆಯುವುದಿಲ್ಲ. ಹೀಗಾಗಿ ಸಾಂಪ್ರದಾಯಿಕ ಶಿಲ್ಪಕಲಾವಿದರ ದುಡಿಮೆಯ ಅಭಿವೃದ್ಧಿ ಕುಂಟಿತ ವಾಗುತ್ತದೆ. ಶಿಲ್ಪಕಲಾ ಅಕಾಡೆಮಿಯಿಂದ ಅಥವಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಕೇವಲ ಕಲಾಪ್ರದರ್ಶನ ಮಾಡಲು ಸಹಾಯಧನವನ್ನು ಅಲ್ಪಮಟ್ಟಿಗೆ ನೀಡುತ್ತಾರೆ.

ಆದರೆ ಶಿಲ್ಪಕಲಾವಿದರು ತಮ್ಮ ಕಲೆಯನ್ನು ಅಭಿವೃದ್ಧಿಪಡಿಸಿಕೊಳ್ಳಲು ಸಹಾಯಧನವಾಗಲಿ ಸಾಲದ ರೂಪದಲ್ಲಾಗಲಿ ವರ್ಷಾನುಗಟ್ಟಲೆ ಬ್ಯಾಂಕಿಗೆ ಅಲೆದಾಡಿದರೂ ವಿನಾಕಾರಣ ಸುತ್ತಾಡಿ ಬರುವ ಪರಿಸ್ಥಿತಿ ನಿರ್ಮಾಣವಾಗಿದೆ. ಆರ್ಥಿಕವಾಗಿ ಶಿಲ್ಪಕಲಾವಿದರು ಸಬಲರಾಗಬೇಕಾದರೆ ಇವರಿಗೆ ತಮ್ಮ ಕೆಲಸಕ್ಕೆ ಬೇಕಾಗುವ ಯಂತ್ರೋಪಕರಣಗಳನ್ನು ಸರ್ಕಾರ ಒದಗಿಸಿಕೊಡಬೇಕು. ಇದು ಜಿಲ್ಲಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದಲೇ ಆಗಬೇಕು ಮತ್ತು ಶಿಲ್ಪಕಲಾವಿದರೂ ತಯಾರಿಸುವ ಮಾಧ್ಯಮಗಳಾದ ಮರ, ಶಿಲೆ, ಲೋಹ ಮುಂತಾದ ಮಾಧ್ಯಮಗಳನ್ನು ಸಾಲದ ರೂಪದಲ್ಲಾಗಲಿ ಅಥವಾ ವಿನಾಯಿತಿ ರೂಪದ ಬೆಲೆಯಲ್ಲಿ ಮಾಧ್ಯಮಗಳನ್ನು ಸೌಕರ್ಯ ಮಾಡಿಕೊಟ್ಟು ಇವರು ನಿರ್ಮಿಸಿದ ಕಲಾಕೃತಿಗಳನ್ನು ಇಲಾಖೆ ಖರೀದಿಸಿಕೊಂಡು ಅವುಗಳನ್ನು ಮಾರುಕಟ್ಟೆ ಮಾಡುವ ವ್ಯವಸ್ಥೆಯನ್ನು ಮಾಡಿದಲ್ಲಿ ಸಾಂಪ್ರದಾಯಿಕ ಶಿಲ್ಪಕಲಾವಿದರ ಬದುಕು ಆರ್ಥಿಕ ಸಬಲತೆಯನ್ನು ಪಡೆದುಕೊಂಡಂತಾಗುತ್ತದೆ. ಸರ್ಕಾರದ ಇಲಾಖೆ ಮತ್ತು ಅಕಾಡೆಮಿಗಳು ಕೇವಲ ಪ್ರಶಸ್ತಿ, ಗೌರವಧನ, ಫಲಕಗಳನ್ನು ನೀಡಿ ಪ್ರಶಸ್ತಿ ಪತ್ರಗಳನ್ನು ಹಂಚಿ ಕೈತೊಳೆದುಕೊಂಡರೆ ಸಾಂಪ್ರದಾಯಿಕ ಶಿಲ್ಪಕಲಾವಿದರ ಬದುಕು ಕೂಲಿ ಮಾಡುವವರಿಗಿಂತಲೂ ಬದಲಿ ಇರುವುದಿಲ್ಲ. ಅಂದರೆ ರಾಷ್ಟ್ರದ ಸಂಸ್ಕೃತಿಯ ಬೇರುಗಳಾದ ಚಿತ್ರ, ಶಿಲ್ಪ, ವಾಸ್ತು ಮುಂತಾದ ಸಾಂಪ್ರದಾಯಿಕ ಶಿಲ್ಪಕಲೆಗಳು ಮತ್ತು ಶಿಲ್ಪಕಲಾವಿದರು ಅಭಿವೃದ್ಧಿ ಪಥದ ಕಡೆಗೆ ಸಾಗುವುದು ತುಂಬಾ ಕಷ್ಟ ಸಾಧ್ಯವಾಗುತ್ತದೆ. ದುಡಿಯುವ ವರ್ಗಕ್ಕೆ ಮೂಲಭೂತ ಸೌಕರ್ಯ ಮತ್ತು ಮಾರುಕಟ್ಟೆಯನ್ನು ಒದಗಿಸಿಕೊಟ್ಟರೆ ಶಿಲ್ಪಕಲೆ ಉಳಿದಂತಾಗುತ್ತದೆ. ಶಿಲ್ಪಿಗಳು ಬದುಕುತ್ತಾರೆ.

### ೫.೭ ರಾಜಕೀಯ

ಸಾಂಪ್ರದಾಯಿಕ ಶಿಲ್ಪಕಲಾವಿದರಲ್ಲಿ ಕೆಲವೊಂದು ಶಿಲ್ಪಿಗಳನ್ನು ಬಿಟ್ಟರೇ ಸಾಮಾನ್ಯವಾಗಿ ಯಾವ ಶಿಲ್ಪಿಗಳು ಸ್ವಾಭಿಮಾನ ಕಳೆದುಕೊಂಡು ರಾಜಕೀಯ ಬಣ್ಣವನ್ನು ಹಚ್ಚಿಕೊಳ್ಳುವುದಿಲ್ಲ. ಏಕೆಂದರೆ ಶಿಲ್ಪಕಲಾವಿದ ಸಮಾಜದಲ್ಲಿ ಮುಜುಗರವನ್ನು ಅನುಭವಿಸಬೇಕಾಗುತ್ತದೆ. ಶಿಲ್ಪಕಲೆ ಮತ್ತು ಕಲಾವಿದ ಒಂದು ರಾಜಕೀಯ ಪಕ್ಷಕ್ಕೆ ಸೀಮಿತವಾಗಿ ಕಾರ್ಯಕರ್ತನಾಗಿ ಕೆಲಸ ಮಾಡುವಂತೆ ಇರುವುದಿಲ್ಲ. ಕಲಾವಿದನಿಗೆ ರಾಜಕೀಯ ಪಕ್ಷಗಳಲ್ಲಿ ಒಂದು ಚಿಹ್ನೆಗೆ ಸೀಮಿತವಲ್ಲ ಮತ್ತು ಯಾವುದೇ ಜಾತಿ, ಧರ್ಮ, ಧರ್ಮಾಂಧತೆಗೆ ಒಳಪಟ್ಟಿರುವುದಿಲ್ಲ. ಶಿಲ್ಪಕಲಾವಿದನ ಬದುಕು ನಿರಂತರವಾದದ್ದು. ತಟಸ್ಥವೆಂಬುದಿಲ್ಲ. ಚಲನಶೀಲವಾದ ಮತ್ತು ಸೃಜನಶೀಲವಾದ ದೈವೀಸಂಭೂತವಾದ ಕಾರ್ಯೋ-ಪಾಸಕನಾಗಿರುತ್ತಾನೆ. ಸಮಾಜದಲ್ಲಿ ಸಾಂಪ್ರದಾಯಿಕ ಶಿಲ್ಪಕಲಾವಿದನು ಜಾತಿ, ಜನಾಂಗಗಳನ್ನು ಎಣಿಸದೇ ಎಲ್ಲಾ ಜಾತಿ ವರ್ಗದ ದೇವರುಗಳನ್ನು ಮತ್ತು ವಿಗ್ರಹಗಳನ್ನು ನಿರ್ಮಿಸಿಕೊಳ್ಳುವ ಸಂತೃಪ್ತ ಭಾವದವನಾಗಿರುತ್ತಾನೆ.

ಸಾಂಪ್ರದಾಯಿಕ ಶಿಲ್ಪಕಲಾವಿದನು ಎಲ್ಲೋ ಒಂದು ಪಕ್ಷದ ಚಿಹ್ನೆಯನ್ನು ಬಳಸಿಕೊಂಡು ಭಾಷಣವನ್ನು ಮಾಡಿ ಚುನಾವಣೆಗೆ ನಿಂತು ಜಿಲ್ಲಾ ಪಂಚಾಯಿತಿ ಸದಸ್ಯನಾಗಲಿ, ಶಾಸಕನಾಗಲಿ, ಎಂ.ಎಲ್.ಸಿ. ಆಗಲಿ, ಎಂ.ಪಿ. ಆಗಿರುವ ಉದಾಹರಣೆಗಳು ದೊರೆಯುವುದಿಲ್ಲ. ಶಿಲ್ಪಕಲಾವಿದನು ಎಲ್ಲಾ ಪಕ್ಷದವರ, ಎಲ್ಲಾ ವರ್ಗದವರ ಕೊಂಡಿಯಂತೆ ಕೆಲಸ ಮಾಡುತ್ತಾನೆ. ಸಾಂಪ್ರದಾಯಿಕ

ಶಿಲ್ಪ ಕಲಾವಿದರು ಸ್ವಾಭಿಮಾನಿಗಳು ಮತ್ತು ಸಂಸ್ಕೃತಿಯುಳ್ಳವರಾಗಿದ್ದು ದೇಶ ಸಂಸ್ಕೃತಿಯನ್ನು ಕಟ್ಟಿಕೊಡುವ ಜವಾಬ್ದಾರಿಯುತ ಸ್ಥಾನದಲ್ಲಿರುವುದರಿಂದ ಅವರ ಸಂಕುಚಿತ ಮನೋಧೋರಣೆಯು ರಾಜಕೀಯ ಹಿನ್ನಡೆಗೆ ಕಾರಣವಾಗಿದೆ. ಹಾಗೆಂದ ಮಾತ್ರಕ್ಕೆ ಇವರಿಗೆ ರಾಜಕೀಯ ಮಾಡಲು ಬರುವುದಿಲ್ಲ ಎಂದು ಅರ್ಥವಲ್ಲ. ಪ್ರತಿದಿನ ಸಾರ್ವತ್ರಿಕ ಬದುಕಲ್ಲಿ ಜನಸಾಮಾನ್ಯರಲ್ಲಿ ಬೆರೆತು ಚಿರಪರಿಚಿತರಾಗಿರುತ್ತಾರೆ. ಆದರೂ ನೇರವಾಗಿ ಚುನಾವಣೆಗೆ ಸ್ಪರ್ಧಿಸಿ ಸೋತು ಗೆದ್ದು ತೋರಿಸಿಕೊಡಬೇಕೆಂಬ ನಿಲುವು ಇವರಲ್ಲಿ ಕಂಡುಬರುವುದಿಲ್ಲ.

ಯಾವಾಗಲೂ ದೇವತೆ, ಮೂರ್ತಿಗಳನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಶಿಲ್ಪ ಕಾರ್ಯ ಮಾಡುವ ಶಿಲ್ಪಿಯ ಮನಸ್ಸು ಶಾಂತಚಿತ್ತವಾಗಿಯೂ ಸೃಜನಶೀಲವೂ ಚೈತನ್ಯಪೂರ್ವವೂ ಆಗಿ ಅಧ್ಯಾತ್ಮದ ಪರಾಕಾಷ್ಠೆಯನ್ನು ಮುಟ್ಟಿರುತ್ತದೆ. ದೇವಶಿಲ್ಪಿಗಳಾದ ಸಾಂಪ್ರದಾಯಿಕ ಶಿಲ್ಪಿಗಳು ಸುಳ್ಳು, ಮೋಸ, ವಂಚನೆ, ದ್ರೋಹಗಳಿಗೆ ತನ್ನನ್ನು ಮಾರಿಕೊಳ್ಳಲು ಸಿದ್ಧವಿರುವುದಿಲ್ಲ. ಹೀಗಾಗಿ ರಾಜಕೀಯದಿಂದ ಕೆಲವೇ ಕೆಲವು ಶಿಲ್ಪ ಕಲಾವಿದರನ್ನು ಬಿಟ್ಟರೇ ಉಳಿದಂತೆ ನಿಜವಾದ ಶಿಲ್ಪಕಲಾವಿದ ರಾಜಕೀಯ ದಿಂದ ಮುಕ್ತನಾಗಿ ಪಾರದರ್ಶಕ ಮನಃಸ್ಥಿತಿಯನ್ನು ಹೊಂದಿರುತ್ತಾನೆ. ಆದರೆ ಅಂತರ್‌ಮುಖದಲ್ಲಿ ದೈವವನ್ನೇ ನಂಬಿರುತ್ತಾನೆ.

ರಾಜಕಾರಣಿಗಳು ಯಾವುದೇ ಪಕ್ಷದವರಿರಲಿ, ತಮ್ಮ ಆಡಳಿತ ಅವಧಿಯಲ್ಲಿ ಶಿಲ್ಪ ಕಲಾವಿದರ ಬಗ್ಗೆ ಪಕ್ಷ ಧೋರಣೆ ತಾಳದೇ ಅವರನ್ನು ಸಂಘ ಸಂಸ್ಥೆಗಳಿಗೆ ಸರ್ಕಾರದ ಆಡಳಿತ ವ್ಯವಸ್ಥೆಗಳಾದ ಗ್ರಾಮಪಂಚಾಯಿತಿ, ಪುರಸಭೆ, ನಗರಸಭೆಗಳಲ್ಲಿ ನಾಮನಿರ್ದೇಶಿತ ಸದಸ್ಯರನ್ನಾಗಿ ನೇಮಿಸಿದರೆ ಇವರಿಗೂ ರಾಜಕೀಯ ಅವಕಾಶ ಕಲ್ಪಿಸಿಕೊಟ್ಟಂತಾಗುತ್ತದೆ ಮತ್ತು ಸರ್ಕಾರದ ಅಂಗ ಸಂಸ್ಥೆಗಳಾದ ನಿಗಮ ಮಂಡಳಿಗಳಿಗೆ ನಾಮ ನಿರ್ದೇಶಿತ, ನಿರ್ದೇಶಕರು, ಅಧ್ಯಕ್ಷರುಗಳನ್ನಾಗಿ ನೇಮಕ ಮಾಡುವುದರಿಂದ ಸಾಮಾಜಿಕ ಸಮತೋಲನ ಕಾಯ್ದುಕೊಂಡಂತಾಗುತ್ತದೆ. ಶಿಲ್ಪಕಲಾವಿದ ರನ್ನು ನೇಮಿಸುವುದರಿಂದ ಅವರ ಸೃಜನಶೀಲ ಅಭಿವ್ಯಕ್ತಿಯನ್ನು ಗುರುತಿಸಿ ಅವರಿಗೆ ಸ್ಥಾನಮಾನ ಕಲ್ಪಿಸಿದ ಹೆಮ್ಮೆ ರಾಜಕಾರಣಿಗಳಿಗೂ ಸಲ್ಲುತ್ತದೆ.

ಕಲಾವಿದರು ಆಡಳಿತ ಕೇಂದ್ರಗಳಲ್ಲಿ ನೇಮಕವಾಗುವುದರಿಂದ ಇನ್ನುಳಿದ ಶಿಲ್ಪಕಲಾವಿದರ ಸಮಸ್ಯೆಗಳನ್ನು ಕಂಡುಕೊಂಡು ಅವರಿಗೆ ವಸತಿ, ನಿವೇಶನ, ಮಾಶಾಸನ, ಜೀವವಿಮೆ ಸೌಲಭ್ಯ ಮತ್ತು ವೈದ್ಯಕೀಯ ಚಿಕಿತ್ಸೆಗೆ ನೆರವಾಗುವಂತೆ ಕಲಾವಿದರಿಗೆ ಪ್ರತ್ಯೇಕವಾಗಿ ಯೋಜನೆ ರೂಪಿಸುವುದು ಒಳಿತು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದಲೇ ಜಿಲ್ಲಾವಾರು ಕಲಾವಿದರನ್ನು ಗುರುತಿಸಿ ಗುರುತಿನ ಚೀಟಿಗಳನ್ನು ಅವರಿಗೆ ಕಲ್ಪಿಸಿಕೊಡುವುದರಿಂದ ಕಲಾವಿದರ ಅಭಿವೃದ್ಧಿಗೆ ಶ್ರಮಿಸಿದಂತಾಗುತ್ತದೆ. ಶಿಲ್ಪಕಲಾವಿದರು ತಾವಾಗಿಯೇ ಎಂದೂ ಬೇಡಿ ಬೇಡಿ ಅಲೆದು ಸತ್ಯಾಗ್ರಹ ಹೋರಾಟಗಳಿಗೆ ಇಳಿಯುವವರಲ್ಲ. ಇವರ ಮನೋಭಾವ ಅರ್ಥ ಮಾಡಿಕೊಂಡು ರಾಜಕೀಯ ಇಚ್ಛಾಶಕ್ತಿಯಿಂದ ಸರ್ಕಾರ ಸೌಲಭ್ಯ ನೀಡಬೇಕಾಗಿದೆ.

ಅಧ್ಯಾಯ : ಆರು

# ಸಮಾರೋಪ

ಕರ್ನಾಟಕದ ಎಲ್ಲೆಡೆಯೂ ಒಂದಲ್ಲ ಒಂದು ರೂಪದಲ್ಲಿ ಕಲ್ಲಿನ ಸ್ಮಾರಕಗಳು ಕಂಡುಬರುತ್ತವೆ. ಮಾಸ್ತಿಕಲ್ಲು, ವೀರಕಲ್ಲುಗಳಿಗಂತೂ ಕೊರತೆ ಇಲ್ಲ. ಅವುಗಳ ವಾಸ್ತುಕಲೆ ಮತ್ತು ಶಿಲ್ಪ ಕಲೆಗಳ ಸಮ್ಮಿಲನದಿಂದ ನಿರ್ಮಿಸಿದ ಅಂದವಾದ ರಚನೆಗಳಾಗಿವೆ. ಆದರೆ ಇಂದು ಅಂತಹ ರಚನೆ ವಿನ್ಯಾಸಗಳನ್ನು ಕೆತ್ತಿಸುವ, ಕಲ್ಲು ಕೆತ್ತನೆಯಲ್ಲೇ ಸುಂದರ ದೇಗುಲ ನಿರ್ಮಿಸುವ, ಅರಮನೆಯಂತಹ ಭವ್ಯ ಕಲಾಕೃತಿಗಳನ್ನು ಕಟ್ಟಿಸುವವರು ಇಲ್ಲವಾಗಿ ಪಾರಂಪರಿಕ ಸಾಂಪ್ರದಾಯಿಕ ಶಿಲ್ಪಿಗಳು ಮೂಲೆಗುಂಪಾಗಿದ್ದಾರೆ. ಕರ್ನಾಟಕ ಒಮ್ಮೆ ಗುಂಡ, ಮಲ್ಲಿ ತಮ್ಮ, ದಾಸೋಜ, ಆರಿಷ್ಟ ನೇಮಿಯಂತಹ ಶಿಲ್ಪಕಲಾ ಚಕ್ರವರ್ತಿಗಳಿಗೆ ಜನ್ಮ ನೀಡಿದ ನಾಡಾಗಿತ್ತು. ಅವರ ಶಿಲ್ಪಕಲಾ ಚಾತುರ್ಯಗಳಿಂದ ವಾಸ್ತುಶಿಲ್ಪದಲ್ಲಿ ಹೆಸರು ಮಾಡಿತ್ತು. ಅಂತಹ ಪ್ರತಿಭಾವಂತರ ಕೈಯಲ್ಲಿ ಅರಳಿದ ನಮ್ಮ ನಾಡಿನ ಶಿಲ್ಪಕಲೆಗಳು ಕೇವಲ ಭಾರತೀಯ ಕಲೆಗೆ ಅಲ್ಲದೆ ವಿಶ್ವಕಲೆಯ ಪರಂಪರೆಗೆ ಅತ್ಯಮೂಲ್ಯ ಕೊಡುಗೆಯಾಗಿವೆ. ಕರ್ನಾಟಕದ ವಾಸ್ತುಕಲೆ ಮತ್ತು ಶಿಲ್ಪಕಲೆಗಳು ಸ್ವಯಂ ಪ್ರತಿಭೆ, ಕಲ್ಪಕತೆ, ಕಾರ್ಯಕೌಶಲ್ಯತೆ, ಕಲಾಚಮತ್ಕೃತಿ, ವಾಸ್ತುಮಂಡನೆ, ವಿವರದಕ್ಷತೆ ಈ ಎಲ್ಲಾ ದೃಷ್ಟಿಗಳಿಂದಲೂ ಶ್ರೇಷ್ಠವಾದವುಗಳಾಗಿವೆ. ಕರ್ನಾಟಕದ ರಾಜರು ಚರಿತ್ರೆಯ ಆದಿಕಾಲದಿಂದ ಸಾಹಿತ್ಯ, ಸಂಗೀತಕ್ಕೆ ವಾಸ್ತುಶಿಲ್ಪಕಲೆಗೆ ಉದಾರವಾಗಿ ಆರ್ಥಿಕ ನೆರವು ನೀಡಿ, ಕಲಾವಿದರನ್ನು ಗೌರವಿಸುತ್ತಿದ್ದರೆಂಬ ಮಾತು ಸರ್ವವಿದಿತ.[೧]

"ಮೂಲವಸ್ತುವಿನ ಆಕಾರದ ತದ್‌ಪ್ರತಿಯಾದರೆ ಅದನ್ನು 'ಪ್ರತಿಮೆ' ಎಂದು ಕರೆಯಬಹುದು. ಆರಡಿ ಎತ್ತರದ ಒಬ್ಬ ಮನುಷ್ಯನ ಆಕೃತಿಯನ್ನು ಕೇವಲ ಎರಡು ಇಂಚು ಎತ್ತರದ ಗೊಂಬೆಯಂತೆ ರೂಪಿಸಲು ಬರದೇನು? ಹೆಚ್ಚಿನ ಶಿಲ್ಪಗಳು ಮೂಲವಸ್ತುವಿನ ಅಥವಾ ಮಾದರಿಗಳ ಗಾತ್ರವನ್ನು ಕುಗ್ಗಿಸಿ ತೋರಿಸುವ ರಚನೆಗಳಾಗಿವೆ. ಒಬ್ಬ ಮನುಷ್ಯನ ಗೊಂಬೆಯನ್ನು ಚಿನ್ನದಲ್ಲೋ, ದಂತದಲ್ಲೋ ಮಾಡಬೇಕಾದರೆ, ಅವನಷ್ಟೇ ಗಾತ್ರದ ರಚನೆಗೆ ಬೇಕಾದ ಚಿನ್ನವನ್ನೋ, ದಂತವನ್ನೋ, ಎಲ್ಲಿಂದ ತರುವುದು? ಆ ಕಾರಣದಿಂದಲೂ ಒಂದು ಗೊಂಬೆಯನ್ನು ನಿಜ ಪರಿಮಾಣಕ್ಕಿಂತ ಚಿಕ್ಕದನ್ನಾಗಿ

೧. ವಿ. ಸೀತಾರಾಮಯ್ಯ: ಕಲಾನುಭವ, ಪು–೫೧.

ಮಾಡಬಹುದು. ಅಂಥದರಲ್ಲಿ ನಾವು ಕಾಣುವುದು ಗಾತ್ರದ ಪ್ರತಿರೂಪವನ್ನಲ್ಲ; ಆಕಾರದ ಪ್ರತಿರೂಪವನ್ನು. ಒಬ್ಬ ಶಿಲ್ಪಿ ಯಾವುದೋ ಒಂದು ಚಿಕ್ಕ ವಸ್ತುವಿನಲ್ಲಿ ತಾನು ಗುರುತಿಸಿದ ಒಂದು ಚೆಲುವು ಎಲ್ಲರಿಗೂ ಕಾಣಸಿಗಲಿ ಎಂಬ ಉದ್ದೇಶದಿಂದ ಅದರ ಗಾತ್ರವನ್ನು ಹಿಗ್ಗಿಸಿ ತೋರಿಸಬಹುದು. ಹೀಗೆ ವಸ್ತುವಿನ ಪ್ರಾಧಾನ್ಯವನ್ನು ನೆನೆದು ಅದರ ಗಾತ್ರವನ್ನು ರೂಪಿಸುವುದು ಶಿಲ್ಪದ ಒಂದು ರೀತಿಯಾಗಿದೆ. ಯಾವುದೇ ಮೂಲವಸ್ತುವಿನ ಅನುಕರಣೆಯನ್ನು ಮಾಡುವಾಗ ಶಿಲ್ಪಿಯಾದವನು ಅದರ ಆಕಾರವನ್ನು ಹಿಗ್ಗಿಸಿ, ಕುಗ್ಗಿಸಿ ತೋರಿಸುವುದರ ಜೊತೆಗೆ ಅಂತಹ ಆಕೃತಿಗಳಲ್ಲಿ ವಿವಿಧ ಅವಯವಗಳ ಪರಸ್ಪರ ಸಂಬಂಧ ಯಾವುದು? ಅದರ ಚೆಲುವು ಯಾವುದರಿಂದಾಗಿ ಬಂದಿತು? ಅಂತಹ ಚೆಲುವನ್ನು ಹಿಗ್ಗಿಸಿ ಅಥವಾ ಕುಗ್ಗಿಸಿ ಯಾವ ರೀತಿಯಲ್ಲಿ ಅಳವಡಿಸಿಕೊಳ್ಳಬೇಕು? ಮೂಲ ವಸ್ತುವಿನ ಚೆಲುವಿಗೆ, ಆಕರ್ಷಣೆಗೆ ಏನೇನು ಲಕ್ಷಣಗಳು ನೆರವಾಗಿ ಬಂದವು, ಅವುಗಳಲ್ಲಿ ಯಾವುದು ಮುಖ್ಯ, ಯಾವುದು ಅಮುಖ್ಯ ಎಂಬುದನ್ನು ಗುರುತಿಸಿ, ಅಮುಖ್ಯವಾದುದನ್ನು ಬಿಟ್ಟೇ ಬಿಡುತ್ತಾನೆ. ತಾನು ಮುಖ್ಯವೆಂದು ಗುರುತಿಸಿದ್ದಷ್ಟನ್ನೇ ತನ್ನ ಉದ್ದೇಶ ಸಫಲವಾಗುವ ರೀತಿಯಲ್ಲಿ ಒತ್ತಿ ತೋರಿಸುತ್ತಾನೆ."[೨]

ಶಿಲ್ಪಿಯಾದವನು ಒಂದು ವಸ್ತುವಿನ ಆಕೃತಿಯನ್ನು ತೀರಾ ಯಥಾವತ್ತಾಗಿ ರೂಪಿಸುವುದು ಅಸಾಧ್ಯದ ಮಾತಲ್ಲ. ಅಂತಹ ರೂಪಾನುಕರಣೆಯಿಂದ ನಮಗೆ ಆತ ಮೂಲವಸ್ತುವಿನಲ್ಲಿ ತಾನು ಕಂಡ ಗುಣಲಕ್ಷಣಗಳನ್ನು ನೆನಪಿಗೆ ತಂದುಕೊಡುವುದು ನಿಜ. ಆದರೆ ಒಂದೇ ಒಂದು ಮೂಲ ವಸ್ತುವನ್ನೋ, ರೂಪವನ್ನೋ, ರೂಪಿಸಲು ಹೊರಟ ನಾಲ್ವರು ಶಿಲ್ಪಿಗಳು ಅದನ್ನು ನಾಲ್ಕು ಬೇರೆ ಬೇರೆ ರೀತಿಗಳಲ್ಲಿ ರೂಪಿಸಿ ತೋರಿಸಬಹುದು. ಅದಕ್ಕೆ ಕಾರಣವೆಂದರೆ 'ಶಿಲ್ಪಿ'ಯಾದವನು ಸ್ವಂತ ವ್ಯಕ್ತಿತ್ವವುಳ್ಳ, ವಿವಿಧ ವಸ್ತುಗಳನ್ನು ಕಂಡು ತನ್ನದೇ ಆದ ಮಾನಸಿಕ ಬಿಂಬವನ್ನು ಪಡೆಯಬಲ್ಲಂಥ ಸೂಕ್ಷ್ಮ ವ್ಯಕ್ತಿ. ಒಂದು ವಸ್ತು ಒಬ್ಬನಲ್ಲಿ ಉಂಟುಮಾಡುವ ಮಾನಸಿಕ ಪರಿಣಾಮ ಬೇರೆ ಬೇರೆ. ಈ ಕಾರಣದಿಂದಾಗಿ ಬೇರೆ ಬೇರೆ ಶಿಲ್ಪಿಗಳು ರೂಪಿಸುವ ಒಂದೇ ವಸ್ತುವಿನ ಶಿಲ್ಪಕಲಾಕೃತಿಗಳು ಬೇರೆ ಬೇರೆ ಆಕಾರ ತಾಳುತ್ತವೆ. ಉದಾ: ಮಣ್ಣಿನ ಗಣೇಶ ಬೇರೆ ಬೇರೆಯಾಗಿ ಕಾಣುತ್ತವೆ. ಬೇರೆ ಬೇರೆ ಶಿಲ್ಪಗಳಿಗೆ ಒಂದಕ್ಕೊಂದು ಮುಖ, ಕೈ, ರಚನೆ, ಬೇರೆ ಬೇರೆ ಕಾಣುತ್ತದೆ. ಮುಖ್ಯ ವಾಗಿ ಗಮನಿಸಬೇಕಾದ ಒಂದು ವಿಷಯವೆಂದರೆ ಶಿಲ್ಪಿ ಮೂಲವಸ್ತುವಿನ ಆಕಾರವನ್ನು ಸ್ಥೂಲವಾಗಿ ಅನುಕರಿಸಬಹುದು. ಆದರೆ ಅದನ್ನೇ ತದ್‌ಪ್ರತಿಯಾಗಿ ಬಿಂಬಿಸುವುದಿಲ್ಲ. ಅವನ ಪ್ರಯತ್ನ ಎಂದೂ ವಸ್ತುರೂಪದ ಪ್ರತಿನಿರ್ಮಾಣವಲ್ಲ. ಆದರೆ ಆಕೃತಿಯ ಪುನರ್ ಸೃಷ್ಟಿ ಒಂದು ಆವರಣ ದಲ್ಲಿ ಅಥವಾ ಅವಕಾಶದಲ್ಲಿರಿಸಿ ತೋರಿಸಬಲ್ಲ ಯಾವುದೇ ಒಂದು ಆಕೃತಿಯನ್ನು ಮಣ್ಣಿನಿಂದಲೋ, ಕಲ್ಲಿನಿಂದಲೋ, ಮರದಿಂದಲೋ ರೂಪಿಸುತ್ತಾನೆ. ಅವನ ಕೆಲಸದ ಯಶಸ್ಸು ಆತ ರೂಪಿಸುವ ಗೊಂಬೆಯ, ರೇಖೆಗಳ, ತಳಗಳ, ಅಂಗಾಂಗಗಳ ಪರಸ್ಪರ ಮೇಳ ಮತ್ತು ಅದರ ಮೈವಳಿಕೆಗಳಂಥ ಲಕ್ಷಣಗಳನ್ನು ಹೊಂದಿಕೊಂಡಿದೆ ಹೊರತು ತದ್ರೂಪಿ ಅನುಕರಣೆಯಿಂದಲ್ಲ.[೩]

---

೨. ಡಾ. ಶಿವರಾಮ ಕಾರಂತ: ಭಾರತೀಯ ಶಿಲ್ಪ, ಪು–೨.

೩. ಅದೇ., ಪು–೫.

ಶಿಲ್ಪಿ ತಾನು ಬೆಳೆದು ಬಂದಿರುವ ಸಂಸ್ಕೃತಿಯ ದೆಸೆಯಿಂದ ಕಲಾವಿದನ ಕಲ್ಪನೆಗಳು, ಕಣ್ಣುಗಳು, ತಿದ್ದುವುದರಿಂದ ಆಯಾ ದೇಶ, ಕಾಲ ಮತ್ತು ಸಂಸ್ಕೃತಿಗಳಲ್ಲಿ ಹುಟ್ಟಿದ ಶಿಲ್ಪಗಳ ನಿರ್ಮಾಣಗಳಲ್ಲಿ ಅವರು ಬಳಸುವ ಸಂಕೇತ ಮತ್ತು ಸೂಚನೆಗಳಲ್ಲಿ ತುಂಬಾ ಅಂತರ ಕಂಡುಬರುತ್ತದೆ. ಮನುಷ್ಯ ಇಲ್ಲವೆ ಪ್ರಾಣಿಗಳ ಬಾಹ್ಯ ಆಕಾರಗಳು ಆದಷ್ಟೂ ಸಮೀಪದ ಅನುಕರಣೆಗಳಾಗಿದ್ದರೆ, ಇನ್ನುಳಿದವು ಅವುಗಳಿಂದ ಬಹುದೂರಕ್ಕೆ ಸರಿಯುತ್ತವೆ. ಆಕಾರ ಸಾಮ್ಯತೆಗಿಂತಲೂ ಅಧಿಕವಾಗಿ ಆ ಸಂಕೇತಗಳು ನಮ್ಮ ನೆನಪಿಗೆ ತಂದುಕೊಡುವ ಕೆಲವು ಲಕ್ಷಣಗಳ ದೆಸೆಯಿಂದಾಗಿ, ಮೂಲವಸ್ತುವಿನ ನೆನಪನ್ನು ಹುಟ್ಟಿಸುವುದರಲ್ಲಿ ಇನ್ನಷ್ಟು ಸಮರ್ಥವಾಗುತ್ತವೆ(ಉದಾ: ಶಿವ, ತ್ರಿಶೂಲ, ಡಮರುಗ, ವಿಭೂತಿ, ರುದ್ರಾಕ್ಷಿ) ಅವುಗಳ ಶಕ್ತಿ ಪ್ರತ್ಯಕ್ಷ ಚಿತ್ರಣ ಶಕ್ತಿಯಿಲ್ಲ; ಪರೋಕ್ಷವಾದ ಇನ್ನಾವುದೋ ಒಂದು ಶಕ್ತಿ, ಅದು ನಮ್ಮ ಸ್ಮರಣೆಗಳ ಸಂಬಂಧವನ್ನು ಜಾಗೃತಗೊಳಿಸಿ ತನ್ನ ಕೆಲಸವನ್ನು ಸಾಧಿಸುತ್ತದೆ.[೪]

ಅಂತು ತಾನು ಮಾಡುವ ಆಕೃತಿ ಯಾವ ತೆರನದು, ಅದು ಎಷ್ಟು ಗಾತ್ರದ್ದು ಎಂದು ಯೋಚಿಸಿ, ಅದರ ಒಂದು ತುಂಡಿನಲ್ಲಿ ಉದ್ದೇಶಿತ ಪ್ರತಿಮೆಯನ್ನೋ, ಆಕೃತಿಯನ್ನೋ ಆತ ಕೆತ್ತಬೇಕು. ಲೋಹದ ಉಳಿಯಿಂದ ತಾನು ಆರಿಸಿಕೊಂಡ ತುಂಡುಕಲ್ಲಿನಲ್ಲಿ ಬೇಡವಾದ ಎಲ್ಲಾ ಅಂಶಗಳನ್ನು ಚೂರು ಚೂರಾಗಿ ಕೆತ್ತಿ ತೆಗೆದು ಬೇಕಾದಷ್ಟನ್ನೇ ಉಳಿಸಿಕೊಳ್ಳಬೇಕು. ಈ ಕೆಲಸದಲ್ಲಿ ಹಾಗೆ ಕೆತ್ತಿ ತೆಗೆಯುವ ಕೆಲಸ ಶ್ರಮದ್ದು, ಮಾತ್ರವಲ್ಲ, ಕೆತ್ತಿ ಹೋದ ಭಾಗವನ್ನು ತಿರುಗಿ ಸೇರಿಸು ವಂತಿಲ್ಲ. ಹೀಗಾಗಿ ಆತನ ಈ ಕೆಲಸಕ್ಕೆ ಎಷ್ಟು ದಿನಗಳಾದರೂ ಸರಿಯೇ, ಮುಂದೆ ಕಾಣಿಸಿ ಕೊಳ್ಳಬೇಕಾದ ಆಕೃತಿಯ ಆಯಾ ಅಳತೆ, ರೂಪಗಳು ಹೇಗೆ ಇರಬೇಕು ಎಂಬ ವಿಚಾರದಲ್ಲಿ ಶಿಲ್ಪಿ ದೀರ್ಘಕಾಲ ನೆನಪನ್ನು ಉಳಿಸಿಕೊಂಡಿರಬೇಕು. ಈ ಕೆಲಸ ಸುಲಭವಾಗುವಂತೆ ಶಿಲ್ಪಿ ತಾನು ಉದ್ದೇಶಿಸಿದ ಆಕೃತಿಯ ಮಾದರಿಯನ್ನು ಮೊದಲು ಜೇಡಿಮಣ್ಣಿನಿಂದ ತಯಾರಿಸಿಕೊಂಡು ಇರಿಸಿಕೊಳ್ಳಬಹುದು. ಅದರ ತದ್ವತ್ ಪ್ರಮಾಣವನ್ನೇ ಕಲ್ಲಿನಲ್ಲಿ ಅಳೆದು, ಕೆತ್ತಿ ತೆಗೆಯುವ ಯಾಂತ್ರಿಕ ಸಾಧನಗಳೂ ಇವೆ. ಈ ರೀತಿಯ ಕೆಲಸದಲ್ಲಿ ತಾನು ಬಳಸುವ ಕಲ್ಲೋ, ಮರವೋ ಇನ್ನೇನೋ ಈ ವಸ್ತುವಿನ ಆಂತರಿಕ ರಚನೆ ಮತ್ತು ಮೈವಳಿಕೆ ಎಂಥದು ಎಂಬ ಜ್ಞಾನ ಶಿಲ್ಪಿಗೆ ಇರಬೇಕು. ಇದರ ಮೈ ಜನರ ಕಣ್ಣಿಗೆ ಯಾವ ರೀತಿ ಕಾಣಿಸೀತು? ತನ್ನ ಉದ್ದೇಶಕ್ಕೆ ಯಾವ ರೀತಿ ಸಹಾಯ ಮಾಡೀತು ಎಂಬ ಜ್ಞಾನವಿದ್ದೇ ಆತ ತನ್ನ ಕೆತ್ತನೆಯ ಕೆಲಸವನ್ನು ಮಾಡಬೇಕಾಗುತ್ತದೆ. ಅದೂ ಅಲ್ಲದೆ, ಕೆತ್ತುವಾಗ ಅದು ಉಳಿ ಮತ್ತು ಕೊಡತಿ ಅಥವಾ ಸುತ್ತಿಗೆ ಪೆಟ್ಟಿಗೆ ಹೇಗೆ ಬಿಚ್ಚಿ ಹೋಗುತ್ತದೆ ಎಂಬುದರ ಅರಿವೂ ಆತನಿಗೆ ಇರಬೇಕು. ಶಿಲ್ಪಮಾಧ್ಯಮವನ್ನು ಮಾಡುವ ಶಿಲ್ಪಿಯ ಸೃಷ್ಟಿ ಎಂತಹದ್ದು? ಅವನ ಮನೋಧರ್ಮ ಯಾವುದು? ಅವನ ಶೈಲಿ ಯಾವ ತೆರನದ್ದು? ಎಂಬಿವೇ ಪ್ರಶ್ನೆಗಳು ಆತನ ಕಾಲ, ದೇಶ, ವ್ಯಕ್ತಿತ್ವ, ಸಂಸ್ಕಾರ ಮೊದಲಾದ ಹಲವಾರು ವಿಷಯಗಳನ್ನು ಹೊಂದಿವೆ. ಶಿಲ್ಪಿ ಬಳಸುವ ಮಾಧ್ಯಮಕ್ಕಷ್ಟೇ ಸಂಬಂಧಿಸಿದಂತವು. ಶಿಲ್ಪಿ ತನ್ನ ಕೃತಿಗಾಗಿ ಆರಿಸಿಕೊಳ್ಳುವ 'ವಸ್ತು'ವಿನ ಪ್ರಶ್ನೆ ಬಲು ದೊಡ್ಡದು. ಅದು ಯಾವುದಾದರೊಂದು

೪. ಡಾ. ಶಿವರಾಮ ಕಾರಂತ: ಭಾರತೀಯ ಶಿಲ್ಪ, ಪು-೬.

ಸ್ಥಿರ ಇಲ್ಲವೆ, ಅಸ್ಥಿರ ವಸ್ತುವಿನ ತದ್ರೂಪಿಕ ಅನುಕರಣೆ ಇರಬಹುದು ಅಥವಾ ಅಂತಹ ವಸ್ತುವಿನ ಕುಗ್ಗಿಸಿದ ಇಲ್ಲವೆ ಹಿಗ್ಗಿಸಿದ ಪರಿಮಾಣವುಳ್ಳ ಆಕೃತಿಯಾಗಬಹುದು(ಉದಾ: ಶ್ರವಣಬೆಳಗೊಳದ ಗೊಮ್ಮಟೇಶನ ವಿಗ್ರಹ ಎತ್ತರದ ಪ್ರಮಾಣ). ಅದೇ ಅಂತಹ ವಸ್ತುವಿನ ತದ್ರೂಪವಾಗಿರದೆ, ಆ ವಸ್ತು ಆಕೃತಿ ಶಿಲ್ಪಿಯಲ್ಲಿ ಅಥವಾ ಅದನ್ನು ಮಾಡಿಸುವವರಲ್ಲಿ ಪ್ರೇರೇಪಿಸಿದ ಭಾವನೆಯ ಬಿಂಬ ವಾಗಿರಬಹುದು.[೫]

ಶಿಲ್ಪಿಗಳ ಕೃತಿಯು ಅವನೋ, ಅವನ ಜನರೋ ಕಂಡಿರದ ಆದರೆ ಮನಸ್ಸಿನಲ್ಲಿ ಕಲ್ಪಿಸಿ ಕೊಂಡ, ವಾಸ್ತವಿಕವೆನ್ನಬಹುದಾದ ದೇವರು, ದಾನವರು, ಮಹಾಮೃಗಾದಿಗಳೂ ಇರಬಹುದು. ಹೀಗೆ ಶಿಲ್ಪದ ವಿಷಯ–ವಾಸ್ತವಿಕ ಅಥವಾ ತೀರಾ ಕಾಲ್ಪನಿಕ ಸೃಷ್ಟಿಯಾಗಬಹುದು. ಇವೆರಡೂ ಅಲ್ಲದಂತಹ ಮೂರನೇ ಬಗೆಯ ಅಮೂರ್ತ ಸೃಷ್ಟಿಯಾಗಬಹುದು. ಶಿಲ್ಪಿಯಾದವರ ಮುಂದಕ್ಕೆ ಬಲು ವಿಸ್ತಾರವಾದದ್ದೊಂದು ಜಗತ್ತು ಹಬ್ಬಿದೆ. ಈ ಕ್ಷೇತ್ರದಲ್ಲಿ ಬಲು ಹಿಂದಿನಿಂದ ಇಂದಿನ ತನಕವೂ, ನವನವೀನ ಪ್ರಯೋಗಗಳನ್ನು ಮಾಡುತ್ತಲೇ ಬಂದಿದ್ದಾರೆ. ಹೀಗಾಗಿ ಶಿಲ್ಪದಂತಹ ಕಲಾಮಾಧ್ಯಮ ಚಿರನೂತನವಾಗಿ ಉಳಿಯುವ ಸಾಧ್ಯತೆಗಳಿವೆ. ಶಿಲ್ಪಿಯ ವಿವಿಧ ದೃಷ್ಟಿಕೋನಗಳ ದೆಸೆಯಿಂದ ಸೃಷ್ಟಿಗೊಳ್ಳಬಹುದಾದ ತದ್ರೂಪಕ ಪ್ರತಿಮೆ, ತದ್ರೂಪಕವಲ್ಲದ ಶಿಲ್ಪಗಳೂ ಸೃಷ್ಟಿಯಾಗಬಹುದು. ಶಿಲ್ಪದಲ್ಲಿ ವಾಸ್ತವಿಕತೆ ಎಂಬುದನ್ನು ನಾವು ಉದ್ದೇಶವಾಗಿರಿಸಿಕೊಂಡಾಗ ಶಿಲ್ಪಿಯೊಬ್ಬನ ವ್ಯಕ್ತಿಗತ ದೃಷ್ಟಿ, ಸಂಸ್ಕೃತಿ, ಪರಂಪರಾಗತ ಶೈಲಿಗಳು ಹೇಗೆ ಬೇರೆ ಬೇರೆ ರೀತಿಯಿಂದ ಪ್ರಕಟಗೊಳ್ಳುವುದು ಸಾಧ್ಯವೆಂಬುದು ನಮಗೆ ಮನವರಿಕೆಯಾಗುತ್ತದೆ.[೬]

ಪ್ರಸ್ತುತ ಅಧ್ಯಾಯದಲ್ಲಿ ನಿರ್ದಿಷ್ಟ ಉದ್ದೇಶದ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಲಾದಂತಹ ಪ್ರಮುಖ ಉದ್ದೇಶಗಳು ವಿವಿಧ ಅಧ್ಯಾಯಗಳ ಮೂಲಕ ಇಲ್ಲಿ ಸಾಕಾರಗೊಂಡಿದ್ದು, ಮೊದಲ ಅಧ್ಯಾಯದಿಂದ ಐದನೇ ಅಧ್ಯಾಯದವರೆಗೆ ನಡೆಸಿರುವ ಅಧ್ಯಯನ, ಕ್ಷೇತ್ರಕಾರ್ಯ, ಸಾಧಕ ಬಾಧಕಗಳು, ಚರ್ಚೆ, ವಿಮರ್ಶೆ, ವಿಚಾರ ಸಂಕಿರಣ, ಸಂದರ್ಶನ, ಸಂಭಾಷಣೆ, ಛಾಯಾಚಿತ್ರಗಳು ಒಟ್ಟಾರೆ ಎಲ್ಲಾ ಸಾರಾಂಶಗಳ ಹಾಗೂ ಅಧ್ಯಯನದ ಫಲಿತಗಳ ಪ್ರಮುಖ ವಿಚಾರಗಳ ಸಮೀಕ್ಷೆಯ ಸಮಾಲೋಚನೆಗಳು ಈ ಆರನೆಯ ಅಧ್ಯಾಯವು ಒಳಗೊಂಡಿದೆ.

**ಮೊದಲನೆಯ ಅಧ್ಯಾಯ**ದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿಗಳ ಕುರಿತು ಹೇಳಲಾಗಿದೆ. ಈ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳಲು ಇರುವ ಕಾರಣಗಳು, ಐತಿಹಾಸಿಕವಾಗಿ ಇದರ ಮಹತ್ವ, ವಿಶೇಷವಾಗಿ ಶಿಲ್ಪಕಲಾ ಕ್ಷೇತ್ರಕ್ಕೆ ಈ ಅಧ್ಯಯನದಿಂದ ಉಂಟಾಗುವ ಪ್ರಯೋಜನಗಳು ಮತ್ತು ಸಾಂಪ್ರದಾಯಿಕ ಶಿಲ್ಪಕಲೆಯ ಹಿನ್ನೆಲೆಗಳನ್ನು ಅಧ್ಯಯನ ಮಾಡಿದ್ದು, ಜೊತೆಗೆ ಪ್ರಸ್ತುತ ವಿಷಯದ ಕುರಿತು ನಡೆದ ಅಧ್ಯಯನಗಳ ಸಮೀಕ್ಷೆಯನ್ನು

---

೫. ಡಾ. ಶಿವರಾಮ ಕಾರಂತ: ಭಾರತೇಯ ಶಿಲ್ಪ, ಪು–೭, ೮.

೬. ಅದೇ., ಪು–೯.

ಸ್ಥೂಲವಾಗಿ(ಅಧ್ಯಯನ ಮಾಡುವ ಅವಧಿಯಲ್ಲಿ) ಇಲ್ಲಿ ನೀಡುವುದರ ಮೂಲಕ ಹಾಗೂ ಈ ಮಹಾಪ್ರಬಂಧದ ಪ್ರಮುಖ ಉದ್ದೇಶವನ್ನು ಹೇಳುತ್ತಾ ಗಟ್ಟಿಯಾದ ತಳಪಾಯವನ್ನು ಹಾಕಲಾಗಿದೆ.

**ಎರಡನೆಯ ಅಧ್ಯಾಯವು** ಹೈದರಾಬಾದ್ ಕರ್ನಾಟಕದ ಐತಿಹಾಸಿಕ ಹಿನ್ನೆಲೆ ಮತ್ತು ಸಾಂಸ್ಕೃತಿಕ ಪರಿಸರಕ್ಕೆ ಸಂಬಂಧಿಸಿದ್ದುದಾಗಿದೆ. ಇದರಲ್ಲಿ ಬೀದರ, ಕಲಬುರ್ಗಿ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ ಮತ್ತು ಸಾಂಸ್ಕೃತಿಕ ಪರಿಸರಗಳನ್ನು ಕಟ್ಟಿಕೊಡಲಾಗಿದೆ. ಆಯಾ ಭಾಗದಲ್ಲಿ ಆಳ್ವಿಕೆ ಮಾಡಿದ ಪ್ರಮುಖ ರಾಜವಂಶಗಳು, ಪ್ರಮುಖ ರಾಜರು ಅವರು ನೀಡಿದ ಸಾಂಸ್ಕೃತಿಕ ಕೊಡುಗೆಗಳು, ವಿಶೇಷವಾಗಿ ಶಾಸನಗಳಲ್ಲಿ ಉಲ್ಲೇಖಗೊಂಡಂತಹ ಸಾಂಪ್ರದಾಯಿಕ ಶಿಲ್ಪ(ಓಜ)ಕಲಾವಿದರುಗಳ ವಿವರಗಳನ್ನು ನೀಡಿದ್ದು ಹಾಗೂ ದೇವಾಲಯ ಮತ್ತು ಶಿಲ್ಪಕಲಾ ಪರಂಪರೆಯನ್ನು ವಿವರವಾಗಿ ಅಧ್ಯಯನ ಮಾಡಲಾಗಿದೆ.

**ಮೂರನೆಯ ಅಧ್ಯಾಯದಲ್ಲಿ** ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರ ಕುರಿತು ಅಧ್ಯಯನ ಮಾಡಿದ್ದು, ಇಲ್ಲಿ ಪ್ರಾತಿನಿಧಿಕವಾಗಿ ಹೈದರಾಬಾದ್ ಕರ್ನಾಟಕ ಪ್ರದೇಶದಡಿಯಲ್ಲಿ ಬರುವ ಬೀದರ, ಕಲಬುರ್ಗಿ, ಯಾದಗಿರಿ, ರಾಯಚೂರು, ಕೊಪ್ಪಳ ಹಾಗೂ ಬಳ್ಳಾರಿ ಈ ಆರು ಜಿಲ್ಲೆಯಲ್ಲಿನ ಪ್ರಮುಖ ಹಿರಿಯ ಸಾಂಪ್ರದಾಯಿಕ ಶಿಲ್ಪಕಲಾವಿದರುಗಳನ್ನು ಆಯ್ಕೆ ಮಾಡಿಕೊಂಡು, ಅವರ ಜೀವನ, ಕಲಾಬದುಕು, ಕಲಾಕೃತಿ ರಚನೆಯ ಮಾಧ್ಯಮಗಳು, ವಿಧಿವಿಧಾನಗಳು, ಶಿಲ್ಪದ ಪ್ರಕಾರಗಳು, ತಂತ್ರಗಾರಿಕೆ, ಶೈಲಿ, ಪ್ರಭಾವ, ಪ್ರೇರಣೆ ಹಾಗೂ ಅವರು ಬಳಸಿಕೊಂಡಿರುವ ಸಾಮಗ್ರಿಗಳು, ವಸ್ತುವಿಷಯಗಳಂತಹ ಸಂಗತಿಗಳನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

**ನಾಲ್ಕನೆಯ ಅಧ್ಯಾಯವು** ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರ ವೈಶಿಷ್ಟ್ಯಗಳ ಕುರಿತಾಗಿದ್ದು, ಈ ಅಧ್ಯಾಯದಲ್ಲಿ ಅಧ್ಯಯನಕ್ಕೊಳಪಡಿಸಲಾದ ಕಲಾವಿದರ ಕಲಾಕೃತಿಗಳಲ್ಲಿ ಕಂಡುಬರುವ ಕಲಾಮಾಧ್ಯಮದ ವೈಶಿಷ್ಟ್ಯ, ಕಲಾಕೃತಿಗಳ ವೈಶಿಷ್ಯ ಹಾಗೂ ಚಾರಿತ್ರಿಕ ವೈಶಿಷ್ಟ್ಯ ಅಂಶಗಳನ್ನು ವ್ಯವಸ್ಥಿತವಾಗಿ ವಿಂಗಡಿಸಿಕೊಂಡು ಮಣ್ಣು, ಶಿಲೆ, ಮರ, ಲೋಹ ಮಾಧ್ಯಮಗಳ ಶಿಲ್ಪಗಳನ್ನು ಪ್ರದೇಶವಾರು ಅಧ್ಯಯನ ಮಾಡಲಾಗಿದೆ.

**ಐದನೆಯ ಅಧ್ಯಾಯವು** ಸಾಂಪ್ರದಾಯಿಕ ಶಿಲ್ಪಕಲಾವಿದರ ಇಂದಿನ ಸ್ಥಿತಿಗತಿಗಳ ಕುರಿತಾಗಿದೆ. ರಾಜಾಶ್ರಯ ತಪ್ಪಿದ ನಂತರ ಬದಲಾದ ಸಾಂಪ್ರದಾಯಿಕ ಶಿಲ್ಪಕಲಾವಿದರ ಪರಿಸ್ಥಿತಿ, ಆರ್ಥಿಕತೆ, ಮಾನಸಮ್ಮಾನಗಳು, ವೈಜ್ಞಾನಿಕ ಬೆಳವಣಿಗೆಗಳಿಂದ ಅವರ ಕಲೆ ಮತ್ತು ಕಲಾಬದುಕಿನಲ್ಲಿ ಉಂಟಾದ ಸ್ಥಿತ್ಯಂತರಗಳ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಆರನೆಯ ಅಧ್ಯಾಯವು** ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಒಳಗೊಂಡಿದೆ.

**ಅಧ್ಯಯನದ ಪ್ರಮುಖ ಫಲಿತಗಳು**

೧. ಹೈದರಾಬಾದ್ ಕರ್ನಾಟಕ ಸಾಂಪ್ರದಾಯಿಕ ಶಿಲ್ಪಕಲಾವಿರದಲ್ಲಿ ಪ್ರಾಂತ್ಯವಾರು ಶಿಲ್ಪರಚನಾಕ್ರಮ ಹಾಗೂ ನಯಗಾರಿಕೆ ಮತ್ತು ಕೆತ್ತನೆಯ ಕುಸುರಿ ಕೆಲಸದಲ್ಲಿ ಸೂಕ್ಷ್ಮತೆಗಳು ನಕ್ಷಾವಿನ್ಯಾಸ

ಆಭರಣಗಳ ರಚನಾ ವಿಧಿ, ಕಿರೀಟ, ವಸ್ತ್ರವಿನ್ಯಾಸ ಮತ್ತು ಭಾವಭಂಗಿಗಳಲ್ಲಿ ವೈಶಿಷ್ಟ್ಯತೆ ಕಂಡುಬರುತ್ತದೆ. ಬೀದರ, ಕಲಬುರ್ಗಿ, ಯಾದಗಿರಿ ಭಾಗದಲ್ಲಿ ಶಿಲ್ಪಕಲಾವಿದರು ತಮ್ಮದೇ ಆದ ವಿಶಿಷ್ಟ ಶೈಲಿಗಳನ್ನು ಕಂಡುಕೊಂಡಿದ್ದರಾದರೂ ಕೆಲವು ಶಿಲ್ಪ ರಚನೆಯಲ್ಲಿ ಸ್ಥಳೀಯ ಚಾರಿತ್ರಿಕ ಮತ್ತು ಐತಿಹಾಸಿಕ ಹಿನ್ನೆಲೆಯ ಪ್ರಭಾವ ಸ್ಪಷ್ಟವಾಗಿ ಕಂಡುಬರುತ್ತದೆ. ಸುರಪುರದ ಬಾಗಿಲು ಮೇಲೆ ಜೋಡು ಕುದುರೆ ಶಿಲ್ಪಗಳಲ್ಲಿ ಸಗರನಾಡಿನ ಪ್ರಭಾವ ಕಂಡುಬರುತ್ತದೆ.

೨. ಹೈದರಾಬಾದ್ ಕರ್ನಾಟಕದ ದಕ್ಷಿಣಭಾಗದ ಜಿಲ್ಲೆಗಳಾದ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಕಲಾವಿದರು ತಮ್ಮ ಶಿಲ್ಪರಚನಾ ಶೈಲಿಯಲ್ಲಿ ವಿಶೇಷವಾಗಿ ಹೊಯ್ಸಳ ಶೈಲಿ, ವಿಜಯನಗರ ಶೈಲಿಯನ್ನು ಮತ್ತು ಕೆಲವು ಮೂರ್ತಿಗಳಲ್ಲಿ ಕಲ್ಯಾಣಚಾಲುಕ್ಯರ ವಾಸ್ತುಶಿಲ್ಪ ದೇವಾಲಯಗಳಲ್ಲಿನ ನಕ್ಷೆ ಪ್ರಕಾರಗಳನ್ನು ಶಿಲ್ಪದಲ್ಲಿ ಕಂಡುಬರುವ ಪ್ರಭಾವಳಿ, ವೈಜಯಂತಿ ಮಾಲೆ, ಕಿರೀಟದ ಪ್ರಮಾಣ, ಆಭರಣ ಸೂಕ್ಷ್ಮ ಕೆತ್ತನೆಗಳನ್ನು ಗುರುತಿಸಿದಾಗ ವಿವಿಧ ಶೈಲಿಗಳ ಬಳಕೆ ಮಾಡಿಕೊಂಡು ಒಂದು ವಿಶಿಷ್ಟ ಶೈಲಿಯನ್ನು ಹುಟ್ಟುಹಾಕಿರುವುದು ಸ್ಪಷ್ಟವಾಗುತ್ತದೆ. ಮತ್ತು ಅಲಂಕಾರಿಕತೆಗೆ ಹೆಚ್ಚು ಒತ್ತುಕೊಟ್ಟು ಶೃಂಗಾರ ರಸವನ್ನು ಪ್ರತಿಬಿಂಬಿಸುವಂತಿವೆ. ಶಿಲ್ಪದ ಕೆತ್ತನೆಯಲ್ಲಿ ನಗ್ನತೆಯನ್ನು ಮೂರ್ತಿಯಲ್ಲಿ ಸೃಷ್ಟಿಸಿದರು. ಅದನ್ನು ನೋಡಿದರೆ, ಯಾವುದೇ ಅಶ್ಲೀಲ ಭಾವವುಂಟಾಗದಂತೆ ಮೂಲ ಮೂರ್ತಿಯ ಭಕ್ತಿಭಾವಕ್ಕೆ ಧಕ್ಕೆಯಾಗದಂತೆ ಶಿಲ್ಪರಚನೆ ಮಾಡಿರುವುದು ವಿಶಿಷ್ಟವೆನಿಸುತ್ತದೆ.

೩. ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು ತಮ್ಮ ಕಲಾಕೃತಿಗಳಲ್ಲಿ ಶಿಲ್ಪಶಾಸ್ತ್ರದ ಸೂತ್ರಗಳನ್ನು, ತಾಲಮಾನಗಳನ್ನು, ಶಿಲ್ಪಶಾಸ್ತ್ರದ ಶ್ಲೋಕಗಳಲ್ಲಿ ಬರುವ ಧ್ಯಾನ ಶ್ಲೋಕಗಳನ್ನು, ಭಾವ, ಗಾಂಭೀರ್ಯತೆ, ಹಸ್ತ ಮುದ್ರೆಗಳು, ನಯನ ಮಿಲನ (ನೇತ್ರೋನ್ಮಿಲನ)–ದಂತಹ ಸೂಕ್ಷ್ಮ ವಿಚಾರಗಳನ್ನು ಚಾಚುತಪ್ಪದೆ ಪಾಲಿಸಿದ್ದಾರೆ. ಶಿಲ್ಪಶಾಸ್ತ್ರದ ಗ್ರಂಥಗಳಾದ ಕಾಶ್ಯಪ ಶಿಲ್ಪಶಾಸ್ತ್ರ, ಶಿಲ್ಪಾದರ್ಶ, ಮಾನಸಾರ, ಸಮರಾಂಗಣ ಸೂತ್ರಧಾರ, ಮಯಮತ, ಋಗ್ವೇದ ಮುಂತಾದ ಗ್ರಂಥಾಧ್ಯಯನ ಮಾಡಿ, ಸ್ಥಪತಿ ಸಿದ್ಧಲಿಂಗ ಸ್ವಾಮಿಗಳು ರಚಿಸಿರುವ ರೇಖಾಚಿತ್ರ ಸೂತ್ರಗಳನ್ನು ಕೆಲವು ಭಾಗದ ಕಲಾವಿದರು ಬಳಸಿಕೊಂಡು ಅವರನ್ನು ಆದರ್ಶ ಶಿಲ್ಪಗುರುಗಳೆಂದೂ ಅವರ ಮಾರ್ಗಸೂಚಕಗಳಾದ ಯಮ, ನಿಯಮ, ಆಹಾರ, ಪ್ರತ್ಯಾಹಾರ, ಅನುಷ್ಠಾನ, ಮಂತ್ರಪಠನ, ಧ್ಯಾನ–ಧಾರಣ, ಸಂಧ್ಯಾವಂದನೆ, ಆಹ್ವಾನ–ವಿಸರ್ಜನ ಮುಂತಾದ ಕ್ರಿಯಾಕ್ರಮಗಳನ್ನು ಮಾಡಿಕೊಂಡು ಶಿಲ್ಪರಚನೆ ಮಾಡುವ ಶಿಲ್ಪಕಲಾವಿದರು ಸಂಪ್ರದಾಯಸ್ಥರಾಗಿ ಕಾರ್ಯಮಾಡುವವರಿದ್ದಾರೆ.

೪. ಶಿಲ್ಪಕಲಾವಿದರು ಶಿಲೆ, ಮರ, ಲೋಹ, ಸಿಮೆಂಟು, ಮಣ್ಣು ಮುಂತಾದ ಸಂಕೀರ್ಣ ಮಾಧ್ಯಮಗಳಲ್ಲಿ ಅನೇಕ ಕಲಾಕೃತಿ ನಿರ್ಮಿಸುವಾಗ ಪ್ರಾಚೀನ ತಂತ್ರಗಾರಿಕೆಯಲ್ಲಿ ಸಸ್ಯಮೂಲ, ಖನಿಜಮೂಲ, ಪ್ರಾಣಿಮೂಲದಿಂದ ಸಿದ್ಧವಾದಂತಹ ಕೆಲವು ವಸ್ತುಗಳಾದ ರಾಳ, ಮಣಿಶಿಲೆ,

ಜೇನು ಮೇಣ, ಗೋರಂಜನ, ಕಸ್ತೂರಿ, ಕೇಸರ, ಪುನುಗು, ಜವ್ವಾಜಿ, ಅರಗು, ಕೆಲವು ಪ್ರಾಣಿಗಳ ಚರ್ಮ, ಒಂಟೆ ಚರ್ಮ ಮುಂತಾದ ವಸ್ತುಗಳಲ್ಲದೆ ಪಾದರಸ, ನವಸಾಗರ, ತುತ್ತೆ, ಗಂಧಕ, ಬೆಳೆಗಾರ, ಮೀನಸರಿ ಮುಂತಾದ ವಸ್ತುಗಳನ್ನು ಬಳಸುವುದು ಕಂಡುಬರುತ್ತದೆ.

೫. ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಿಗಳು ದೇವಶಿಲ್ಪ ಕಲಾಕೃತಿಗಳು, ಮಾನವ ಶಿಲ್ಪಕಲಾಕೃತಿಗಳು, ಪ್ರಾಣಿ–ಪಕ್ಷಿ ಶಿಲ್ಪಕಲಾಕೃತಿಗಳನ್ನು ಪ್ರಮಾಣಬದ್ಧವಾಗಿ, ರೂಪಸುಂದರವಾಗಿ, ಅಲಂಕಾರಿಕವಾಗಿ ಮತ್ತು ನೈಜಕಲಾಕೃತಿಗಳನ್ನಾಗಿ ಸೃಷ್ಟಿಸಿ ರಚನೆ ಮಾಡುವುದರ ಜೊತೆಗೆ ದೇವಶಿಲ್ಪದಲ್ಲಿಯ ನಿಯಮಗಳಾದ ದೃಷ್ಟಿಸ್ಥಾಪಿಸುವಿಕೆ ಮತ್ತು ಪ್ರತಿಷ್ಠಾಪನೆಯಲ್ಲಿ ಪಾಲಿಸಬಹುದಾದ ಜೋತಿಷ್ಯದ ನಿಯಮಗಳಾದ ಹೋರಾಶಾಸ್ತ್ರಕ್ಕೆ ಸಂಬಂಧಿಸಿದ ನಿಯಮಗಳು ಮತ್ತು ಕಾಲಚಕ್ರದಲ್ಲಿ ಬರುವ ನಿಯಮಗಳನ್ನು ಪರಾಶರ ಸಂಹಿತೆ, ಭಾರದ್ವಜ ಸಂಹಿತೆ, ಬೃಹತ್ ಸಂಹಿತಾ ಪಂಚಾಂಗ ರೀತಿ–ನಿಯಮಗಳನ್ನು ಅನುಸರಿಸಿ, ಶಿಲ್ಪ ತಯಾರಿಕೆಯಿಂದ ಸ್ಥಾಪನೆಯವರೆಗೆ ಜೋತಿಷ್ಯದ ನಿಯಮವನ್ನು ಕೆಲವು ಈ ಭಾಗದ ಕಲಾವಿದರು ಚಾಚುತಪ್ಪದಂತೆ ಪಾಲಿಸುವವರೂ ಇದ್ದಾರೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೬. ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಹೆಸರು ಮಾಡಿದರೂ ಕೆಲವು ಶಿಲ್ಪಕಲಾವಿದರ ಮಕ್ಕಳು ಅವರ ಕಲೆಯನ್ನು ಪರಂಪರಾಗತವಾಗಿ ಮುಂದುವರಿಸಿಕೊಂಡು ಬಂದಿರುವುದು ಕಂಡುಬಂದರೆ, ಕೆಲವು ಶಿಲ್ಪಕಲಾವಿದರ ಮುಂದಿನ ಪೀಳಿಗೆ ಬೇರೆ ವೃತ್ತಿಗಳನ್ನು ಅವಲಂಬಿಸಿ ತಮ್ಮ ಪರಂಪರಾಗತವಾದ ಸಾಂಪ್ರದಾಯಿಕ ಶಿಲ್ಪವನ್ನು ತಟಸ್ಥಗೊಳಿಸಿರುವುದನ್ನು ಕಾಣಬಹುದು.

೭. ಸಾಂಪ್ರದಾಯಿಕ ಶಿಲ್ಪಕಲಾಕೃತಿಗಳು ದ್ವಿ ಆಯಾಮ ಶಿಲ್ಪಗಳಲ್ಲಿ ಸ್ಥಳಾವಕಾಶ ಮತ್ತು ಸಮೀಪ ದೂರದ ಕಲ್ಪನೆಯ ಯಥಾದರ್ಶನ ಅಂಗರಚನಾಶಾಸ್ತ್ರದ ವಿನ್ಯಾಸಗಳಿಗೆ ಅನುಗುಣವಾಗಿ ಶಿಲ್ಪಗಳು ರಚನೆಗೊಂಡಿವೆ. ಈ ಭಾಗದ ಶಿಲ್ಪಕಲಾವಿದರು ಸಾಂಪ್ರದಾಯಿಕ ಶೈಲಿಗಳನ್ನು(ರಾಷ್ಟ್ರಕೂಟರ, ಕಲ್ಯಾಣ ಚಾಲುಕ್ಯರ, ಹೊಯ್ಸಳರ ಹಾಗೂ ವಿಜಯನಗರ) ಸಂಪೂರ್ಣವಾಗಿ ಶಿಲ್ಪದಲ್ಲಿ ಬಳಸಿಕೊಂಡರೂ ಕೂಡ, ಕೆಲವೊಂದು ಭಾಗದಲ್ಲಿ ಹೆಚ್ಚು ಸೌಂದರ್ಯಾಭಿವ್ಯಕ್ತಿಯಾಗಲೆಂದು ಜನಪದದ ಸಂಕೇತಗಳನ್ನು ಶಿಲ್ಪದಲ್ಲಿ ರಚನೆ ಮಾಡಿರುವುದು ಕಂಡುಬರುತ್ತದೆ.

೮. ಹೈದರಾಬಾದ್–ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರ ಕಲಾಕೃತಿಗಳನ್ನು ಸಂಪೂರ್ಣವಾಗಿ ಅಧ್ಯಯನ ನಡೆಸುವುದೆಂದರೆ ಸವಾಲಿನ ಕೆಲಸ. ಪ್ರತಿಯೊಬ್ಬರ ಶಿಲ್ಪಗಳನ್ನು ಪ್ರತ್ಯೇಕವಾಗಿ ನೋಡಿದಾಗ ಒಂದು ರೀತಿಯ ಅನುಭವವಾದರೆ, ಪ್ರತಿಯೊಂದು ಸಲ ನೋಡಿದಾಗಲೂ ವಿಭಿನ್ನ ಅನುಭವವಾಗುತ್ತದೆ. ಶಿಲ್ಪಿಗಳ ಹಲವು ವರ್ಷಗಳ ಸಾಧನೆ ಇಲ್ಲಿ ಕಂಡುಬರುತ್ತದೆ. ಸಾಂಪ್ರದಾಯಿಕ ಶಿಲ್ಪಕಲಾವಿದರು ಕೆಲವು ರಹಸ್ಯ ಮತ್ತು ಚಮತ್ಕಾರಿಕ ಶಿಲ್ಪಕಲಾಕೃತಿಗಳನ್ನು

ರಚನೆ ಮಾಡಿದ್ದಾರೆ. ಏಕರೂಪದ ಮರದಲ್ಲಿ ಸರಪಳಿಯನ್ನು ಬಿಡಿಬಿಡಿಯಾಗಿ ಬಿಡಿಸಿ ಸರಪಳಿಯು ಅಲುಗಾಡುವಂತೆ ರಚನೆ ಮಾಡಿದ್ದಾರೆ. ಸರಪಳಿಯು ಕೊನೆಯ ಬಾಗದಲ್ಲಿ ಗಂಟೆ, ಗಗ್ಗರಿ ಗೆಜ್ಜೆಗಳನ್ನು ಒಂದೇ ಮರದಲ್ಲಿ ಮತ್ತು ಶಿಲೆಯಲ್ಲಿ ಕೆತ್ತನೆ ಮಾಡಿ ಗಂಟೆಯ ನಾಲಿಗೆ ಅಲುಗಾಡುವಂತೆ ಮತ್ತು ಗಗ್ಗರಿ ಒಳಗೆ ಗುಂಡು ಅಲುಗಾಡುವಂತೆ ಒಂದೇ ಶಿಲೆ ಮರದಲ್ಲಿ ಕೆತ್ತಿರುವುದು ವಿಸ್ಮಯ ಅಚ್ಚರಿ.

೯. ಹೈದರಾಬಾದ್ ಕರ್ನಾಟಕದ ಸಾಂಪ್ರದಾಯಿಕ ಶಿಲ್ಪಕಲಾವಿದರ ಬಗ್ಗೆ ಕೆಲವು ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾಗಿರುವುದನ್ನು ಬಿಟ್ಟರೆ, ಕರ್ನಾಟಕದಲ್ಲಿ ಅನೇಕ ದೂರದರ್ಶನ ವಾಹಿನಿಗಳಿದ್ದರೂ ಯಾವ ದೂರದರ್ಶನ ಮಾಧ್ಯಮದಲ್ಲಿಯೂ ಇವರನ್ನು ಕುರಿತು ಸಂದರ್ಶನ ಸಮೀಕ್ಷೆ ಅಥವಾ ಕಲಾಕೃತಿಗಳ ಬಗ್ಗೆ ಯಾವುದೇ ಮಾಹಿತಿ ಬಿತ್ತರಿಸಿರುವುದಿಲ್ಲ.

೧೦. ಸಾಂಪ್ರದಾಯಿಕ ಶಿಲ್ಪಕಲಾವಿದರಿಗೆ ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಸರಿಯಾದ ಮಾರ್ಗದರ್ಶನ ತರಬೇತಿಗಳ ಅವಶ್ಯಕತೆ ಇದೆ. ಜಿಲ್ಲೆಗೊಂದರಂತೆ ಶಿಲ್ಪಕಲಾ ಸ್ವ-ಸಹಾಯ ಕೇಂದ್ರ ಸ್ಥಾಪಿಸಿ ಇವರಿಗೆ ಬೇಕಾಗುವ ಕಚ್ಚಾಸಾಮಗ್ರಿಗಳಾದ ಶಿಲೆ, ಮರ, ಲೋಹ ಮುಂತಾದ ಸಾಮಗ್ರಿಗಳನ್ನು ಒದಗಿಸಿಕೊಡುವುದರಿಂದ ಇವರ ಕಲೆ ಇನ್ನಷ್ಟು ಅಭಿವೃದ್ಧಿ ಹೊಂದುವುದರಲ್ಲಿ ಸಂಶಯವಿಲ್ಲ.

ಹೀಗೆ ಹತ್ತು ಹಲವು ರೀತಿಯಲ್ಲಿ ಹೈದರಾಬಾದ್ ಕರ್ನಾಟಕದಲ್ಲಿ ವಿಶಿಷ್ಟವಾಗಿ ಶಿಲ್ಪ ಕಲಾವಿದರು ಕಲಾಕ್ಷೇತ್ರಕ್ಕೆ ತಮ್ಮದೇ ಆದ ಮೌಲಿಕ ಕೊಡುಗೆಗಳನ್ನು ನೀಡಿದ್ದು, ಅವುಗಳ ಕುರಿತು ಇನ್ನೂ ವ್ಯಾಪಕವಾಗಿ ಅಧ್ಯಯನ ಮಾಡುವ ಅವಶ್ಯಕತೆ ಇದೆ. ಇದೊಂದು ಅತ್ಯಂತ ಸ್ಥೂಲವಾದ ಅಧ್ಯಯನವಾಗಿದೆ ಎಂದು ವಿನಮ್ರವಾಗಿ ನಿವೇದಿಸಿಕೊಳ್ಳುತ್ತೇನೆ.

## ಅನುಬಂಧ : ಒಂದು

# ಸಂಕ್ಷೇಪಗಳು

| | | |
|---|---|---|
| ೧. ಸಂ. | – | ಸಂಪಾದಕರು |
| ೨. ಪ್ರ.ಸಂ. | – | ಪ್ರಧಾನ ಸಂಪಾದಕರು |
| ೩. ಪು.ಸಂ. | – | ಪುಟ ಸಂಖ್ಯೆ |
| ೪. ಕಿ.ಪ್ರ. | – | ಕಿರುಪ್ರಬಂಧ |
| ೫. ಸಂ.ಪ್ರ. | – | ಸಂಪ್ರಬಂಧ |
| ೬. ಮ.ಪ್ರ. | – | ಮಹಾಪ್ರಬಂಧ |
| ೭. ಚಿ.ಸಂ. | – | ಚಿತ್ರಸಂಖ್ಯೆ |
| ೮. ಬೆಂ.ವಿ.ವಿ. | – | ಬೆಂಗಳೂರು ವಿಶ್ವವಿದ್ಯಾಲಯ |
| ೯. ಮ.ವಿ.ವಿ. | – | ಮಂಗಳೂರು ವಿಶ್ವವಿದ್ಯಾಲಯ |
| ೧೦. ಮೈ.ವಿ.ವಿ. | – | ಮೈಸೂರು ವಿಶ್ವವಿದ್ಯಾನಿಲಯ |
| ೧೧. ಕ.ವಿ.ವಿ.ಹಂ. | – | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೧೨. ಕ.ವಿ.ವಿ. | – | ಕರ್ನಾಟಕ ವಿಶ್ವವಿದ್ಯಾಲಯ |
| ೧೩. ಗು.ವಿ.ವಿ. | – | ಗುಲ್ಬರ್ಗಾ ವಿಶ್ವವಿದ್ಯಾಲಯ |
| ೧೪. ಕ.ಲ.ಅ. | – | ಕರ್ನಾಟಕ ಲಲಿತಕಲಾ ಅಕಾಡೆಮಿ. |
| ೧೫. ಕ.ಶಿ.ಅ. | – | ಕರ್ನಾಟಕ ಶಿಲ್ಪಕಲಾ ಅಕಾಡೆಮಿ |
| ೧೬. ಹೈ.ಕ. | – | ಹೈದರಾಬಾದ್ ಕರ್ನಾಟಕ |

೧೭. ಸಾಂ.ಶಿ. – ಸಾಂಪ್ರದಾಯಿಕ ಶಿಲ್ಪಕಲೆ

೧೮. ಅ.ಪ್ರ – ಅಪ್ರಕಟಿತ

೧೯. ಪ್ರ – ಪ್ರಕಟಿತ

೨೦. ಯೋ.ವ. – ಯೋಜನಾ ವರದಿ

೨೧. ಕ.ಸಾ.ಪ. – ಕನ್ನಡ ಸಾಹಿತ್ಯ ಪರಿಷತ್ತು

೨೨. ಕ್ರಿ.ಪೂ. – ಕ್ರಿಸ್ತ ಪೂರ್ವ

೨೩. ಕ್ರಿ.ಶ. – ಕ್ರಿಸ್ತಶಕ

೨೪. ಅನು. – ಅನುವಾದ

೨೫. ಪ್ರೊ – ಪ್ರೊಫೆಸರ್

೨೬. ಕ್ರ.ಸಂ. – ಕ್ರಮಸಂಖ್ಯೆ

ಅನುಬಂಧ : ಎರಡು

# ಪರಾಮರ್ಶನ ಗ್ರಂಥಗಳು

## ೧. ಕನ್ನಡ ಗ್ರಂಥಗಳು


೧. **ಇತಿಹಾಸ ಪುಟಗಳಲ್ಲಿ ಯಾದಗಿರಿ** — **ಪಾಟೀಲ ಬಸನಗೌಡ ಎಸ್. ಹುಣಸಗಿ**
ಹುಣಸಗಿ ಪೋಲೀಸ್ ಪಾಟೀಲ ಪ್ರತಿಷ್ಠಾನ,
ಹುಣಸಗಿ(ತಾ. ಸುರಪುರ, ಜಿ. ಯಾದಗಿರಿ)
೨೦೧೧.

೨. **ಕನ್ನಡ ಮಹಾಭಾರತಗಳಲ್ಲಿ ಶಿಲ್ಪ ಮತ್ತು ಶಿಲ್ಪಿ** — **ಡಾ. ಜಿ. ಜ್ಞಾನಾನಂದ**
ಸಂಸ್ಕೃತಿ ಸಾಹಿತ್ಯ ಪ್ರತಿಷ್ಠಾನ,
ಬೆಂಗಳೂರು. ೨೦೦೫

೩. **ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ : ೨** — **(ಸಂ.) ಕರೀಗೌಡ ಬೀಚನಹಳ್ಳಿ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೦

೪. **ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ : ೪** — **(ಸಂ.) ತಂಬಂಡ ವಿಜಯ್ ಪೂಣಚ್ಚ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೦

೫. **ಕನ್ನಡ ಹಸ್ತಪ್ರತಿಗಳು–ಒಂದು ಅಧ್ಯಯನ** — **ಡಾ. ಬಿ. ಕೆ. ಹಿರೇಮಠ**
ವೀರಶೈವ ಅಧ್ಯಯನ ವೇದಿಕೆ, ಬಿಜಾಪುರ,
೧೯೯೨

೬. **ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ** — **ಫಾಲಾಕ್ಷ**
ಶಶಿ ಪ್ರಕಾಶನ, ತಿಪಟೂರು
೧೯೯೬

೭. **ಕರ್ನಾಟಕ ಚರಿತ್ರೆ (ಸಂಪುಟ–೧)** — **ಪ್ರೊ. ಷೇಕ್ ಅಲಿ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೫

೮. ಕರ್ನಾಟಕ ಶಿಲ್ಪಗಳಲ್ಲಿ ಪಂಚತಂತ್ರ — ಡಾ. ಚನ್ನಬಸಪ್ಪ ಎಸ್. ಪಾಟೀಲ
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ
ನಿರ್ದೇಶನಾಲಯ, ಮೈಸೂರು,
೧೯೯೪

೯. ಕರ್ನಾಟಕ ಶಿಲ್ಪ-ಸಂಸ್ಕೃತಿ(ನಾ ಕಂಡ ದೇಗುಲಗಳು) — ಜಯದೇವಪ್ಪ ಜೈನಕೇರಿ
ಶಾಂತಲಾ ಪ್ರಕಾಶನ, ಶಿವಮೊಗ್ಗ,
೨೦೦೯

೧೦. ಕರ್ನಾಟಕದ ಆರಂಭಿಕ ಶಿಲ್ಪಕಲೆ — ಡಾ. ಆರ್. ಎಚ್. ಕುಲಕರ್ಣಿ
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,
ಬೆಂಗಳೂರು, ೨೦೦೮.

೧೧. ಕರ್ನಾಟಕದ ಜನಪದ ಕಲೆಗಳ ಕೋಶ — (ಸಂ.) ಹಿ. ಚಿ. ಬೋರಲಿಂಗಯ್ಯ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೧೯೯೬

೧೨. ಕರ್ನಾಟಕದ ಜನಪದ ಚಿತ್ರಕಲೆ — ಡಾ. ಎಸ್. ಸಿ. ಪಾಟೀಲ
ವೀರಶೈವ ಅಧ್ಯಯನ ಸಂಸ್ಥೆ, ಗದಗ,
೧೯೯೩

೧೩. ಕರ್ನಾಟಕದ ವಾಸ್ತು ಶಿಲ್ಪ ಮತ್ತು ಚಿತ್ರಕಲೆ — ಡಾ. ಸಿಂಧಗಿ ರಾಜಶೇಖರ
ಸುಜಾತ ಪಬ್ಲಿಕೇಷನ್ಸ್, ಧಾರವಾಡ,
೧೯೯೮

೧೪. ಕರ್ನಾಟಕದ ಸಂಸ್ಕೃತಿ ಸಮೀಕ್ಷೆ — ಡಾ. ಎಚ್.ತಿಪ್ಪೇರುದ್ರಸ್ವಾಮಿ
ಡಿ.ವಿ.ಕೆ.ಮೂರ್ತಿ ಪ್ರಕಾಶಕರು,
ಮೈಸೂರು, ೨೦೦೧

೧೫. ಕರ್ನಾಟಕದಲ್ಲಿ ಅನ್ವಯಕಲೆ ಐತಿಹಾಸಿಕ ದೃಷ್ಟಿಕೋನ — ಡಾ. ಲಕ್ಷ್ಮಣಸಿಂಗ್ ಆರ್. ರಾಥೋಡ್
ಡಾ. ಲಕ್ಷ್ಮಣಸಿಂಗ್ ಆರ್. ರಾಥೋಡ್,
ಉಪನ್ಯಾಸಕರು, ಅನ್ವಯಕಲೆ ವಿಭಾಗ,
ಚಾಮರಾಜೇಂದ್ರ ಸರ್ಕಾರಿ ದೃಶ್ಯಕಲಾ ಕಾಲೇಜು
(ಕಾವಾ), ಸಿದ್ಧಾರ್ಥನಗರ, ಮೈಸೂರು, ೨೦೧೭

೧೬. ಕರ್ನಾಟಕದಲ್ಲಿ ಅರಸು ಮನೆತನಗಳು ಸಂ-೧ — ಲಕ್ಷ್ಮೀನಾರಾಯಣರಾವ್, ಎಸ್.ಆರ್.ಪಂಚಮುಖಿ
ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ,
ಧಾರವಾಡ, ೧೯೪೬

೧೭. ಕರ್ನಾಟಕದಲ್ಲಿ ಚಿತ್ರಕಲೆ — ಡಾ. ಶಿವರಾಮ ಕಾರಂತ

ಪ್ರಸಾರಾಂಗ, ಮೈಸೂರು ವಿ.ವಿ.,
ಮೈಸೂರು, ೧೯೭೮

೧೮.ಕಲಬುರಗಿ ಜಿಲ್ಲಾ ದರ್ಶನ — ಡಾ. ಟಿ.ಎಂ. ಭಾಸ್ಕರ, ರಾಜಶೇಖರ ಹತಗುಂದಿ
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,
ಕಲಬುರಗಿ, ೨೦೦೫

೧೯.ಕಲಬುರ್ಗಿ ಜಿಲ್ಲಾ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ — ಡಾ. ಇಂದುಮತಿ ಪಾಟೀಲ, ಡಾ. ಎಂ.ಎಸ್.ಪಾಟೀಲ
ಪ್ರಕಾಶಕರು: ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು,
ಕಲಬುರರ್ಗಿ, ೨೦೧೧.

೨೦.ಕಲಾಕೋಶ — (ಸಂ.) ಪಿ.ಆರ್. ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು, ೧೯೯೪

೨೧.ಕಲಾಪ್ರಪಂಚ — ಡಾ. ಶಿವರಾಮ ಕಾರಂತ
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ, ೧೯೭೮

೨೨.ಕಲಾವಿದರ ಬದುಕು — ಡಾ. ಸುರೇಶ ಎಲ್. ಜಾಧವ
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,
ಗುಲಬರ್ಗಾ, ೨೦೧೨.

೨೩.ಕಲಾ ಸಂಸ್ಕೃತಿ — ಪ್ರೊ, ಎಂ. ಎಚ್. ಕೃಷ್ಣಯ್ಯ
ಸಪ್ನಾ ಬುಕ್ ಹೌಸ್, ಬೆಂಗಳೂರು,
೨೦೧೨.

೨೪.ಕೆಳದಿ ಅರಸರ ಕಾಲದ ವಾಸ್ತು ಮತ್ತು ಮೂರ್ತಿಶಿಲ್ಪ (ಸಂಪುಟ–೧) ರಾಜಕೀಯ ಮತ್ತು ಸಾಂಸ್ಕೃತಿಕ ಹಿನ್ನೆಲೆ — ಅ. ಸುಂದರ
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ
ನಿರ್ದೇಶನಾಲಯ, ಮೈಸೂರು, ೧೯೮೬

೨೫.ಕೊಪ್ಪಳ ಜಿಲ್ಲಾ ದರ್ಶನ — ಸಂ. ಪ್ರೊ.ಅಲ್ಲಮಪ್ರಭು ಬೆಟ್ಟದೂರು, ಶ್ರೀ. ಎಚ್.ಎಸ್. ಪಾಟೀಲ್
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,
ಕಲಬುರಗಿ, ೨೦೦೫.

೨೬.ಗುಲಬರ್ಗಾ ಜಿಲ್ಲೆ — ಎಂ. ಬಿ. ಪಾಟೀಲ
ಕರ್ನಾಟಕ ಗ್ಯಾಸೆಟಿಯರ್,
ಬೆಂಗಳೂರು, ೧೯೯೭

೨೭.ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ — (ಸಂ.)ಡಾ. ಆರ್. ಗೋಪಾಲ್

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ
ನಿರ್ದೇಶನಾಲಯ, ಮೈಸೂರು,
೨೦೦೭

೨೮.ಚಿತ್ರಕಲಾ ಪ್ರಪಂಚ — (ಸಂ) ಪಿ.ಆರ್.ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು, ೧೯೯೩

೨೯.ಜಾಗತಿಕ ಚಿತ್ರಕಲೆ — ಬಿ. ಪಿ. ಬಾಯರಿ
ಪ್ರತಿಭಾ ಗ್ರಂಥಮಾಲೆ, ಧಾರವಾಡ,
೧೯೯೫

೩೦.ದೃಶ್ಯಕಲಾ — ಎನ್. ಮರಿಶಾಮಾಚಾರ್
ಸಿ.ಎಂ.ಎನ್. ಪ್ರಕಾಶನ,
ಬೆಂಗಳೂರು, ೧೯೮೫

೩೧.ದೃಶ್ಯ ಕಲಾವಿದರು — ಎನ್. ಮರಿಶಾಮಾಚಾರ್
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೩.

೩೨.ದೃಶ್ಯಕಲಾ ಸಂವೇದನೆ — ಡಾ. ಎಸ್. ಸಿ. ಪಾಟೀಲ
ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ,
ಧಾರವಾಡ, ೨೦೧೬

೩೩.ದೃಶ್ಯಕಲೆಗಳು: ಒಂದು ತೌಲನಿಕ ಅಧ್ಯಯನ — ಡಾ. ಡಿ. ಎ. ಉಪಾಧ್ಯ
ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ,
(ಆಂಧ್ರಪ್ರದೇಶ), ೨೦೧೧

೩೪.ನಿಜದ ನೆಲೆ — (ಸಂ) ಡಾ.ಎಸ್.ಸಿ.ಪಾಟೀಲ, ಸತ್ಯಾನಂದ ಪಾತ್ರೋಟ
ಡಾ. ಬಿ. ಕೆ. ಹಿರೇಮಠ ಅಭಿನಂದನಾ ಗ್ರಂಥ
ಬಸವೇಶ್ವರ ವಿದ್ಯಾವರ್ಧಕ ಸಂಘ,
ಬಾಗಲಕೋಟೆ, ೨೦೦೩

೩೫.ಪಾರಂಪರಿಕ ಶಿಲ್ಪ–ನಿನ್ನೆ ನಾಳೆ — ಜಿ. ಜ್ಞಾನಾನಂದ
ಸಂಸ್ಕೃತಿ ಸಾಹಿತ್ಯ ಪ್ರತಿಷ್ಠಾನ,
ಬೆಂಗಳೂರು.

೩೬.ಪ್ರಾಚೀನ ಲೇಖನ ಸಾಮಗ್ರಿಗಳು — (ಮೂಲ) ಡಾ.ಅಲ್ಬರ್ಟಿನ್‌ಗೌರ್, (ಅನು) ಡಾ. ಶ್ರೀನಿವಾಸ ಹಾವನೂರ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೦

೩೭ ಬಳ್ಳಾರಿ ಜಿಲ್ಲಾ ದರ್ಶನ — ಸಂ: ಡಾ. ಕೆ. ರವೀಂದ್ರನಾಥ
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,
ಕಲಬುರಗಿ, ೨೦೦೫.

೩೮.ಬಳ್ಳಾರಿ ಜಿಲ್ಲೆಯ ಚಿತ್ರಕಲೆ — ಡಾ. ಎಚ್.ಈ. ಬಸವರಾಜಪ್ಪ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೬.

೩೯.ಬಳ್ಳಾರಿ ಜಿಲ್ಲೆಯ ಶಾಸನಗಳು — ಚನ್ನಬಸಪ್ಪ ಎಸ್. ಪಾಟೀಲ, ವಿನೋದಾ ಪಾಟೀಲ
ಕರ್ನಾಟಕ ಶಾಸನಗಳು ಸಂಪುಟ-೨
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ
ನಿರ್ದೇಶನಾಲಯ, ಮೈಸೂರು, ೧೯೯೭

೪೦.ಬೃಹತ್ ಕರ್ನಾಟಕದ ಶಿಲ್ಪಾಚಾರಿಯರ ಚರಿತೆ — ಡಾ. ಕೆ. ಎಸ್. ಕುಮಾರಸ್ವಾಮಿ
ಕಣ್ವ ಪ್ರಕಾಶನ, ಬೆಂಗಳೂರು,
೨೦೧೩

೪೧.ಬಾದಾಮಿ ಚಾಲುಕ್ಯ ಶಿಲ್ಪಕಲೆ — ಡಾ. ಶೀಲಾಕಾಂತ ಪತ್ತಾರ
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,
ಬೆಂಗಳೂರು, ೨೦೧೨.

೪೨.ಬೀದರ ಜಿಲ್ಲಾ ದರ್ಶನ — ಡಾ. ಸೋಮನಾಥ ಯಾಳವಾರ, ಡಾ. ಪ್ರೇಮಾ ಸಿರ್ಶೆ
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,
ಕಲಬುರಗಿ, ೨೦೦೫.

೪೩.ಬೆಳೆದು ಬಂದ ಭಾರತದ ಚಿತ್ರಕಲೆ — ಪಿ.ಆರ್.ತಿಪ್ಪೇಸ್ವಾಮಿ
ಕಲಾಕ್ಷೇತ್ರ, ಮೈಸೂರು,
೧೯೬೨

೪೪.ಭಾರತೀಯ ಚಿತ್ರಕಲೆ — ಡಾ. ಶಿವರಾಮ ಕಾರಂತ
ಕನ್ನಡ ಪಸ್ತಕ ಪ್ರಾಧಿಕಾರ,
ಬೆಂಗಳೂರು, ೧೯೯೮

೪೫.ಭಾರತೀಯ ಚಿತ್ರಕಲೆ — ಬಿ.ಪಿ.ಬಾಯರಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು, ೧೯೮೨

೪೬.ಭಾರತೀಯ ಶಿಲ್ಪ — ಡಾ. ಶಿವರಾಮ ಕಾರಂತ
ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ,
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು,
೧೯೮೫

೪೭.ಯಕ್ಷ-ಯಕ್ಷಿಯರು — ಡಾ. ಹಂಪ ನಾಗರಾಜಯ್ಯ
ಚಂದ್ರಸಾಗರ ವರ್ಣಿ ಸ್ಮಾರಕ ಗ್ರಂಥಮಾಲೆ,
ಬೆಂಗಳೂರು, ೧೯೭೬

**೪೮.ಯಾದಗಿರಿ ಜಿಲ್ಲೆಯ ಚಿತ್ರಕಲೆ** — **ಬಸವರಾಜ ಕಲೆಗಾರ**
ಅಪ್ರಕಟಿತ ಎಂ.ಫಿಲ್ ಪ್ರಬಂಧ,
ಕನ್ನಡ ವಿಶ್ವವಿದ್ಯಾಲಯ ಹಂಪಿ,
೨೦೧೬

**೪೯.ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ** — **ಡಾ. ಶೈಲಜಾ ಎನ್. ಬಾಗೇವಾಡಿ**
ಸ್ವಾಲ್ವಾರ್ಟ್ ಪಬ್ಲಿಕೇಷನ್, ಬೆಂಗಳೂರು,
೨೦೧೨

**೫೦.ಯಾದಗಿರಿ ತಾಲೂಕಿನ ದೇವಾಲಯಗಳ** — **ವೆಂಕಣ್ಣ ದೊಣ್ಣೆಗೌಡ್ರು**
**ವಾಸ್ತುಶಿಲ್ಪ ಮತ್ತು ಇತರ ಲೇಖನಗಳು** — **ಸಿದ್ದಯ್ಯ ಕಲಾಲ**
ಸೋನಿ ಪ್ರಕಾಶನ, ಯಾದಗಿರಿ,
೨೦೧೦

**೫೧.ಯಾದಗಿರಿ ಸಿರಿ** — **ಪಾಟೀಲ ಬಸನಗೌಡ ಎಸ್.**
ಹುಣಸಗಿ ಪೊಲೀಸ್ ಪಾಟೀಲ ಪ್ರತಿಷ್ಠಾನ(ರಿ), — **ಹುಣಸಗಿ**
ಹುಣಸಗಿ, ೨೦೧೧

**೫೨.ರಾಯಚೂರು ಜಿಲ್ಲಾ ದರ್ಶನ** — **ಡಾ. ಮೃತ್ಯುಂಜಯ ಹೊರಕೇರಿ**
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, — **ಡಾ. ಬಸವಲಿಂಗ ಸೊಪ್ಪಿಮಠ**
ಕಲಬುರಗಿ, ೨೦೦೫.

**೫೩.ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ** — **ವೆಂಕಟೇಶ ಕುಮಾರ ಕೆ.ಎಚ್**
ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ,
ಧಾರವಾಡ, ೨೦೧೮

**೫೪.ಲಜ್ಜಾಗೌರಿ** — **(ಮೂ.) ಡಾ. ರಾಮಚಂದ್ರ ಚಿಂತಾಮಣ ಢೇರೆ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ — **(ಅನು.) ಡಾ. ವಿಠಲರಾವ್ ಗಾಯಕ್ವಾಡ್**
ಹಂಪಿ, ೨೦೦೩

**೫೫.ವಿಜಯನಗರದ ಗಾರೆಶಿಲ್ಪ** — **ಡಾ. ಸಿ. ಮಹದೇವ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, — ೨೦೦೦

**೫೬.ವಿಶ್ವವಿಖ್ಯಾತ ಬಿದ್ರಿಕಲೆ** — **ಶ್ರೀ ರಾಜೇಂದ್ರ ಯರನಾಳೆ**
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,
ಕಲಬುರ್ಗಿ, ೧೯೯೬

**೫೭.ವೆಂಕಟಾಚಲಪತಿ** — **ಕೆ.ವಿ.ಸುಬ್ರಹ್ಮಣ್ಯಂ**
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,
ಬೆಂಗಳೂರು, ೨೦೧೪

**೫೮.ಶಕಪುರುಷ ಸಿದ್ಧಲಿಂಗ ಸ್ವಾಮಿಗಳು** — **ಎಲ್. ಶಿವಲಿಂಗಪ್ಪ**
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

ಬೆಂಗಳೂರು, ೨೦೧೩

೫೯.ಶಿವತತ್ವ ರತ್ನಾಕರ(ಸಂಪುಟ–೧) (ಸಂ.) ಮಲ್ಲೇಪುರಂ ಜಿ. ವೆಂಕಟೇಶ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೧೯೯೯

೬೦.ಶಿವತತ್ವ ರತ್ನಾಕರ(ಸಂಪುಟ–೨) (ಸಂ.) ಮಲ್ಲೇಪುರಂ ಜಿ. ವೆಂಕಟೇಶ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೧೯೯೯

೬೧.ಶಿಲ್ಪಕಲಾ ಆರಾಧಕರು ಎನ್. ಮರಿಶಾಮಾಚಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,
ಬೆಂಗಳೂರು, ೨೦೦೦

೬೨.ಶಿಲ್ಪಕಲಾ ಪ್ರಪಂಚ (ಸಂ) ಪಿ.ಆರ್. ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು, ೧೯೯೪

೬೩.ಶಿಲ್ಪ ಸಂಕುಲ ಪಿ. ಆರ್. ತಿಪ್ಪೇಸ್ವಾಮಿ
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,
ಬೆಂಗಳೂರು, ೧೯೯೬

೬೪.ಶಿಲ್ಪಾದರ್ಶ(ಸಂಪುಟ–೧) ಜಿ. ಜ್ಞಾನಾನಂದ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೧

೬೫.ಶಿಲ್ಪಾದರ್ಶ(ಸಂಪುಟ–೨) ಜಿ. ಜ್ಞಾನಾನಂದ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೨

೬೬.ಶಿಲಾಶ್ರಯ ಕಲೆಯ ದೃಶ್ಯಧ್ಯಾನ ಸುಬ್ರಹ್ಮಣ್ಯಂ ಕೆ.ವಿ.
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೧೧

೬೭.ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ(ಉತ್ತರಾರ್ಧ) (ಸಂ.) ಜಿ. ಜ್ಞಾನಾನಂದ
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,
ಬೆಂಗಳೂರು. ೧೯೯೮

೬೮.ಶೃಂಗಾರಲಹರಿ ಎಂ. ಎಚ್. ಕೃಷ್ಣಯ್ಯ
ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು,
೧೯೮೯

೬೯.ಸಗರನಾಡಿನ ದೃಶ್ಯಕಲೆ ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ

ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,
ಕಲಬುರ್ಗಿ, ೨೦೧೨.

೭೦.ಸಮಕಾಲೀನ ಶಿಲ್ಪಕಲೆ — ಡಾ. ಶಿವಾನಂದ ಎಚ್. ಬಂಟನೂರು
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ,
೨೦೧೩

೭೧.ಸಿಂಧೂ ನಾಗರಿಕತೆ — ಇರ್ಫಾನ್ ಹಬೀಬ್
ಚಿಂತನ ಪುಸ್ತಕ, ಬೆಂಗಳೂರು, ೨೦೧೧.

೭೨.ಸತ್ಯ ಮತ್ತು ಸೌಂದರ್ಯ — ಎಸ್.ಎಲ್. ಭೈರಪ್ಪ
ಕರ್ನಾಟಕ ಸರ್ಕಾರ, ಪ್ರಥಮ ವಿಶ್ವಕನ್ನಡ
ಸಮ್ಮೇಳನ, ಸಾಹಿತ್ಯಮಾಲೆ, ೧೯೮೩

೭೩.ಸಂಶೋಧನ ಚತುರ್ಮುಖ — ಡಾ. ಬಿ. ವಿ. ಶಿರೂರು
ವಿದ್ಯಾನಿಧಿ ಪ್ರಕಾಶನ, ಹುಬ್ಬಳ್ಳಿ, ೨೦೦೬

೭೪.ಸಂಶೋಧನಾ ಸ್ವರೂಪ — ಡಾ. ಬಿ.ವಿ. ಶಿರೂರ
ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ,
೨೦೧೨ (೫ನೇ ಮುದ್ರಣ)

೭೫.ಸ್ವಾತಂತ್ರ್ಯೋತ್ತರದಲ್ಲಿ ಕರ್ನಾಟಕ ನಾಣ್ಯಶಾಸ್ತ್ರ — (ಸಂ.) ಎಂ.ವಿ. ಕೃಷ್ಣಪ್ಪ, ಡಾ. ಆರ್. ಗೋಪಾಲ್
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ
ನಿರ್ದೇಶನಾಲಯ, ಮೈಸೂರು, ೧೯೯೯

೭೬.ಸುರಪುರ ಚಿತ್ರಕಲೆ — ಡಾ. ಮಲ್ಲಿಕಾರ್ಜುನ ಬಾಗೋಡಿ
ಸರಚಂದ್ರ ಪ್ರಕಾಶನ, ಚಿತ್ತಾಪೂರ,
೨೦೦೯

೭೭.ಸೌಂದರ್ಯ ಸಮೀಕ್ಷೆ — ಜಿ.ಎಸ್. ಶಿವರುದ್ರಪ್ಪ
ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು,
೧೯೬೫

೭೮.ಸೌಂದರ್ಯ ಮತ್ತು ಕಲೆ — ಕೆ.ಬಿ. ರಾಮಕೃಷ್ಣರಾವ್
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು, ೧೯೭೧

೭೯.ಸೌಂದರ್ಯಶಾಸ್ತ್ರ — ಅನು. ಡಾ. ಕಾಶೀನಾಥ ಅಂಬಲಿಗೆ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು

೮೦.ಹೈದ್ರಾಬಾದ ಕರ್ನಾಟಕದ ಚಿತ್ರಕಲೆ — ಬಸವರಾಜ
ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ,
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ,

೨೦೧೭

೮೧.ಹೈದರಾಬಾದ್ ಕರ್ನಾಟಕ ಸಾಂಸ್ಕೃತಿಕ ವಿಶ್ವಕೋಶ — ಡಾ. ಪಿ. ಕೆ. ಖಂಡೋಬಾ
ಲಲಿತಕಲೆಗಳ ಸಂಪುಟ — ಡಾ. ಎಸ್. ಸಿ. ಪಾಟೀಲ
ಪ್ರಸಾರಾಂಗ, ಕಲಬುರ್ಗಿ ವಿಶ್ವವಿದ್ಯಾಲಯ,
ಕಲಬುರ್ಗಿ, ೨೦೧೨

೮೨.ಹೈದರಾಬಾದ್ ಕರ್ನಾಟಕ ದೃಶ್ಯಕಲಾ ಪರಂಪರೆ — ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ
ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ
ಸಮಿತಿ, ವಿಕಾಸ ಅಕಾಡೆಮಿ, ಕಲಬುರಗಿ.
೨೦೧೨.

೮೩.ಹೊಯ್ಸಳ ವಾಸ್ತುಶಿಲ್ಪ — ಡಾ. ಎಸ್. ಶ್ರೀಕಂಠಶಾಸ್ತ್ರೀ
ಪರಿಶ್ರೀ ಪ್ರಕಾಶನ, ಬೆಂಗಳೂರು,
೧೯೬೫.

೮೪.ಹೈದರಾಬಾದ್ ಕರ್ನಾಟಕ ಹಾಡುಪಾಡು — ಅಮರೇಶ ನುಗಡೋಣಿ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೩

೮೫.ಜ್ಞಾನಗಂಗೋತ್ರಿ(ಕಲೆ, ಸಾಹಿತ್ಯ) ಕಿರಿಯರ — ಸಂ. ನಿರಂಜನ ಕೆ.
ವಿಶ್ವಕೋಶ–೫
ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ,
ಬೆಂಗಳೂರು.

೨. ಇಂಗ್ಲಿಷ್ ಗ್ರಂಥಗಳು


1. **A Cultural History of India** — **(edt) A. L. Basham**
   Oxford University Press
   Delhi, 1975

2. **A History of Fine Arts in India and west** — **Edith Tomory**
   Orient Logman Limited,
   Madras, 1992

3. **An Early Document of Indian Art** — **B. N. Goswamy**
   Manohar book service, Delhi
   1976

4. **Abhilashitartha Chintamani** — **(Edt) R. Shama Sastri**
   Mysore Sanskrit Series, Mysore
   1926

5. **Chitralakshana of Nagnajit** — **B. N. Goswamy**
   Manohar book service, Delhi
   1976

6. **Fundamental of Indian Art** — **S. N. Dasgupta**
   Bharatiya Vidya Bhavan, Bombay
   1983

7. **Gommata : Celebrating Faith**
   Forsee Publication,
   2006

8. **Hand book of Indian Art** — **E. B. Havell**
   Murry, London,
   1920

9. **Indian Painting** — **Percy Brown**
   Y.M.C.A Publishing House,
   Culcutta, 1960

10. **Monuments Of Gulbarga** — **Mohammed Ayazuddin Patel**
Ayaz Digital Studio and Ayaz Art Gallery, Kalaburgi, 2011.

11. **Shilparatna of Srikumara-I** — **Ganapathy T. Shastri**
P.B.H. Publication, Nagarcoil, Tamilnadu. 2008

12. **The Art of Indian Asia** — **Henrich Zimmer**
Pub: Motilal Bnarsidass, Bungalow road Jawahar Nagar, Delhi, 1984

13. **The Artist's Hand Book** — **Ray Smith**
Jain Book Depot, 2009

14. **The Cambridge Encyclopedia**
Cambridge Univeristy Press, Cambridge, U.K. 1987

15. **The Dance of Shiva** — **Ananda Kumara Swamy**
Pub: Munshiram Manoharalal Publishers Pvt., Ltd., Rani Jansi Road, New Delhi, 1982

16. **The New Encyclopedia Britannica-VIII**
Encyclopedia Britannica (India) Pvt. Ltd, New Delhi.

ಅನುಬಂಧ : ಮೂರು

# ನಕ್ಷೆಗಳು

* ಹೈದರಾಬಾದ್ ಕರ್ನಾಟಕದ ನಕ್ಷೆ
* ಬೀದರ ಜಿಲ್ಲೆಯ ನಕ್ಷೆ
* ಕಲಬುರ್ಗಿ ಜಿಲ್ಲೆಯ ನಕ್ಷೆ
* ಯಾದಗಿರಿ ಜಿಲ್ಲೆಯ ನಕ್ಷೆ
* ರಾಯಚೂರು ಜಿಲ್ಲೆಯ ನಕ್ಷೆ
* ಕೊಪ್ಪಳ ಜಿಲ್ಲೆಯ ನಕ್ಷೆ
* ಬಳ್ಳಾರಿ ಜಿಲ್ಲೆಯ ನಕ್ಷೆ

ನಕ್ಷೆ–ಒಂದು

## ಹೈದರಾಬಾದ್ ಕರ್ನಾಟಕ ಪ್ರದೇಶ



ನಕ್ಷೆ–ಎರಡು

## ಬೀದರ ಜಿಲ್ಲೆ




- ಶ್ರೀ ರಾಜಕುಮಾರ ಪಾಂಚಾಳ, ಮರಶಿಲ್ಪಿ, ಬೀದರ
- ಶ್ರೀ ಮಹಮ್ಮದ್ ಮೈಜುದ್ದೀನ್, ಲೋಹಶಿಲ್ಪಿ, ಬೀದರ

ನಕ್ಷೆ–ಮೂರು

## ಕಲಬುರ್ಗಿ(ಗುಲಬರ್ಗಾ) ಜಿಲ್ಲೆ




- ❑ ಶ್ರೀ ಮಹಾದೇವಪ್ಪ ಶಂಭುಲಿಂಗಪ್ಪ, ಶಿಲಾಶಿಲ್ಪಿ, ದಿಗ್ಗಾಂವ, ತಾ॥ ಚಿತ್ತಾಪುರ
- ❑ ಶ್ರೀ ಮಾನಯ್ಯ ನಾಗಣ್ಣ ಬಡಿಗೇರ, ಲೋಹಶಿಲ್ಪಿ, ಕಲಬುರ್ಗಿ

ನಕ್ಷೆ-ನಾಲ್ಕು

## ಯಾದಗಿರಿ ಜಿಲ್ಲೆ




- ಶ್ರೀ ಭೀಮಣ್ಣ ಕಂಬಾರ, ಲೋಹಶಿಲ್ಪಿ, ಯಾದಗಿರಿ
- ಶ್ರೀ ಬಸಣ್ಣ ಮೋನಪ್ಪ ಬಡಿಗೇರ, ಮರಶಿಲ್ಪಿ, ಡಿ-ಗೋನಾಳ, ತಾ॥ ಸುರಪುರ

ನಕ್ಷೆ–ಐದು

# ರಾಯಚೂರು ಜಿಲ್ಲೆ




- ❑ ಶ್ರೀ ಪಂಪಣ್ಣ ಆಚಾರಿ, ಶಿಲಾಶಿಲ್ಪಿ, ಸಂಗಾಪುರ, ತಾ॥ ಮಾನ್ವಿ
- ❑ ಶ್ರೀ ಸಿದ್ಧಲಿಂಗ ಆಚಾರಿ, ಲೋಹಶಿಲ್ಪಿ, ದೇವಸುಗೂರು, ತಾ॥ ರಾಯಚೂರು

ನಕ್ಷೆ–ಆರು

# ಕೊಪ್ಪಳ ಜಿಲ್ಲೆ




- ❑ ಶ್ರೀ ನಾರಾಯಣಪ್ಪ ಚಿತ್ರಗಾರ, ಮರಶಿಲ್ಪಿ, ಕಿನ್ನಾಳ, ತಾ॥ ಕೊಪ್ಪಳ
- ❑ ಶ್ರೀ ಮಲ್ಲಪ್ಪ ಬಡಿಗೇರ, ಮರಶಿಲ್ಪಿ, ಕೊಪ್ಪಳ

ನಕ್ಷೆ–ಏಳು

# ಬಳ್ಳಾರಿ ಜಿಲ್ಲೆ




- ❑ ಶ್ರೀ ಜಿ. ಬಿ. ಹಂಸಾನಂದಾಚಾರ್ಯರು, ಪಂಚಶಿಲ್ಪಿ, ಹೂವಿನ ಹಡಗಲಿ
- ❑ ಶ್ರೀ ಕೆ. ಶಂಕರಾಚಾರಿ, ಲೋಹ ಮತ್ತು ಶಿಲಾಶಿಲ್ಪಿ, ಭಾವಿಹಳ್ಳಿ, ತಾ॥ ಹಡಗಲಿ

## ಅನುಬಂಧ : ನಾಲ್ಕು

# ಮಾಹಿತಿ ನೀಡಿದ ವ್ಯಕ್ತಿಗಳು

| ಕ್ರಸಂ. | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧. | ಡಾ. ಶೀಲಾಕಾಂತ ಪತ್ತಾರ್ | ೭೨ | ನಿವೃತ್ತ ಉಪನ್ಯಾಕರು | ಬದಾಮಿ |
| ೨. | ಶ್ರೀ ಜಿ.ಬಿ. ಜಿತೇಂದ್ರಾಚಾರ್ | ೬೫ | ಕಲಾವಿದರು | ಇಟ್ಟಗಿ |
| ೩. | ಡಾ. ಶಿವಾನಂದ ಬಂಟನೂರು | ೫೨ | ಪ್ರಾಧ್ಯಾಪಕರು | ಕ.ವಿ.ವಿ. ಹಂಪಿ |
| ೪. | ಡಾ. ಯಾದಪ್ಪ ಪರದೇಶಿ | ೬೦ | ಪ್ರಾಧ್ಯಾಪಕರು | ಕ.ವಿ.ವಿ. ಹಂಪಿ |
| ೫. | ಡಾ. ಮೋಹನ್‌ರಾವ್ ಪಾಂಚಾಳ | ೪೩ | ಪ್ರಾಧ್ಯಾಪಕರು | ಕ.ವಿ.ವಿ. ಹಂಪಿ |
| ೬. | ಶ್ರೀ ಜಿ.ಬಿ. ಮೌನೇಶ್ವರ | ೫೨ | ಶಿಲ್ಪಿಗಳು | ಇಟ್ಟಗಿ |
| ೭. | ಶ್ರೀ ಮಲ್ಲಿಕಾರ್ಜುನ ಮಹಾಮುನಿ | ೪೫ | ಶಿಲ್ಪಿಗಳು | ಕ.ವಿ.ವಿ. ಹಂಪಿ |
| ೮. | ಶ್ರೀ ಸುರೇಂದ್ರ ವಿಶ್ವಕರ್ಮ | ೪೫ | ಶಿಲ್ಪಿಗಳು | ಬೆಂಗಳೂರು |
| ೯. | ಶ್ರೀ ಬಿ.ಕೆ. ಬಡಿಗೇರ | ೪೬ | ಉಪನ್ಯಾಸಕರು | ಬೀದರ |
| ೧೦. | ಶ್ರೀ ನಾಗಣ್ಣ ಶೇರಿಕಾರ್ | ೫೦ | ಗುತ್ತಿಗೆದಾರರು | ಕಲಬುರಗಿ |
| ೧೧. | ಶ್ರೀಶೈಲ ವಿಶ್ವಕರ್ಮ | ೫೫ | ಶಿಲ್ಪಿಗಲು | ಕಲಬುರಗಿ |
| ೧೨. | ಶ್ರೀ ಮಲ್ಲಿಕಾರ್ಜುನ ವಿಶ್ವಕರ್ಮ | ೪೦ | ಶಿಲ್ಪಿಗಳು | ಕಲಬುರಗಿ |
| ೧೩. | ಶ್ರೀ ಬಸವರಾಜ ಬಡಿಗೇರ | ೪೦ | ಮರಶಿಲ್ಪಿ | ಹಗರಿಬೊಮ್ಮನಹಳ್ಳಿ |
| ೧೪. | ಶ್ರೀ ಸಿದ್ರಾಮ ಆಚಾರಿ | ೬೦ | ಮರಶಿಲ್ಪಿ | ಹಗರಿಬೊಮ್ಮನಹಳ್ಳಿ |
| ೧೫. | ಶ್ರೀ ಸಿದ್ಧರೂಢ ಆಚಾರಿ | ೩೦ | ಶಿಲ್ಪಿಗಳು | ಇಟ್ಟಗಿ |
| ೧೬. | ಶ್ರೀ ಪೂರ್ಣಾನಂದ ಭಾರತಿ ಸ್ವಾಮಿಗಳು | ೪೦ | ಸಂಸ್ಕೃತ ಉಪನ್ಯಾಸಕರು | ತೆಲಗಿ |
| ೧೭. | ಕೆ.ಎಸ್. ಸ್ವಾಮಿ | ೪೫ | ಗ್ರಂಥಪಾಲಕರು | ಕಮಲಾಪುರ |

| | | | | |
|---|---|---|---|---|
| ೧೮. | ಡಾ. ಕೆ. ರೆಹಮಾನ್ ಪಟೇಲ್ | ೪೬ | ಕಲಾವಿದರು | ಕಲಬುರಗಿ |
| ೧೯. | ಡಾ. ಹನುಮಣ್ಣನಾಯಕ ದೊರೆ | ೬೮ | ವಿಶ್ರಾಂತ ಕುಲಪತಿ | ಕಲಬುರಗಿ |
| ೨೦. | ಡಾ. ಕೆ. ರವೀಂದ್ರನಾಥ | ೫೨ | ಪ್ರಾಧ್ಯಾಪಕರು | ಕ.ವಿ.ವಿ. ಹಂಪಿ |
| ೨೧. | ಶ್ರೀ ವಾಸುದೇವ ಬಡಿಗೇರ | ೪೮ | ಉಪನ್ಯಾಸಕರು | ಇರಕಲ್ಲಗಡ |
| ೨೨. | ಶ್ರೀ ಕಿಶೋರಕುಮಾರ ಚಿತ್ರಗಾರ | ೪೮ | ಕಲಾವಿದರು | ಕಿನ್ನಾಳ |
| ೨೩. | ಶ್ರೀ ಪದ್ಮನಾಭ ಆಚಾರ್ | ೪೬ | ಕಲಾವಿದರು | ಮಂತ್ರಾಲಯ |
| ೨೪. | ಶ್ರೀ ಮಹಾಂತೇಶ ಕಲ್ಲೋರಿ | ೪೦ | ಕಲಾವಿದರು | ಕಲಬುರಗಿ |
| ೨೫. | ಶ್ರೀ ಮದನಗೋಪಾಲ ನಾಯಕ | ೬೨ | ಮಾಜಿಸಚಿವರು | ಸುರಪುರ |
| ೨೬. | ಶ್ರೀಮತಿ ಕೆ. ಗೀತಾ | ೪೨ | ಪ್ರಾಚಾರ್ಯರು | ಹೂವಿನಹಡಗಲಿ |
| ೨೭. | ಶ್ರೀ ಎ. ಸೋಮಶೇಖರಾಚಾರ್ | ೬೦ | ಕಲಾವಿದರು | ಹೂವಿನಹಡಗಲಿ |
| ೨೮. | ಶ್ರೀ ಜಿ.ಬಿ. ಶಿವಾನಂದಾಚಾರ್ | ೪೦ | ಉಪನ್ಯಾಸಕರು | ಹೂವಿನಹಡಗಲಿ |
| ೨೯. | ಶ್ರೀ ಕೆ.ಬಿ. ಬಸವರಾಜ | ೪೨ | ವ್ಯವಸ್ಥಾಪಕರು | ಸೋಗಿ |
| ೩೦. | ಶ್ರೀ ಮೋಹನ್ ಸೀತನೂರು | ೬೦ | ಕಲಾವಿದರು | ಕಲಬುರಗಿ |
| ೩೧. | ಶ್ರೀ ನಿ.ಪ್ರ. ಪ್ರಭು ಸ್ವಾಮಿಗಳು | ೬೦ | ವಿದ್ವಾಂಸರು | ಸಂಡೂರು |
| ೩೨. | ಶ್ರೀ ಸದ್ಗುರು ಸದ್ರೂಪಾನಂದ ಸ್ವಾಮಿಗಳು | ೫೦ | ವಿದ್ವಾಂಸರು | ಬೀದರ |
| ೩೩. | ಶ್ರೀ ಕಾಳಹಸ್ತೇಂದ್ರ ಸ್ವಾಮಿಗಳು | ೬೦ | ವಿದ್ವಾಂಸರು | ಶಹಾಪುರ |
| ೩೪. | ಶ್ರೀ ಡಾ. ಮಲ್ಲಿಕಾರ್ಜುನ ಬಾಗೋಡಿ | ೫೦ | ಪ್ರಾಧ್ಯಾಪಕರು | ಕಲಬುರಗಿ |
| ೩೫. | ಶ್ರೀ ಕೃಷ್ಣಮೂರ್ತಿ | ೪೬ | ಅರ್ಚಕರು | ಹುಲಗಿ |
| ೩೬. | ಶ್ರೀ ನಟರಾಜ ವಿಶ್ವಕರ್ಮ | ೪೨ | ಶಿಲ್ಪಿಗಳು | ಕಲಬುರಗಿ |
| ೩೭. | ಶ್ರೀ ವೀರೇಶ್ ಬಡಿಗೇರ | ೪೩ | ಮರಶಿಲ್ಪಿ | ಹಗರಿಬೊಮ್ಮನಹಳ್ಳಿ |
| ೩೮. | ಶ್ರೀ ಸಿದ್ದೇಶ ಆಚಾರಿ | ೫೨ | ರಥಶಿಲ್ಪಿ | ಹಗರಿಬೊಮ್ಮನಹಳ್ಳಿ |
| ೩೯. | ಶ್ರೀ ತೀರ್ಥಾಚಾರಿ | ೫೩ | ಕಲಾವಿದರು | ಹಗರಿಬೊಮ್ಮನಹಳ್ಳಿ |
| ೪೦. | ಶ್ರೀ ಆರ್.ಎಲ್. ಜಾಧವ್ | ೬೩ | ಕಲಾವಿದರು | ಬಳ್ಳಾರಿ |
| ೪೧. | ಶ್ರೀ ಶಿವರಾಮ | ೫೬ | ಪತ್ರಕರ್ತರು | ಸಂಡೂರು |
| ೪೨. | ಶ್ರೀ ಎಂ. ನಾಗಭೂಷಣ | ೫೪ | ಗುತ್ತಿಗೆದಾರರು | ಹೂವಿನಹಡಗಲಿ |
| ೪೩. | ಶ್ರೀ ಲಕ್ಷ್ಮಣ ಮಹಾಮುನಿ | ೪೮ | ಅಧೀಕ್ಷಕರು | ಕ.ವಿ.ವಿ. ಹಂಪಿ |
| ೪೪. | ಶ್ರೀ ಚಂದ್ರಶೇಖರ | ೪೯ | ಪ್ರಾಚಾರ್ಯರು | ರಾಯಚೂರು |

| | | | | |
|---|---|---|---|---|
| ೪೫. | ಶ್ರೀ ರಾಜಶೇಖರ | ೫೨ | ಪ್ರಾಚಾರ್ಯರು | ಕಲಬುರಗಿ |
| ೪೬. | ಶ್ರೀ ಜಿ.ಟಿ. ನಟರಾಜ | ೩೦ | ಶಿಲ್ಪಿ | ಇಟ್ಟಗಿ |
| ೪೭. | ಶ್ರೀ ಸುರೇಶ್ ಆಚಾರಿ | ೪೫ | ಶಿಲಾಶಿಲ್ಪಿ | ಹೊಸಪೇಟೆ |
| ೪೮. | ಶ್ರೀ ಕೆ. ನಾಗರಾಜ | ೪೩ | ಲೋಹಶಿಲ್ಪಿ | ಹೊಸಪೇಟೆ |
| ೪೯. | ಶ್ರೀ ಮಾನಪ್ಪ ಮಹಾಮುನಿ | ೮೫ | ನಿ.ಶಿಕ್ಷಕರು | ಕಿನ್ನಾಳ |
| ೫೦. | ಶ್ರೀ ನಾರಾಯಣ ಪತ್ತಾರ | ೬೫ | ನಿ.ಶಿಕ್ಷಕರು | ಭಾಗ್ಯನಗರ |
| ೫೧. | ಶ್ರೀ ಸಿದ್ಧಣ್ಣ | ೪೨ | ಶಿಲ್ಪಿಗಳು | ಕೊಪ್ಪಳ |
| ೫೨. | ಶ್ರೀ ರವೀಂದ್ರ ಅರ್ಕಾಚಾರಿ | ೪೩ | ಶಿಲ್ಪಿಗಳು | ರಾಣೆಬೆನ್ನೂರು |
| ೫೩. | ಶ್ರೀ ಈರಣ್ಣ ಬಡಿಗೇರ | ೪೪ | ಶಿಲ್ಪಿಗಳು | ಲೋಕಾಪುರ |
| ೫೪. | ಶ್ರೀ ವೆಂಕಟೇಶ್ | ೪೮ | ಶಿಲ್ಪಿಗಳು | ಮುಂಡರಗಿ |
| ೫೫. | ಶ್ರೀ ರಾಜಕುಮಾರ ಬಡಿಗೇರ | ೪೫ | ಶಿಲ್ಪಿಗಳು | ಬದಾಮಿ |
| ೫೬. | ಶ್ರೀ ಕೊಟ್ರೇಶ್ ಬಡಿಗೇರ | ೪೩ | ಶಿಲ್ಪಿಗಳು | ಮಲಪನಗುಡಿ |
| ೫೭. | ಶ್ರೀ ರಾಘವೇಂದ್ರ | ೪೬ | ಶಿಲ್ಪಿಗಳು | ಗದಗ |
| ೫೮. | ಶ್ರೀ ಶಿರಸಪ್ಪಯ್ಯ ಸ್ವಾಮಿಗಳು | ೬೫ | ವಿದ್ವಾಂಸರು | ಲೆಕ್ಕಿಹಾಳ |
| ೫೯. | ಶ್ರೀ ವಿರುಪಾಕ್ಷ ಕಮ್ಮಾರ | ೪೫ | ಶಿಲ್ಪಿಗಳು | ಸೋಗಿ |
| ೬೦. | ಶ್ರೀ ಷಡಕ್ಷರಿ ದೇವರು | ೪೬ | ವಿದ್ವಾಂಸರು | ಹುಬ್ಬಳ್ಳಿ |
| ೬೧. | ಶ್ರೀ ನಾಗರಾಜ | ೫೧ | ಸಹಾಯಕ ನಿರ್ದೇಶಕರು | ಬಳ್ಳಾರಿ |
| ೬೨. | ಶ್ರೀ ಬಿ. ಸುಜ್ಞಾನಮೂತಿ | ೫೦ | ಉಪನಿರ್ದೇಶಕರು | ಕ.ವಿ.ವಿ. ಹಂಪಿ |
| ೬೩. | ಶ್ರೀ ಬಸವರಾಜ | ೪೬ | ತಂತ್ರಜ್ಞರು | ಕಲಬುರಗಿ |
| ೬೪. | ಶ್ರೀ ಈಟಿ ರಾಜೇಶ್ | ೪೦ | ಇಂಜಿನಿಯರ್ | ಹೂವಿನಹಡಗಲಿ |

